ಕನ್ನಡದ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಕನ್ನಡ
ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ

# ಬುಡಕಟ್ಟುಗಳ ಮೌಖಿಕ ಸಾಹಿತ್ಯ : ತಾತ್ವಿಕ ವಿವೇಚನೆ

(ಕೊಡಗಿನ ಬುಡಕಟ್ಟು ಸಮುದಾಯಗಳ ಮೌಖಿಕ ಸಾಹಿತ್ಯದ ತೌಲನಿಕ ಅಧ್ಯಯನ)

ಸಂಶೋಧನಾ ವಿದ್ಯಾರ್ಥಿ
**ಕಾವೇರಿ ಎಚ್ ಎಂ**

ಮಾರ್ಗದರ್ಶಕರು
**ಪ್ರೊ.ಹಿ.ಚಿ.ಬೋರಲಿಂಗಯ್ಯ**
ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ, ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ 583276
2018

# ಬುಡಕಟ್ಟುಗಳ ಮೌಖಿಕ ಸಾಹಿತ್ಯ: ತಾತ್ವಿಕ ವಿವೇಚನೆ

(ಕೊಡಗಿನ ಬುಡಕಟ್ಟು ಸಮುದಾಯಗಳ ಮೌಖಿಕ ಸಾಹಿತ್ಯದ ತೌಲನಿಕ ಅಧ್ಯಯನ)

(ಕನ್ನಡದ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧನಾ ವಿದ್ಯಾರ್ಥಿ

**ಕಾವೇರಿ ಎಚ್.ಎಂ.**





ಮಾರ್ಗದರ್ಶಕರು

**ಪ್ರೊ.ಹಿ.ಚಿ.ಬೋರಲಿಂಗಯ್ಯ**

ವಿಶ್ರಾಂತ ಪ್ರಾಧ್ಯಾಪಕರು






ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೧೮

## ಸಂಶೋಧಕರ ಘೋಷಣಾ ಪತ್ರ

**ಬುಡಕಟ್ಟುಗಳ ಮೌಖಿಕ ಸಾಹಿತ್ಯ: ತಾತ್ವಿಕ ವಿವೇಚನೆ (ಕೊಡಗಿನ ಬುಡಕಟ್ಟು ಸಮುದಾಯಗಳ ಮೌಖಿಕ ಸಾಹಿತ್ಯದ ತೌಲನಿಕ ಅಧ್ಯಯನ)** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ **ಬುಡಕಟ್ಟು ಅಧ್ಯಯನ ವಿಭಾಗದ** ನಿವೃತ್ತ ಪ್ರಾಧ್ಯಾಪಕರಾದ **ಪ್ರೊ.ಹಿ.ಚಿ.ಬೋರಲಿಂಗಯ್ಯ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

Kaveri

**ಕಾವೇರಿ ಎಚ್.ಎಂ.**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
**ಬುಡಕಟ್ಟು ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ:** ವಿದ್ಯಾರಣ್ಯ
**ದಿನಾಂಕ:**

## ಮಾರ್ಗದರ್ಶಕರ ದೃಢೀಕರಣ ಪತ್ರ

**ಕಾವೇರಿ ಎಚ್.ಎಂ.** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಬುಡಕಟ್ಟುಗಳ ಮೌಖಿಕ ಸಾಹಿತ್ಯ: ತಾತ್ವಿಕ ವಿವೇಚನೆ (ಕೊಡಗಿನ ಬುಡಕಟ್ಟು ಸಮುದಾಯಗಳ ಮೌಖಿಕ ಸಾಹಿತ್ಯದ ತೌಲನಿಕ ಅಧ್ಯಯನ)** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಬುಡಕಟ್ಟು ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಪ್ರೊ.ಹಿ.ಚಿ.ಬೋರಲಿಂಗಯ್ಯ**
ವಿಶ್ರಾಂತ ಪ್ರಾಧ್ಯಾಪಕರು
**ಬುಡಕಟ್ಟು ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ:** ವಿದ್ಯಾರಣ್ಯ
**ದಿನಾಂಕ:**

# ಪರಿವಿಡಿ

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವಿಧಾನ, ಆಶಯಗಳು, ತಾತ್ವಿಕತೆ ಮತ್ತು ಸ್ವರೂಪ

1.1. ಪ್ರಸ್ತಾವನೆ

1.2. ಅಧ್ಯಯನದ ಉದ್ದೇಶಗಳು

1.3. ಅಧ್ಯಯನ ವ್ಯಾಪ್ತಿ

1.4. ಅಧ್ಯಯನ ವಿಧಾನ

1.5. ಅಧ್ಯಯನದ ಮಹತ್ವ

1.6. ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

1.7. ಅಧ್ಯಯನದ ಸ್ವರೂಪ

# ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವಿಧಾನ, ಆಶಯಗಳು, ತಾತ್ವಿಕತೆ ಮತ್ತು ಸ್ವರೂಪ

## 1.1. ಪ್ರಸ್ತಾವನೆ

ಭಾರತ ದೇಶ ಹಲವು ಜೀವನವಿಧಾನಗಳು ಒಟ್ಟುಗೂಡಿರುವ, ಬಹುಸಂಸ್ಕೃತಿಗಳ ಗಣರಾಜ್ಯ. ವೈವಿಧ್ಯಮಯ ಜೀವನವಿಧಾನ, ವಿಭಿನ್ನ ಪ್ರಾದೇಶಿಕ ಭಾಷೆಗಳು, ಸಂಪ್ರದಾಯ, ನಂಬಿಕೆ, ವಿಧಿನಿಷೇಧಗಳು, ಆಹಾರ, ಉಡುಗೆ, ಸಂಸ್ಕೃತಿ ಹಾಗೂ ಆಚರಣೆಗಳನ್ನು ಹೊಂದಿರುವ ಅಪರೂಪದ ಭೂಭಾಗವಿದು. ಬೃಹತ್ ನಗರ, ಪಟ್ಟಣ, ಹಳ್ಳಿ, ಹಾಡಿಗಳಲ್ಲಿ ಬಹುವಿನ್ಯಾಸದ ಜೀವನಪದ್ಧತಿಗಳು ಇಲ್ಲಿ ಜೀವಂತವಾಗಿವೆ. ಈ ದೇಶದ ಯಾವುದೋ ಒಂದು ಜನಾಂಗದ ಸಂಸ್ಕೃತಿಯನ್ನು ದೇಶದ ಸಂಸ್ಕೃತಿ ಎಂದು ಹೇಳಲು ಸಾಧ್ಯವಿಲ್ಲ. ಕಾಡೊಳಗೆ ಬದುಕುವ ಆದಿವಾಸಿಗಳು, ಊರೂರು ಅಲೆಯುವ ಅಲೆಮಾರಿಗಳು ಈ ದೇಶದ ನಾಗರಿಕತೆಗೆ ಕೊಟ್ಟಿರುವ ಕೊಡುಗೆ ಅಪಾರ. ಆದರೆ ಈ ತಳಸ್ತರದ ಸಮುದಾಯಗಳ ಅಸಾಧಾರಣ ಕೊಡುಗೆಯನ್ನು ನಾವು ನಮ್ಮ ಚರಿತ್ರೆಯ ಪುಟಗಳಲ್ಲಿ ಕಾಣಲು ಸಾಧ್ಯವಿಲ್ಲ. ಭಾರತವನ್ನೂ ಒಳಗೊಂಡಂತೆ, ಪಾಶ್ಚಿಮಾತ್ಯ ಅಧ್ಯಯನಕಾರರು ಈ ಸಮುದಾಯಗಳ ಕುರಿತು ಮಾಡಿರುವ ಅಧ್ಯಯನಗಳು ಒಂದು ಪಾರ್ಶ್ವಿಕ ದೃಷ್ಟಿಕೋನದಿಂದ ರೂಪುಗೊಂಡಿವೆ. ಈ ತಳಸ್ತರದ ಸಮುದಾಯಗಳ ಕುರಿತ ಮೇಲ್ವರ್ಗಗಳ ನಿರ್ವಚನಗಳು ಪ್ರಚ್ಛನ್ನ ಪೂರ್ವಗ್ರಹಗಳಿಂದ ರೂಪುಗೊಂಡಿವೆ. ಆದರೆ ಇತ್ತೀಚಿನ ಸಬಾಲ್ಟ್ರನ್ ಅಧ್ಯಯನಗಳು ತಳಸ್ತರ ಸಮುದಾಯಗಳ ಜೀವನ ವೈವಿಧ್ಯದಲ್ಲಿರುವ ಅಪಾರ ತಿಳುವಳಿಕೆಯನ್ನು ಹೊರ ಜಗತ್ತಿಗೆ ತೆರೆದಿಡುತ್ತಿವೆ. ಊರೊಳಗಿನ ಬದುಕಿಗಿಂತ ಭಿನ್ನವಾಗಿ ಪ್ರಕೃತಿಯ ಮಡಿಲಲ್ಲಿ ಹುಟ್ಟಿ ಅನಾದಿಕಾಲದಿಂದಲೂ ನಿಸರ್ಗದೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿರುವ ಸಮುದಾಯಗಳ ಅಂತಸ್ಥ ಜಗತ್ತಿನ ಅನಾವರಣ ಸೈದ್ಧಾಂತಿಕವಾಗಿಯೇ ನಡೆಯುತ್ತಿದೆ. ಬುಡಕಟ್ಟುಗಳ ಬದುಕು ಕಾಡೊಳಗೆ ರೂಪುಗೊಂಡು

ಹಲವು ವಿನ್ಯಾಸಗಳಲ್ಲಿ ಅರಳಿ ನಿಂತಿದೆ. ಬುಡಕಟ್ಟುಗಳ ಬದುಕನ್ನು ಹಲವು ಬಗೆಗಳಲ್ಲಿ ಅಧ್ಯಯನಕ್ಕೊಳಪಡಿಸಿದ್ದಾರೆ. ಹಾಗೆಯೇ 'ಬುಡಕಟ್ಟು' ಎಂಬ ಪದಕ್ಕೂ ಹಲವು ಬಗೆಯ ಅರ್ಥ ವಿನ್ಯಾಸಗಳನ್ನು ಕಲ್ಪಿಸಲಾಗಿದೆ. 'ಬುಡಕಟ್ಟು ಎಂಬ ಪದವು ಆಂಗ್ಲ ಪದ 'Tribe'ಗೆ ಸಂವಾದಿ ಪದವಾಗಿ ಬಳಕೆಯಲ್ಲಿದೆ. 'Tribe' ಎಂಬ ಪದವು ಲ್ಯಾಟಿನ್ ಭಾಷೆಯ 'Tribuz' ಎಂಬ ಪದದಿಂದ ಹುಟ್ಟಿದೆ. 'Tribuz' ಎಂದರೆ ಮೂರು ವಿಭಾಗಗಳು ಎಂದರ್ಥ. ರೋಮನ್ನರು ಬುಡಕಟ್ಟುಗಳನ್ನು ಕುರಿತು 'ವಿವಿಧ ಕುಲಗಳನ್ನು ಹೊಂದಿರುವ ಜಿಲ್ಲೆಗಳು ಸೇರಿದ ಒಂದು ಉನ್ನತವಾದ ರಾಜಕೀಯ ಘಟಕವಾಗಿದ್ದು, ರಾಜಕೀಯ ವಿಭಾಗವಾಗಿದೆ'[1] ಎಂದು ಸಮಾಜಶಾಸ್ತ್ರಜ್ಞರಾದ ಘುರ್ಯೆಯವರು ವ್ಯಾಖ್ಯಾನಿಸಿದ್ದಾರೆ. 'ಬುಡಕಟ್ಟು' ಪದನಿಷ್ಪತ್ತಿಗೆ ಸಂಬಂಧಿಸಿದಂತೆ ಹಲವು ಚರ್ಚೆಗಳು ಆದಿವಾಸಿ ಬದುಕಿನ ಸಾಂಸ್ಕೃತಿಕ ಬದುಕನ್ನು ಆಧರಿಸಿ ಚಾಲ್ತಿಯಲ್ಲಿವೆ. 'ಬುಡಕಟ್ಟು' ಮತ್ತು 'Tribe' ಎಂಬ ಪದಗಳ ನಿಷ್ಪತ್ತಿ ಹುಡುಕುತ್ತಾ ಅನೇಕ ಚರ್ಚೆಗಳು ನಡೆದಿವೆ. ಆದರೆ ಭಾರತದ ಆದಿಮ ಮತ್ತು ದುಡಿವ ಸಮಾಜಗಳನ್ನು ಹೆಸರಿಸುವ ಪ್ರತಿ ಪ್ರಯತ್ನದ ಹಿಂದೆ ಇಂಡಿಯಾದ ಸಾಂಸ್ಕೃತಿಕ ರಾಜಕಾರಣ ಪ್ರಧಾನ ಪಾತ್ರವಹಿಸುತ್ತ ಬಂದಿದೆ. ಭಾರತದ ಪ್ರಾಚೀನ ಸಾಹಿತ್ಯದಲ್ಲಿ ನಾಲ್ಕು ವರ್ಣಗಳಿಗೂ ಲಗತ್ತಾಗದ ಸಮುದಾಯಗಳನ್ನು ನಿಷಾದರು, ದಶ್ಯುಗಳು, ವ್ಯಾಧರು, ದಾಸರು, ಕಿರಾತರು, ಮತ್ಸ್ಯರು ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗಿದೆ. ಇಂಡಿಯಾದ ಸಮಾಜದ ನಾಲ್ಕು ವರ್ಣಗಳಿಗೆ ಸೇರದ ಪ್ರತ್ಯೇಕ ಗುಂಪಿನ ಸಮುದಾಯಗಳಿವು. ಪಾರಂಪರಿಕ ಇಂಡಿಯಾದ ಸಾಮಾಜಿಕ ಶ್ರೇಣೀಕರಣದಲ್ಲಿ ಉಲ್ಲೇಖಿಸಲೂ ಆಗದ ಜನವರ್ಗಗಳಿವು. ಇಂತಹ ಸಮುದಾಯಗಳನ್ನು ಈ ದೇಶದ ಪುರಾಣಗಳಲ್ಲಿ ರಾಕ್ಷಸರನ್ನಾಗಿ, ಕುರೂಪಿಗಳನ್ನಾಗಿ, ಕೋತಿಗಳನ್ನಾಗಿ, ಪ್ರಾಣಿಗಳನ್ನಾಗಿ ಮತ್ತು ಸಮಾಜದ ನಿಕೃಷ್ಟ ಕೆಲಸಗಳನ್ನು ನಿರ್ವಹಿಸಲೆಂದೇ ಹುಟ್ಟಿದ ಗುಲಾಮರನ್ನಾಗಿ ಚಿತ್ರಿಸುತ್ತಾ ಬರಲಾಗಿದೆ'[2]

ಬುಡಕಟ್ಟುಗಳ ಮುಖ್ಯ ಲಕ್ಷಣಗಳೆಂದರೆ, ತಮ್ಮದೇ ಆದ ವಿಶಿಷ್ಟ ಭಾಷೆ, ನಂಬಿಕೆ, ದೈವ ಆಚರಣೆಗಳು, ಕುಲ, ನಿಯಮ, ನಿಷೇಧಗಳು, ಭೌಗೋಳಿಕ ಪ್ರತ್ಯೇಕತೆ, ಅಗಾಧವಾದ ಪಾರಂಪರಿಕ ಜ್ಞಾನ, ಗುಂಪುಗಳಲ್ಲಿ ವಾಸ ಹಾಗೂ ಸುಸಂಘಟಿತ ಸಾಮಾಜಿಕ ವ್ಯವಸ್ಥೆ. ಎಂದು ಅರ್ಥೈಸಬಹುದು. ಸಹಸ್ರಾರು ವರ್ಷಗಳಿಂದ ಬೆಟ್ಟ, ಗುಡ್ಡ, ಕಾಡು, ಕಣಿವೆ, ಕಂದರ, ಹಿಮಾಚ್ಛಾದಿತ ಪ್ರದೇಶ, ಮರಳುಗಾಡು, ಬಯಲು, ದಟ್ಟಾರಣ್ಯ ಹೀಗೆ ವೈವಿಧ್ಯಮಯ ಪ್ರದೇಶಗಳಲ್ಲಿ ಬದುಕುತ್ತಿರುವ ಈ ಬುಡಕಟ್ಟುಗಳು ವೈವಿಧ್ಯಮಯ ಆಚಾರ-ವಿಚಾರ, ಭಾಷೆ, ಬದುಕು, ನಂಬಿಕೆ, ಕಟ್ಟುಪಾಡು, ಆಹಾರ ಪದ್ಧತಿ, ಕುಲ, ಪಂಚಾಯಿತಿಗಳು, ವೈದ್ಯ, ಮಾಟ, ಮಂತ್ರ, ಆತ್ಮ, ದೇವರು ಈ ರೀತಿಯ ಸಂಕೀರ್ಣವಾದ ಬಹು ಶ್ರೀಮಂತವಾದ ಸಂಸ್ಕೃತಿಯನ್ನು ಹೊಂದಿವೆ. ಆದರೆ ಭಾರತವನ್ನು ವಸಾಹತುವನ್ನಾಗಿಸಿಕೊಂಡ ಯುರೋಪಿನವರು ಭಾರತದ ಬುಡಕಟ್ಟುಗಳನ್ನು ವಿಭಿನ್ನವಾಗಿ ವ್ಯಾಖ್ಯಾನಿಸಿದರು.

ವಸಾಹತುಶಾಹಿಗಳಿಗೆ ತಮ್ಮ ಆಳ್ವಿಕೆಗೆ ಒಳಪಟ್ಟ ದೇಶಗಳಲ್ಲಿ ಆಡಳಿತವನ್ನು ಸುಗಮವಾಗಿ ನಡೆಸಬೇಕಾದರೆ ಸ್ಥಳೀಯ ಜನಜೀವನವನ್ನು ತಿಳಿಯುವುದು ಅನಿವಾರ್ಯವಾಗಿತ್ತು. ಅದರಲ್ಲೂ ಭಾರತದಂತಹ ಭಿನ್ನ ಸಂಸ್ಕೃತಿ, ಭಿನ್ನ ಭಾಷೆ, ನಂಬಿಕೆ, ಆಚಾರ, ದೈವ, ಜಾತಿಗಳನ್ನು ಹೊಂದಿರುವ ವೈವಿಧ್ಯಮಯವಾದ ದೇಶವನ್ನು ಅರ್ಥ ಮಾಡಿಕೊಳ್ಳಲು ವಿದೇಶಿ ಮಾನವಶಾಸ್ತ್ರಜ್ಞರು ಕುತೂಹಲದಿಂದಲೇ ಭಾರತಕ್ಕೆ ಬಂದರು ಮತ್ತು ಭಾರತವನ್ನು ಹಲವು ನೆಲೆಗಳಲ್ಲಿ ಅರ್ಥೈಸಲು ಪ್ರಯತ್ನಿಸಿದರು. ಆ ಸಂದರ್ಭದಲ್ಲಿ ಪ್ರಪಂಚದ ಬಹುತೇಕ ಬುಡಕಟ್ಟುಗಳ ನಡುವೆ ಇರುವ ಸಾಮ್ಯತೆಯನ್ನು ಕೂಡ ಗುರುತಿಸಲಾಯಿತು. ಭಾರತದಲ್ಲಿ ಅಧ್ಯಯನ ನಡೆಸಿದ ಪ್ರಮುಖ ವಿದೇಶಿಯರೆಂದರೆ ರಸೆಲ್, ಅಬೆ ದುಬಾಯಿಸ್, ಹರ್ಬರ್ಟ್ ರಿಸ್ಲೆ, ಎಡ್ಗರ್ ಥರ್ಸ್‌ಟನ್, ಜಿ. ಹೆಚ್.ಹಟ್ಟನ್, ಜಿ.ಪಿ.ಬುಲ್ಸ್ ಸ್ಮಿತ್, ಹೈಮನ್ ಡಾರ್ಫ್, ಕ್ರಿಶ್ಚಿಯನ್ ಪಾದ್ರಿ ವೆರಿಯರ್ ಎಲ್ವಿನ್ ಮುಂತಾದವರು. ಇವರಲ್ಲದೆ ಭಾರತೀಯರಾದ ಧೀರೇಂದ್ರನಾಥ್ ಮಜುಂದಾರ್, ಆರ್.ಡಿ.ಚಂದ್ರ, ನಿರ್ಮಲ್ ಕುಮಾರ್ ಭೋಸ್, ಎ ಎ ಡಿ ಲೂಯಿಜ್ ಅಧ್ಯಯನ ಮಾಡಿದ್ದಾರೆ. ಬುಡಕಟ್ಟುಗಳನ್ನು ಈ ವಿದ್ವಾಂಸರು ತಮ್ಮ ಅಧ್ಯಯನಗಳ ಆಧಾರದಲ್ಲಿ ಹಲವು ರೀತಿಯಲ್ಲಿ ವ್ಯಾಖ್ಯಾನವನ್ನು ಮಾಡಿದ್ದಾರೆ.

ವಸಾಹತು ಕಾಲಘಟ್ಟದಲ್ಲಿ ಮತ್ತು ಅನಂತರ ಬುಡಕಟ್ಟುಗಳನ್ನು ನಾಗರಿಕ ಸಮಾಜ ಅಮಾನವೀಯವಾಗಿ ಶೋಷಣೆ ಮಾಡುತ್ತಾ ಬಂದಿದೆ. ಈ ಶೋಷಣೆಗೆ ಅಭಿವೃದ್ಧಿಯ ಮುಖವಾಡವನ್ನೂ ಹಾಕಲಾಗಿದೆ. ಅದಕ್ಕೆ ಅಭಿವೃದ್ಧಿ ಎಂಬ ಆಕರ್ಷಕವಾದ ಹೆಸರನ್ನೂ ಕೊಟ್ಟಿದ್ದೇವೆ ಅಭಿವೃದ್ಧಿಯ ಹೆಸರಿನಲ್ಲಿ ಹೊಸ ಹೊಸ ಯೋಜನೆಗಳು, ಅಣೆಕಟ್ಟುಗಳು, ಸಾರಿಗೆ, ಕಾರ್ಖಾನೆಗಳು, ಅರಣ್ಯ ರಕ್ಷಣೆ, ವನ್ಯಜೀವಿ ಸಂರಕ್ಷಣೆ, ಅರಣ್ಯ ನೀತಿ ಎಂಬ ಹತ್ತು ಹಲವು ಕಾರ್ಯಕ್ರಮಗಳನ್ನು ಮತ್ತು ಕಾನೂನುಗಳನ್ನು ರೂಪಿಸುವ ಭರದಲ್ಲಿ ಬುಡಕಟ್ಟುಗಳನ್ನು ಕಾಡಿನಿಂದ ಹೊರಹಾಕಿ ಅತಂತ್ರರನ್ನಾಗಿಸಿದ್ದೇವೆ. ಇದರಿಂದಾಗಿ ಕಾಡೊಳಗೆ ನೆಮ್ಮದಿಯಿಂದ ಬದುಕುತ್ತಿದ್ದವರು ಇಂದು ಅನಿವಾರ್ಯವಾಗಿ ಒಕ್ಕಲೆದ್ದು ಹೋಗಿದ್ದಾರೆ. ಆದರೂ ಬುಡಕಟ್ಟುಗಳು ಪ್ರಧಾನ ಸಂಸ್ಕೃತಿಯ ಅಲೆಯಲ್ಲಿ ಕೊಚ್ಚಿಹೋಗದೆ ತಮ್ಮತನವನ್ನು ಕಾಪಿಟ್ಟುಕೊಳ್ಳುವಲ್ಲಿ ಈ ಸಮುದಾಯಗಳ ಪ್ರಯತ್ನ ಅಚ್ಚರಿ ಮೂಡಿಸುವಂತಹದ್ದು.

ಈ ಸಮುದಾಯಗಳು ತಮ್ಮ ಹುಟ್ಟು, ಮದುವೆ, ಸಾವುಗಳನ್ನು ಪುರೋಹಿತರ ಹೊರತಾಗಿ ಆಚರಿಸುತ್ತವೆ ಮತ್ತು ಅವು ತಮ್ಮದೇ ಆದ ಸ್ವತಂತ್ರ ಪಂಗಡಗಳ ಭದ್ರ ಬುನಾದಿಯನ್ನು ಹೊಂದಿವೆ. ಹಿಂದೂ ಜಾತಿವ್ಯವಸ್ಥೆಯ ಒಳಗೆ ಸಮ್ಮಿಳನಗೊಂಡರೂ ತಮ್ಮ ಪಾರಂಪರಿಕ ಚಹರೆಗಳನ್ನು ಬಿಟ್ಟುಕೊಡದೆ ಉಳಿಸಿಕೊಂಡು ಬಂದಿವೆ. ಅದು ಆ ಸಮುದಾಯಕ್ಕಿರುವ ಅಚಲ ಸಾಂಸ್ಕೃತಿಕ ಅಚಲತೆಯನ್ನು

ಎತ್ತಿ ತೋರಿಸುತ್ತದೆ. ಈ ಬುಡಕಟ್ಟುಗಳು ಹಿಂದೂ ಧರ್ಮದ ಹಾಗೂ ಈಗಾಗಲೇ ಚಾಲ್ತಿಯಲ್ಲಿರುವ ಜಾತಿಗಳಾಗಿ ಬದಲಾಗದಿರುವ ಕುರಿತು ಹಲವು ವಿದ್ವಾಂಸರ ವ್ಯಾಖ್ಯಾನಗಳು ಇಂತಿವೆ.

ನಿರ್ಮಲ್ ಕುಮಾರ್ ಬೋಸ್ ಅವರು 'One might indeed say the tribes can be regarded as fully absorbed in the Hindu fold, If Brahmin priests perform Brahmanical ceremonies, for them design the three critical events of birth, marriage, and death if the later are still celebrated by tribal rituals than, the communities are still true to their own faith inspite of the fact that, in the outer fringes of their culture they participate in some of the ceremonies of their trends neighbors'[3] ಎನ್ನುತ್ತಾರೆ.

ಪ್ರೊ. ಸೆಲ್ವಿಯನ್ ಲೆವಿ ಅವರು 'The tribes is prospective caste, which has not attempted to itself to the sacred mould of Hinduism. The caste is a group. Consciously or not voluntarily or not has accepted at least in their broader definitions. The principles of the traditional order, the Brahmin have instructed'[4] ಎಂದು ಭಾರತದ ಬುಡಕಟ್ಟುಗಳ ಪಾರಂಪರಿಕೆ ನಿಷ್ಠತೆಯನ್ನು ವಿಶ್ಲೇಷಿಸುತ್ತಾರೆ.

ಈ ಎಲ್ಲ ಅಂಶಗಳ ಆಧಾರದ ಮೇಲೆ ಕರ್ನಾಟಕದಲ್ಲಿ ಈಗಾಗಲೇ 50 ಸಮುದಾಯಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಲಾಗಿದೆ. ಇಡೀ ಭಾರತದಲ್ಲಿ ಅತಿ ಹೆಚ್ಚು ಬುಡಕಟ್ಟು ಸಮುದಾಯಗಳನ್ನು ಹೊಂದಿರುವ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ಬುಡಕಟ್ಟುಗಳನ್ನು ಅವುಗಳು ಬದುಕುವ ಪರಿಸರದ ಆಧಾರದ ಮೇಲೆ ಈ ಕೆಳಗಿನಂತೆ ವಿಭಾಗಿಸಬಹುದಾಗಿದೆ.

1. ಬಯಲುಸೀಮೆಯ ಬುಡಕಟ್ಟುಗಳು
2. ಕರಾವಳಿ ಬುಡಕಟ್ಟುಗಳು
3. ಅರಣ್ಯವಾಸಿ ಬುಡಕಟ್ಟುಗಳು
4. ಅಲೆಮಾರಿ ಬುಡಕಟ್ಟುಗಳು
5. ಅರೆ ಅಲೆಮಾರಿ ಬುಡಕಟ್ಟುಗಳು

ಬುಡಕಟ್ಟುಗಳ ಅಭಿವೃದ್ಧಿಗಾಗಿ ಸ್ವತಂತ್ರ ಭಾರತದ ಮೊದಲನೇ ಪ್ರಧಾನ ಮಂತ್ರಿಗಳಾದ ಜವಾಹರಲಾಲ್ ನೆಹರೂ ಅವರು ಪಂಚಶೀಲ ತತ್ವಗಳನ್ನು ಜಾರಿಗೆ ತಂದರು. ಭಾರತದಲ್ಲಿ ಬುಡಕಟ್ಟುಗಳನ್ನು ಕುರಿತಂತೆ ಅಪಾರವಾದ ಕೆಲಸವನ್ನು ಮಾಡಿದ ಕ್ರಿಶ್ಚಿಯನ್ ಪಾದ್ರಿ ವೆರಿಯರ್ ಎಲ್ವಿನ್. ಭಾರತದಲ್ಲಿ ಬುಡಕಟ್ಟುಗಳನ್ನು ಕುರಿತು ಮಾನವಶಾಸ್ತ್ರೀಯ ಅಧ್ಯಯನವನ್ನು ನಡೆಸುತ್ತಿದ್ದ ವಿದ್ವಾಂಸರುಗಳಿಗೆ ಮತ್ತು ಅಧಿಕಾರಿಗಳಿಗೆ ಬುಡಕಟ್ಟು ಸಮುದಾಯಗಳನ್ನು ನೋಡುವ ಹೊಸ

ದೃಷ್ಟಿಕೋನವನ್ನು ಒದಗಿಸಿಕೊಟ್ಟ ಒಬ್ಬ ಶ್ರೇಷ್ಠ ಮಾನವಶಾಸ್ತ್ರಜ್ಞ, ಬುಡಕಟ್ಟುಗಳ ಜೊತೆಗಿನ ತಮ್ಮ ಅನುಭವವನ್ನು 'ದಿ ಫಿಲಾಸಫಿ ಆಫ್ ನೇಫಾ' (The Philosophy of NEFA, The North East Frontier Agency) ಎಂಬ ಪುಸ್ತಕದಲ್ಲಿ ದಾಖಲಿಸಿದ್ದಾರೆ. ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದಿರುವ ಜವಾಹರ ಲಾಲ್ ನೆಹರೂ ಅವರು ಅದರಿಂದ ಪ್ರೇರೇಪಿತರಾಗಿ ಭಾರತದ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಪಂಚಶೀಲ ತತ್ವಗಳನ್ನು ಅಲ್ಲಿ ಉಲ್ಲೇಖಿಸಿದ್ದಾರೆ. ಅವುಗಳು ಹೀಗಿವೆ.

1. 'ಬುಡಕಟ್ಟು ಪಂಗಡಗಳು ತಮ್ಮದೇ ಆದ ಸಾಮರ್ಥ್ಯದಿಂದ ಅಭಿವೃದ್ಧಿ ಹೊಂದಲು ಅವಕಾಶ ನೀಡಬೇಕು. ಅವರ ಮೇಲೆ ಬಲವಂತವಾಗಿ ಏನನ್ನೂ ಹೇರಬಾರದು, ಅವರ ಸಾಂಪ್ರದಾಯಿಕ ಕಲೆ ಮತ್ತು ಸಂಸ್ಕೃತಿಯನ್ನು ಎಲ್ಲ ವಿಧದಲ್ಲೂ ಪ್ರೋತ್ಸಾಹಿಸಬೇಕು.

2. ಭೂಮಿ ಮತ್ತು ಅರಣ್ಯದ ವಿಚಾರದಲ್ಲಿ ಬುಡಕಟ್ಟುಗಳ ಹಕ್ಕುಗಳನ್ನು ಗೌರವಿಸಬೇಕು.

3. ಬುಡಕಟ್ಟು ಪ್ರದೇಶಗಳ ಆಡಳಿತ, ಅಭಿವೃದ್ಧಿಗಳಿಗೆ ಸಂಬಂಧಿಸಿದಂತೆ ಅವರಿಗೆ ತರಬೇತಿ ನೀಡಿ ಅವರದೇ ತಂಡವನ್ನು ಕಟ್ಟಬೇಕು. ಪ್ರಾರಂಭಿಕ ಹಂತದಲ್ಲಿ ಹೊರಗಿನ ತಂತ್ರಜ್ಞರ ನೆರವು ಅಗತ್ಯ ವಾಗಬಹುದು. ಆದರೆ ಬುಡಕಟ್ಟು ಕ್ಷೇತ್ರಗಳಲ್ಲಿ ಹೊರಗಿನವರ ಪ್ರವೇಶವನ್ನು ಸಾಧ್ಯವಾದಷ್ಟು ತಪ್ಪಿಸಬೇಕು.

4. ಬುಡಕಟ್ಟು ಪ್ರದೇಶದಲ್ಲಿ ಏಕಕಾಲಕ್ಕೆ ಹಲವಾರು ಯೋಜನೆಗಳನ್ನು ಕೈಗೊಳ್ಳಬಾರದು. ಅವರಿಗೆ ಪೂರಕವಾಗಿ ಕೆಲಸ ಮಾಡಬೇಕಲ್ಲದೆ ಅವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಸ್ಥೆಗಳಿಗೆ ಪ್ರತಿಸ್ಪರ್ಧಿಯಾಗಿ ಕೆಲಸ ಮಾಡಬಾರದು.

5. ಬುಡಕಟ್ಟುಗಳ ಕಲ್ಯಾಣ ಸಾಧನೆಯನ್ನು ಅವರ ವ್ಯಕ್ತಿತ್ವದ ಪ್ರಗತಿಯ ಮೂಲಕ ಗುರುತಿಸಬೇಕೇ ವಿನಾ ಅವರಿಗಾಗಿ ಖರ್ಚು ಮಾಡಿದ ಹಣದಿಂದಲ್ಲ'[5] ಎನ್ನುತ್ತಾರೆ. ಆದರೆ, ಭಾರತದ ಪಾರಂಪರಿಕ ಸಮಾಜ, ವಸಾಹತುಶಾಹಿ ಆಡಳಿತ ಮತ್ತು ಪಶ್ಚಿಮದ ವಿದ್ವಾಂಸರು ಈ ಬುಡಕಟ್ಟುಗಳನ್ನು ಅರ್ಥೈಸುವಲ್ಲಿ ಅನೇಕ ಪೂರ್ವಗ್ರಹಗಳಿದ್ದವು. ಯುರೋಪಿನ ಪಾರಂಪರಿಕ ಮಾನವಶಾಸ್ತ್ರೀಯ ವಿಧಾನ ನಮ್ಮ ಆದಿಮ ಸಮಾಜಗಳನ್ನು ಕೀಳಾಗಿಯೇ ನೋಡುವಂತೆ ಮಾಡಿತ್ತು. ಅದಕ್ಕೆ ಯುರೋಪಿನ ಬಂಡವಾಳಶಾಹಿ ಆಶಯಗಳೂ ಪ್ರೇರಣೆಯನ್ನು ಒದಗಿಸಿದ್ದವು.

'ಪುನರುಜ್ಜೀವನದ ನಂತರ ಯುರೋಪಿನ ದೇಶಗಳು ತಮ್ಮ ವಸಾಹತುಗಳನ್ನು ವಿಸ್ತರಿಸುವ ಸಲುವಾಗಿ ಆಕ್ರಮಿತ ಭೂಪ್ರದೇಶಗಳಲ್ಲಿನ ಜನರನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದರು. ಯುರೋಪಿನ ಬೇರೆ ಬೇರೆ ಕ್ಷೇತ್ರಗಳಿಗೆ ಸೇರಿದ ಜನ ತಮ್ಮ ವಸಾಹತುಗಳಲ್ಲಿ ಜನಾಂಗಿಕ ಅಧ್ಯಯನಗಳನ್ನು ಪ್ರಾರಂಭಿಸಿದರು. ಈ ಅಧ್ಯಯನಗಳಿಗೆ 'ಎತ್ನೋಲಾಜಿಕಲ್' ಅಧ್ಯಯನಗಳೆಂದು ಕರೆದರು.

ಜನಾಂಗಿಕಶಾಸ್ತ್ರ, ಮಾನವಕುಲಶಾಸ್ತ್ರ ಎಂದು ಕನ್ನಡದಲ್ಲಿ ಕರೆಯಲ್ಪಡುವ ಈ ಶೈಕ್ಷಣಿಕ ಶಿಸ್ತು ಬಡುಕಟ್ಟುಗಳನ್ನು ಮತ್ತು ಆದಿಮ ಸಮಾಜಗಳನ್ನು ಅಧ್ಯಯನ ಮಾಡಲೆಂದೇ ಹುಟ್ಟಿದ ಶಾಸ್ತ್ರಶಿಸ್ತಾಗಿ ಇಂಡಿಯಾದಲ್ಲಿ ರೂಪಾಂತರಗೊಂಡಿತು. ಇದನ್ನು ಮೊದಲು Ethnology, Ethnography ಎಂಬ ಹೆಸರಿನಲ್ಲಿ ಅಧ್ಯಯನಕಾರರು ಬಳಸುತ್ತಿದ್ದರು. ಯುರೋಪಿನ ಜನ ಇಲ್ಲಿಗೆ ಬರುವ ಮೊದಲು ಇಂಡಿಯಾದಲ್ಲಿ ಈ Tribe ಅಥವಾ ಕನ್ನಡದಲ್ಲಿ 'ಬುಡಕಟ್ಟು' ಎಂಬ ಪದ ಬಳಕೆ ಇತ್ತು ಎಂದು ಕಂಡು ಬರುವುದಿಲ್ಲ. ಈ ಕಾರಣದಿಂದ Tribe ಎಂಬ ಪದವನ್ನು ಯುರೋಪಿನವರು ತಮ್ಮ ಅಧ್ಯಯನದ ಸಂದರ್ಭದಲ್ಲಿ ಬಳಸಿದರು(ಟ್ರೈಬಸ್ ಎಂಬ ಪದ ಗ್ರೀಕ್ ಮೂಲದ್ದು ಎಂಬ ವಾದವೂ ಇದೆ). ಇದಕ್ಕೂ ಮುನ್ನ Ethnic ಎಂಬ ಪದವನ್ನು ಯುರೋಪಿನ ಜನ ಈ ಸಮುದಾಯಗಳನ್ನು ಸಂಬೋಧಿಸುವಾಗ ಬಳಸುತ್ತಿದ್ದರು. 'Ethnic' ಎಂಬ ಪದವನ್ನು Race ಎಂಬ ಪದಕ್ಕೆ, ಇಲ್ಲವೆ Uncivilized ಎಂಬ ಪದಕ್ಕೆ ಪರ್ಯಾಯವಾಗಿ ಬಳಸಲಾಗುತ್ತಿತ್ತು. Ethnic ಅಂದರೆ 'ಜನಾಂಗಿಕ', ನಾಗರಿಕವಲ್ಲದ, ಮುಖ್ಯವಾಹಿನಿಯಿಂದ ಹೊರತಾದ ಅಥವಾ ಮಾನವ ವಿಕಾಸದ ಚರಿತ್ರೆಯಲ್ಲಿ ಸ್ಥಗಿತಗೊಂಡ ಹಂತದ ಜನಸಮುದಾಯಗಳನ್ನು ಸೂಚಿಸಲು ಈ ಪದವನ್ನು ಬಳಸಲಾಗಿದೆ. ಯುರೋಪಿನಿಂದ ಆಚೆಗಿರುವ ಮತ್ತು ವಸಾಹತು ರಾಷ್ಟ್ರಗಳಲ್ಲಿನ ಜನರು ಇನ್ನೂ Ethnic ಅಥವಾ ಜನಾಂಗಿಕ ಹಂತದಲ್ಲಿದ್ದಾರೆಂದು ಭಾವಿಸಿದ ಯುರೋಪಿನ ವಿದ್ವಾಂಸರು ಈ ಜನರನ್ನು ಸಂಬೋಧಿಸುವಾಗ Ethnic ಎಂಬ ಪದವನ್ನು ಬಳಸಿದರು. ಹಾಗೆ ನೋಡಿದರೆ Ethnic ಎಂಬ ಪದವು ಯುರೋಪಿನ 'ನಾಗರಿಕ' ಗಣ್ಯತೆಯಿಂದ ಹುಟ್ಟಿದ ಪದವಾಗಿದೆ ಎಂದು ಬರ್ನಾರ್ಡ್ ಕ್ಹೋನ್ ಹೇಳುತ್ತಾರೆ. ಅದಕ್ಕೇ ಇದನ್ನು ಮುಂದೆ Ethnography ಮತ್ತು Ethnology ಎಂಬ ಹೆಸರಿನ ಮೂಲಕ ಒಂದು ಜ್ಞಾನಶಿಸ್ತನ್ನಾಗಿ ರೂಪಿಸಲು ಯತ್ನಿಸಲಾಯಿತು. ಇದು ಮುಂದೆ Anthropology ಎಂಬ ಶೈಕ್ಷಣಿಕ ಶಿಸ್ತಿನಲ್ಲಿ ಹೆಚ್ಚೂ ಕಡಿಮೆ ಸೇರಿಹೋಯಿತು. ಆದರೆ ಇಂದಿಗೂ ಈ ಪದ ಬಳಕೆ ಮತ್ತು ಅಧ್ಯಯನಗಳು ನಡೆಯುತ್ತಲೇ ಇವೆ. ಆದರೆ ಅಲ್ಲಿಯವರೆಗೂ Ethnic ಮತ್ತು Tribe ಎಂಬ ಪದಗಳು ಯುರೋಪ್ ಮತ್ತು ಯುರೋಪೇತರ ಜನಗಳನ್ನು ವಿಂಗಡಿಸುವ ಪದಗಳಾಗಿಯೇ ಬಳಕೆಯಲ್ಲಿದ್ದವು. ಮುಂದೆ 'Tribe' ಎಂಬ ಪದವು ಸ್ವತಂತ್ರ ಭಾರತದಲ್ಲಿ ರಾಜಕೀಯ ಮತ್ತು ಆಡಳಿತಾತ್ಮಕ ಪರಿಭಾಷೆಯಾಗಿ ರೂಪಾಂತರಗೊಂಡಿತು. ಆಡಳಿತಾತ್ಮಕವಾಗಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಎಂದು ಕರೆಯಲ್ಪಟ್ಟ ಸಮುದಾಯಗಳು ಸ್ವಾತಂತ್ರ್ಯಪೂರ್ವ ಭಾರತವನ್ನು ಆಳಿದ ಯಜಮಾನರ ಕಲ್ಪನೆಗಳಿಗೆ ಅನುಗುಣವಾಗಿ ಪರಿಭಾವಿಸಲ್ಪಟ್ಟಿದ್ದವು. Scheduled Castes ಮತ್ತು Scheduled Tribes ಎಂಬ ವರ್ಗೀಕರಣವು ಈ ಗುಂಪಿಗೆ ಸೇರಿದ ಸಮುದಾಯಗಳನ್ನು ವಸಾಹತು ಆಡಳಿತ ನೋಡುವ ಕ್ರಮವನ್ನು ತೋರಿಸುತ್ತದೆ. ಸ್ವಾತಂತ್ರ್ಯ ಬಂದ ಮೇಲೆ Scheduled Castes ಮತ್ತು Scheduled Tribes ಎಂಬ ಪದಗಳು ವಸಾಹತು ಆಡಳಿತದ ಕೊಡುಗೆಗಳಾಗಿ

ನಮ್ಮ ದೇಶದ ಆಡಳಿತದ ಒಳಗೂ ಸೇರಿಹೋದವು. ಆಡಳಿತದ ಈ ಎರಡೂ ಪಾರಿಭಾಷಿಕಗಳಿಗೂ, ಹೀಗೆ ಕರೆಯಲ್ಪಡುವ ಸಮುದಾಯಗಳಿಗೂ ಜನಾಂಗಿಕವಾಗಿ, ಚಾರಿತ್ರಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ತಾತ್ವಿಕವಾಗಿ ಯಾವ ಸಂಬಂಧವೂ ಇಲ್ಲ. ಕೆಲ ಸಮುದಾಯಗಳನ್ನು ಕೂಡುಸಮಾಜದಿಂದ ಹೊರಗಿಟ್ಟು ಸಂಬೋಧಿಸುವ ಕಾರಣಕ್ಕೆ ಈ 'ಪರಿಶಿಷ್ಟ' ಎಂಬ ಪರಿಭಾಷೆಯನ್ನು ಬಳಸುತ್ತಾ ಬರಲಾಗಿದೆ. ಮುಂದೆ ಇದು 'ಶಿಷ್ಟ-ಪರಿಶಿಷ್ಟ, ಮುಖ್ಯವಾಹಿನಿ-ಅಂಚಿನ ಸಮುದಾಯಗಳು, ಶಿಷ್ಟ-ಜಾನಪದ' ಎಂಬ ಅತಿರೇಕದ ವಿಂಗಡಣೆಗಳಿಗೂ ಕಾರಣವಾಯಿತು.[5] ಭಾರತದ ಶಿಷ್ಟ ಪುರಾಣಗಳಲ್ಲಿ ಈ ಬುಡಕಟ್ಟುಗಳನ್ನು ಕಿನ್ನರ, ನಿಷಾದ, ಮತ್ಸ್ಯ, ಕಿರಾತ, ಕೊಲ್ಲ, ಭಿಲ್, ಭರತ ಮೊದಲಾದ ಹೆಸರಿನಿಂದ ಕರೆದಿದ್ದಾರೆ. ಈ ಗುಂಪುಗಳು ಒಬ್ಬ ಸಮರ್ಥ ನಾಯಕನ ಆಡಳಿತಕ್ಕೆ ಒಳಪಟ್ಟಿರುತ್ತಿತ್ತು. ಇವರದು ಏಕವ್ಯಕ್ತಿ ಆಳ್ವಿಕೆಯಲ್ಲ. ಬದಲಿಗೆ ಸಮುದಾಯವೇ ವ್ಯವಸ್ಥಿತವಾಗಿ ರೂಪಿಸಿದ ಹಲವು ಹಂತದ ನಾಯಕತ್ವ ಬುಡಕಟ್ಟುಗಳಲ್ಲಿ ನಾಯಕತ್ವ ಎಂದರೆ ಆಳ್ವಿಕೆಯಲ್ಲ. ಬದಲಿಗೆ ಜವಾಬ್ದಾರಿ. ಈ ರೀತಿ ಹಲವು ಹಂತದಲ್ಲಿ ರಚನೆಯಾದ ಆಡಳಿತ ವ್ಯವಸ್ಥೆಯಲ್ಲಿ ಸಮುದಾಯದಿಂದ(ಕೆಲವೊಮ್ಮೆ ವಂಶಪಾರಂಪರ್ಯವಾಗಿ) ಆಯ್ಕೆಯಾದ ನಾಯಕರು ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ವಿಚಾರಗಳಲ್ಲಿ ಅತ್ಯಂತ ಪ್ರಭಾವಿಯಾಗಿದ್ದು ಗುಂಪಿನ ಆಡಳಿತ, ನ್ಯಾಯ ಇತ್ಯಾದಿ ವಿಚಾರಗಳಲ್ಲಿ ಗುಂಪಿನ ವಿಶ್ವಾಸವನ್ನು ಹೊಂದಿದವರಾಗಿರುತ್ತಿದ್ದರು. ಹೀಗಾಗಿ ಬುಡಕಟ್ಟುಗಳನ್ನು ಕುರಿತ ಭಾರತದ ಮೇಲ್ವರ್ಗಗಳ ಪಾರಂಪರಿಕ ತಿಳುವಳಿಕೆಗೂ, ವಸಾಹತು ಅಧ್ಯಯನಕಾರರ ವ್ಯಾಖ್ಯಾನಗಳಿಗೂ ಸೈದ್ಧಾಂತಿಕವಾಗಿ ತುಂಬಾ ವ್ಯತ್ಯಾಸಗಳೇನಿಲ್ಲ. ಭಾರತದ ತಳವರ್ಗಗಳನ್ನು ಮತ್ತು ಆದಿವಾಸಿಗಳನ್ನು 'ನಾಗರಿಕ'ವಲ್ಲದ ಸಮಾಜಕ್ಕೆ ಸೇರಿದ ಸಮುದಾಯಗಳು ಎಂದು ಕರೆಯುವುದು ಅನೂಚಾನವಾಗಿ ನಡೆದುಕೊಂಡು ಬಂದಿದೆ.

ಪ್ರಸ್ತುತ ಮಹಾಪ್ರಬಂಧದಲ್ಲಿ ಆದಿವಾಸಿಗಳ ಮೌಖಿಕ ಸಾಹಿತ್ಯದ ತಾತ್ವಿಕ ಆಯಾಮಗಳನ್ನು ಅಧ್ಯಯನ ಮಾಡಲು ಉದ್ದೇಶಿಸಲಾಗಿದೆ. ನಮ್ಮಲ್ಲಿ ಪಂಪ ರನ್ನರಾದಿಯಾಗಿ ಮಹಾಕವಿಗಳ ಪಠ್ಯಗಳ ಸಂಗ್ರಹ ಮತ್ತು ಓದುಗಳು ಸರಿಸುಮಾರು ವಸಾಹತು ಕಾಲಘಟ್ಟದಲ್ಲಿ ಪ್ರಾರಂಭವಾದವು. ನಿರ್ದಿಷ್ಟ ಲೇಖಕ ಬರೆದ ಈ ಪಠ್ಯಗಳನ್ನು 'ಶಿಷ್ಟ' ಕಥನಗಳು ಅಥವಾ ಪಠ್ಯಗಳು ಎಂದು ಕರೆಯಲಾಯಿತು. ಬುಡಕಟ್ಟು ಮತ್ತು ಜಾನಪದ ಎಂದು ಹೇಳಲಾಗುವ ಪಠ್ಯಗಳ ಸಂಪಾದನೆ, ಪ್ರಕಟಣೆ ಮತ್ತು ವ್ಯಾಖ್ಯಾನಗಳು ಪ್ರಾರಂಭವಾಗಿದ್ದೂ ಸಹ ವಸಾಹತು ಆಡಳಿತದ ಸಂದರ್ಭದಲ್ಲಿಯೇ. ಇಂತಹ ಪಠ್ಯಗಳನ್ನು 'ಜಾನಪದ', 'ಪರಿಶಿಷ್ಟ' ಎಂದು ವರ್ಗೀಕರಿಸಲಾಯಿತು. ಆದಿವಾಸಿ ಮತ್ತು ಗ್ರಾಮ ಸಮಾಜಗಳ ಮೌಖಿಕ ಪಠ್ಯಗಳ ಸಂಗ್ರಹ, ಸಂಪಾದನೆಯ ನಂತರ ಈ ಕೃತಿಗಳ ಅಧ್ಯಯನ, ಅರ್ಥವಿವರಣೆ, ವ್ಯಾಖ್ಯಾನ ಪ್ರಾರಂಭವಾದವು. ಆಯಾ ಕಾಲಘಟ್ಟಕ್ಕೆ ನಮ್ಮ ಅಧ್ಯಯನಗಳನ್ನು ಪ್ರಭಾವಿಸುವ ಸಂಗತಿಗಳ ಮೂಲಕವೇ ಈ ಬುಡಕಟ್ಟು ಮತ್ತು ಜನಪದ ಪಠ್ಯಗಳನ್ನು ನೋಡಲಾಗಿದೆ.

ಆರಂಭದಲ್ಲಿ ಈ ಪಠ್ಯಗಳನ್ನು 'ಜನಪದ' ಮತ್ತು 'ಶಿಷ್ಟ' ಎಂದೇ ವರ್ಗೀಕರಣ ಮಾಡಲಾಯಿತು. ಅಧ್ಯಯನಕಾರರ ಮುಂದಿದ್ದ ಪಂಪ, ರನ್ನರ ಮಹಾಕಾವ್ಯಗಳ ಲಕ್ಷಣಗಳಿಗಿಂತ ಭಿನ್ನವಾಗಿದ್ದ, ಈ ಮೌಖಿಕ ಪಠ್ಯಗಳನ್ನು ಲಿಖಿತ ಪಠ್ಯಗಳಿಗಿಂತ ಹೇಗೆ ಭಿನ್ನ? ಯಾವ ಯಾವ ಅಂಶಗಳಲ್ಲಿ ಇವು ಲಿಖಿತ ಪಠ್ಯಗಳಿಂದ ಭಿನ್ನವಾಗಿವೆ ಎಂಬ ಅಧ್ಯಯನಗಳು ಆರಂಭದಲ್ಲಿ ಹೆಚ್ಚು ನಡೆದವು. ಈ ಅಧ್ಯಯನಗಳು ಜಾನಪದ ತಿಳುವಳಿಕೆ ಎಂಬುದು ಒಂದು ಸ್ವಯಂಪೂರ್ಣ ಜಗತ್ತಿನ ಸೃಷ್ಟಿ ಎಂದೇ ಪರಿಗಣಿಸಿದವು. ಈ ರೀತಿಯ ವರ್ಗೀಕರಣದ ಅಪಾಯಗಳೇನೆಂದರೆ ಕರ್ನಾಟಕದ ಅಥವಾ ಭಾರತದ ಒಟ್ಟು ಪರಿಕಲ್ಪನೆಯಲ್ಲಿ ಈ ಪಠ್ಯಗಳು ಭಿನ್ನ ಜಗತ್ತಿನ ಕನವರಿಕೆಗಳೋ ಅಥವಾ ಬೇರೆಯದೇ ಆದ ಒಂದು ಕತ್ತಲಲೋಕದ ವಿವರಗಳೋ ಆಗಿಬಿಡುವ ಸಾಧ್ಯತೆಗಳಿವೆ. ಅಂದರೆ ಒಂದು ಕರ್ನಾಟಕದ ಪರಂಪರೆ ಎಂದು ಏನನ್ನು ಕರೆಯಲಾಗುತ್ತಿದೆಯೋ ಅದು, ಒಂದು ವಿಶಿಷ್ಟ ಅಭಿವ್ಯಕ್ತಿ ಕ್ರಮ ಎಂಬ ಪರಿಗಣನೆಗೆ ಈ ವರ್ಗೀಕರಣದಿಂದ ಸಾಧ್ಯವಾಗುವುದಿಲ್ಲ. 'ಈ ಆದಿವಾಸಿಗಳ ಕಾವ್ಯ ಅಥವಾ ಕಥನ ಎಂಬ ವಿವರ ಅಥವಾ ಪರಿಗಣನೆ ಒಂದು ಹಂತದವರೆಗೆ ಒಪ್ಪಿತವಾಗುವ ವರ್ಗೀಕರಣ ಮಾತ್ರ. ಸಂಸ್ಕೃತಿ ಚಿಂತನೆಯ ಪ್ರಕ್ರಿಯೆಯಲ್ಲೂ ಈ ವಿಂಗಡಣೆಯನ್ನು ಮಾನ್ಯ ಮಾಡುವುದು ಸರಿಯಲ್ಲ. ಪಂಪನ ವಿಕ್ರಮಾರ್ಜುನ ವಿಜಯ, ಮಂಟೇಸ್ವಾಮಿ ಕಾವ್ಯಗಳನ್ನು ಅಕ್ಕಪಕ್ಕದಲ್ಲಿಟ್ಟು ನೋಡಿದಾಗ ಮೇಲ್ನೋಟಕ್ಕೆ ಅವು ಭಿನ್ನ ಸಮುದಾಯಗಳ ಅಭಿವ್ಯಕ್ತಿ ಕ್ರಮಗಳಿಂದ ರೂಪುಗೊಂಡವು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಯಾವುದನ್ನು ನಾವು ಕರ್ನಾಟಕ ಪರಂಪರೆ ಎಂದು ಕರೆಯುತ್ತೇವೋ, ಆ ಪರಂಪರೆಯ ಆಯಾ ಕಾಲಘಟ್ಟದ ಸಾಂಸ್ಕೃತಿಕ ಸಂದರ್ಭಗಳ ಪುನರ್‌ಸೃಷ್ಟಿಗಳಂತೆ ಅವು ಜೀವ ಪಡೆದಿರುತ್ತವೆ. ಇದೇ ಕಾರಣಕ್ಕೆ ಮಂಟೇಸ್ವಾಮಿ ಕಾವ್ಯ ಎಂಬುದು ಅಜ್ಞಾತ ಪಾತಾಳಲೋಕದ ಶುದ್ಧಾಂಗ ಚಹರೆಗಳಿರುವ ಕೃತಿಯೆಂಬಂತೆ ಕಾಣುವುದಿಲ್ಲ. ಅಲ್ಲದೆ ಕಾವ್ಯದ ಒಳಗಡೆ ಬರುವ ಸನ್ನಿವೇಶಗಳು ಸಹ ಈ ವರ್ಗೀಕರಣವನ್ನು ಹಂತ ಹಂತವಾಗಿ ನಿರಾಕರಿಸುತ್ತಾ ಹೋಗುತ್ತವೆ. ರಾಮಾಯಣದ ಮೇಲೆ ವಿಶೇಷ ಅಧ್ಯಯನ ಮಾಡಿರುವ ರೋಮಿಲಾಥಾಪರ್ ತಮ್ಮ 'Exile and Kingdom' ಕೃತಿಯಲ್ಲಿ ರಾಮಾಯಣದ ಮೂಲವನ್ನು, ಬುದ್ಧ ಪೂರ್ವದ ಜಾನಪದ ಪಠ್ಯಗಳಾದ ಜಾತಕ ಕಥೆಗಳಲ್ಲಿ ಗುರುತಿಸುತ್ತಾರೆ. ಈಗಲೂ ಆದಿವಾಸಿಗಳಲ್ಲಿ ಭಿನ್ನ ರಾಮಾಯಣದ ಪಾಠಗಳಿವೆ. ಭಾರತದುದ್ದಕ್ಕೂ ಜನಪದರಲ್ಲಿ ಎಂಟು ನೂರು ಬಗೆಯ ರಾಮಾಯಣಗಳಿರುವುದನ್ನು ಅಧ್ಯಯನಕಾರರು ಗುರುತಿಸಿದ್ದಾರೆ. ಹೀಗಾಗಿ ರಾಮಾಯಣ ಹೇಗೆ ಒಂದು ಶುದ್ಧ ಶಿಷ್ಟ ಜಗತ್ತಿನ ಪಠ್ಯವಲ್ಲವೋ, ಮಂಟೇಸ್ವಾಮಿ ಕಾವ್ಯದ ರಚನೆಯಲ್ಲಿನ ಹಲವು ಸನ್ನಿವೇಶಗಳು, ಅದನ್ನು ಶುದ್ಧ ಆದಿವಾಸಿ ಜಗತ್ತಿನ ಕಾವ್ಯ ಎಂಬುದನ್ನು ನಿರಾಕರಿಸುತ್ತವೆ. ಇಂದಿನ ಕನ್ನಡ ಸಂಸ್ಕೃತಿಯ ಸಂದರ್ಭದಲ್ಲೂ ಈ ಪಠ್ಯಗಳನ್ನು ಹೇಗೆ ಚರ್ಚಿಸಬಹುದು ಎಂಬುದೇ ಈಗ ಮುಖ್ಯ ಪ್ರಶ್ನೆಯಾಗಬೇಕಿದೆ.'[7]

ಕರ್ನಾಟಕದ ಪರಂಪರೆಯಲ್ಲಿ ಜಾನಪದ ಕಾವ್ಯ, ಕಥೆ, ಕಥನ ಮತ್ತು ಒಟ್ಟಾರೆಯ ಮೌಖಿಕ ವಾಙ್ಮಯಕ್ಕೆ ಇರುವ ಸ್ಥಾನಮಾನಗಳೇನು? ಅವುಗಳ ಸಾಂಸ್ಕೃತಿಕ ರಾಜಕಾರಣದ ಮೌಲ್ಯಗಳೇನು? ಎನ್ನುವ ಪ್ರಶ್ನೆಗಳು ಈಗ ಮುಖ್ಯವಾಗಬೇಕಾಗಿದೆ. ಏಕೆಂದರೆ ಇಂಡಿಯಾದ ವಿಷಮ ಸಾಮಾಜಿಕ ಸಂದರ್ಭದಲ್ಲಿ, ಒಂದೆಡೆ ರಾಜನ ಆಶ್ರಯ ಪಡೆದು ವೈಭೋಗಗಳ ನಡುವೆ ಕಾವ್ಯಗಳನ್ನು ರಚಿಸಿದ ಒಂದು ಲಿಖಿತ ಪರಂಪರೆ ಇದೆ. ಇದೇ ಶ್ರೇಣೀಕರಣ ಮತ್ತು ಸಾಮಾಜಿಕ ಸ್ಥಾನಮಾನಗಳಿಂದ ವಂಚಿತವಾದ ಸಮುದಾಯಗಳು ಅನೇಕ ಅವಮಾನ, ಹಿಂಸೆ, ನೋವು, ಅಸಹಾಯಕತೆಗಳಲ್ಲೂ ಅಕ್ಷರಜಗತ್ತಿನಿಂದ ದೂರ ಉಳಿದು ಮೌಖಿಕವಾಗಿ ಸೃಷ್ಟಿಯಾದ ಕಾವ್ಯಗಳ ಒಂದು ಪರಂಪರೆಯೂ ಇದೆ. ಈ ಎರಡೂ ಸೃಜನಶೀಲ ಪ್ರತಿಭೆಗಳಿಗೆ ಕಾರಣವಾದ ಕನ್ನಡ ಸಂಸ್ಕೃತಿಯೊಂದಿದೆ. ಯಾಕಾಗಿ ಈ ಮೌಖಿಕ ಪಠ್ಯವೆನ್ನುವುದು ಲಿಖಿತ ಪಠ್ಯಗಳಂತೆ ಮಾನ್ಯತೆ ಪಡೆಯಲಾಗಲಿಲ್ಲ? ಏಕೆಂದರೆ ಅದೂ ಕನ್ನಡ ಸಂಸ್ಕೃತಿಯ ಒಂದು ಭಾಗವಾಗಿಯೇ ರಚಿಸಲ್ಪಟ್ಟಿದೆ. 'ವಿಕ್ರಮಾರ್ಜುನ ವಿಜಯದಷ್ಟೇ ಶ್ರೇಷ್ಠ ಕಾವ್ಯಗಳನ್ನು ತನ್ನ ನಾಲಿಗೆ ತುದಿಯಲ್ಲಿಟ್ಟುಕೊಂಡ ಬುರ್ರಕಥಾ ಈರಮ್ಮ ಏಕೆ ಮಹಾಕವಿಯಾಗಲಾರಳು? ಅವಳಿಗೆ ಯಾವ 'ಶೈಕ್ಷಣಿಕ' ತರಬೇತಿ ಸರ್ಕಸ್ಸು ಇಲ್ಲದೇ ಸಾವಿರಾರು ಪುಟಗಳ ಏಳೆಂಟು ಕಾವ್ಯಗಳನ್ನು ರಚಿಸಬಲ್ಲಳೆಂದರೆ, ಅವಳ್ಯಾಕೆ ಇನ್ನೂ ಹೊಲಗಳಲ್ಲಿ ಕೂಲಿಯಾಗಿ ಕಳೆಕೀಳಬೇಕಿದೆ..? ಅವಳಲ್ಲಿ ಇಂದು ಕನ್ನಡದ ಮಹಾಕಾವ್ಯಗಳ ಸಾಲಿಗೆ ಸೇರುವಂತಹ ಅನೇಕ ಕಾವ್ಯಗಳೇ ಇವೆ. ಇಂದು ಇತಿಹಾಸಕಾರರೆನ್ನಿಸಿಕೊಂಡು ಶಾಸನ ತಾಳೆಗರಿ ಹಸ್ತಪ್ರತಿ ಹಿಡಿದು ಓಡಾಡುವ ತಜ್ಞ ಚರಿತ್ರೆಕಾರರು ಎಂದೂ ಮುಟ್ಟದ, ಅರಿಯದ ಕನ್ನಡ ಸಂಸ್ಕೃತಿಯ ವಿಭಿನ್ನ ಮೌಲ್ಯಗಳನ್ನು ಕ್ರೌರ್ಯಗಳನ್ನು ಪ್ರತಿನಿಧಿಸುವ ಚರಿತ್ರೆಯ ಸರಕು ಅವಳ ಬಳಿ ಇರುವಾಗ ಅವಳು ಮಹಾಕವಿಯೂ ಆಗಿಲ್ಲ, ಚರಿತ್ರೆಕಾರಳೂ ಆಗಿಲ್ಲ. ಹೀಗೆ ಅವಳನ್ನು ಗೌಣವಾಗಿಸಿದ ರಾಜಕಾರಣದ ಕುರಿತು ನಮ್ಮ ಅಧ್ಯಯನಗಳು ಇಂದು ಮಾತನಾಡಬೇಕಿದೆ.'[8] ಈ ಶಿಷ್ಟ ಜಾನಪದ ಎಂಬ ಸರಳ ವಿರೋದಾಭಾಸಗಳನ್ನು ವಿರೋಧಿಸುವ ಹಲವು ಸಂಗತಿಗಳು ಜಾನಪದ ಮತ್ತು ಶಿಷ್ಟ ಎಂದು ನಾವು ವಿಭಾಗಿಸಿರುವ ಪಾಠಗಳಲ್ಲೇ ಇರುತ್ತವೆ. ಶಿಷ್ಟ ಮತ್ತು ಜಾನಪದ ಎಂದು ವರ್ಗೀಕರಿಸಲ್ಪಟ್ಟ ತಿಳುವಳಿಕೆಯ ಕ್ರಮಗಳು ಒಂದೇ ಪರಂಪರೆಯ ಭಿನ್ನ ಅಭಿವ್ಯಕ್ತಿಕ್ರಮಗಳು ಮಾತ್ರ. ಈ ಬಗೆಯ ಶೈಕ್ಷಣಿಕ ಮಿಥ್ಯೆಯ ಸ್ವರೂಪವನ್ನು ವಿಶ್ಲೇಷಣೆ ಮಾಡುವ ಪ್ರಯತ್ನಗಳು ಕನ್ನಡದಲ್ಲಿ ಹಲವು ಹಂತಗಳಲ್ಲಿ ನಡೆದಿವೆ. ಜಿ. ಶಂ. ಪರಮಶಿವಯ್ಯ, ಕಾಳೇಗೌಡ ನಾಗವಾರ, ಹಿ ಶಿ ರಾಮಚಂದ್ರೇಗೌಡ, ಹಿ ಚಿ ಬೋರಲಿಂಗಯ್ಯ, ಮಂಜುನಾಥ ಬೇವಿನಕಟ್ಟಿ, ಮೊಗಳ್ಳಿ ಗಣೇಶ್ ಮುಂತಾದ ಸಂಸ್ಕೃತಿ ಚಿಂತಕರು ಯುರೋಪಿನ ಯಾಂತ್ರಿಕ ವರ್ಗೀಕರಣದ ಶುಷ್ಕ ವಿಧಾನವನ್ನು ವಿಶ್ಲೇಷಿಸಿ, ದೇಶಿ ಅಧ್ಯಯನ ಕ್ರಮವನ್ನು ರೂಪಿಸಲು ಯತ್ನಿಸಿದ್ದಾರೆ. ಈ ಎಲ್ಲರ ಅಧ್ಯಯನದ ಬೆಳಕಲ್ಲಿ ಪ್ರಸ್ತುತ

ಅಧ್ಯಯನ ರೂಪುಗೊಂಡಿದೆ. ಜೊತೆಗೆ ಈ ವಿದ್ವಾಂಸರು ಕರ್ನಾಟಕದ ಅಪರೂಪದ ಜನಪದ ಮತ್ತು ಬುಡಕಟ್ಟು ಮಹಾಕಾವ್ಯಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಈ ಎಲ್ಲ ಅಧ್ಯಯನಗಳ ಮುಂದುವರಿಕೆಯಾಗಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ದಟ್ಟವಾದ ಮರಗಿಡಗಳು, ಬೆಟ್ಟ ಗುಡ್ಡಗಳಿಂದ ಕೂಡಿದ ಸಹ್ಯಾದ್ರಿಯ ಸಾಲಿನಲ್ಲಿರುವ ಕೊಡಗಿನ ಅರಣ್ಯದಲ್ಲಿ ಸಹಸ್ರಾರು ವರ್ಷಗಳಿಂದ ಹಲವಾರು ಬುಡಕಟ್ಟುಗಳು ಅಜ್ಞಾತವಾಗಿ ಜೀವಿಸುತ್ತಿವೆ. ಇವನ್ನು ನಾವು ಅರಣ್ಯವಾಸಿ ಬುಡಕಟ್ಟುಗಳು ಎಂದು ಕರೆಯಬಹುದಾಗಿದೆ. ಈ ಬುಡಕಟ್ಟು ಸಮುದಾಯಗಳಂತೆಯೇ ಈ ಸಮುದಾಯಗಳ ಮೌಖಿಕ ಸಾಹಿತ್ಯವೂ ಕೂಡ ಅಪೂರ್ವವಾಗಿದೆ. ಈ ಮೌಖಿಕ ಸಾಹಿತ್ಯವು ಅಪಾರವಾದ ಪ್ರಾಕೃತಿಕ ಜ್ಞಾನಪರಂಪರೆಯನ್ನು, ಆದಿಮ ತಿಳುವಳಿಕೆಯನ್ನು ಅಂತರ್ಗತವಾಗಿಸಿಕೊಂಡಿದೆ. ಈ ಸಮುದಾಯಗಳ ಮೌಖಿಕ ಸಾಹಿತ್ಯವು ಕೇವಲ ಸಮುದಾಯದ ಹಾಡು, ಕತೆಗಳಲ್ಲಿ ನೀರಸ ವಿವರಗಳಿಲ್ಲ. ಹಾಗೆಯೇ ಆದಿವಾಸಿ ಸಂಸ್ಕೃತಿಯ ಶ್ರೀಮಂತ ವರ್ಣನೆಯೂ ಅಲ್ಲ, ಬದಲಿಗೆ ಇದು ಜೀವಂತ ಸಮುದಾಯಗಳ ಬದುಕು, ಬವಣೆ, ಸ್ವಾತಂತ್ರ್ಯ, ಸಂಕೋಲೆ, ಅಧೀನತೆ, ಪರಾಧೀನತೆ, ನೋವು, ನಲಿವು, ಸಾವು–ಬದುಕು, ಕಳೆದುಕೊಂಡಿರುವ–ಹುಡುಕುತ್ತಿರುವ ತಳಮಳದ ತಿಳುವಳಿಕೆಯೇ ಆಗಿದೆ.

## 1.2. ಅಧ್ಯಯನದ ಉದ್ದೇಶಗಳು

1. ಕೊಡಗಿನ ಬುಡಕಟ್ಟು ಸಮುದಾಯಗಳ ಮೌಖಿಕ ಸಾಹಿತ್ಯಗಳ ವಿವಿಧ ಪ್ರಕಾರಗಳಾದ ಹಾಡು, ಕಥೆ, ಗಾದೆ, ಒಗಟು, ಪುರಾಣ, ಕಾವ್ಯಗಳ ಸ್ವರೂಪ ಮತ್ತು ಅವುಗಳ ವಿಶಿಷ್ಟ ಚಹರೆಗಳನ್ನು ವಿವರಿಸುವುದು.
2. ಬುಡಕಟ್ಟು ಮೌಖಿಕ ಸಾಹಿತ್ಯದಲ್ಲಿ ಅವರ ಸಮಾಜದ ಸ್ವರೂಪ, ಆದಿವಾಸಿಗಳ ಆರ್ಥಿಕ ಅಧೀನತೆ ಮತ್ತು ಲಿಂಗಸಂಬಂಧಿ ಆಯಾಮಗಳನ್ನು ವಿಶ್ಲೇಷಿಸುವುದು.
3. ಬುಡಕಟ್ಟು ಮೌಖಿಕ ಸಾಹಿತ್ಯದಲ್ಲಿ ಆದಿವಾಸಿಗಳ ಪಾರಂಪರಿಕ ಜ್ಞಾನ ಮತ್ತು ಸಾಂಸ್ಕೃತಿಕ ಅನನ್ಯತೆಗಳನ್ನು ವಿವರಿಸುವುದು.
4. ಆದಿವಾಸಿಗಳ ಸಮಗ್ರ ಬದುಕಿನ ಭಾಗವಾಗಿ ರೂಪುಗೊಂಡ ಮೌಖಿಕ ಸಾಹಿತ್ಯವನ್ನು ತಾತ್ವಿಕ ವಿವೇಚನೆಗೆ ಒಳಪಡಿಸುವುದು.

ಈ ಮೇಲಿನ ಉದ್ದೇಶಗಳನ್ನು ಇಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## 1.3. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಸಂಶೋಧನಾ ಪ್ರಬಂಧಕ್ಕೆ ನಾನು ಕೊಡಗು ಜಿಲ್ಲೆಯನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಕೊಡಗು ಜಿಲ್ಲೆಯ ಮೂರು ತಾಲ್ಲೂಕುಗಳಾದ ವಿರಾಜಪೇಟೆ, ಸೋಮವಾರಪೇಟೆ, ಮಡಿಕೇರಿ ತಾಲ್ಲೂಕುಗಳಲ್ಲಿರುವ ಬುಡಕಟ್ಟುಗಳನ್ನು ನಾನು ಈ ಪ್ರಬಂಧದಲ್ಲಿ ಅಧ್ಯಯನಕ್ಕೊಳಪಡಿಸಿದ್ದೇನೆ. ಎರವರು, ಜೇನುಕುರುಬ, ಸೋಲಿಗ, ಬೆಟ್ಟಕುರುಬ ಮತ್ತು ಕುಡಿಯರ ಮೌಖಿಕ ಸಾಹಿತ್ಯವನ್ನು ಪ್ರಧಾನವಾಗಿ ಪರಿಗಣಿಸಲಾಗಿದೆ. ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಮಾಹಿತಿಗಾಗಿ ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ, ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ, ಕೇರಳದ ತಿರುನೆಲ್ಲಿಯಲ್ಲಿಯೂ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿದೆ.

ನನ್ನ ಪ್ರಬಂಧದ ವಿಷಯಕ್ಕೆ ಸಂಬಂಧಿಸಿದಂತೆ ಇಲ್ಲಿ ಬುಡಕಟ್ಟುಗಳ ಮೌಖಿಕ ಸಾಹಿತ್ಯಕ್ಕಷ್ಟೇ ಆದ್ಯತೆಯನ್ನು ನೀಡಲಾಗಿದೆ. ಆದಿವಾಸಿಗಳ ಹಾಡುಗಳು, ಕತೆಗಳು, ಕಾವ್ಯಗಳು, ಗಾದೆಗಳು, ಒಗಟುಗಳು, ಪುರಾಣಗಳು, ಐತಿಹ್ಯಗಳನ್ನು ಸಂಗ್ರಹಿಸುವುದರ ಜೊತೆಗೆ ಅವುಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಈ ಪಠ್ಯಗಳ ಸಂಗ್ರಹಣೆಗಾಗಿ ಹಬ್ಬಗಳು, ದೈವಾಚರಣೆಗಳು, ಜೀವನಾವರ್ತದ ಆಚರಣೆಗಳಾದ ಹುಟ್ಟು, ಮದುವೆ, ಋತುಮತಿ ಶಾಸ್ತ್ರ, ಸಾವು ಹಾಗೂ ತಿಥಿ ಮೊದಲಾದ ಆಚರಣೆಗಳಿಗೆ ಸಂಬಂಧಿಸಿದ ಮಾಹಿತಿಗಳನ್ನು ಸಂಗ್ರಹಿಸಿ ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದೇನೆ. ಈ ವಿಷಯಕ್ಕೆ ಸಂಬಂಧಿಸಿದ ಪೂರಕ ಮಾಹಿತಿಯನ್ನು ಸಂಗ್ರಹಿಸಿ, ಬುಡಕಟ್ಟುಗಳ ಬದುಕಿನ ನಂಬಿಕೆಗಳು, ನಿಯಮಗಳ ರೂಪಿಸುವಿಕೆಯ ಹಿಂದಿರುವ ಪ್ರಾಕೃತಿಕ, ಸಾಮಾಜಿಕ, ಸಾಮುದಾಯಿಕ ನೆಲೆಗಳನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸಲಾಗಿದೆ. ಬುಡಕಟ್ಟು ಮೌಖಿಕ ಸಾಹಿತ್ಯದಲ್ಲಿ ವ್ಯಕ್ತವಾಗಿರುವ ಬುಡಕಟ್ಟುಗಳ ಸಾಮಾಜಿಕ ಬದುಕು, ಕುಲ ಮತ್ತು ಜಾತಿಗೆ ಸಂಬಂಧಿಸಿದ ವಿಂಗಡಣೆ, ಒಳಾಡಳಿತ ವ್ಯವಸ್ಥೆ, ಯಜಮಾನಿಕೆಯ ಹಂತಗಳು, ಹೆಣ್ಣಿನ ಸ್ಥಾನಮಾನ, ಹೆಣ್ಣಿನ ಅನನ್ಯತೆ, ಆಧೀನತೆ ಮತ್ತು ಶೋಷಣೆಯ ನೆಲೆಗಳು, ಪ್ರತಿರೋಧದ ಸ್ವರೂಪ, ದುಡಿಮೆಯ ಸ್ವರೂಪಗಳು, ದೈವ, ಕಲೆ ಕುರಿತ ಮಾಹಿತಿ ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

## 1.4. ಅಧ್ಯಯನ ವಿಧಾನ

ಬುಡಕಟ್ಟುಗಳ ಮೌಖಿಕ ಸಾಹಿತ್ಯದ ಪ್ರಕಾರಗಳಾದ ಹಾಡುಗಳು, ಮಹಾಕಾವ್ಯಗಳು, ಕತೆಗಳು ಹೆಚ್ಚಿನದ್ದಾಗಿ ಆಚರಣೆಗಳೊಂದಿಗೆ ತಳಕು ಹಾಕಿಕೊಂಡಿವೆ. ಹೆಚ್ಚಿನ ಸಾಹಿತ್ಯವು ಸಮುದಾಯಗಳ ಧಾರ್ಮಿಕ ಆಚರಣೆಗಳಿಗೆ ಸಂಬಂಧಿಸಿದ್ದಾಗಿದೆ. ನಿರ್ದಿಷ್ಟ ಆಚರಣೆಗಳಿಗೆ ಸಂಬಂಧಿಸಿದಂತೆ ನಿರ್ದಿಷ್ಟ ವಾದ ಹಾಡು ಕತೆಗಳಿದ್ದು ಈ ಮೌಖಿಕ ಸಾಹಿತ್ಯದ ಬಗೆಗೆ ಭಯ ಭಕ್ತಿ ಮಿಶ್ರಿತ ಗೌರವ ಭಾವವನ್ನು

ಇವರು ಹೊಂದಿದ್ದಾರೆ. ತಮ್ಮ ಧಾರ್ಮಿಕ ಆಚರಣೆಗಳಲ್ಲಿ ತಮ್ಮ ದೇವರುಗಳು, ಆತ್ಮಗಳನ್ನು ಇವರು ಆವಾಹಿಸಿಕೊಳ್ಳುತ್ತಾರೆ. ಹೀಗೆ ಆವಾಹನೆಯಾಗುವ ಸಮಯದಲ್ಲಿ ಹಾಡುವ ಹಾಡುಗಳು ವಿಶಿಷ್ಟವಾಗಿದ್ದು ಸಮುದಾಯದ ಅಂತಃಸತ್ವವನ್ನು ಒಳಗೊಂಡಿರುತ್ತವೆ. ಆ ಮೂಲಕ ಆತ್ಮಗಳೊಂದಿಗೆ ಸಂವಹನ ಏರ್ಪಡಿಸುತ್ತಾರೆ. ಅದನ್ನು ಬೇರೆ ಸಮಯದಲ್ಲಿ ಅನುಕರಣೆ ಮಾಡುವುದು ಸಾದ್ಯವಿಲ್ಲ. ಒಂದು ವೇಳೆ ಅನುಕರಿಸಿದರೂ ಕೂಡ ತಮ್ಮ ಹಿರಿಯ ದೈವಗಳು, ಆತ್ಮಗಳು ತಮ್ಮ ಮೇಲೆ ಕೋಪಿಸಿಕೊಂಡು ತಮಗೆ ಕೆಡುಕು ಉಂಟು ಮಾಡುತ್ತವೆ ಎಂಬ ನಂಬಿಕೆ ಇವರದ್ದು. ಅಲ್ಲದೆ ಇನ್ನೂ ಕೆಲವು ಮೌಖಿಕ ಪಠ್ಯಗಳು ಜೀವನಾವರ್ತನ ಆಚರಣೆಗಳಾದ ಸಾವು, ಮದುವೆ, ತಿಥಿ, ಮೈನೆರೆಯುವ ಸಂದರ್ಭಕ್ಕೆ ಸಂಬಂಧಪಟ್ಟವು. ಅವು ಸಮುದಾದ ಭಾವನಾತ್ಮಕ ವಿಚಾರಗಳಾದುದರಿಂದ ಅವುಗಳನ್ನು ಕೂಡ ಸಮುದಾಯದೊಂದಿಗೆ ಆಚರಣೆಗಳಲ್ಲಿ ಪಾಲ್ಗೊಂಡು ಅಧ್ಯಯನ ನಡೆಸಬೇಕಾಗುತ್ತದೆ. ಅಂತಹ ಆಚರಣೆಗಳಲ್ಲಿ ಭಾಗವಹಿಸಿ, ಅವರೊಂದಿಗೆ ಚರ್ಚಿಸಿ ವಿಶ್ಲೇಷಿಸುವುದು ಸರಿಯಾದ ಕ್ರಮ. ಆದರೆ ಸಂಶೋಧಕ ಇಂತಹ ಸಮಯದಲ್ಲಿ ನಿರ್ದಿಷ್ಟ ಅಂತರವನ್ನು ಕಾಪಾಡಿಕೊಳ್ಳುವುದು ಕೂಡ ಅಷ್ಟೇ ಮುಖ್ಯ. ಈ ಎಲ್ಲ ವಿಷಯಗಳ ಆಧಾರದ ಮೇಲೆ ನನ್ನ ಅಧ್ಯಯನ ವಿಧಾನವನ್ನು ಈ ರೀತಿ ವಿಂಗಡಿಸಿದ್ದೇನೆ.

1. ಸಹಭಾಗಿತ್ವ ವಿಧಾನ
2. ಅವಲೋಕನ ವಿಧಾನ
3. ಕ್ಷೇತ್ರಕಾರ್ಯ
4. ಸಂದರ್ಶನ ವಿಧಾನ
5. ಗುಂಪುಚರ್ಚೆ ವಿಧಾನ
6. ಲಭ್ಯ ಸಾಹಿತ್ಯಿಕ ಆಕರಗಳ ಅಧ್ಯಯನ

**1. ಸಹಭಾಗಿತ್ವ ವಿಧಾನ:** ಸಂಶೋಧಕರು ತಾವು ಅಧ್ಯಯನ ಮಾಡಲು ಬಯಸುವ ಸಮುದಾಯ ದೊಂದಿಗೆ ನೇರವಾದ ಸಂಪರ್ಕದಲ್ಲಿದ್ದು ಪ್ರತಿಯೊಂದು ವಿಷಯ, ಸಂದರ್ಭವನ್ನು ಕೂಲಂಕಷವಾಗಿ ಅಧ್ಯಯನ ನಡೆಸಲು ಈ ವಿಧಾನ ಸಹಕಾರಿಯಾಗುತ್ತದೆ. ಇಂತಹ ಸಮಯದಲ್ಲಿ ಸಂಶೋಧಕರು ಗುಂಪಿನಿಂದ ನಿರ್ದಿಷ್ಟ ಅಂತರದಲ್ಲಿ ನಿಂತು ವಿಷಯವನ್ನು ವಿಶ್ಲೇಷಿಸಬೇಕಾಗುತ್ತದೆ. ಆಚರಣೆಗಳಲ್ಲಿ ಸ್ವತಃ ಭಾಗಿಯಾಗುವುದರಿಂದ ನೈಜ ಮಾಹಿತಿ ನಮಗೆ ದೊರೆಯುತ್ತದೆ.

**2. ಅವಲೋಕನ ವಿಧಾನ:** ನಿರ್ದಿಷ್ಟ ಆಚರಣೆಗಳಲ್ಲಿ ಅಥವಾ ಸಮಯದಲ್ಲಿ ನಡೆಯುವ ಆಚರಣೆಗಳಲ್ಲಿ ಖುದ್ದಾಗಿ ಹಾಜರಿದ್ದು ನಿರ್ದಿಷ್ಟ ಉದ್ದೇಶದಿಂದ ವೀಕ್ಷಣೆ ಮಾಡುವುದನ್ನು ಅವಲೋಕನ ಎಂದು ಕರೆಯಲಾಗುತ್ತದೆ. ಆದಿವಾಸಿಗಳ ಆಚರಣೆ, ಸಂಪ್ರದಾಯ ಮತ್ತು ನೃತ್ಯಾದಿ ಕಲಾ ಪ್ರಕಾರಗಳನ್ನು

ಅವಲೋಕಿಸುವುದರ ಮೂಲಕ ಅನೇಕ ಮಾಹಿತಿಗಳನ್ನು ಪಡೆಯಲಾಗಿದೆ.

**3. ಕ್ಷೇತ್ರಕಾರ್ಯ:** ಕೊಡಗು, ಚಾಮರಾಜ ನಗರ ಮತ್ತು ಮೈಸೂರು ಜಿಲ್ಲೆಗಳಲ್ಲಿ ವ್ಯಾಪಕ ಕ್ಷೇತ್ರಕಾರ್ಯ ಮಾಡಲಾಗಿದೆ. ಒಂದು ನಿರ್ದಿಷ್ಟ ಪ್ರಶ್ನಾವಳಿಯ ಮೂಲಕ ಈ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿತ್ತು. ಸಮುದಾಯ ಆಚರಣೆಗಳಾದ ಹಬ್ಬಗಳು, ಜಾತ್ರೆಗಳು, ಜೀವನಾವರ್ತನದ ಆಚರಣೆಗಳಾದ ಮದುವೆ, ಮೈನೆರೆಯುವುದು, ಸೀಮಂತ, ಸಾವು ಮೊದಲಾದ ಸಂದರ್ಭಗಳಲ್ಲಿ ಖುದ್ದು ಭಾಗವಹಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**4. ಸಂದರ್ಶನ ವಿಧಾನ:** ಒಂದು ನಿರ್ದಿಷ್ಟ ಉದ್ದೇಶದಿಂದ ವ್ಯಕ್ತಿಗಳನ್ನು ಮಾತನಾಡಿಸುತ್ತಾ ನಮಗೆ ಬೇಕಾದ ಮಾಹಿತಿಯನ್ನು ಪಡೆಯುವುದನ್ನು ಸಂದರ್ಶನ ಎಂದು ಕರೆಯಲಾಗುತ್ತದೆ. ಮಾಹಿತಿ ಸಂಗ್ರಹಣೆಯೇ ಇದರ ಮುಖ್ಯ ಉದ್ದೇಶವಾಗಿರುತ್ತದೆ. ಈ ಮಾತುಕತೆಯು ಅನೌಪಚಾರಿಕವಾಗಿರುತ್ತದೆ, ನಿರ್ದಿಷ್ಟ ಪ್ರಶ್ನಾವಳಿಯನ್ನು ಸಿದ್ಧಪಡಿಸಿಕೊಂಡು ಆಯಾ ವ್ಯಕ್ತಿಗಳ ಸಂದರ್ಶನ ಮಾಡಲಾಗಿದೆ ಹಿರಿಯ ಕಲಾವಿದರು, ಕವಿಗಳನ್ನು ಸಂದರ್ಶನ ಮಾಡಲಾಗಗಿದೆ.

**5. ಗುಂಪುಚರ್ಚೆ ವಿಧಾನ:** ಯಾವುದಾದರೂ ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಸೇರಿದ ಒಂದು ಗುಂಪಿನಲ್ಲಿ, ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದಂತೆ ಅಭಿಪ್ರಾಯಗಳನ್ನು ಸಂಗ್ರಹಿಸುವುದಕ್ಕಾಗಿ ಗುಂಪುಚರ್ಚೆ ವಿಧಾನವನ್ನು ಬಳಸಲಾಗಿದೆ. ಸಮುದಾಯಕ್ಕೆ ಸೇರಿದ ಅಥವಾ ಸಮುದಾಯದ ಬಗ್ಗೆ ಅಧ್ಯಯನ ನಡೆಸಿದ ಅಥವಾ ಜ್ಞಾನವನ್ನು ಹೊಂದಿರುವ ಇಬ್ಬರು ಅಥವಾ ಇಬ್ಬರಿಗಿಂತ ಹೆಚ್ಚಿನ ಜನರು ಒಂದೆಡೆ ಕಲೆತು, ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದಂತೆ ತಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳುವುದಕ್ಕೆ ಪೂರಕವಾಗಿ ಗುಂಪುಚರ್ಚೆಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಮ್ಮಿಕೊಳ್ಳಲಾಗಿತ್ತು.

**6. ಲಭ್ಯ ಸಾಹಿತ್ಯಿಕ ಆಕರಗಳ ಅಧ್ಯಯನ:** ಬುಡಕಟ್ಟು ಮೌಖಿಕ ಸಾಹಿತ್ಯಕ್ಕೆ ಸಂಬಂಧಿಸಿದ ವಿಷಯದ ಬಗ್ಗೆ ಈಗಾಗಲೆ ಪ್ರಕಟಗೊಂಡಿರುವ ಪುಸ್ತಕಗಳನ್ನು ಅಧ್ಯಯನ ನಡೆಸುವುದು ಸಂಶೋಧನೆಯ ಪ್ರಾಥಮಿಕ ಚಟುವಟಿಕೆ. ಇದು ಕೂಡ ಅತ್ಯುತ್ತಮವಾದ ಅಧ್ಯಯನ ವಿಭಾಗವಾಗಿದೆ. ಇದರಿಂದ ಅಧ್ಯಯನಕ್ಕೆ ಸಂಬಂದಿಸಿದ ಪ್ರಾಥಮಿಕ ಮಾಹಿತಿಗಳು ಲಭ್ಯವಾಗುತ್ತವೆ. ಮಾಹಿತಿಯಿಂದ ಮೌಖಿಕ ಸಾಹಿತ್ಯವನ್ನು ಸಂಗ್ರಹಿಸಿ ಅದರಲ್ಲಿ ವ್ಯಕ್ತಗೊಂಡಿರುವ ಸಮುದಾಯದ ನಂಬಿಕೆ, ಜ್ಞಾನದರ್ಶನ ತತ್ವವನ್ನು ವಿವೇಚಿಸುವ ಪ್ರಯತ್ನ ಮಾಡಲಾಗಿದೆ.

## 1.5. ಅಧ್ಯಯನದ ಮಹತ್ವ

ಬುಡಕಟ್ಟು ಮೌಖಿಕ ಸಾಹಿತ್ಯದ ಪ್ರಕಾರಗಳಾದ ಹಾಡುಗಳು, ಕತೆಗಳು, ಕಾವ್ಯಗಳು, ನೃತ್ಯ

ಮೊದಲಾದ ಪ್ರದರ್ಶನ ಕಲೆಗಳು ಕೇವಲ ಮನೋರಂಜನೆಯ ಉದ್ದೇಶದಿಂದ ಸೃಷ್ಟಿಯಾದವುಗಳಲ್ಲ. ಬದಲಿಗೆ ಬುಡಕಟ್ಟುಗಳ ಬದುಕಿನಲ್ಲಿ ಸುಪ್ತವಾಗಿರುವ ಅವರ ನೋವು, ನಲಿವು, ತೊಳಲಾಟ, ತಳಮಳ, ಅಭದ್ರತೆ, ಅನಿಶ್ಚಿತತೆಗಳ ಕಾರಣಗಳಿಗಾಗಿ ಮಡುಗಟ್ಟಿದ ಭಾವನೆಗಳನ್ನು ಮತ್ತು ಪ್ರತಿರೋಧಗಳನ್ನು ಹೊರಹೊಮ್ಮಿಸುವ ಹೊರದಾರಿಗಳಾಗಿವೆ. ಆದಿವಾಸಿ ಸಮುದಾಯಗಳ ಈ ಅಂತರ್ಗತ ಮೌಲ್ಯಗಳನ್ನು ತಾತ್ವಿಕವಾಗಿ ಅರ್ಥೈಸುವ ಉದ್ದೇಶ ಈ ಮಹಾಪ್ರಬಂಧಕ್ಕಿದೆ. ಇಂದು ಶಿಷ್ಟ ಮತ್ತು ಜನಪದ ಸಾಹಿತ್ಯಕ್ಕೆ ದೊರಕಿದಷ್ಟು ಮನ್ನಣೆ, ಗೌರವ, ಪ್ರಾತಿನಿಧ್ಯತೆ ಬುಡಕಟ್ಟು ಸಾಹಿತ್ಯಕ್ಕೆ ದೊರಕಿಲ್ಲ. ಪ್ರತಿಯೊಂದು ಬುಡಕಟ್ಟುಗಳು ತಮ್ಮದೇ ಆದ ವಿಶಿಷ್ಟ ಭಾಷೆಯನ್ನು ಹೊಂದಿರುವುದರಿಂದ ದುಭಾಷಿಯ ನೆರವಿಲ್ಲದೆ ಇತರರಿಗೆ ಈ ಸಾಹಿತ್ಯವನ್ನು ಸಂಗ್ರಹಿಸುವುದು ಮತ್ತು ಅರ್ಥೈಸಿಕೊಳ್ಳುವುದು ಕಷ್ಟ ಅಲ್ಲದೇ ಈ ಸಾಹಿತ್ಯವು ಆಚರಣೆಗಳೊಂದಿಗೆ ಮೇಳೈಸಿರುವುದರಿಂದ ಅಂತಹ ಆಚರಣೆಗಳಲ್ಲಿ ಭಾಗವಹಿಸಿಯೇ ಅವುಗಳನ್ನು ಸಂಗ್ರಹಿಸಬೇಕಾಗುತ್ತದೆ. ಬುಡಕಟ್ಟು ಸಮಾಜಗಳು ಮೂಲದಲ್ಲಿ ಸಮಾನತೆ ಮತ್ತು ಸಹಬಾಳ್ವೆಯಿಂದ ಬದುಕಿ ಬಂದವುಗಳು. ಮಾತೃಪ್ರಧಾನ ಕುಟುಂಬ ಮತ್ತು ಸಮಾಜ ವ್ಯವಸ್ಥೆಯನ್ನು ಹೊಂದಿದ್ದ ಈ ಸಮುದಾಯಗಳ ಮೌಖಿಕ ಸಾಹಿತ್ಯವು ಬುಡಕಟ್ಟು ಹೆಣ್ಣು ಸ್ವತಂತ್ರವಾಗಿ ಬಾಳ್ವೆ ನಡೆಸಿದ, ಅವಳ ಭಾವನೆಗಳಿಗೆ ಧಕ್ಕೆಯಾಗದಂತಹ ವಾತಾವರಣವೊಂದಿತ್ತು ಎಂಬುದನ್ನು ಈ ಮೌಖಿಕ ಸಾಹಿತ್ಯ ನಮ್ಮರಿವಿಗೆ ತರುತ್ತದೆ. ಆದಿಮ ಬುಡಕಟ್ಟು ಸಮಾಜದಲ್ಲಿ ಹೆಣ್ಣಿಗೆ ವಿಶೇಷವಾದ ಸ್ಥಾನಮಾನಗಳಿರುವುದನ್ನು ಅವರ ಮೌಖಿಕ ಸಾಹಿತ್ಯ ಧ್ವನಿಸುತ್ತಿದೆ. ಕಾಲ ಮತ್ತು ಪರಿಸರ ಬದಲಾದಂತೆ ಪುರುಷಾಧಿಕಾರದ ಪ್ರಭಾವದಿಂದ ಹೆಣ್ಣಿಗೆ ಸಿಗುವ ಪ್ರಾತಿನಿಧ್ಯತೆಯು ಕೇವಲ ಸಮಯ, ಸಂದರ್ಭ, ಪರಿಸ್ಥಿತಿಗೆ ಅನುಗುಣವಾಗಿಯೇ ಇರುತ್ತದೆಯೇ ಹೊರತು ಎಲ್ಲ ಸಂದರ್ಭಗಳಲ್ಲೂ ಅಲ್ಲ ಎಂಬುದನ್ನು ಕೂಡ ನಾವು ಇಲ್ಲಿ ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಈ ಪ್ರಬಂಧವು ಬುಡಕಟ್ಟು ಮೌಖಿಕ ಸಾಹಿತ್ಯದಲ್ಲಿ ಅಭಿವ್ಯಕ್ತವಾಗಿರುವ ಸ್ತ್ರೀಪರ ನಿಲುವನ್ನು ದಾಖಲಿಸುವುದರ ಜೊತೆಜೊತೆಗೆ ಪುರುಷಗ್ರಹೀತ ಸಮಾಜದ ಹೇರಿಕೆಗಳನ್ನೂ ಇಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಸ್ತ್ರೀ ಚಳುವಳಿಗೆ ಪ್ರೇರಣೆಯಾಗಬಲ್ಲ 'ಸೋಲಿಗರ ಸಂಕಮ್ಮ', ಎರವರ ಓಲೆಪಾಟಿನಲ್ಲಿ ಬರುವ 'ಪೆರುಂಗಾಲಿ ಪೊಲಿ' ಮತ್ತು ಇತರೆ ಪಾತ್ರಗಳ ಮೂಲಕ ಬುಡಕಟ್ಟುಗಳ ಮೌಖಿಕ ಸಾಹಿತ್ಯವು ನೂರಾರು ವರ್ಷಗಳ ಹಿಂದೆಯೇ ಪುರುಷಾಧಿಕಾರವನ್ನು ಪ್ರತಿಭಟಿಸುವುದರ ಮೂಲಕ ಸ್ತ್ರೀ ಸಮಾನತೆಗೆ ನಾಂದಿ ಹಾಡಿದೆ. ಆದಿವಾಸಿಗಳ ಮೌಖಿಕ ಸಾಹಿತ್ಯ ಈಗಿನ ಸ್ತ್ರೀವಾದಿ ಚಿಂತನೆಗೆ ಹೊಸ ಆಯಾಮ ನೀಡುವ ಚೈತನ್ಯ ಶಕ್ತಿಹೊಂದಿದೆ.

ಶತಮಾನಗಳ ಕಾಲ ನಿರಂತರವಾಗಿ ತಮ್ಮ ಮೇಲೆ ಅವ್ಯಾಹತವಾಗಿ ನಡೆದ ದೌರ್ಜನ್ಯಗಳನ್ನು ಪ್ರತಿಭಟಿಸಲೂ ಅರಿಯದ ಹಾಗೂ ಅದು ತಮ್ಮ ಮೇಲಾಗುತ್ತಿರುವ ಶೋಷಣೆ ಎಂದೂ ಅರ್ಥ

ಮಾಡಿಕೊಳ್ಳದ ಮುಗ್ಧತೆ ಈ ಬುಡಕಟ್ಟುಗಳದ್ದು. ಈ ಶೋಷಣೆ ಸ್ಥಳೀಯ ಪಾಳೇಗಾರರಿಂದಾಗಿರಬಹುದು, ಭೂಮಾಲೀಕರಿಂದಾಗಿರಬಹುದು, ವಸಾಹತುಶಾಹಿಗಳಿಂದಾಗಿರಬಹುದು, ಆಧುನಿಕ ಕಾನೂನಿನ ರೂಪದಲ್ಲಾಗಿರಬಹುದು ಆದಿವಾಸಿಗಳ ಮೇಲಾದ ದೌರ್ಜನ್ಯಗಳಿಗೆ ಎಣೆಯಿಲ್ಲ. ಈ ಎಲ್ಲದ್ದರಿಂದಲೂ ಅನುಭವಿಸಿದ ಕಷ್ಟಗಳನ್ನು ಅತ್ಯಂತ ಸೂಕ್ಷ್ಮವಾಗಿ ತಮ್ಮ ಮೌಖಿಕ ಸಾಹಿತ್ಯದಲ್ಲಿ ಇವರು ಕಟ್ಟಿಕೊಟ್ಟಿದ್ದಾರೆ. ಕೆಲವೊಮ್ಮೆ ಈ ಸಾಮಾಜಿಕ ಆಗುಹೋಗುಗಳನ್ನು ನೋವಿನಿಂದ ಹೇಳಿಕೊಂಡರೆ, ಕೆಲವೊಮ್ಮೆ ತಮಾಷೆಯ ರೂಪದಲ್ಲಿ, ವಿಡಂಬನೆಯ ಮೂಲಕ ವ್ಯಕ್ತಪಡಿಸುತ್ತಾರೆ. ಕೊನೆಗೊಮ್ಮೆ ಇವೆಲ್ಲದರ ವಿಷವರ್ತುಲದಲ್ಲಿ ಸಿಲುಕಿ ಹೊರಬರಲಾರದೆ 'ಇದು ನಮ್ಮ ಹಣೆ ಬರಹ' ಎಂದುಕೊಂಡು ತಮ್ಮನ್ನು ತಾವೇ ಹಳಿದುಕೊಳ್ಳುತ್ತಾರೆ.

ಬುಡಕಟ್ಟುಗಳು ಎಂದೂ ನಾಳೆಗಾಗಿ ಕೂಡಿಟ್ಟವರಲ್ಲ. ನಾಳೆಗಳ ಜಂಜಾಟದಲ್ಲಿ ಇಂದಿನ ಬದುಕನ್ನು ಕಡೆಗಣಿಸಿದವರಲ್ಲ. ಸಾವಿರಾರು ವರ್ಷಗಳ ಕಾಲ ಕಾಡಿನಲ್ಲಿ ಪ್ರಾಣಿ, ಪಕ್ಷಿ, ಗಿಡಮರಗಳಲ್ಲಿ ತಾವೂ ಒಂದಾಗಿ ಬದುಕಿದವರು. ಈ ಎಲ್ಲ ಸಾವಿರಾರು ವರ್ಷಗಳ ಬದುಕಿನ ಪಯಣ ಇವರ ಮೌಖಿಕ ಸಾಹಿತ್ಯದಲ್ಲಿ ಕಾಲಕಾಲಕ್ಕೆ ದಾಖಲಾಗುತ್ತಾ ಬಂದಿದೆ. ಬುಡಕಟ್ಟುಗಳು ಕೃಷಿಕರಾಗಿದ್ದರು ಎಂಬುದಕ್ಕೆ ನಮಗೆ ಇವರ ಮೌಖಿಕ ಸಾಹಿತ್ಯವು ಆಧಾರವನ್ನು ಒದಗಿಸುತ್ತದೆ. ಉದಾಹರಣೆಗೆ ಸೋಲಿಗರ 'ರೊಟ್ಟಿ ಹಬ್ಬದ' ಆಚರಣೆಯಾಗಿರಬಹುದು, ಎರವರ ಓಲೆಪಾಟ್, ಜೇನುಕುರುಬರ ಜೇನುಹಾಡು, ಮೊದಲಾದವುಗಳಲ್ಲಿ ಇವರು ಹಿಂದೆ ಅಲೆಮಾರಿ ಬೇಸಾಯಗಾರರಾಗಿದ್ದರು ಎಂಬುದು ತಿಳಿದುಬರುತ್ತದೆ. ಮುಂದುವರಿದು ಬುಡಕಟ್ಟುಗಳ ಭೂಮಿ ವಿಸ್ತರಣೆಯ ಕುರಿತಾದ ಮಾಹಿತಿ ನಮಗೆ ಎರವರ 'ಓಲೆಪಾಟಿನಲ್ಲಿ' ದೊರೆಯುತ್ತದೆ. ಇಂದು ಕಾಡಿನಿಂದ ಹೊರಹಾಕಲ್ಪಟ್ಟ ಈ ಸಮುದಾಯಗಳಿಗೆ ಭೂಮಿಯನ್ನು ನೀಡಲು ಪ್ರಭುತ್ವ ಮತ್ತು ಅಧಿಕಾರಶಾಹಿಗಳು ನಾನಾ ರೀತಿಯಲ್ಲಿ ಅಡ್ಡಗಾಲನ್ನು ಹಾಕುತ್ತಿವೆ. 'ಆದಿವಾಸಿಗಳು ಕಾಡಿನಲ್ಲಿ ಗೆಡ್ಡೆ ಗೆಣಸು ತಿನ್ನುತ್ತಿದ್ದವರು, ಸಣ್ಣಪುಟ್ಟ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಬದುಕುತ್ತಿದ್ದವರು, ಇವರು ಕೃಷಿ ಮಾಡಿ ಬದುಕಲು ಅರಿಯದವರು, ಆದ್ದರಿಂದ ಅವರಿಗೆ ಭೂಮಿಯನ್ನು ಕೊಡುವುದು ವ್ಯರ್ಥವಾದ ಕೆಲಸ' ಎಂಬ ಭಾವನೆಯನ್ನು ಇವರು ಬಲವಾಗಿ ಪ್ರತಿಪಾದಿಸುತ್ತಾರೆ. ಬುಡಕಟ್ಟುಗಳು ನೂರಾರು ವರ್ಷಗಳಿಂದ ಜೀತಗಾರರಾಗಿದ್ದವರು, ಸ್ವತಂತ್ರವಾಗಿ ಬದುಕಲು ಅರ್ಹತೆಯಿಲ್ಲದವರು, ಭೂಮಿಯನ್ನು ಉತ್ತು ಬಿತ್ತು ಬೆಳೆಯುವುದಕ್ಕೆ ಅನರ್ಹರು ಎಂಬೆಲ್ಲ ಪೂರ್ವಗ್ರಹಗಳಿವೆ. ಆದರೆ ಈ ಪೂರ್ವಗ್ರಹಗಳಿಗೆ ಆದಿವಾಸಿಗಳ ಮೌಖಿಕ ಸಾಹಿತ್ಯ ಆಧಾರಗಳನ್ನು ಒದಗಿಸುತ್ತದೆ.

ಈ ಬುಡಕಟ್ಟುಗಳಲ್ಲಿ ಸುಪ್ತವಾಗಿದ್ದ ಪ್ರತಿರೋಧವನ್ನು ಇವರ ಮೌಖಿಕ ಸಾಹಿತ್ಯವು ದಾಖಲಿಸುತ್ತದೆ. ಭೂಮಿಯನ್ನು ಕಳೆದುಕೊಂಡ ಎರವರ ಪ್ರತಿರೋಧವನ್ನು 'ಕಾಲಚಾತ ಬಲಾಮಗನ'

ಪಾತ್ರದಲ್ಲೂ, ನಿರಂತರವಾಗಿ ಭೂಮಾಲೀಕರಿಂದಾದ ದೌರ್ಜನ್ಯಕ್ಕೆ ಪ್ರತಿರೋಧವಾಗಿ ದೇವರ ಹೆಸರಲ್ಲಿ ತಮ್ಮ ಮಾಲೀಕರನ್ನು ಮನಸೋ ಇಚ್ಛೆ ಬೈಯುವ ಮೂಲಕ ಸಂತೃಪಿ ಹೊಂದುವ 'ಬೇಡು ಹಬ್ಬದ' ಆಚರಣೆಯ ಹಿಂದೆ ಇರುವ ಇವರ ಮನಸ್ಥಿತಿಯನ್ನು ಈ ಪ್ರಬಂಧ ಬಿಚ್ಚಿಡಲು ಪ್ರಯತ್ನಿಸುತ್ತದೆ.

ಬುಡಕಟ್ಟು ಮೌಖಿಕ ಸಾಹಿತ್ಯ ಪ್ರಾಕೃತಿಕ ತತ್ವಶಾಸ್ತ್ರದ ಗುಣವನ್ನು ಹೊಂದಿದೆ. ಉದಾಹರಣೆಗೆ ಇವರ ಕುಲದ ಹೆಸರುಗಳನ್ನು ನಾವು ಗಮನಿಸಬಹುದು. ಇವರ ಒಂದೊಂದು ಕುಲವು ಒಂದೊಂದು ಮರದ ಹೆಸರುಗಳನ್ನು ಹೊಂದಿದೆ. ಆ ನಿರ್ದಿಷ್ಟ ಮರದ ಹೆಸರನ್ನು ಹೊಂದಿರುವ ಕುಲದವರು ನಿರ್ದಿಷ್ಟ ಮರವನ್ನು ಕಡಿಯುವಂತಿಲ್ಲ ಮತ್ತು ಅದರ ಸೌದೆಯನ್ನು ಉರುವಲಾಗಿ ಬಳಸುವಂತಿಲ್ಲ. ಇವರು ಗರ್ಭಿಣಿಯಾದ ಪ್ರಾಣಿಗಳನ್ನು, ಮರಿಗಳಿರುವ ಪ್ರಾಣಿಗಳನ್ನು ಯಾವುದೇ ಕಾರಣಕ್ಕೂ ಬೇಟೆಯಾಡುವಂತಿಲ್ಲ. ಇದು ಕಾಡು ಮತ್ತು ಮನುಷ್ಯನಿಗಿರಬೇಕಾದ ಅನ್ಯೋನ್ಯ ಸಂಬಂಧವನ್ನು ಕುರಿತ ತತ್ವದರ್ಶನ. ಈ ಮುಂತಾದ ಅಂಶಗಳನ್ನು ಅಧ್ಯಯನ ಮಾಡುವ ಉದ್ದೇಶ ಈ ಮಹಾಪ್ರಬಂಧಕ್ಕಿದೆ.

ಅಪಾರವಾದ ಮೌಖಿಕ ಸಾಹಿತ್ಯವನ್ನು ಹೊಂದಿರುವ ಈ ಬುಡಕಟ್ಟುಗಳು ತಮ್ಮ ಮೌಖಿಕ ಸಾಹಿತ್ಯದ ಮೂಲಕ ನಿಸರ್ಗದ ರಹಸ್ಯವನ್ನು ಬಿಚ್ಚಿಡಬಲ್ಲರು. ಜೊತೆಗೆ ತಮ್ಮ ಅಸ್ಮಿತೆಯ ಹುಡುಕಾಟದಲ್ಲಿ ನಿರಾಶರಾಗಿರುವ ಈ ಸಮುದಾಯಗಳಿಗೆ ಅವರ ಮೌಖಿಕ ಸಾಹಿತ್ಯವು ಹೊಸ ಬದುಕನ್ನು ಹಳೆಯ ತಂತಿಯೊಂದಿಗೆ ಬೆಸೆದುಕೊಡಬಲ್ಲದು. 'ಕಲೇವಾಲ ಕಾವ್ಯ' ಫಿನ್‌ಲ್ಯಾಂಡಿನ ಜನಜೀವನಕ್ಕೆ ಆಶಾಕಿರಣ ಮೂಡಿಸಿದಂತೆ ಈ ಬುಡಕಟ್ಟುಗಳ ಮೌಖಿಕ ಸಾಹಿತ್ಯವು ಅವರ ಬದುಕನ್ನು ಹೊಸ ರೀತಿಯಲ್ಲಿ ಕಟ್ಟಿಕೊಡಬಲ್ಲದು. ಪ್ರತಿಯೊಂದಕ್ಕೂ ದಾಖಲೆ ಪುರಾವೆಗಳನ್ನು ಮಾನದಂಡವನ್ನಾಗಿಸಿ ಕೊಂಡಿರುವ ಸರಕಾರದ ಕುರುಡುನೀತಿಗೆ ತಲತಲಾಂತರಗಳಿಂದ ಸ್ಮೃತಿಪಟಲದಲ್ಲಿ ಉಳಿದು ಬಂದಿರುವ ಇವರ ಮೌಖಿಕ ಸಾಹಿತ್ಯವೇ ಉತ್ತರ ನೀಡಬಲ್ಲದು.

ಆದಿವಾಸಿಗಳ ಪ್ರತಿ ಕಾವ್ಯ, ಹಾಡು ಅಥವಾ ಮೌಖಿಕ ಪಠ್ಯಗಳು ಕಾಡಿನೊಂದಿಗೆ ಅವರಿಗಿದ್ದ ಅನ್ಯೋನ್ಯ ಸಂಬಂಧವನ್ನು ಹೇಳುತ್ತವೆ. ಇವು ಮನರಂಜನೆಯೊಂದಿಗೆ ಬದುಕಿನ ದುಃಖ ದುಮ್ಮಾನಗಳನ್ನು, ವರ್ತಮಾನದ ಸಾರ್ಥಕತೆಯನ್ನು ವ್ಯಕ್ತಪಡಿಸುತ್ತವೆ. ಅನಾದಿ ಕಾಲದಿಂದ ಸಾಗಿ ಬಂದ ಅವರ ಬದುಕಿನ ಪ್ರತಿ ಮಜಲನ್ನು ಒಳಗೊಳ್ಳುತ್ತಾ ಸಾಗುವ ಅವರ ಮೌಖಿಕ ಸಾಹಿತ್ಯದಲ್ಲಿ ಅಪಾರ ಮಾನವೀಯ ಕಾಳಜಿಗಳೂ ಇವೆ.

## 1.6. ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಕರ್ನಾಟಕ ಸಾಹಿತ್ಯ ಅಕಾಡೆಮಿಯ ಉಪಸಂಸ್ಕೃತಿ ಅಧ್ಯಯನ ಮಾಲೆಯಲ್ಲಿ ಪ್ರಕಟವಾದ

ಡಾ. ಚಂದ್ರು ಕಾಳೇನಹಳ್ಳಿ ಅವರ "ಸೋಲಿಗರ ಸಂಸ್ಕೃತಿ" ಕೃತಿಯು ಕರ್ನಾಟಕದ ಒಂದು ವಿಶಿಷ್ಟವಾದ ಸಾಂಸ್ಕೃತಿಕ ಬದುಕನ್ನು ಇನ್ನೂ ಕೂಡ ಜೀವಂತವಾಗಿರಿಸಿಕೊಂಡು, ಪಾಲಿಸಿಕೊಂಡು ಬರುತ್ತಿರುವ ಸೋಲಿಗ ಬುಡಕಟ್ಟಿನ ಬಗೆಗಿನ ಅತ್ಯಮೂಲ್ಯವಾದ ಮಾಹಿತಿಯನ್ನು ನಮಗೆ ಒದಗಿಸುತ್ತದೆ.

ಸೋಲಿಗ ಸಮುದಾಯದ ಕುರಿತು ಈಗಾಗಲೇ ಪ್ರಸ್ತಾಪಿಸಿರುವ ಹಲವು ವಿದೇಶಿ ಹಾಗೂ ದೇಶಿ ವಿದ್ವಾಂಸರ ಅಭಿಪ್ರಾಯಗಳನ್ನು ಸಂಶೋಧಕರು ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಸೋಲಿಗರ ಕುಲಗಳು, ಸಮುದಾಯದ ನಂಬಿಕೆಗಳು, ಪ್ರಕೃತಿಯ ಕುರಿತು ಇರುವ ಅಗಾಧವಾದ ಜ್ಞಾನ, ತಿಳುವಳಿಕೆ, ಪ್ರಕೃತಿ ಮತ್ತು ಸೋಲಿಗರ ನಡುವಿನ ಬಾಂಧವ್ಯವನ್ನು ಈ ಕೃತಿಯು ನಮಗೆ ಪರಿಚಯಿಸುತ್ತದೆ. ಸೋಲಿಗರ ವಿವಿಧ ಗುಂಪುಗಳು ಹಾಗೂ ಅವರ ವಾಸಸ್ಥಳದ(ಹಾಡಿಯ) ಪರಿಚಯ, ಗಡಿಗಳ ವಿಂಗಡನೆಯನ್ನು ಕುರಿತ ಮಾಹಿತಿಯನ್ನು ನಮಗೆ ಪರಿಚಯ ಮಾಡಿಸುತ್ತದೆ. ಸೋಲಿಗ ಸಮುದಾಯದ ಕುರಿತ ಪೌರಾಣಿಕ ಮತ್ತು ಐತಿಹಾಸಿಕ ದಾಖಲೆಗಳು, ಸಂಪ್ರದಾಯಗಳು, ವಿಶಿಷ್ಟ ಆಚರಣೆಗಳನ್ನು ಕುರಿತು ವಿವರಣೆಯನ್ನು ಒದಗಿಸುತ್ತದೆ. ಉದಾಹರಣೆಗೆ ಸೋಲಿಗರ ಹೆಣ್ಣುಮಕ್ಕಳು ಮೈನೆರೆಯುವ ಸಮಯದಲ್ಲಿ, ಮದುವೆ ಸಂದರ್ಭದಲ್ಲಿ ಆಚರಿಸಲ್ಪಡುವ ಆಚರಣೆಗಳು, ಬಾಣಂತಿಯ ಆರೈಕೆ, ಸಾವಿನ ವಿಧಿವಿಧಾನಗಳು ಇದೇ ಮೊದಲಾದ ಜೀವನಾವರ್ತದ ಆಚರಣೆಗಳ ಬಗ್ಗೆ ವಿಸ್ತೃತವಾದ ವರದಿಯು ಈ ಪುಸ್ತಕದಿಂದ ನಮಗೆ ದೊರೆಯುತ್ತದೆ. ವಿವಿಧ ರೀತಿಯ ವಿವಾಹಪದ್ಧತಿಗಳಾದ ವಿಚ್ಛೇದನ, ವಿಧವಾ ಅಥವಾ ವಿಧುರ ವಿವಾಹ, ಅತಿಮಾನುಷ ನಂಬಿಕೆಗಳು ಈ ಎಲ್ಲ ಸಾಂಸ್ಕೃತಿಕ ಮತ್ತು ಧಾರ್ಮಿಕ ಆಚರಣೆಗಳ ಕುರಿತ ಮಾಹಿತಿಯನ್ನು ನಮಗೆ ಒದಗಿಸಿಕೊಡುತ್ತದೆ.

ಹಾಗೆಯೇ ಅವರ ಕುಲಕಸುಬು, ಕೃಷಿ, ಬೇಟೆ, ಆಹಾರ ಸಂಗ್ರಹಣೆ, ಜೀತ ಅಲ್ಲದೆ, ಶಕುನಗಳು, ನಂಬಿಕೆಗಳು, ಮಂತ್ರ ತಂತ್ರ, ಮಾಟದ ಉಲ್ಲೇಖವಿದೆ. ಇವೆಲ್ಲದರ ಸಂಕ್ಷಿಪ್ತ ಮಾಹಿತಿಯನ್ನು ತಮ್ಮ ಪುಸ್ತಕದಲ್ಲಿ ನೀಡಿದ್ದಾರೆ. ಧಾರ್ಮಿಕ ಆಚರಣೆಗಳು, ಹಬ್ಬಗಳು, ವೈದ್ಯಪದ್ಧತಿ, ಪ್ರಾಕೃತಿಕ ವೈದ್ಯಪದ್ಧತಿ, ಮಾಂತ್ರಿಕ ವೈದ್ಯಪದ್ಧತಿ ಶಾಸ್ತ್ರಗಳನ್ನು ಪರಿಚಯಿಸುತ್ತದೆ.

ಮೌಖಿಕ ಸಾಹಿತ್ಯದ ವಿವಿಧ ಪ್ರಕಾರಗಳಾದ ಕತೆಗಳು, ಅದರಲ್ಲೂ ಮುಖ್ಯವಾಗಿ ಅವರ ಸೃಷ್ಟಿ ಪುರಾಣ, ಗಾದೆ, ಒಗಟು, ಹಾಡುಗಳು, ಐತಿಹ್ಯಗಳು ಪ್ರಸಿದ್ಧ ಗೋರುಖಾನ ನೃತ್ಯ, ರಂಗ ಭೂಮಿ ಕಲಾವಿದರಾಗಿ ಇವರ ಪಾತ್ರ, ಪ್ರಸ್ತುತ ಅವರ ಸ್ಥಿತಿಗತಿಗಳು, ಅವರ ಅಭಿವೃದ್ಧಿಗೆ ಸರಕಾರದ ಯೋಜನೆಗಳು, ಸರಕಾರದ ಪಾತ್ರ, ಒಟ್ಟಾರೆಯಾಗಿ ಸೋಲಿಗ ಸಮುದಾಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಒಳಗೊಂಡ ಅತ್ಯುತ್ತಮ ಕೃತಿಯಾಗಿದ್ದು ಸಂಶೋಧಕರಿಗೆ ನೆರವಾಗುತ್ತದೆ.

ಎನ್.ಪಿ.ಶಂಕರನಾರಾಯಣರಾವ್ ಅವರ 'ಪಂಜರಿಯರವರ ಸಮಾಜ ಮತ್ತು ಜಾನಪದ

ಇತಿಹಾಸ' ಕೃತಿಯು ಪಂಜರಿಯರವ ಸಮುದಾಯದ ಕುರಿತು ಅತ್ಯಂತ ಆಪ್ತತೆಯಿಂದ ಬರೆದ ಕೃತಿಯಾಗಿದೆ. ಎರವರಲ್ಲಿ ಹಲವು ಪಂಗಡಗಳಿವೆ. ಅವುಗಳೆಂದರೆ ಪಂಜರಿ, ಪಣಿಯ, ಕಾಕೆ, ಬಡಗ ಈ ರೀತಿಯ ವಿವಿಧ ಪಂಗಡಗಳನ್ನು ಒಟ್ಟಾರೆಯಾಗಿ ಎರವರು ಎಂದು ಕರೆಯುತ್ತಾರೆ. ಇದರಿಂದಾಗಿ ಆ ವಿವಿಧ ಪಂಗಡಗಳ ಪ್ರತ್ಯೇಕ ಅಸ್ಮಿತೆಯೇ ಮಸುಕಾಗಿ ಅವೆಲ್ಲವನ್ನೂ ಸಾಮಾನ್ಯೀಕರಿಸು ವಂತಹ ಸಂದರ್ಭದಲ್ಲಿ ಇವೆಲ್ಲವೂ ಒಂದೇ ಅಲ್ಲ ಮತ್ತು ಇವು ತಮ್ಮ ವಿಶಿಷ್ಟವಾದ ಪ್ರತ್ಯೇಕತೆಯನ್ನು ಹೊಂದಿವೆ ಎಂಬುದನ್ನು ತಮ್ಮ ಸಂಶೋಧನಾ ಬರಹದ ಮೂಲಕ ಹೊರ ಜಗತ್ತಿಗೆ ತೆರೆದಿಟ್ಟಿದ್ದಾರೆ. ಈ ಕೃತಿಯು ಪಂಜರಿಯರವರಲ್ಲಿನ ಮುಖ್ಯವಾದ ಮೂರು ಮಂಜುಗಳು (ಕುಲ) ಮತ್ತು ಆ ಮೂರು ಮಂಜುಗಳಲ್ಲಿನ ವಿವಿಧ ಉಪಪಂಗಡಗಳ ಮಾಹಿತಿಗಳನ್ನು ನೀಡಿದ್ದಾರೆ. ಕಾಡು ಹಾಗೂ ಈ ಸಮುದಾಯಕ್ಕಿರುವ ಅನ್ಯೋನ್ಯ ನಂಟು, ಈ ಸಮುದಾಯಗಳ ಕುರಿತ ವಿದೇಶಿ ಬರಹಗಾರರ ಅಭಿಪ್ರಾಯಗಳು, ಉಲ್ಲೇಖಗಳು ಅವರ ಭೌಗೋಳಿಕ ಪರಿಸರದ ಮಾಹಿತಿಯನ್ನು ನಮಗೆ ಒದಗಿಸುತ್ತದೆ. ಎರವರ ಆಚರಣೆಗಳಲ್ಲಿ ಮುಖ್ಯವಾಗಿ ಜನನದಿಂದ ಮರಣದ ನಂತರದವರೆಗಿನ ಆಚರಣೆಗಳ ಕುರಿತ ವಿಸ್ತೃತವಾದ ಮಾಹಿತಿ ನಮಗೆ ಒದಗಿಸುತ್ತದೆ. ಹುಟ್ಟು, ಮೈನೆರೆಯುವುದು, ನಿಶ್ಚಿತಾರ್ಥ, ಮದುವೆಯ ಆಚರಣೆ ಶಾಸ್ತ್ರ, ನಿಯಮಗಳು, ಸಾವು, ಶವಸಂಸ್ಕಾರ, ಪದಿಮೂಂಜು(ತಿಥಿ) ಆಚರಣೆ ಈ ಎಲ್ಲ ಮಾಹಿತಿಗಳೊಂದಿಗೆ ಅವರ ಮೌಖಿಕ ಸಾಹಿತ್ಯದ ಪರಿಚಯವನ್ನು ನೀಡುತ್ತದೆ. ಪಂಜರಿಯರವರ ಮಹಾಕಾವ್ಯ ಎಂದು ಕರೆಯಬಹುದಾದ 'ಆರ್ಯೆ-ಬಾಣ್ಯೆ'ಯರ ಕಥೆಯನ್ನು ಸವಿವರವಾಗಿ ವಿವರಿಸುತ್ತಾರೆ. ಇದನ್ನು 'ಓಲೆಪಾಟ್' ಎಂದೂ ಕೂಡ ಕರೆಯುತ್ತಾರೆ. ಇದು ಅತ್ಯಂತ ದೀರ್ಘವಾದ ಕಾವ್ಯವಾಗಿದೆ. ನಾವು ಮಹಾಕಾವ್ಯ ಅಥವಾ ಸೃಷ್ಟಿ ಪುರಾಣ ಎಂದು ಕರೆಯುವ ಈ ಹಾಡು ಅಥವಾ ಕತೆಯನ್ನು ಪಂಜರಿ ಎರವರ ಅಸ್ಮಿತೆ ಮತ್ತು ಅಸ್ತಿತ್ವವನ್ನು ಬಹಳ ಸಮಗ್ರವಾಗಿ ನಮಗೆ ಕಟ್ಟಿಕೊಡುತ್ತದೆ. ಈ ಸಾಹಿತ್ಯವನ್ನು ಪಂಜರಿ ಎರವರ ಭಾಷೆಯಲ್ಲಿಯೇ ಸಂಗ್ರಹಿಸಿ ಕನ್ನಡದಲ್ಲಿ ವಿವರಣೆಯನ್ನು ಒದಗಿಸಿದ್ದಾರೆ. ಇದು ಅತ್ಯಂತ ಶ್ಲಾಘನೀಯ ಹಾಗೂ ಮಹತ್ವದ ಕೆಲಸವಾಗಿದೆ. ಹಲವು ವರದಿಗಳನ್ನು ಗೆಜೆಟಿಯರ್‌ಗಳನ್ನು ಉಲ್ಲೇಖಿಸಿ ಓದುಗರಿಗೆ, ಸಂಶೋಧಕರಿಗೆ ಮಾರ್ಗದರ್ಶನವನ್ನು ನೀಡುತ್ತದೆ.

ಉಪಸಂಸ್ಕೃತಿ ಅಧ್ಯಯನ ಮಾಲೆಯ 'ಎರವರ ಸಂಸ್ಕೃತಿ' ಎಂಬ ಕೃತಿಯನ್ನು ಡಾ. ಪಿ.ಎನ್. ಹರೀಶ್ ಅವರು ಬರೆದಿದ್ದಾರೆ. ಕೊಡಗಿನ ಭೌಗೋಳಿಕ ಸ್ವರೂಪದ ಪರಿಚಯದೊಂದಿಗೆ ಎರವರ ಬದುಕಿನ ಸ್ಥೂಲ ಪರಿಚಯವನ್ನು ಮಾಡಿದ್ದಾರೆ. ಭಾರತದಲ್ಲಿ ಬುಡಕಟ್ಟು ಅಧ್ಯಯನ ನಡೆದು ಬಂದ ಬಗ್ಗೆ ವಿದೇಶಿ ಮತ್ತು ಭಾರತೀಯ ವಿದ್ವಾಂಸರು ಭಾರತದ ಬುಡಕಟ್ಟುಗಳ ಬಗ್ಗೆ ಕೈಗೊಂಡ ಕಾರ್ಯಗಳನ್ನು ಸಂಕ್ಷಿಪ್ತವಾಗಿ ಈ ಕೃತಿಯು ನಮಗೆ ಪರಿಚಯಿಸುತ್ತದೆ. ಕ್ಷೇತ್ರಾನುಭವದ

ಮೂಲಕ ತಮ್ಮ ಅನುಭವಗಳನ್ನು ದಾಖಲಿಸಿದ್ದಾರೆ. ಎರವ ಪದದ ನಿಷ್ಪತ್ತಿ ಎರವರ ವಿವಿಧ ಪಂಗಡಗಳು, ಅವರ ಆಚಾರ, ವಿಚಾರ, ಸಂಸ್ಕೃತಿ, ನಂಬಿಕೆ, ವಿಧಿ ನಿಷೇಧಗಳು ಮೊದಲಾದವು ಗಳೊಂದಿಗೆ ಅತ್ಯಂತ ಕುತೂಹಲಕರವಾದ ಅಧ್ಯಯನಯೋಗ್ಯವಾದ ಹಲವು ವಿಚಾರಗಳನ್ನು ಓದುಗರಿಗೆ ತೆರೆದಿಡುತ್ತಾರೆ. ಅವರ ಜೀವನವಿಧಾನ ಸಾಮಾಜಿಕ ವ್ಯವಸ್ಥೆಗಳ ಬಗ್ಗೆ ಪ್ರಸ್ತಾಪಿಸುತ್ತಾ ಎರವರ ಕುಟುಂಬ ಒಳಾಡಳಿತ ವ್ಯವಸ್ಥೆ, ಉತ್ತರಾಧಿಕಾರ, ವಿವಾಹ, ಕುಲ–ಕುಲದೇವರುಗಳು, ಕುಲದೇವತೆಗಳು, ಕುಲದೇವತಾ ಕುರುಹುಗಳು, ಕುಲದೈವಗಳಿಗೆ ಸಂಬಂಧಿಸಿದ ಆಚರಣೆಗಳು, ದೇವರು–ದೆವ್ವ, ಮಾಟ ಮಂತ್ರದ ಕುರಿತಂತೆ ಸಮುದಾಯಗಳ ನಂಬಿಕೆಯನ್ನು ಪರಿಚಯ ಮಾಡಿಕೊಡುತ್ತದೆ.

ಎರವರ ಆಚರಣೆಗಳಾದ ಮದುವೆ, ತಿಥಿ, ಮೈನೆರೆಯುವುದು, ಹುಟ್ಟು, ನಾಮಕರಣ, ಋತುಮತಿಶಾಸ್ತ್ರ, ಸಾವು, ಸೂತಕ ತಿಥಿಯ ಕುರಿತ ನಂಬಿಕೆಗಳು ಹಾಗೆಯೇ ವಿಧಿವಿಧಾನಗಳ ಕುರಿತು ಸಂಕ್ಷಿಪ್ತವಾಗಿ ವಿವರಣೆಯನ್ನು ಈ ಕೃತಿಯು ನೀಡುತ್ತದೆ. ಎರವರ ಭಾಷೆ, ಬಂಧುತ್ವ ಸಂಬೋಧನಾ ಪದಗಳನ್ನು, ಜೊತೆಗೆ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಪರಿಚಯಿಸಿದ್ದಾರೆ. ಎರವರ ಮೂಲಪುರುಷರಾದ ಆರ್ಯ–ಬಾಣ್ಯೆಯರ ಕುರಿತಾದ ಓಲೆಪಾಟ್ ಅನ್ನು ಎರವರ ಭಾಷೆಯಲ್ಲಿಯೇ ಸಂಗ್ರಹಿಸಿದ್ದಾರೆ. ಅದಕ್ಕೆ ಅಲ್ಲಲ್ಲಿ ಕನ್ನಡದಲ್ಲಿ ಸಂಕ್ಷಿಪ್ತ ವಿವರಣೆಯನ್ನು ನೀಡುತ್ತಾರೆ. ಅದರಲ್ಲಿ ಎರವರ ಭೂಮಿ ಹೋರಾಟಕ್ಕೆ ಸಂಬಂಧಿಸಿದ 'ಕಾಲಚಾತ ಬಲಾಮಗ'ನ ಕತೆಯನ್ನು, ಸೋಬಾನೆ ಪಾಟ್‌ನಲ್ಲಿ ಅವರ ಸಾಮಾಜಿಕ ಬದುಕಿನ ಕಟ್ಟುಪಾಡಿನ ಕುರಿತ ಮಾಹಿತಿಯಿದೆ.

ಪ್ರಸ್ತುತ ಕಾಲಘಟ್ಟಗಳಲ್ಲಿ ಅವರ ಜೀವನದಲ್ಲಾದ ಸಾಮಾಜಿಕ ಪರಿವರ್ತನೆಗಳು, ಸಾಹಿತ್ಯದ ವಿವಿಧ ಪ್ರಕಾರಗಳಾದ ಕಥೆಗಳು, ಒಗಟುಗಳು, ಗಾದೆಗಳು ಎರವ ಭಾಷೆಯ ಪಾರಿಭಾಷಿಕ ಪದಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಒದಗಿಸುವ ಅತ್ಯುತ್ತಮ ಕೃತಿಯಾಗಿದೆ.

ಎ.ಸಿ.ಲಲಿತ ಅವರು ಬರೆದಿರುವ ಉಪಸಂಸ್ಕೃತಿ ಅಧ್ಯಯನ ಮಾಲೆಯ 'ಕಾಡುಕುರುಬ ಮತ್ತು ಜೇನುಕುರುಬರ ಸಂಸ್ಕೃತಿ' ಪುಸ್ತಕವು ಕರ್ನಾಟಕದ ಅದಿಮ ಬುಡಕಟ್ಟುಗಳಲ್ಲಿ ಒಂದಾದ ಜೇನುಕುರುಬರ ಬಗೆಗಿನ ಮಾಹಿತಿಯನ್ನು ಒಳಗೊಂಡಿದೆ. ಅಲ್ಲದೆ ಒಟ್ಟಾರೆಯಾಗಿ 'ಕುರುಬ' ಪದದ ನಿಷ್ಪತ್ತಿಯನ್ನು ಕುರಿತು ಹಲವು ರೀತಿಯ ಸಾಧ್ಯತೆಯನ್ನು ಕುರಿತು ಪ್ರಸ್ತಾಪಿಸುತ್ತಾರೆ. ಈ ಸಮುದಾಯದ ಸಂಸ್ಕೃತಿ, ಸಾಮಾಜಿಕ ಜೀವನ, ಆಚರಣೆಗಳ ಬಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ಕೃತಿ ಒದಗಿಸುತ್ತದೆ. ಜೇನುಕುರುಬ ಮತ್ತು ಕಾಡುಕುರುಬರಲ್ಲಿನ ಒಳಾಡಳಿತ ವ್ಯವಸ್ಥೆ, ಹಾಡಿಯ ವಿನ್ಯಾಸ, ವಿಶಿಷ್ಟವಾದ ಪ್ರಾಕೃತಿಕ ಜ್ಞಾನ ಪರಂಪರೆ, ಬೇಟೆ, ದೇವತಾರಾಧನೆಗಳು ಈ ಹಲವಾರು ವಿಷಯಗಳ ಬಗ್ಗೆ ನಮ್ಮ ಕಣ್ಣೋಟ ಹರಿಸುವಂತೆ ಮಾಡುತ್ತದೆ. ಜೇನುಕುರುಬರ ವಿಶಿಷ್ಟ ಅಲೌಕಿಕ ಪ್ರಪಂಚದ ಸಂಬಂಧವನ್ನು ಕಟ್ಟಿಕೊಡುವ ಬುಂಡೆ ಕರೆಯುವ ಆಚರಣೆಯ ಬಗ್ಗೆ ಮಾಹಿತಿ ನೀಡುವುದರೊಂದಿಗೆ,

ಜೀವನಾವರ್ತನ ಆಚರಣೆಗಳಾದ ಹುಟ್ಟು, ಮೈನೆರೆಯುವುದು, ಮದುವೆ ಸಾವು ತಿಥಿಯ ಆಚರಣೆಗಳ ಮಾಹಿತಿ ನೀಡುತ್ತದೆ. ಹಾಗೆಯೇ ಕಾಡುಕುರುಬರಲ್ಲಿ ಕುಲಗಳು, ಸಂಸ್ಕಾರಪದ್ಧತಿ ಇತ್ಯಾದಿ ವಿಷಯಗಳ ಪ್ರಾಥಮಿಕ ಮಾಹಿತಿಗಳನ್ನು ನೀಡುತ್ತವೆ. ಸಾಹಿತ್ಯದ ಪ್ರಕಾರಗಳಾದ ಒಗಟುಗಳನ್ನು ಜೇನುಕುರುಬರ ಹಾಗೂ ಕಾಡುಕುರುಬರ ಭಾಷೆಯಲ್ಲಿಯೂ ಸಂಗ್ರಹಿಸಿದ್ದಾರೆ. ಮೌಖಿಕ ಸಾಹಿತ್ಯದ ಪ್ರಕಾರಗಳಾದ ಕತೆಗಳು, ಹಾಡುಗಳ ಸಂಗ್ರಹವು ಉತ್ತಮವಾದ ಮಾಹಿತಿಯನ್ನು ನೀಡುವಂತಿದೆ. ಸೋಬಾನೆ ಪದಗಳು, ಅತ್ತೆ ಸೊಸೆ ಪದಗಳು, ಹೊಸಗೆ ಪದ,  ರಾಗಿ ಕಲ್ಲು ಪದ, ರಂಗೋಲಿ ಪದ, ದೇವರ ಪದ, ಜೇನು ಪದ, ಮೊದಲಾದವುಗಳ ಸಂಗ್ರಹವು ಸಾಹಿತ್ಯದ ಸಂಶೋಧಕರಿಗೆ ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತವೆ.

ಡಾ. ಹಿ.ಚಿ.ಬೋರಲಿಂಗಯ್ಯ ಅವರ 'ಬುಡಕಟ್ಟು ದೈವಾರಾಧನೆ' ಕೃತಿಯು ಬುಡಕಟ್ಟು ದೈವಗಳ ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳಲು ಸಹಕಾರಿಯಾಗಿದೆ. ಬುಡಕಟ್ಟುಗಳಲ್ಲಿ ಆತ್ಮಗಳನ್ನು ದೇವರಾಗಿ ಕಾಣುವ, ನಿಸರ್ಗವನ್ನು ಪೂಜಿಸುವ, ದೇವರನ್ನು ತಾವು ಆವಾಹಿಸಿಕೊಳ್ಳುವ ವಿವಿಧ ಆಚರಣೆಗಳು ಮತ್ತು ಅವುಗಳ ನಂಬಿಕೆಗಳ ಹಿಂದಿರುವ ಸಮುದಾಯದ ಆದಿಮ ಲಕ್ಷಣಗಳನ್ನು ಕುರಿತು ವಿವರವಾದ ಮಾಹಿತಿಯನ್ನು ನೀಡುತ್ತಾರೆ. ಬುಡಕಟ್ಟು ದೇವರುಗಳು ಶಿಷ್ಟ ದೈವಗಳಿಗಿಂತ ಹೇಗೆ ಭಿನ್ನ ಮತ್ತು ಆಪ್ತ ಎಂಬುದರ ಕುರಿತ ಮಾಹಿತಿಯನ್ನು ನೀಡುತ್ತದೆ. ಫಣಿ ಎರವರ ದೈವಗಳ ಪರಿಚಯವನ್ನು ಮಾಡುವುದರೊಂದಿಗೆ ಅದರ ಆಚರಣೆಯ ವಿಧಿವಿಧಾನಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸುತ್ತದೆ. ಹಾಗೆಯೇ ಸೋಲಿಗರ ಸಂಕಮ್ಮನ ಕಥೆಯಲ್ಲಿ ಸ್ತ್ರೀ ಸ್ವಾಭಿಮಾನದ ಸಂಕೇತವಾಗಿ ಸಂಕಮ್ಮ ಕಂಡುಬರುತ್ತಾಳೆ. ವೈವಾಹಿಕ ಸಂಬಂಧದ ಬಂಧನವನ್ನು ಧಿಕ್ಕರಿಸುವುದರೊಂದಿಗೆ ಮಾದೇಶ್ವರನಿಂದ ಕಾರಯ್ಯ ಮತ್ತು ಬಿಲ್ಲಯ್ಯರೆಂಬ ಸೋಲಿಗ ಮೂಲಪುರುಷರಿಗೆ ಜನ್ಮ ನೀಡುತ್ತಾಳೆ. ಆದ್ದರಿಂದ ಸೋಲಿಗರ ಮಾತೃದೇವತೆಯಾಗಿ ಪೂಜೆಗೊಳಪಡುತ್ತಾಳೆ. ಶಿಷ್ಟ ದೈವಕ್ಕೆ ಪ್ರತಿರೋಧವಾಗಿ ಪಾತಿವ್ರತ್ಯ ಶೀಲದ ಕಲ್ಪನೆಯ ಹೊರತಾಗಿ ಪುರುಷಾಧಿಕಾರವನ್ನು ಧಿಕ್ಕರಿಸಿ ದೈವತ್ವಕ್ಕೇರುವ ಸಂಕಮ್ಮನ ಕಥೆಯನ್ನು ಈ ಕೃತಿಯು ವಿಭಿನ್ನವಾಗಿ ಪರಿಚಯಿಸುತ್ತದೆ.  ಮಲೆಮಾದೇಶ್ವರ ಕಾವ್ಯದ ಸೋಲಿಗರ ಸಂಕಮ್ಮನ ಸಾಲು ಮಾತೃದೇವಾತಾರಾಧನೆಯ ಆಚರಣೆಯ ಹಿಂದೆ ಬುಡಕಟ್ಟು ಮಹಿಳೆಗಿರುವ ಬದುಕಿನ ಸ್ವಾತಂತ್ರ್ಯದ ಬಗೆಗೆ ಹೆಚ್ಚಿನ ಬೆಳಕು ಚೆಲ್ಲುತ್ತದೆ. ಹಾಗೆಯೇ ಬಿಳಿಗಿರಿರಂಗ ಕುಸುಮಾಲೆಯ ಪ್ರಣಯ ಪ್ರಸಂಗವನ್ನು ವಿವರಿಸುತ್ತಾರೆ.

ಜನಪದ ದೈವಗಳು ಮತ್ತು ಅವುಗಳ ಆಚರಣಾ ವಿಧಾನಗಳ ಹಿಂದಿನ ನಂಬಿಕೆಗಳು ಸಂಶೋಧಕರಿಗೆ ಅತ್ಯಮೂಲ್ಯ ಮಾಹಿತಿಯನ್ನು ಒದಗಿಸುತ್ತವೆ. ಬುಡಕಟ್ಟುಗಳು ಮುಖ್ಯವಾಗಿ ಮಾತೃ ದೇವತಾರಾಧಕರು. ಆದಿಮ ಚಹರೆಯ ಈ ನಂಬಿಕೆಗಳು, ಆಚರಣೆಗಳು ಪ್ರತಿಯೊಂದು ಜಾತಿ,

ಸಮುದಾಯದಲ್ಲಿ ವಿಭಿನ್ನ ಹಾಗೂ ವಿಶಿಷ್ಟವಾಗಿದ್ದು ಇಲ್ಲಿ ಹೆಣ್ಣು ವಿಶೇಷ ಸ್ಥಾನಮಾನವನ್ನು ಹೊಂದಿದ್ದಾಳೆ. ಈ ಎಲ್ಲ ವಿಚಾರಗಳು ಬುಡಕಟ್ಟು ದೈವಗಳನ್ನು ಅರ್ಥ ಮಾಡಿಕೊಳ್ಳಲು ಬೇಕಾದ ಅತ್ಯಮೂಲ್ಯವಾದ ಪ್ರಾಥಮಿಕ ಮಾಹಿತಿಯನ್ನು ಒದಗಿಸುತ್ತವೆ.

ಉಪಸಂಸ್ಕೃತಿ ಅಧ್ಯಯನ ಮಾಲೆಯ ಅಡಿಯಲ್ಲಿ ಪ್ರಕಟವಾದ 'ಕುಡಿಯರ ಸಂಸ್ಕೃತಿ' ಕೃತಿಯನ್ನು ಡಾ. ಡಿ.ಬಿ.ರಾಮಚಂದ್ರಾಚಾರ್ ಅವರು ರಚಿಸಿದ್ದಾರೆ. ಕುಡಿಯರು ದಕ್ಷಿಣ ಕನ್ನಡ ಮತ್ತು ಕೊಡಗಿನ ಮಲೆವಾಸಿಗಳು. ಈ ಸಮುದಾಯಗಳು ವಿಶಿಷ್ಟವಾದ ಸಂಪ್ರದಾಯ, ಆಚರಣೆ, ನಂಬಿಕೆಗಳನ್ನು ಹೊಂದಿವೆ. ಅನಂತರದಲ್ಲಿ ತಾವು ವಾಸಿಸುತ್ತಿರುವ ಭೌಗೋಳಿಕ ಪ್ರದೇಶದ ಪ್ರಬಲ ಸಮುದಾಯದೊಂದಿಗೆ ಬೆರೆತು, ತಮ್ಮ ಭಾಷೆ, ಸಂಸ್ಕೃತಿ ಆಚರಣೆಗಳು ನಿಧಾನವಾಗಿ ಬದಲಾಗುತ್ತಿರುವ ಈ ಸಂದರ್ಭದಲ್ಲಿ ಪ್ರಸ್ತುತ ಕೃತಿಯು ಕುಡಿಯರ ಜೀವನ, ಆಚರಣೆಗಳ, ನಂಬಿಕೆಗಳ ಪರಿಚಯವನ್ನು ನಮಗೆ ಮಾಡಿಕೊಡುತ್ತದೆ. ಪ್ರಸ್ತುತ ಕೃತಿಯು ಇದುವರೆಗೂ ಕುಡಿಯ ಬುಡಕಟ್ಟು ಸಮುದಾಯದ ಕುರಿತು ನಡೆದಿರುವ ಅಧ್ಯಯನದ ಸಮೀಕ್ಷೆಯೊಂದಿಗೆ ಕುಡಿಯರ ಸೃಷ್ಟಿಪುರಾಣ, ಅವರ ಜೀವನ ವಿಧಾನ ಅದರಲ್ಲೂ ಮುಖ್ಯವಾಗಿ ಅವರ ಆಹಾರಪದ್ಧತಿ, ವಸತಿವ್ಯವಸ್ಥೆ, ಆರ್ಥಿಕತೆಯ ಮೂಲ, ಕುಲವೃತ್ತಿಗಳು ಈ ಎಲ್ಲ ಮಾಹಿತಿಗಳನ್ನು ನೀಡುತ್ತದೆ. ಹಾಗೆಯೇ ಕುಡಿಯರ ಒಳಾಡಳಿತ ವ್ಯವಸ್ಥೆ ಕುಟುಂಬದಲ್ಲಿ ಯಜಮಾನಿಕೆ, ಗಂಡು ಹೆಣ್ಣಿನ ನಡುವಿನ ಸಮಾನತೆಯನ್ನು ಕೂಡ ನಮಗೆ ಪರಿಚಯಿಸುತ್ತದೆ.

ಕುಡಿಯರು ಕೊಡಗಿನ ಪ್ರಬಲ ಸಮುದಾಯವಾದ ಕೊಡವರನ್ನು ಹೆಚ್ಚಾಗಿ ಅನುಸರಿಸುತ್ತಾರೆ. ಭಾಷೆ, ಸಂಪ್ರದಾಯ, ಆಚರಣೆಗಳು, ನೀತಿ ನಿಯಮ, ಉಡುಪು, ಆಹಾರ ಈ ಎಲ್ಲದರಲ್ಲೂ ಕೂಡ ಕೊಡವರನ್ನು ಅನುಕರಿಸುತ್ತಾರೆ. ಮೌಖಿಕ ಸಾಹಿತ್ಯದ ಮುಖ್ಯ ಪ್ರಕಾರಗಳಲ್ಲಿ ಒಂದಾದ ಸೃಷ್ಟಿಪುರಾಣದ ಮೂಲಕ ಕುಡಿಯರ ಕುಲಕಸುಬಿನ ದಾಖಲೆಗಳನ್ನು ಒದಗಿಸುತ್ತಾರೆ. ಹಾಗೆಯೇ ಐತಿಹಾಸಿಕ ಮತ್ತು ಪೌರಾಣಿಕ ಕತೆಗಳ ಮೂಲಕ ತಮ್ಮ ಅಸ್ತಿತ್ವಕ್ಕಿರುವ ಇತಿಹಾಸವನ್ನು ಸ್ಪಷ್ಟಪಡಿಸುತ್ತಾರೆ. ಕುಡಿಯರ ಕತೆಗಳು, ಕಾವ್ಯ, ಗಾದೆ, ಒಗಟುಗಳು ಹೆಚ್ಚಿನವು ಕೊಡವ ಭಾಷೆಯಲ್ಲಿದೆ. ಈ ಎಲ್ಲ ಸಾಹಿತ್ಯದ ಪ್ರಕಾರಗಳು ಕುಡಿಯರ ಸಾಮಾಜಿಕ, ಸಾಂಸ್ಕೃತಿಕ ಕೌಟುಂಬಿಕ, ಧಾರ್ಮಿಕ ನಂಬಿಕೆಗಳು ಹಾಗೂ ಆಚರಣೆಗಳ ಮೇಲೆ ಬೆಳಕು ಚೆಲ್ಲುತ್ತವೆ.

ಆಚರಣೆಗಳಿಗೆ ಸಂಬಂಧಿಸಿದಂತೆ ಹುಟ್ಟು, ಋತುಮತಿ ಶಾಸ್ತ್ರ, ಮದುವೆ, ಸಾವು ಸಂಸ್ಕಾರದ ಬಗೆ ಸಂಕ್ಷಿಪ್ತವೂ ಅತ್ಯಮೂಲ್ಯವೂ ಆದ ಮಾಹಿತಿಗಳನ್ನು ನೀಡುತ್ತದೆ. ಕುಡಿಯರ ಪ್ರಮುಖ ಹಬ್ಬಗಳು, ದೈವಗಳು, ನಂಬಿಕೆಗಳು, ವಿಧಿನಿಷೇಧಗಳ ಬಗ್ಗೆಯೂ ಮಾಹಿತಿಯನ್ನು ಒದಗಿಸುತ್ತದೆ. ಅಲ್ಲದೆ ಪ್ರಸ್ತುತ ಬದಲಾಗುತ್ತಿರುವ ಇಂದಿನ ಕಾಲಘಟ್ಟದಲ್ಲಿ ಈ ಸಮುದಾಯಗಳು ಬದಲಾವಣೆಗೆ

ಒಗ್ಗಿಕೊಳ್ಳುತ್ತಿರುವ ಸಂದರ್ಭದಲ್ಲಿ ಅನುಭವಿಸುತ್ತಿರುವ ಸಮಸ್ಯೆಗಳು ಸವಾಲುಗಳ ಬಗ್ಗೆ ಚರ್ಚಿಸಿದ್ದಾರೆ.

ಡಾ.ಎ.ಎಸ್.ಪ್ರಭಾಕರ್ ಅವರ 'ಆದಿವಾಸಿ ಆಖ್ಯಾನ' ಕೃತಿಯು ಬುಡಕಟ್ಟು ಸಮುದಾಯಗಳ ಕುರಿತ ವಿವಿಧ ವಿದ್ವಾಂಸರ ಲೇಖನಗಳ ಸಂಗ್ರಹವಾಗಿದೆ. ಸಂಶೋಧನಾ ವಿದ್ಯಾರ್ಥಿಗಳಿಗೆ ಬುಡಕಟ್ಟು ಸಮಾಜವನ್ನು ಅರ್ಥಮಾಡಿಕೊಳ್ಳಲು ಇದು ಬಹಳ ಉಪಯುಕ್ತವಾದ ಕೃತಿಯಾಗಿದೆ. ಭಾರತದಲ್ಲಿ ಪ್ರಮುಖವಾಗಿ ಬುಡಕಟ್ಟು ಎಂದು ಗುರುತಿಸಿರುವ ಸಮುದಾಯಗಳನ್ನು ಕುರಿತು ಅಧ್ಯಯನ ನಡೆಸಿರುವ ಕೆಲವು ಅಧ್ಯಯನಕಾರರ ಲೇಖನಗಳನ್ನು ಈ ಕೃತಿ ಒಳಗೊಂಡಿದೆ. ಪ್ರಸ್ತುತ ಕೃತಿಯು ವಸಾಹತುಶಾಹಿ ಕಾಲಘಟ್ಟದಲ್ಲಿ ಪಾಶ್ಚಾತ್ಯ ಮಾನವಶಾಸ್ತ್ರೀಯ ಅಧ್ಯಯನದ ಮಾದರಿಯಲ್ಲಿ ನಡೆದ ಭಾರತೀಯ ಬುಡಕಟ್ಟುಗಳ ಅಧ್ಯಯನವನ್ನು ಕುರಿತಂತೆ ಭಾರತೀಯ ವಿದ್ವಾಂಸರ ಅಭಿಪ್ರಾಯಗಳ ಸಂಗ್ರಹವಾಗಿದೆ. ಬುಡಕಟ್ಟು ಅಧ್ಯಯನಕ್ಕೆ ಸಂಬಂಧಿಸಿದಂತೆ ವಿಭಿನ್ನ ಒಳನೋಟಗಳನ್ನು ನಮ್ಮೆದುರಿಗಿಡುತ್ತದೆ. ವಿದೇಶಗಳಲ್ಲಿ ತಳಸಮುದಾಯಗಳನ್ನು ಕುರಿತ ಅಧ್ಯಯನ ನಡೆದು ಬಂದ ದಾರಿ ಮತ್ತು ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಅವುಗಳನ್ನು ನೋಡಬೇಕಾದ ರೀತಿಯನ್ನು ನಮಗೆ ಪರಿಚಯಿಸುತ್ತದೆ. ಬುಡಕಟ್ಟು ಮಹಾಕಾವ್ಯಗಳು, ಮೌಖಿಕ ಪರಂಪರೆ, ಬುಡಕಟ್ಟು ನಂಬಿಕೆಗಳು, ಬುಡಕಟ್ಟು ಪರಿಕಲ್ಪನೆ, ಬುಡಕಟ್ಟು ನ್ಯಾಯವ್ಯವಸ್ಥೆ, ವೈದ್ಯಪದ್ಧತಿ, ಚಿತ್ರಕಲೆ, ಪರಿಸರಪ್ರಜ್ಞೆ, ಬುಡಕಟ್ಟು ಮಹಿಳೆ, ಬುಡಕಟ್ಟು ಹೋರಾಟಗಳು, ಸರಕಾರದ ಅಭಿವೃದ್ಧಿ ಯೋಜನೆಗಳು ಈ ಮುಂತಾದ ಹಲವಾರು ವಿಷಯಗಳ ಕುರಿತ ಆಳವಾದ ಮಾಹಿತಿಯನ್ನು ಹೊಂದಿರುವ ಈ ಕೃತಿಯು ಓದುಗರನ್ನು ಚಿಂತನೆಗೆ ಹಚ್ಚುವ ಮೂಲಕ ಬುಡಕಟ್ಟು ಸಮುದಾಯಗಳನ್ನು, ಹಾಗೆಯೇ ಈ ಸಮುದಾಯಗಳ ಅಧ್ಯಯನವನ್ನು ಸೂಕ್ಷ್ಮವಾಗಿ ಮತ್ತು ಅತ್ಯಂತ ಗಂಭೀರವಾಗಿ ನೋಡಬೇಕಾದ ಅನಿವಾರ್ಯತೆಯನ್ನು ಮತ್ತು ಅಗತ್ಯವನ್ನು ಅತ್ಯಂತ ವೈಜ್ಞಾನಿಕ ಹಿನ್ನೆಲೆಯೊಂದಿಗೆ ನಮ್ಮ ಮುಂದಿಡುತ್ತದೆ.

ಬುಡಕಟ್ಟುಗಳನ್ನು ಕುರಿತು ಅತ್ಯಂತ ಆಸ್ಥೆಯಿಂದ ಅಧ್ಯಯನ ನಡೆಸಿ, ಆಳವಾದ ಅನುಭವದಿಂದ ಬರೆದಿರುವ ಪ್ರತಿಯೊಬ್ಬ ಲೇಖಕರ ಪ್ರತಿ ಲೇಖನಗಳು ಸಮುದಾಯ ಅಧ್ಯಯನ ನಡೆಸುವ ವಿದ್ಯಾರ್ಥಿಗಳಿಗೆ ಅತ್ಯುತ್ತಮ ಆಕರಗಳಾಗಿವೆ. ವಿಚಾರಗಳ ರಚನೆಯ ಮೂಲಭೂತ ತೊಡಕುಗಳು, ಸಾಂಸ್ಕೃತಿಕ ವೀರರು, ಬೇಟೆ, ಪಶುಪಾಲನೆ ಮೊದಲಾದ ಕುಲಕಸುಬುಗಳ ಚಾರಿತ್ರಿಕ ಹಿನ್ನೆಲೆಯನ್ನು ಈ ಕೃತಿ ನಮಗೆ ಪರಿಚಯಿಸುತ್ತದೆ. ಈ ಸಾಂಸ್ಕೃತಿಕ ವೀರರನ್ನು ಕುರಿತಂತೆ ತಳಸಮುದಾಯದ ಕಲಾವಿದರು ತಮ್ಮ ಕಲೆಯ ಮೂಲಕ ಅಭಿವ್ಯಕ್ತಿಯಿಸುವ ರೀತಿಯನ್ನು ನಮಗೆ ಪರಿಚಯಿಸುತ್ತದೆ. ಪ್ರಸ್ತುತ ಕಾಲಮಾನದಲ್ಲಿ ಈ ಸಾಂಸ್ಕೃತಿಕ ನಾಯಕರು ಹಾಗೂ ಸಮುದಾಯವು ಸಾಮಾಜಿಕ ಆರ್ಥಿಕ, ರಾಜಕೀಯ ಸಂದರ್ಭದಲ್ಲಿ ಬಳಕೆಯಾಗುತ್ತಿರುವ ಹಾಗೂ ಬಳಸಲ್ಪಡುವ ಚಿತ್ರಣವನ್ನು ಚರ್ಚಿಸಿದ್ದಾರೆ. ಪ್ರಸ್ತುತ ಕೃತಿಯು ಅಧ್ಯಯನಕಾರರಿಗೆ ಸಂಶೋಧನೆಯ ವಿವಿಧ ಆಯಾಮಗಳನ್ನು

ಪರಿಚಯಿಸಿ ವಿಸ್ತೃತವಾದ ಜ್ಞಾನವನ್ನು ನೀಡುತ್ತದೆ.

ಡಾ.ಎಂ.ಎಸ್.ಮುತ್ತಯ್ಯ ಅವರ 'ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿಸಂಸ್ಕೃತಿ' ಕೃತಿಯು ಮೌಖಿಕ ಸಾಹಿತ್ಯವನ್ನು ಕುರಿತು ಅಧ್ಯಯನ ನಡೆಸುತ್ತಿರುವ ಸಂಶೋಧಕರಿಗೆ ಹೊಸ ಕಣ್ಣೋಟವನ್ನು ನೀಡುತ್ತದೆ. ಮೌಖಿಕ ಮಹಾಕಾವ್ಯಗಳನ್ನು ಕುರಿತು ಅರ್ಥೈಸಿಕೊಳ್ಳಬೇಕಾದ ಬಗೆಯನ್ನು ವಿವಿಧ ಆಯಾಮಗಳ ಮೂಲಕ ಲೇಖಕರು ಪರಿಚಯಿಸಿದ್ದಾರೆ. ಮೌಖಿಕ ಸಾಹಿತ್ಯದ ಪರಿಕಲ್ಪನೆಗಳು, ಸೈದ್ಧಾಂತಿಕ ನೆಲೆಗಳು, ಪುರಾಣಗಳು ಎಂಬ ವಿಷಯಗಳ ಕುರಿತ ಹಲವು ವ್ಯಾಖ್ಯಾನಗಳು ನಮಗೆ ಹೊಸ ರೀತಿಯಲ್ಲಿ ಅರ್ಥ ಮಾಡಿಕೊಳ್ಳಲು ಸಹಾಯ ಮಾಡುತ್ತವೆ. ಶಿಷ್ಟ ಮತ್ತು ಜನಪದ ಪುರಾಣಗಳ ಸೂಕ್ಷ್ಮತೆ, ಪುರಾಣಗಳು ಮತ್ತು ಚರಿತ್ರೆ, ಸಾಂಸ್ಕೃತಿಕ ವೀರರು ದೈವೀಕರಣಗೊಳ್ಳುವ ಪ್ರಕ್ರಿಯೆ, ಮಾಟ ಮಂತ್ರ, ಭಿಕ್ಷೆ, ಭಂಗಿ ಈ ಎಲ್ಲ ವಿಚಾರಗಳನ್ನು ಚರ್ಚಿಸುತ್ತಾ ಕರ್ನಾಟಕದ ಸಾಂಸ್ಕೃತಿಕ ಮಹಾಕಾವ್ಯಗಳ ನಾಯಕರುಗಳಾದ ಮಂಟೇಸ್ವಾಮಿ, ಮಾದೇಶ್ವರ, ಜುಂಜಪ್ಪ, ಮೈಲಾರಲಿಂಗನನ್ನು ಚರ್ಚೆಗೆ ಒಳಪಡಿಸುತ್ತಾರೆ.

ಈ ಸಾಂಸ್ಕೃತಿಕ ವೀರರ ಮುಖ್ಯ ಉದ್ದೇಶ ಸಾಮಾಜಿಕ ನ್ಯಾಯ ಮತ್ತು ಸಮಾನತೆ, ಜಾತಿಗಳ ಹೆಸರಿನಲ್ಲಿ ಉಚ್ಚ-ನೀಚ ತಾರತಮ್ಯದಿಂದ ಕಲುಷಿತಗೊಂಡಿರುವ ಸಮಾಜದ ಸ್ವಾಸ್ಥ್ಯವನ್ನು ಸ್ಥಿರಗೊಳಿಸುವುದು. ಹಾಗಾಗಿ ಪ್ರಭುತ್ವದ ನಾಶ ಮತ್ತು ಪ್ರತಿನಿರ್ಮಾಣ ಎಂಬ ಲೇಖನದ ಅಡಿಯಲ್ಲಿ ಅಂದಿನ ಕಾಲಘಟ್ಟದ ಸಾಮಾಜಿಕ ಬದುಕಲ್ಲಿ ಪ್ರಭುತ್ವದ ಪಾತ್ರ ಮತ್ತು ಅದಕ್ಕೆ ಪ್ರತಿರೋಧವಾಗಿ ಪ್ರತಿ ನಿರ್ಮಾಣ ಸಾಧ್ಯವಾದ ಬಗೆಯನ್ನು ಚರ್ಚಿಸುತ್ತಾರೆ.

ಜನಪದ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸ್ತ್ರೀವಾದಕ್ಕೆ ಭಿನ್ನ ಸ್ತ್ರೀವಾದದ ಚರ್ಚೆಯನ್ನು ಪ್ರಮುಖ ಜನಪದರ ಗ್ರಾಮದೇವರುಗಳು ಗೌರಸಂದ್ರ ಮಾರಮ್ಮ, ಕಾಳಮ್ಮರ ಮೂಲಕ ಮುಟ್ಟು ಮೈಲಿಗೆ, ಶೀಲ, ಪಾವಿತ್ರ್ಯತೆ, ಬಂಜೆತನ, ವಿಧವೆ ಈ ಎಲ್ಲ ವೈಯಕ್ತಿಕ ಆರೋಪಗಳನ್ನು ಈ ಜನಪದ ಸ್ತ್ರೀ ಎದುರಿಸಿದ ರೀತಿಯನ್ನು ಅತ್ಯಂತ ಸೂಕ್ಷ್ಮ ಸಂವೇದನೆಗಳ ಮೂಲಕ ನಮ್ಮ ಮುಂದಿಟ್ಟಿದ್ದಾರೆ. ಒಟ್ಟಿನಲ್ಲಿ ಈ ಕೃತಿಯು ಒಂದು ಅತ್ಯುತ್ತಮವಾದ ಮಾಹಿತಿಯ ಆಗರವಾಗಿದೆ.

ಎಂ. ಚಂದ್ರ ಪೂಜಾರಿಯವರ 'ಸಮಾಜ ಸಂಶೋಧನೆ' ಎಂಬ ಪುಸ್ತಕವು ಸಂಶೋಧಕರಿಗೆ ಸಂಶೋಧನೆಗೆ ತೊಡಗುವ ಮುನ್ನ ತಿಳಿದಿರಬೇಕಾದ ಜ್ಞಾನವನ್ನು ಮತ್ತು ಮಾರ್ಗದರ್ಶನವನ್ನು ನೀಡುತ್ತದೆ. ಸಂಶೋಧನೆ ಕೇವಲ ಯಾಂತ್ರಿಕ ಎಂದಾಗದೆ ಅದು ಕೊಡುಕೊಳ್ಳುವಿಕೆಯ ಭಾಗವಾಗಬೇಕು. ಸಂಶೋಧನೆಗೆ ಆಯ್ಕೆ ಮಾಡಿಕೊಂಡ ವಿಷಯವನ್ನು ವಸ್ತು ಎಂಬಂತೆ ಪರಿಗಣಿಸುವ ನಮ್ಮ ಆಲೋಚನೆಗಳು ಬದಲಾಗಬೇಕು. ಸಮಾಜದಲ್ಲಿ ನಡೆಯುವ ಸಂಶೋಧನೆಯು ಸಮಾಜಕ್ಕೆ

ಕೊಡುಗೆಯಾಗಬೇಕು ಎಂಬ ಆಶಯವನ್ನು ಮೂಡಿಸುತ್ತದೆ, ಸಂಶೋಧಕರಿಗಿರಬೇಕಾದ ಗುಣಗಳು, ಪೂರ್ವತಯಾರಿ, ಸಂಶೋಧಕರ ಜವಾಬ್ದಾರಿಗಳನ್ನು ತಿಳಿಸಿಕೊಡುತ್ತದೆ.

## 1.7. ಅಧ್ಯಯನದ ಸ್ವರೂಪ

**ಅಧ್ಯಾಯ 1:** ಅಧ್ಯಾಯ ಒಂದರಲ್ಲಿ ಭಾರತದ ಬುಡಕಟ್ಟು ಸಮುದಾಯಗಳ ಕುರಿತು ಸಂಕ್ಷಿಪ್ತವಾದ ಪರಿಚಯವನ್ನು ನೀಡಲಾಗಿದೆ. ಸ್ವಾತಂತ್ರ್ಯದ ನಂತರ ನೆಹರು ಅವರು ಬುಡಕಟ್ಟುಗಳಿಗಾಗಿ ರೂಪಿಸಿದ ಪಂಚಶೀಲ ತತ್ವಗಳನ್ನು ಪರಿಚಯಿಸಲಾಗಿದೆ. ಪ್ರಸ್ತುತ ಸಂಶೋಧನಾ ಗ್ರಂಥ ರಚನೆಯ ಉದ್ದೇಶಗಳು ಮತ್ತು ಅದರ ಪ್ರಸ್ತುತತೆಯ ಅಗತ್ಯಗಳನ್ನು ಕುರಿತು ಚರ್ಚಿಸಲಾಗಿದೆ ಮತ್ತು ಅಧ್ಯಯನದ ಭೌಗೋಳಿಕ ವ್ಯಾಪ್ತಿ ಮತ್ತು ವಿಷಯದ ವ್ಯಾಪ್ತಿಯನ್ನು ಕುರಿತು ಪರಿಚಯಿಸಲಾಗಿದೆ. ಸಂಶೋಧನೆಗೆ ಬಳಸುವ ಪ್ರಚಲಿತ ಸಂಶೋಧನಾ ವಿಧಾನಗಳನ್ನು ಪರಿಚಯಿಸುವುದರ ಮೂಲಕ ಪ್ರಸ್ತುತ ಅಧ್ಯಯನವನ್ನು ನಡೆಸಲು ಬಳಸಿಕೊಂಡಿರುವ ಅಧ್ಯಯನ ವಿಧಾನಗಳನ್ನು ಕುರಿತು ವಿವರಿಸಲಾಗಿದೆ. ಮತ್ತು ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಈವರೆಗೆ ನಡೆದಿರುವ ಅಧ್ಯಯನಗಳ ಸಂಕ್ಷಿಪ್ತ ಪರಿಚಯವನ್ನು ನೀಡಲಾಗಿದೆ.

**ಅಧ್ಯಾಯ 2:** ಅಧ್ಯಾಯ ಎರಡರಲ್ಲಿ ಶಿಷ್ಟ, ಜನಪದ ಮತ್ತು ಬುಡಕಟ್ಟು ಮೌಖಿಕ ಸಾಹಿತ್ಯಗಳ ನಡುವಿನ ಪರಸ್ಪರ ಸಾಮ್ಯತೆ ಮತ್ತು ಭಿನ್ನತೆಯನ್ನು ಕೋಷ್ಟಕದ ಮೂಲಕ ನೀಡಲಾಗಿದೆ. ಕೊಡಗಿನ ಬುಡಕಟ್ಟುಗಳಾದ ಎರವ, ಜೇನುಕುರುಬ, ಬೆಟ್ಟಕುರುಬ, ಸೋಲಿಗ ಮತ್ತು ಮಲೆಕುಡಿಯ ಸಮುದಾಯಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಆಯಾ ಸಮುದಾಯಗಳ ಉಗಮ ಮತ್ತು ಹೆಸರಿನ ವ್ಯುತ್ಪತ್ತಿಯನ್ನು ಕುರಿತಂತೆ ಮೌಖಿಕ ಸಾಹಿತ್ಯದಲ್ಲಿ ವ್ಯಕ್ತಗೊಂಡಿರುವ ಮಾಹಿತಿ ಮತ್ತು ಸಮುದಾಯಗಳ ಐತಿಹಾಸಿಕ ದಾಖಲೆಗಳನ್ನು ಕುರಿತು ಉಲ್ಲೇಖಿಸಿದೆ. ಆಯಾ ಸಮುದಾಯಗಳ ಉಗಮ ಜೀವನಪದ್ಧತಿ, ಕುಲಗಳು, ಮನೆತನಗಳ ವಿಂಗಡಣೆ ಮತ್ತು ಆ ರೀತಿ ವಿಂಗಡಿಸಲು ಅನುಸರಿಸಿರುವ ಮಾನದಂಡಗಳನ್ನು ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ 3:** ಮೂರನೇ ಅಧ್ಯಾಯದಲ್ಲಿ ಮೌಖಿಕ ಸಾಹಿತ್ಯ ಬೆಳೆದು ಬಂದ ಬಗ್ಗೆ, ವಾಕ್ ಪರಂಪರೆಯು ಲಿಖಿತದಿಂದ ಮುದ್ರಣದ ರೂಪವನ್ನು ಪಡೆಯುವ ಸಂದರ್ಭವನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಮೌಖಿಕ ಸಂಪ್ರದಾಯದ ಕುರಿತ ವಿವಿಧ ವಿದ್ವಾಂಸರ ವ್ಯಾಖ್ಯಾನಗಳನ್ನು ಉಲ್ಲೇಖಿಸಲಾಗಿದೆ. ಬುಡಕಟ್ಟು ಸಾಹಿತ್ಯ ಪ್ರಕಾರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಕತೆ, ಹಾಡು, ಗಾದೆ, ಒಗಟು, ಪುರಾಣ, ಮಹಾಕಾವ್ಯಗಳೆಂದು ವಿಂಗಡಿಸಲಾಗಿದೆ. ಪ್ರಪಂಚದಲ್ಲಿ ಕಥೆಗಳು ಹುಟ್ಟಿದ ಬಗೆಯನ್ನು

ವಿವರಿಸಿದೆ. ಪ್ರತಿಯೊಂದು ಮೌಖಿಕ ಪ್ರಕಾರಗಳು ಹುಟ್ಟಿದ ಬಗೆಯನ್ನು ವಿವರಿಸಿ ಬುಡಕಟ್ಟುಗಳ ಮೌಖಿಕ ಸಾಹಿತ್ಯವನ್ನು ಪ್ರತಿಯೊಂದು ಪ್ರಕಾರಕ್ಕೂ ಉದಾಹರಿಸಲಾಗಿದೆ. ಉದಾಹರಣೆಗೆ ಹಾಡು, ಕತೆ, ಗಾದೆ, ಒಗಟು, ಪುರಾಣಗಳು ಇತ್ಯಾದಿ.

**ಅಧ್ಯಾಯ 4**: ನಾಲ್ಕನೇ ಅಧ್ಯಾಯದಲ್ಲಿ ಕೊಡಗಿನ ಬುಡಕಟ್ಟುಗಳಾದ ಎರವ, ಜೇನುಕುರುಬ, ಬೆಟ್ಟಕುರುಬ, ಸೋಲಿಗ, ಕುಡಿಯ ಬುಡಕಟ್ಟುಗಳ ಮೌಖಿಕ ಸಾಹಿತ್ಯವನ್ನು ಸಂಗ್ರಹಿಸಿಲಾಗಿದೆ. ಕಥೆಗಳು, ಹಾಡುಗಳು, ಗಾದೆ, ಒಗಟು, ಐತಿಹ್ಯ, ಪುರಾಣ, ಮಹಾಕಾವ್ಯ ಎಂದು ವಿಭಾಗಿಸಲ್ಪಟ್ಟ ಪ್ರಕಾರಗಳನ್ನು ಪ್ರತಿಯೊಂದು ಬುಡಕಟ್ಟು ಸಮುದಾಯವನ್ನೂ ಪ್ರತ್ಯೇಕವಾಗಿ ವಿಭಾಗಿಸಿ ಅವುಗಳನ್ನು ಕ್ರಮವಾಗಿ ಉದಾಹರಣೆ ಸಹಿತವಾಗಿ ನೀಡಲಾಗಿದೆ. ಹಾಡುಗಳನ್ನು ಮತ್ತೆ ದೇವರ ಹಾಡು, ಶಿಶುಹಾಡು, ಮನರಂಜನೆಯ ಹಾಡು, ಕಾಯಕದ ಹಾಡು, ಸೋಬಾನೆ ಹಾಡು ಈ ಮುಂತಾಗಿ ಉಪವಿಭಾಗಗಳಾಗಿ ಮಾಡಲಾಗಿದೆ.

**ಅಧ್ಯಾಯ 5**: ಐದನೇ ಅಧ್ಯಾಯದಲ್ಲಿ ಬುಡಕಟ್ಟು ಸಾಮಾಜಿಕ ಬದುಕಿನಲ್ಲಿ ಜಾತಿ ಕುರಿತಂತೆ ನಂಬಿಕೆ, ಕಟ್ಟುಪಾಡು ಜಾತಿ ಬಹಿಷ್ಕಾರಕ್ಕೆ ಕಾರಣ ಮತ್ತು ಜಾತಿಗೆ ಸೇರಿಸಿಕೊಳ್ಳುವ ವಿಧಿವಿಧಾನ ಗಳನ್ನು ಪರಿಚಯಿಸಲಾಗಿದೆ. ಬುಡಕಟ್ಟು ಮೌಖಿಕ ಸಾಹಿತ್ಯದಲ್ಲಿ ಹೆಣ್ಣಿನ ಅನನ್ಯತೆ ಎಂಬ ಉಪ ಅಧ್ಯಾಯದಲ್ಲಿ ಮಾತೃಪ್ರಧಾನ ವ್ಯವಸ್ಥೆಯನ್ನು ಹೊಂದಿರುವ ಈ ಬುಡಕಟ್ಟುಗಳಲ್ಲಿ ಹೆಣ್ಣು ಕುಟುಂಬದ ಮತ್ತು ಸಮಾಜದ ಸೂತ್ರಧಾರಳಾಗಿ ಸಮಸ್ತವನ್ನು ನಿಭಾಯಿಸುವ ಹೊಣೆ ಹೊತ್ತಿದ್ದಳು ಮತ್ತು ವಿಶೇಷವಾದ ಜವಾಬ್ದಾರಿಯನ್ನು ಹೊಂದಿದ್ದವಳಾಗಿದ್ದಳು ಎಂಬುದಕ್ಕೆ ಬುಡಕಟ್ಟು ಮೌಖಿಕ ಸಾಹಿತ್ಯವೇ ಆಧಾರವಾಗಿತ್ತು ಎಂಬುದನ್ನು ಉಲ್ಲೇಖಿಸಲಾಗಿದೆ. ಭೂಮಿಯ ಸೃಷ್ಟಿ ಮತ್ತು ಮನುಷ್ಯನ ಸೃಷ್ಟಿಯನ್ನು ಕುರಿತು ಅವರ ಸೃಷ್ಟಿಪುರಾಣಗಳನ್ನು, ಹಾಡು, ಕಥೆ, ಮಹಾಕಾವ್ಯಗಳನ್ನು, ಯಜಮಾನಿಕೆ ಸ್ವರೂಪವನ್ನು ಉಲ್ಲೇಖಿಸಲಾಗಿದೆ.

**ಅಧ್ಯಾಯ 6**: ಆರನೇ ಅಧ್ಯಾಯದಲ್ಲಿ ಶ್ರಮಸಂಸ್ಕೃತಿಯ ಪ್ರತೀಕವಾದ ಈ ಬುಡಕಟ್ಟುಗಳು ತಮ್ಮ ದುಡಿಮೆಯ ಮೂಲಾಧಾರದೊಂದಿಗೆ ತಮ್ಮನ್ನು ಬೆಸೆದುಕೊಂಡಿದ್ದಾರೆ. ಉದಾಹರಣೆಗೆ ಜೇನು ಕೀಳುವುದೇ ನಮ್ಮ ಪ್ರಧಾನ ಜೀವನೋಪಾಯದ ಮೂಲವಾದುದರಿಂದಲೇ ನಮ್ಮನ್ನು ಜೇನುಕುರುಬರು ಎಂದು ಕರೆದು ತಮ್ಮ ದುಡಿಮೆಯ ಹೆಸರಿನಿಂದಲೇ ತಮ್ಮನ್ನು ಗುರುತಿಸಿಕೊಳ್ಳುವುದರ ಮೂಲಕ ತಮ್ಮ ವಿಶೇಷವಾದ ಮನ್ನಣೆಯನ್ನು ದೊರಕಿಸಿಕೊಟ್ಟಿದ್ದಾರೆ. ಹಾಗೆಯೇ ಕಳ್ಳನ್ನು ಕುಡಿದು ಬದುಕುವುದರಿಂದ ತಮ್ಮನ್ನು ಕುಡಿಯರೆಂದು ಶಿವಪಾರ್ವತಿಯರೇ ಕರೆದಿದ್ದಾರೆ ಎಂದು ತಮ್ಮ

ಪುರಾಣ ಕಥೆಗಳ ಮೂಲಕ ಸಮರ್ಥಿಸುತ್ತಾರೆ. ಹಾಗೆ ಪ್ರತಿಯೊಂದು ಬುಡಕಟ್ಟುಗಳ ಬೇಟೆ, ಕೃಷಿಗೆ ಸಂಬಂಧಿಸಿದಂತೆ ಹಾಡುಗಳು, ಕತೆಗಳನ್ನು ಕಾವ್ಯಗಳನ್ನು ಸಂಗ್ರಹಿಸಿ ನೀಡಲಾಗಿದೆ. ಆದಿಮ ಕಾಲದಲ್ಲಿ ಆಹಾರ ಸಂಗ್ರಹಣೆ, ಕಿರುಬೇಟೆ, ಸೇಂದಿಯ ಮಾರಾಟಗಾರರಾಗಿ, ಕಿರುಬೇಸಾಯದ ಹಂತದಿಂದ ಫಾರೆಸ್ಟ್ ಗಾರ್ಡ್‌ಗಳಾಗಿ, ಮಾವುತರಾಗಿ ಜೀತದಾಳುಗಳಾಗಿ, ಕಾರ್ಮಿಕರಾಗಿ ಬದಲಾದ ಬದುಕಿನ ವೈರುಧ್ಯಗಳನ್ನು ಇವರ ಮೌಖಿಕ ಸಾಹಿತ್ಯವು ಸಮರ್ಥವಾಗಿ ದಾಖಲಿಸುತ್ತದೆ. ಉದಾಹರಣೆ ಸಮೇತವಾಗಿ ಆ ಮೌಖಿಕ ಸಾಹಿತ್ಯಗಳನ್ನು ಸಂಗ್ರಹಿಸಿ ವಿವೇಚಿಸಲಾಗಿದೆ. ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ವ್ಯಕ್ತವಾಗಿರುವ ಪ್ರತಿರೋಧದ ನೆಲೆಗಳನ್ನು ದಾಖಲಿಸಲಾಗಿದೆ.

**ಅಧ್ಯಾಯ 7:** ಏಳನೇ ಅಧ್ಯಾಯದಲ್ಲಿ ಪ್ರಕೃತಿಯ ವಿಸ್ಮಯವನ್ನು ಆರಾಧಿಸುವ ಹಂತದಿಂದ ಈ ಸಮುದಾಯವು ತಮ್ಮ ಸುತ್ತಲಿನ ವೈದಿಕದ ಪ್ರಭಾವದಿಂದ ಅಸಂಖ್ಯಾತ ದೇವರುಗಳನ್ನು ತಮ್ಮದಾಗಿಸಿಕೊಂಡಿರುವುದನ್ನು ವಿವರಿಸಲಾಗಿದೆ. ಕೃಷಿಕರಾಗಿ ಹೊಸರಾಗಿ ಹಬ್ಬ, ರೊಟ್ಟಿ ಹಬ್ಬ, ಮುನಿಹಬ್ಬ, ಹುತ್ತರಿ ಹಬ್ಬಗಳನ್ನು ಆಚರಿಸುವುದರೊಂದಿಗೆ ಭೂಮಿಯ ನಂಟನ್ನು ಇಂದಿಗೂ ಕಾಪಾಡಿಕೊಂಡು ಬಂದಿದ್ದಾರೆ. ಅತಿಮಾನುಷ ಶಕ್ತಿಯನ್ನು ನಂಬುವ ಈ ಸಮುದಾಯಗಳು ಶಮನ್ ಮೂಲಕ ತಮ್ಮ ಹಿರಿಯರ ಆತ್ಮಗಳನ್ನು ಆವಾಹಿಸಿಕೊಳ್ಳುವ ವಿಶಿಷ್ಟವಾದ ಆದಿಮ ಸಂಪ್ರದಾಯಗಳನ್ನು ಇಂದಿಗೂ ಪಾಲಿಸಿಕೊಂಡು ಬರುತ್ತಿದ್ದಾರೆ. ಜೇನುಕುರುಬರ ಬುಂಡೆ ಕರೆಯುವ ಆಚರಣೆಗಳು, ಬೆಟ್ಟಕುರುಬರ ಬಿಂಜೆ ಪಾಡುಗ ಆಚರಣೆಗಳ ಬಗ್ಗೆ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಮಾತೃದೇವತೆಗಳ ಆರಾಧಕರಾದ ಈ ಸಮುದಾಯಗಳು ಚಾಮುಂಡಿ, ಭದ್ರಕಾಳಿ, ಪನ್ನಂಗಾಲ ತಮ್ಮೆ ಮೊದಲಾದ ಕ್ಷುದ್ರ ದೇವತೆಗಳನ್ನು ಪೂಜಿಸುವುದರೊಂದಿಗೆ ಪಾಷಾಣಮೂರ್ತಿ, ಗುಳಿಕರನ್ನು ನಂಬುತ್ತಾರೆ. ಈ ಆಚರಣೆಗಳ ಬಗ್ಗೆ ಮಾಹಿತಿ ಮತ್ತು ಸಂಬಂಧಿಸಿದ ಮೌಖಿಕ ಸಾಹಿತ್ಯಗಳನ್ನು ಇಲ್ಲಿ ನೀಡಲಾಗಿದೆ.

**ಅಧ್ಯಾಯ 8:** ಎಂಟನೇ ಅಧ್ಯಾಯದಲ್ಲಿ ಬುಡಕಟ್ಟು ಕಲೆಗಳನ್ನು ಕುರಿತ ಮಾಹಿತಿಯನ್ನು ಹೊಂದಿವೆ. ಮೌಖಿಕ ಸಾಹಿತ್ಯದೊಂದಿಗೆ ಸಂಬಂಧಿಸಿದ ಪ್ರದರ್ಶನ ಕಲೆಗಳ ಬಗ್ಗೆ ಮಾಹಿತಿಯನ್ನು ಹೊಂದಿದೆ. ಈ ಪ್ರತಿ ಸಮುದಾಯಗಳು ತಮ್ಮ ವಿಶಿಷ್ಟ ನೃತ್ಯ, ವಾದ್ಯ, ಹಾಡುಗಳಿಂದ ಇತರೆ ಸಮುದಾಯಗಳಿಂದ ಪ್ರತ್ಯೇಕತೆಯನ್ನು, ವೈಶಿಷ್ಟ್ಯತೆಗಳನ್ನು ಹೊಂದಿವೆ. ದೈವಾರಾಧನೆ, ಮನರಂಜನೆ, ಸಾಮುದಾಯಿಕ ಪ್ರಜ್ಞೆಯನ್ನು ಒಳಗೊಂಡಿರುವ ಈ ಕಲೆಗಳು ಆದಿಮದ ಚಹರೆಗಳೊಂದಿಗೆ ಹೊಸತನವನ್ನು ಸ್ವೀಕರಿಸಿದೆ. ಪರಿಸರದ ಪ್ರಜ್ಞೆ ಪ್ರತಿ ಹಂತದಲ್ಲೂ ಮೇಳೈಸುತ್ತದೆ.

ಪ್ರಸ್ತುತ ಅಧ್ಯಾಯದಲ್ಲಿ ಕಳೆದುಹೋಗುತ್ತಿರುವ ಬುಡಕಟ್ಟುಗಳ ಅಸ್ಮಿತೆಯನ್ನು ದಾಖಲಿಸುವ ಪ್ರಯತ್ನವನ್ನು ಮಾಡಲಾಗಿದೆ. ಈ ಸಂದರ್ಭದಲ್ಲಿ ಬುಡಕಟ್ಟುಗಳ ಮೌಖಿಕ ಸಾಹಿತ್ಯವು ಈ

ಸಮುದಾಯಕ್ಕೆ ತನ್ನ ಅಸ್ತಿತ್ವವನ್ನು ಸ್ಥಿರವಾಗಿ ಉಳಿಸಲು ನೀಡಿರುವ ಕೊಡುಗೆ ಅಪಾರ. ಮುಖ್ಯವಾಗಿ ಈ ಬುಡಕಟ್ಟುಗಳ ಮೌಖಿಕ ಸಾಹಿತ್ಯವನ್ನು ಸಂಗ್ರಹಿಸಿ ವಿಶ್ಲೇಷಣೆಯನ್ನು ನಡೆಸಲು ನಾನು ಸಹಭಾಗಿತ್ವ ವಿಧಾನ, ಅವಲೋಕನ ವಿಧಾನ, ಕ್ಷೇತ್ರಕಾರ್ಯ, ಸಂದರ್ಶನ ವಿಧಾನ, ಗುಂಪುಚರ್ಚೆ, ಲಭ್ಯ ಸಾಹಿತ್ಯ ಕೃತಿಗಳ ಅಧ್ಯಯನ ಎಂಬುದಾಗಿ ವಿಭಾಗಿಸಿಕೊಂಡು ಅಧ್ಯಯನ ನಡೆಸಿರುತ್ತೇನೆ. ಬುಡಕಟ್ಟು ಸಮುದಾಯಕ್ಕೆ ಸಂಬಂಧಿಸಿದ ಮೌಖಿಕ ಸಾಹಿತ್ಯವು ಹೆಚ್ಚಿನದ್ದಾಗಿ ಆಚರಣೆಗಳಿಗೆ ಸಂಬಂಧಿಸಿದವು ಅದರಲ್ಲೂ ಮುಖ್ಯವಾಗಿ ದೈವಾರಾಧನೆ ಮತ್ತು ಜೀವನಾವರ್ತದ ಆಚರಣೆಗಳಿಗೆ ಸಂಬಂದಿಸಿದವು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅಂತಹ ಆಚರಣೆಗಳಲ್ಲಿ ಖುದ್ದು ಭಾಗವಹಿಸಿ ಅವಲೋಕನ ನಡೆಸುವುದರ ಮೂಲಕ ಮೌಖಿಕ ಸಾಹಿತ್ಯವನ್ನು ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಿ ಅದನ್ನು ವಿಶ್ಲೇಷಣೆಗೆ ಒಳಪಡಿಸಬೇಕಾಗುತ್ತದೆ. ಮತ್ತು ಸಮುದಾಯದ ಒಳಗಿನ ಮತ್ತು ಹೊರಗಿನ ತಜ್ಞರ ಬಳಿ ವಿಷಯಕ್ಕೆ ಸಂಬಂಧಿಸಿದಂತೆ ಸಂದರ್ಶನವನ್ನು ನಡೆಸಿ ಅನುಮಾನಗಳನ್ನು ಪರಿಹರಿಸಿಕೊಂಡು ಗುಂಪುಚರ್ಚೆಯ ಮೂಲಕ ಸ್ಪಷ್ಟತೆಯನ್ನು ಪಡೆದುಕೊಳ್ಳಲಾಗಿದೆ ಮತ್ತು ಅಧ್ಯಯನದ ವ್ಯಾಪ್ತಿಯನ್ನು ಕೊಡಗಿಗೆ ಸೀಮಿತಗೊಳಿಸಲಾಗಿದೆ. ಹೆಚ್ಚಿನ ಅಧ್ಯಯನದ ಸಲುವಾಗಿ ಮೈಸೂರು, ಹೆಚ್.ಡಿ.ಕೋಟೆ, ಕೇರಳ ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಕೂಡ ಅಧ್ಯಯನ ನಡೆಸಲಾಗಿದೆ.

ದೇಶದ ಯಾವುದೋ ಒಂದು ಬದುಕಿನ ಸಂಸ್ಕೃತಿಯನ್ನು ದೇಶದ ಸಂಸ್ಕೃತಿ ಎಂದು ಹೇಳಲು ಸಾಧ್ಯವಿಲ್ಲ. ಕಾಡೊಳಗೆ ಬದುಕುವ ಆದಿವಾಸಿಗಳು, ಊರೂರು ಅಲೆಯುವ ಅಲೆಮಾರಿಗಳೂ ಈ ದೇಶದ ನಾಗರೀಕತೆಗೆ ಕೊಟ್ಟಿರುವ ಕೊಡುಗೆ ಅಪಾರ. ಪಾಶ್ಚಿಮಾತ್ಯ ಅಧ್ಯಯನಕಾರರು ಈ ಸಮುದಾಯಗಳ ಕುರಿತು ಮಾಡಿರುವ ಅಧ್ಯಯನಗಳು ಒಂದು ಪಾರ್ಶ್ವಿಕ ದೃಷ್ಟಿಕೋನದಿಂದ ರೂಪುಗೊಂಡಿವೆ. ಅಂತಹ ಸಮಯದಲ್ಲಿ ಇತ್ತೀಚಿನ ಸಬಾಲ್ಟ್ರನ್ ಅಧ್ಯಯನಗಳು ತಳಸ್ತರ ಸಮುದಾಯಗಳಾದ ದಲಿತರು, ಆದಿವಾಸಿಗಳೂ ಅಲೆಮಾರಿಗಳ ಜೀವನ ವೈವಿಧ್ಯದಲ್ಲಿರುವ ಅಪಾರ ತಿಳುವಳಿಕೆಯನ್ನು ಹೊರ ಜಗತ್ತಿಗೆ ತೆರೆದಿಡುತ್ತಿವೆ ಇದು ನಿಜಕ್ಕೂ ಶ್ಲಾಘನೀಯ. ಈ ಸಮುದಾಯಗಳನ್ನು ನಿಷಾದರು, ದಸ್ಯುಗಳು, ವ್ಯಾದರು, ದಾಸರು, ಕಿರಾತರು, ಮತ್ಸ್ಯರು ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗಿದೆ. ಇಂಡಿಯಾದ ಸಮಾಜದ ನಾಲ್ಕು ವರ್ಣಗಳಿಗೆ ಸೇರದ ಪ್ರತ್ಯೇಕ ಗುಂಪಿನ ಸಮುದಾಯಗಳಿವು.

ಬುಡಕಟ್ಟು ಎಂಬ ಪದವು ಆಂಗ್ಲ ಪದ 'Tribe'ಗೆ ಸಂವಾದಿ ಪದವಾಗಿ ಬಳಕೆಯಲ್ಲಿದೆ. 'Tribe' ಎಂಬ ಪದವು ಲ್ಯಾಟಿನ್ ಭಾಷೆಯ 'Tribud' ಎಂಬ ಪದದಿಂದ ಹುಟ್ಟಿದೆ. 'Tribuz' ಎಂದರೆ ಮೂರು ವಿಭಾಗಗಳು ಎಂದರ್ಥ. ಸಮಾಜಶಾಸ್ತ್ರಜ್ಞರಾದ ಘುರ್‍ಯೆಯವರು

ಬುಡಕಟ್ಟುಗಳನ್ನು ಕುರಿತು 'ವಿವಿಧ ಕುಲಗಳನ್ನು ಹೊಂದಿರುವ ಜಿಲ್ಲೆಗಳು ಸೇರಿದ ಒಂದು ಉನ್ನತವಾದ ರಾಜಕೀಯ ಘಟಕವಾಗಿದ್ದು, ರಾಜಕೀಯ ವಿಭಾಗವಾಗಿದೆ' ಎಂದು ವ್ಯಾಖ್ಯಾನಿಸಿದ್ದಾರೆ. ಈ ಬುಡಕಟ್ಟುಗಳ ಮುಖ್ಯ ಲಕ್ಷಣಗಳೆಂದರೆ, ತಮ್ಮದೇ ಆದ ವಿಶಿಷ್ಟ ಭಾಷೆ, ನಂಬಿಕೆ, ದೈವ ಆಚರಣೆಗಳು, ಕುಲ, ನಿಯಮ, ನಿಷೇಧಗಳು, ಭೌಗೋಳಿಕ ಪ್ರತ್ಯೇಕತೆ, ಅಗಾಧವಾದ ಪಾರಂಪರಿಕ ಜ್ಞಾನ, ಗುಂಪುಗಳಲ್ಲಿ ವಾಸ ಹಾಗೂ ಸುಸಂಘಟಿತ ಸಾಮಾಜಿಕ ವ್ಯವಸ್ಥೆ. ಸಹಸ್ರಾರು ವರ್ಷಗಳಿಂದ ಬೆಟ್ಟ, ಗುಡ್ಡ, ಕಾಡು, ಕಣಿವೆ, ಕಂದರ, ಹಿಮಚ್ಛಾದಿತ ಪ್ರದೇಶ, ಮರಳುಗಾಡು, ಬಯಲು, ದಟ್ಟಾರಣ್ಯ ಹೀಗೆ ವೈವಿಧ್ಯಮಯ ಪ್ರದೇಶಗಳಲ್ಲಿ ಬದುಕುತ್ತಿರುವ ಈ ಬುಡಕಟ್ಟುಗಳು ವೈವಿಧ್ಯಮಯ ಆಚಾರ–ವಿಚಾರ, ಭಾಷೆ, ಬದುಕು, ನಂಬಿಕೆ, ಕಟ್ಟುಪಾಡು, ಆಹಾರ ಪದ್ಧತಿ, ಕುಲ, ಪಂಚಾಯಿತಿ ಗಳು, ವೈದ್ಯ, ಮಾಟ, ಮಂತ್ರ, ಆತ್ಮ, ದೇವರು ಈ ರೀತಿಯ ಸಂಕೀರ್ಣವಾದ ಬಹು ಶ್ರೀಮಂತವಾದ ಸಂಸ್ಕೃತಿಯನ್ನು ಹೊಂದಿವೆ.

ಭಾರತದಲ್ಲಿ ಬುಡಕಟ್ಟುಗಳನ್ನು ಕುರಿತಂತೆ ಅಪಾರವಾದ ಕೆಲಸವನ್ನು ಮಾಡಿದ ಕ್ರಿಶ್ಚಿಯನ್ ಪಾದ್ರಿ ವೆರಿಯರ್ ಎಲ್ವಿನ್. ಒಬ್ಬ ಶ್ರೇಷ್ಠ ಮಾನವಶಾಸ್ತ್ರಜ್ಞನಾದ ಈತ ಬುಡಕಟ್ಟುಗಳ ಜೊತೆಗಿನ ತಮ್ಮ ಅನುಭವವನ್ನು 'ದಿ ಫಿಲಾಸಫಿ ಆಫ್ ನೇಫಾ' (The Philosophy of NEFA, The North East Frontier Agency) ಎಂಬ ಪುಸ್ತಕದಲ್ಲಿ ದಾಖಲಿಸಿದ್ದಾರೆ. ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದಿರುವ ಜವಾಹರ್ ಲಾಲ್ ನೆಹರೂರವರು ಅದರಿಂದ ಪ್ರೇರೇಪಿತರಾಗಿ ಭಾರತದ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಪಂಚಶೀಲ ತತ್ವಗಳನ್ನು ಅಲ್ಲಿ ಉಲ್ಲೇಖಿಸಿದ್ದಾರೆ. ಅದನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಬುಡಕಟ್ಟುಗಳನ್ನು ಕುರಿತಂತೆ ಪ್ರಸ್ತುತ ಅಧ್ಯಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ. ಕೊಡಗಿನ ಬುಡಕಟ್ಟು ಸಮುದಾಯಗಳ ಮೌಖಿಕ ಸಾಹಿತ್ಯಗಳ ವಿವಿಧ ಪ್ರಕಾರಗಳಾದ ಹಾಡು, ಕಥೆ, ಗಾದೆ, ಒಗಟು, ಪುರಾಣ, ಕಾವ್ಯಗಳ ಸ್ವರೂಪ ಮತ್ತು ಅವುಗಳ ವಿಶಿಷ್ಟ ಚಹರೆಗಳನ್ನು ವಿವರಿಸುವುದು, ಅವರ ಸಮಾಜದ ಸ್ವರೂಪ, ಆದಿವಾಸಿಗಳ ಆರ್ಥಿಕ ಅಧೀನತೆ ಮತ್ತು ಲಿಂಗ ಸಂಬಂಧಿ ಆಯಾಮಗಳನ್ನು ವಿಶ್ಲೇಷಿಸುವುದು. ಆದಿವಾಸಿಗಳ ಪಾರಂಪರಿಕ ಜ್ಞಾನ ಮತ್ತು ಸಾಂಸ್ಕೃತಿಕ ಅನನ್ಯತೆಗಳನ್ನು ವಿವರಿಸುವುದು. ಆದಿವಾಸಿಗಳ ಸಮಗ್ರ ಬದುಕಿನ ಭಾಗವಾಗಿ ರೂಪುಗೊಂಡ ಮೌಖಿಕ ಸಾಹಿತ್ಯವನ್ನು ತಾತ್ವಿಕ ವಿವೇಚನೆಗೆ ಒಳಪಡಿಸುವುದು. ಈ ಕಾರ್ಯಕ್ಕಾಗಿ ಕೊಡಗು ಜಿಲ್ಲೆಯ ಮೂರು ತಾಲ್ಲೂಕುಗಳಾದ ವಿರಾಜಪೇಟೆ, ಸೋಮವಾರಪೇಟೆ, ಮಡಿಕೇರಿ ಹಾಗು ಹೆಚ್ಚಿನ ಮಾಹಿತಿಗಾಗಿ ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ,

ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ, ಕೇರಳದ ತಿರುನೆಲ್ಲಿಯಲ್ಲಿಯೂ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿದೆ. ಈ ಭಾಗದಲ್ಲಿ ವಾಸವಿರುವ ಎರವರು, ಜೇನುಕುರುಬ, ಸೋಲಿಗ, ಬೆಟ್ಟ ಕುರುಬ ಮತ್ತು ಕುಡಿಯರ ಮೌಖಿಕ ಸಾಹಿತ್ಯವನ್ನು ಪ್ರಧಾನವಾಗಿ ಪರಿಗಣಿಸಲಾಗಿದೆ. ಆದಿವಾಸಿಗಳ ಹಾಡುಗಳು, ಕತೆಗಳು, ಕಾವ್ಯಗಳು, ಗಾದೆಗಳು, ಒಗಟುಗಳು, ಪುರಾಣಗಳೂ, ಐತಿಹ್ಯಗಳನ್ನು ಹಬ್ಬಗಳು, ದೈವಾಚರಣೆಗಳು, ಜೀವನಾವರ್ತದ ಆಚರಣೆಗಳಾದ ಹುಟ್ಟು, ಮದುವೆ, ಋತುಮತಿ ಶಾಸ್ತ್ರ, ಸಾವು ಹಾಗು ತಿಥಿ ಮೊದಲಾದ ಆಚರಣೆಗಳಿಗೆ ಸಂಬಂಧಿಸಿದ ಮಾಹಿತಿಗಳನ್ನು ಸಂಗ್ರಹಿಸಿ ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ ಅದಕ್ಕಾಗಿ ಸಹಭಾಗಿತ್ವ ವಿಧಾನ, ಅವಲೋಕನ ವಿಧಾನ, ಕ್ಷೇತ್ರಕಾರ್ಯ, ಸಂದರ್ಶನ ವಿಧಾನ, ಗುಂಪು ಚರ್ಚೆ ವಿಧಾನ, ಲಭ್ಯ ಸಾಹಿತ್ಯಿಕ ಆಕರಗಳ ಅಧ್ಯಯನ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ.

ಬುಡಕಟ್ಟುಗಳ ಬದುಕಿನಲ್ಲಿ ಸುಪ್ತವಾಗಿರುವ ಅವರ ನೋವು, ನಲಿವು, ತೊಳಲಾಟ, ತಳಮಳ, ಅಭದ್ರತೆ, ಅನಿಶ್ಚಿತತೆಗಳ ಕಾರಣಗಳಿಗಾಗಿ ಮಡುಗಟ್ಟಿದ ಭಾವನೆಗಳನ್ನು ಮತ್ತು ಪ್ರತಿರೋಧಗಳನ್ನು ಹೊರಹೊಮ್ಮಿಸುವ ಹೊರದಾರಿಗಳಾಗಿವೆ. ಆದಿವಾಸಿ ಸಮುದಾಯಗಳ ಈ ಅಂತರ್ಗತ ಮೌಲ್ಯಗಳನ್ನು ತಾತ್ವಿಕವಾಗಿ ಅರ್ಥೈಸುವ ನಿಟ್ಟಿನಲ್ಲಿದೆ. ಹಾಗೆಯೇ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಕೈಗೊಂಡು ಅದಕ್ಕಾಗಿ ಡಾ. ಚಂದ್ರು ಕಾಳೇನಹಳ್ಳಿರವರು ಬರೆದ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಉಪಸಂಸ್ಕೃತಿ ಅಧ್ಯಯನ ಮಾಲೆಯಲ್ಲಿ ಪ್ರಕಟವಾದ "ಸೋಲಿಗರ ಸಂಸ್ಕೃತಿ", ಎನ್.ಪಿ.ಶಂಕರನಾರಾಯಣರಾವ್‌ರವರ 'ಪಂಜರಿಯರವರ ಸಮಾಜ ಮತ್ತು ಜಾನಪದ ಇತಿಹಾಸ', ಡಾ. ಪಿ.ಎನ್. ಹರೀಶ್‌ರವರು ಬರೆದಿರುವ ಉಪಸಂಸ್ಕೃತಿ ಅಧ್ಯಯನ ಮಾಲೆಯ 'ಎರವರ ಸಂಸ್ಕೃತಿ'. ಎ.ಸಿ.ಲಲಿತರವರು ಬರೆದಿರುವ ಉಪಸಂಸ್ಕೃತಿ ಅಧ್ಯಯನ ಮಾಲೆಯ 'ಕಾಡುಕುರುಬ ಮತ್ತು ಜೇನುಕುರುಬರ ಸಂಸ್ಕೃತಿ', ಡಾ. ಹಿ.ಚಿ.ಬೋರಲಿಂಗಯ್ಯರವರ 'ಬುಡಕಟ್ಟು ದೈವಾರಾಧನೆ', ಡಾ. ಡಿ ಬಿ ರಾಮಚಂದ್ರಾಚಾರ್‌ರವರ ಉಪಸಂಸ್ಕೃತಿ ಅಧ್ಯಯನ ಮಾಲೆಯ ಅಡಿಯಲ್ಲಿ ಪ್ರಕಟವಾದ 'ಕುಡಿಯರ ಸಂಸ್ಕೃತಿ'. ಡಾ.ಎ.ಎಸ್.ಪ್ರಭಾಕರ್‌ರವರ 'ಆದಿವಾಸಿ ಅಖ್ಯಾನ', ಡಾ.ಎಂ.ಎಸ್.ಮುತ್ತಯ್ಯರವರ 'ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿ ಸಂಸ್ಕೃತಿ' ಎಂ. ಚಂದ್ರ ಪೂಜಾರಿಯವರ ಸಮಾಜ ಸಂಶೋಧನೆ ಪುಸ್ತಕಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಕೊನೆಯಲ್ಲಿ ಪ್ರಸ್ತುತ ಮಹಾಪ್ರಬಂಧದ ಅಧ್ಯಾಯಗಳ ಸಂಕ್ಷಿಪ್ತ ಪರಿಚಯವಿದೆ.

## ಅಡಿ ಟಿಪ್ಪಣಿಗಳು

1. Ghurye G. S., Scheduled Tribes of India, P 15, 1980.
2. ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್., ಬುಡಕಟ್ಟು ಸಚಿತ್ರಕೋಶ, ಪು.2, 2015.
3. Nirmal Kumar Bose, Tribal Life in india, P. 66, 1971
4. Sylvian levy, In the Introduction to the Mysore Tribes and castes, Ed: Nanjundaiah H.V. and Ananthakrishna Iyer, P 5, 1961.
5. Verrior Elvin, Preface: Jawaharlal Nehru The Philosophy of NEFA, P 15, Shillong, 1959 (Second Revised Edition).
6. ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್., ಬುಡಕಟ್ಟು ಸಚಿತ್ರಕೋಶ, ಪು.3, 2015.
7. ಪ್ರಭಾಕರ ಎ.ಎಸ್., ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪು.65, 2000.
8. ಅದೇ, ಪು.69.

# ಅಧ್ಯಾಯ: ಎರಡು

## ಬುಡಕಟ್ಟು ಮೌಖಿಕ ಸಾಹಿತ್ಯದ ಅನನ್ಯತೆ ಮತ್ತು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಬುಡಕಟ್ಟುಗಳ ಸ್ಥೂಲ ವಿವರಗಳು

2.1. ಶಿಷ್ಟ, ಜನಪದ ಮತ್ತು ಬುಡಕಟ್ಟು ಮೌಖಿಕ ಸಾಹಿತ್ಯಗಳ ನಡುವಿನ ಸಾದೃಶ್ಯ ಮತ್ತು ವೈದೃಶ್ಯಗಳು

2.2. ಕೊಡಗಿನ ಬುಡಕಟ್ಟುಗಳ ಸಂಕ್ಷಿಪ್ತ ಪರಿಚಯ

2.3. ಎರವರು

2.4. ಜೇನುಕುರುಬರು

2.5. ಬೆಟ್ಟಕುರುಬರು

2.6. ಸೋಲಿಗರು

2.7. ಕುಡಿಯರು

ಅಧ್ಯಾಯ: ಎರಡು

# ಬುಡಕಟ್ಟು ಮೌಖಿಕ ಸಾಹಿತ್ಯದ ಅನನ್ಯತೆ ಮತ್ತು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಬುಡಕಟ್ಟುಗಳ ಸ್ಥೂಲ ವಿವರಗಳು

## 2.1. ಶಿಷ್ಟ, ಜನಪದ ಮತ್ತು ಬುಡಕಟ್ಟು ಮೌಖಿಕ ಸಾಹಿತ್ಯಗಳ ನಡುವಿನ ಸಾದೃಶ್ಯ ಮತ್ತು ವೈದೃಶ್ಯಗಳು

ಭಾರತದಲ್ಲಿ ಜಾತಿ ಸಮುದಾಯಗಳು ಮತ್ತು ಬುಡಕಟ್ಟುಗಳು ಭಿನ್ನ ಪರಿಸರದಲ್ಲಿ ಬದುಕುತ್ತಿವೆ. ಆದರೂ ಕೆಲವು ಬುಡಕಟ್ಟುಗಳು ಗ್ರಾಮಗಳ ಊಳಿಗಮಾನ್ಯ ಪರಿಸರದಲ್ಲಿ, ಕೆಲವು ಬುಡಕಟ್ಟುಗಳು ಸ್ಥಳಾಂತರಗೊಂಡು ನಗರಗಳ ಬಂಡವಾಳಶಾಹಿಗಳ ಹಿಡಿತದಲ್ಲಿ ಬದುಕುತ್ತಿರುವುದು ಈ ಸಮಾಜದ ಇನ್ನೊಂದು ವಿಪರ್ಯಾಸ. ಹಾಗೆಂದು ಜಾತಿಗಳು ಮತ್ತು ಬುಡಕಟ್ಟು ಸಮುದಾಯಗಳು ಎರಡು ಪ್ರತ್ಯೇಕಿತ ಅವಕಾಶಗಳಲ್ಲಿ (Space) ಬದುಕುತ್ತಿಲ್ಲ. ಪುರಾಣ ಕಾಲದಿಂದ ಬುಡಕಟ್ಟುಗಳು 'ಮುಖ್ಯವಾಹಿನಿ' ಎಂದು ನಾವು ಕರೆಯುತ್ತಿರುವ ಸಮಾಜದ ಜೊತೆಯಲ್ಲಿ ಬದುಕುತ್ತಿದ್ದರೂ ಇವುಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಪ್ರೇಕ್ಷ್ಯಗಳು ಬೇರೆ ಬೇರೆಯಾಗಿವೆ. ಇದನ್ನು ಜಿ.ಎನ್.ದೇವಿ ಹೀಗೆ ವಿವರಿಸುತ್ತಾರೆ. 'ಆದಿವಾಸಿಗಳು ಮುಖ್ಯವಾಹಿನಿಯಿಂದ ಸಂಪೂರ್ಣವಾಗಿ ಪ್ರತ್ಯೇಕಗೊಂಡು ಬದುಕಲಿಲ್ಲ. ಆದಿವಾಸಿ ಮತ್ತು ಆದಿವಾಸಿಗಳಲ್ಲದವರ ನಡುವೆ ಪ್ರಾಚೀನ ಕಾಲದಿಂದಲೂ ಕೊಡು ಕೊಳುವಿಕೆ ನಡೆಯುತ್ತಲೇ ಬಂದಿದೆ. ಅದು ಕೃಷಿ ತಂತ್ರಜ್ಞಾನವಾಗಿರಬಹುದು, ಔಷಧಿ ಜ್ಞಾನವಾಗಿರಬಹುದು, ಜನಪದ ಸಾಹಿತ್ಯ ಮತ್ತು ಅದರ ರಚನೆಯ ತಂತ್ರಗಳಿರಬಹುದು, ಆಧ್ಯಾತ್ಮಿಕ ಸಂಗತಿಗಳಿಸಬಹುದು, ನೃತ್ಯಾದಿ ಕಲೆಗಳಿರಬಹುದು, ಈ ಎಲ್ಲ ರಂಗಗಳಲ್ಲಿ ಆದಿವಾಸಿ ಮತ್ತು ಆದಿವಾಸಿಗಳಲ್ಲದವರ ನಡುವೆ ಪರಸ್ಪರ ಪ್ರಭಾವಗಳು ಏರ್ಪಟ್ಟಿರುವುದನ್ನು ನಾವು ನೋಡಬಹುದು."[1] ಈ ಮಾತು ಭಾರತದ ದುಡಿವ ಕೆಳಜಾತಿ ವರ್ಗಗಳಿಗೂ ಅನ್ವಯವಾಗುತ್ತದೆ. ಈ ದೇಶದ ಆದಿವಾಸಿಗಳು, ದುಡಿವ ಕೆಳಜಾತಿ ಸಮುದಾಯಗಳು ಶತಮಾನಗಳಿಂದ ಅಧೀನವಾಗಿರುವ ಕಾರಣ ಈ ಸಮುದಾಯಗಳ ಬದುಕಿನ ಒಳಾವರಣ ಭಿನ್ನವಾಗಿ ರೂಪುಗೊಳ್ಳುತ್ತ ಬಂದಿದೆ. ಈ ಸಾಮಾಜಿಕ ಏರುಪೇರುಗಳು ಪ್ರಧಾನ ಮತ್ತು ಅಧೀನ ಸಮುದಾಯಗಳ ಅಭಿವ್ಯಕ್ತಿ ಕ್ರಮಗಳನ್ನು ಭಿನ್ನವಾಗಿಸಿವೆ.

ಭಾರತದ ಶ್ರೇಣೀಕರಣ ಸಮಾಜದಲ್ಲಿ ಆಳುವ ಮತ್ತು ಅಧೀನಗೊಂಡ ಸಮುದಾಯಗಳ ಸಾಮಾಜಿಕ ಸಂಬಂಧಗಳು ಹಲವು ವಿನ್ಯಾಸಗಳಲ್ಲಿ ರೂಪುಗೊಳ್ಳುತ್ತಾ ಬಂದಿವೆ. ನಾವಿಂದು ನೋಡುವ 'ಅಖಿಲ ಭಾರತ'(Pan Indian) ಮಟ್ಟದ ಸಾಹಿತ್ಯಿಕ ಪಠ್ಯಗಳು ಮತ್ತು ಸಾಹಿತ್ಯಿಕ ವಾಗ್ವಾದಗಳು ಎಲ್ಲರಿಗೂ ಪರಿಚಿತ. ಇದಕ್ಕೆ ಸಂವಾದಿಯಾಗಿಯೇ ಬೆಳೆದುಕೊಂಡು ಬಂದ ಅಧೀನ ಸಮುದಾಯಗಳ ಅಭಿವ್ಯಕ್ತಿಗಳೂ ಅಸ್ತಿತ್ವದಲ್ಲಿವೆ. ತೋಂಡಿ, ಜಾನಪದ, ಅಲಿಖಿತ, ಮೌಖಿಕ ಎಂಬೆಲ್ಲ ಕರೆಯುವಿಕೆಗಳಿಂದ ಈ ಅಭಿವ್ಯಕ್ತಿಗಳನ್ನು ಗುರುತಿಸಲಾಗುತ್ತದೆ. ಆದರೆ ಅಭಿಜಾತ(Classical) ಪಠ್ಯಗಳು ಬರೆಯಲ್ಪಟ್ಟವುಗಳು, ಲಿಖಿತವಾದವುಗಳು ಮತ್ತು ಒಬ್ಬ ಗ್ರಂಥಕರ್ತನ ಸ್ವೋಪಜ್ಞತೆಯಲ್ಲಿ ರೂಪುಗೊಂಡವುಗಳು ಎಂದು ಈ ಪಠ್ಯಗಳನ್ನು ಕರೆಯಲಾಗುತ್ತದೆ. ಜೊತೆಗೆ ಈ ಪಠ್ಯಗಳನ್ನು, 'ಅಖಿಲ ಭಾರತ' ಮಟ್ಟದ ಪಠ್ಯಗಳು, ಇವು ಕಾಲ ದೇಶಗಳನ್ನು ಮೀರಿದ ಸಾರ್ವಕಾಲಿಕ ಕಥನಗಳು ಎಂದು ಎಲ್ಲರನ್ನೂ ನಂಬಿಸುತ್ತ ಬರಲಾಗಿದೆ. ಈ ಬಗೆಯ ವಾದಗಳನ್ನು ಆಯಾ ಕಾಲಘಟ್ಟದ ಪ್ರಭುತ್ವಗಳು ಸಮರ್ಥಿಸುತ್ತ ಬಂದಿವೆ. ಹಾಗಾಗಿ ರಾಮಾಯಣ ಮಹಾಭಾರತಗಳನ್ನು ಒಳಗೊಂಡ ಅನೇಕ ಕಥನಗಳಿಗೆ ಸಾಮುದಾಯಿಕ ನೆಲೆ ತಪ್ಪಿಹೋಗಿದೆ. ಈ ಕಥನಗಳು ಆಯಾ ಕಾಲಘಟ್ಟದ ಪ್ರಭುತ್ವಗಳು ನ್ಯಾಯಬದ್ಧಗೊಳಿಸಿದಂತೆ ಪ್ರಧಾನ ನೆಲೆಯ ಪಠ್ಯಗಳಾಗಿ, ಅಧಿಕೃತತೆಯನ್ನು ಪಡೆದುಕೊಂಡವು. 'ಅಕ್ಷರ' ಮತ್ತು 'ಬರಹಗಳು' ಪ್ರಧಾನ ಸಂಸ್ಕೃತಿಯ ಅಭಿವ್ಯಕ್ತಿಯನ್ನು ಯಜಮಾನಿಕೆಯ ಸ್ಥಾನದಲ್ಲಿ ಪ್ರತಿಷ್ಠಾಪಿಸಿದವು. ಹೀಗಾಗಿ ಈ ಪಠ್ಯಗಳಿಗೆ 'ಅಖಿಲ ಭಾರತ' ಮಟ್ಟದ ಸ್ಥಾನಮಾನಗಳು ಲಭ್ಯವಾದವು. ಆದರೆ, ಶತಮಾನಗಳಿಂದ ಮೌಖಿಕವಾಗಿ ಉಳಿದು ಬೆಳೆಯುತ್ತಾ ಬಂದ ಮೌಖಿಕ ಕಥನಗಳು ಅಲಕ್ಷ್ಯಕ್ಕೆ ಒಳಪಟ್ಟವು ಮತ್ತು ಸ್ಥಳೀಯ ಪಠ್ಯಗಳಂತೆ ಪರಿಗಣಿಸಲ್ಪಟ್ಟವು. ಕಥನಗಳನ್ನು ಕಟ್ಟುವ ತಳಸಮುದಾಯಗಳ ಸಾಮಾಜಿಕ ಏಣಿಶ್ರೇಣಿಗಳು ಈ ಪಠ್ಯಗಳಿಗೂ ಪ್ರಾಪ್ತವಾದವು. ಆದರೆ, ಶತಮಾನಗಳುದ್ದಕ್ಕೂ ನಿರಂತರ ದಮನ ಮತ್ತು ಹಿಂಸೆಗಳನ್ನು ಅನುಭವಿಸುತ್ತಾ ಬಂದ ಶೋಷಿತ ಸಮುದಾಯಗಳಿಗೆ ವರ್ತಮಾನದ ಜೊತೆ ಗಟ್ಟಿ ದನಿಯ ಅಭಿವ್ಯಕ್ತಿಯ ಸಾಧ್ಯತೆಗಳಿರಲಿಲ್ಲ. ನಡುಬಗ್ಗಿಸಿ ನಿಂತು ಯಜಮಾನನ ಆಣತಿಗಳನ್ನು ಜಾರಿಗೆ ತರುವುದು, ವರ್ತಮಾನದ ತನ್ನ ಹೀನಾಯ ಸ್ಥಿತಿಗತಿಯನ್ನೇ ಜನ್ಮಾಂತರದ ಪಾಪದ ಫಲವೆಂದು ನಂಬಿಕೊಂಡು ಬಂದಿದ್ದೇ ಹೆಚ್ಚು. ಆದರೆ ದಮನ ಮತ್ತು ಹಿಂಸೆಗಳು ದುಡಿವ ಸಮುದಾಯಗಳಲ್ಲಿ ಒಂದು ಸುಪ್ತ ಸ್ವೋಪಜ್ಞತೆಯನ್ನು ಚಿಗುರಿಸುತ್ತಾ ಬಂದವು. ವರ್ತಮಾನದ ಬವಣೆಗಳಿಗೆ ಈ ಸಮುದಾಯಗಳ ಅಂತಸ್ಥ ಜಗತ್ತು ತಲ್ಲಣಗೊಳ್ಳುತ್ತಲೇ ನಿರಂತರ ಪ್ರತಿಕ್ರಿಯಿಸುವ ಎಚ್ಚರವನ್ನೂ ಹೊಂದುತ್ತಾ ಬಂದಿತು. 'ಮಾತು' ಸಾಧ್ಯವಾಗದ ಕಡೆಯಲ್ಲೆಲ್ಲ 'ಮೌನಗಳು' ಸ್ಮೃತಿಗಳಲ್ಲಿ ಜಾಗೃತಗೊಳ್ಳುತ್ತಾ ಬಂದವು. ಮೌನಗಳ ತೀವ್ರ ಒತ್ತಡಗಳೇ ದುಡಿವ ಅಲಕ್ಷಿತ ವರ್ಗಗಳ ಸೃಜನಶೀಲತೆಯನ್ನು ರೂಪಿಸಿತ್ತಾ ಬಂದವು. ದಮನ ಮತ್ತು ಹಿಂಸೆಗಳನ್ನು ಈ ಸಮುದಾಯಗಳು ಅವುಡುಗಚ್ಚಿ ಸಹಿಸಿಕೊಳ್ಳುತ್ತಲೇ ತಮ್ಮ ಪ್ರತಿಭಟನೆಗಳನ್ನು 'ಮಾತಿನ' ರೂಪದಲ್ಲಿ ದಾಖಲಿಸುತ್ತಾ

ಬಂದವು. 'ಮಾತು' ಪ್ರತಿರೋಧದ ಹಲವು ವಿನ್ಯಾಸಗಳಲ್ಲಿ ತನ್ನನ್ನು ವಿಸ್ತರಿಸಿಕೊಳ್ಳುತ್ತಾ ಹೋಯಿತು. ಮೌನ, ಎದೆಯ ನೋವಾಗಿ ಕಣ್ಣೀರಾಗಿ,'ಮಾತಾಗಿ' ಪದವಾಗಿ, ಹಾಡಾಗಿ ಅಭಿವ್ಯಕ್ತಿಯ ಹಲವು ಸ್ತರಗಳಲ್ಲಿ ಸಾರ್ಥಕವಾಗುತ್ತಾ ಹೋಯಿತು. ದುಡಿವ ಅಲಕ್ಷಿತ ವರ್ಗಗಳು ಕಾಲದಿಂದ ಕಾಲಕ್ಕೆ ಪ್ರತಿಭಟಿಸಲಾಗದ ತನ್ನ ಇರುವಿಕೆಯನ್ನು ಅಸಹಾಯಕ ಆತ್ಮದ್ವೇಷದಲ್ಲಿ ಪರಿಭಾವಿಸುತ್ತಾ ಬಂದವು. ಈ ಆತ್ಮದ್ವೇಷ ಪದವಾಗಿ ಹಾಡಾಗಿ ಕಥೆಯಾಗಿ ಮಹಾಕಾವ್ಯವಾಗಿ ರೂಪುಗೊಳ್ಳುತ್ತಾ ಹೋಯಿತು. ಈ ಅಲಕ್ಷಿತ ಸಮುದಾಯಗಳು ತಮ್ಮ ನಿತ್ಯದ ಬದುಕನ್ನು ಮುಖಾಮುಖಿಯಾಗುವ ಕ್ರಮವೇ ಕಥನಗಳ ರೂಪದಲ್ಲಿ ಒಂದು ತಿಳುವಳಿಕೆಯ ಜಗತ್ತನ್ನು ರೂಪಿಸಿತು. ಈ ಅಲಕ್ಷಿತ ಸಮುದಾಯಗಳಲ್ಲಿ, ಆದಿವಾಸಿಗಳು ತಮ್ಮ ಅಭಿವ್ಯಕ್ತಿಗಳಲ್ಲಿ ಹಲವು ವೈಚಿತ್ರ್ಯಗಳನ್ನು ಕಟ್ಟಿಕೊಂಡು ಬಂದರು. ಈ ವೈಚಿತ್ರ್ಯಗಳ ವಿರಾಟ್ ಕಥನ ಹಲವು ಅಭಿವ್ಯಕ್ತಿ ಪ್ರಕಾರಗಳಲ್ಲಿ ಮೈದಾಳಿದೆ. ಈ ಕಾರಣಕ್ಕಾಗಿ, ಅಧೀನ ಮತ್ತು ಪ್ರಧಾನ ಸಮುದಾಯಗಳ ಅಭಿವ್ಯಕ್ತಿಗಳಲ್ಲಿ ಭಿನ್ನ ಸಾಮಾಜಿಕ ಅನುಭವಗಳಿವೆ. ಹಾಗಾಗಿ ಅಧ್ಯಯನದ ಕಾರಣಕ್ಕಾಗಿ ಇವುಗಳನ್ನು 'ಲಿಖಿತ' ಹಾಗೂ 'ಮೌಖಿಕ' ಎಂಬ ವಿಂಗಡಣೆ ಮಾಡಲಾಗಿದೆ.

ಅಧ್ಯಯನದ ಕಾರಣಕ್ಕಾಗಿ ಜನಪದ, ಲಿಖಿತ ಮತ್ತು ಬುಡಕಟ್ಟು ಸಾಹಿತ್ಯ ಎಂದು ಮಾಡುವ ವಿಂಗಡಣೆಗಳು ಅತ್ಯಂತಿಕವಲ್ಲ. ಆದರೆ, ಸಮಾಜದ ಭಿನ್ನ ಸ್ತರಗಳಲ್ಲಿ ಸೃಷ್ಟಿಯಾದ ಸಾಹಿತ್ಯವು ಏಕರೂಪವಾಗೇನು ಇಲ್ಲ. ಜೊತೆಗೆ ಈ ವಿವಿಧ ಸ್ತರವಿನ್ಯಾಸದಲ್ಲಿ ರೂಪುಗೊಂಡ ಸಾಹಿತ್ಯಕ್ಕೆ ಪರಸ್ಪರ ಪ್ರೇರಣೆಗಳಿದ್ದರೂ ಸಹ ಸಾಮಾಜಿಕ ರಾಜಕೀಯ ಗ್ರಹಿಕೆಗಳು ಭಿನ್ನವಾಗಿಯೇ ಇವೆ. ಈ ಕಾರಣದಿಂದ 'ಮುಖ್ಯವಾಹಿನಿಯ' ಜೊತೆಗಿದ್ದೂ ಉಳಿದುಕೊಂಡು ಬಂದ ಗ್ರಾಮಗಳ ಜಾನಪದ ಮತ್ತು ಅರಣ್ಯಗಳ ಒಳಗೇ ಲೋಕವನ್ನು ಗ್ರಹಿಸುವ ಆದಿವಾಸಿಗಳ ನುಡಿರೂಪಗಳಿಗೆ ಪ್ರತ್ಯೇಕ ಅನನ್ಯತೆಗಳಿವೆ.

ಬುಡಕಟ್ಟು ಮೌಖಿಕ ಸಾಹಿತ್ಯದಲ್ಲಿ ಶಿಷ್ಟ ಹಾಗೂ ಜನಪದ ಸಾಹಿತ್ಯಕ್ಕಿಂತ ವಿಭಿನ್ನವಾದ ಸಂವೇದನೆ ಮತ್ತು ಲೋಕದೃಷ್ಟಿಯನ್ನು ನೋಡಲು ಸಾಧ್ಯ. ಜನಪದ ಮೌಖಿಕ ಸಾಹಿತ್ಯವು ಹೆಣ್ಣಿನ ಬದುಕು, ಬವಣೆ, ಬಡತನ, ಊಳಿಗಮಾನ್ಯ ವಿರೋಧಿತನ, ತವರುಮನೆ, ಗಂಡನ ಮನೆ, ಪಾವಿತ್ರ್ಯತೆ, ಸ್ತ್ರೀಸ್ವಾತಂತ್ರ್ಯ, ಸುಗ್ಗಿ, ವ್ಯವಸಾಯ ಈ ಮೊದಲಾದ ಅಂಶಗಳನ್ನು ಒಳಗೊಂಡಿರುತ್ತದೆ. ಇನ್ನೂ ಮುಂದೆ ಸಾಗಿದರೆ ಸುಮಾರು 18ನೇ ಶತಮಾನದ ಕಾಲಘಟ್ಟದಲ್ಲಿ ಸಾಮಾಜಿಕವಾಗಿ ಕ್ರಾಂತಿಯನ್ನು ಮಾಡಿದ ಹಲವು ವೀರರ ಹಾಗೂ ಸಾಮಾಜಿಕ ಆಂದೋಲನಗಳ ಹರಿಕಾರರನ್ನು ಕುರಿತ ಹಾಡುಗಳು, ಲಾವಣಿಗಳು, ಕತೆಗಳು, ಕಾವ್ಯಗಳನ್ನು ಕುರಿತಂತಹ ರಚನಗೆಳೂ ನಮಗೆ ದೊರೆಯುತ್ತವೆ. ಆದರೆ ಬುಡಕಟ್ಟು ಸಾಹಿತ್ಯ ಇವೆಲ್ಲಕ್ಕಿಂತ ಭಿನ್ನವಾಗಿ ಕಾಡು–ಮೇಡು, ಮರ–ಗಿಡ–ಬಳ್ಳಿ, ಪ್ರಾಣಿ, ಪಕ್ಷಿ, ಸ್ವಚ್ಛಂದತೆ, ತಮ್ಮ ಹುಟ್ಟಿನ ಕುರಿತ ಹೆಮ್ಮೆಯೊಂದಿಗೆ ಕೀಳರಿಮೆಯನ್ನು, ತಾವು ಕಾಡಿನಲ್ಲಿದ್ದೂ

ಪರಕೀಯತೆಯನ್ನು ಅನುಭವಿಸುತ್ತಿರುವ ನೋವು ಸಂಕಟ ಪರಾಧೀನತೆಯೇ ಮೊದಲಾದವುಗಳನ್ನು ಮುಖ್ಯ ವಸ್ತು ವಿಷಯವನ್ನಾಗಿರಿಸಿಕೊಂಡಿದೆ. ಮುಖ್ಯವಾಗಿ ಈ ಬುಡಕಟ್ಟುಗಳ ಸಾಹಿತ್ಯದಲ್ಲಿ ಬುಡಕಟ್ಟುಗಳ ಅನನ್ಯತೆ, ಸಾಮಾಜಿಕ ದೃಷ್ಟಿಕೋನ, ಲೋಕದೃಷ್ಟಿ ಮತ್ತು 'ತಾವು ಅನಾಥರು ಮತ್ತು ತಮ್ಮ ನೆರವಿಗೆ ಬೇರಾರು ಇಲ್ಲ' ಎಂಬ ಅನಾಥಪ್ರಜ್ಞೆಯೊಂದಿಗೆ ತಮ್ಮ ಅಸ್ತಿತ್ವವನ್ನು ಕುರಿತ ಆತಂಕವೂ ವ್ಯಕ್ತವಾಗುತ್ತಾ ಬಂದಿದೆ.

ಸಾಹಿತ್ಯವನ್ನು ಅನುಕ್ರಮವಾಗಿ ನಾವು ಈ ಕೆಳಗಿನಂತೆ ವಿಭಾಗಿಸಬಹುದು:

1. ಶಿಷ್ಟ ಸಾಹಿತ್ಯ
2. ಜನಪದ ಸಾಹಿತ್ಯ
3. ಬುಡಕಟ್ಟು ಸಾಹಿತ್ಯ.

ಇಲ್ಲಿ ಶಿಷ್ಟ ಪ್ರಥಮದರ್ಜೆಯದು, ಜನಪದ ದ್ವಿತೀಯದರ್ಜೆ, ಹಾಗೂ ಬುಡಕಟ್ಟು ತೃತೀಯ ದರ್ಜೆಯದು ಎಂಬ ಕಲ್ಪನೆ ಹೆಚ್ಚಿನವರಲ್ಲಿದೆ. ಆದರೆ ಇವುಗಳನ್ನು ಪರಸ್ಪರ ಒಂದರೊಂದಿಗೆ ಇನ್ನೊಂದನ್ನು ಆಯಾಚಿತವಾಗಿ ಹೋಲಿಸುವುದೇ ಸರಿಯಾದ ಕ್ರಮವಲ್ಲ.

ಶಿಷ್ಟ ಕಾವ್ಯಗಳ ಹಾಗೂ ಜನಪದ ಮೌಖಿಕ ಸಾಹಿತ್ಯದ ಧಾಟಿಯೇ ಬೇರೆ, ವಿಚಾರವೇ ಬೇರೆ. ಈ ಪಟ್ಟಿಯಲ್ಲಿ ಈಗಾಗಲೆ ಶಿಷ್ಟ ಮತ್ತು ಜನಪದ ಸಾಹಿತ್ಯವನ್ನು ಕುರಿತ ಅಭಿಪ್ರಾಯವನ್ನು ಡಾ. ಹಿ.ಶಿ.ರಾಮಚಂದ್ರೇಗೌಡ ಅವರು ದಾಖಲಿಸಿದ್ದಾರೆ. ಶಿಷ್ಟ ಮತ್ತು ಜನಪದ ಸಾಹಿತ್ಯದ ಜೊತೆಗೆ ಬುಡಕಟ್ಟು ಸಾಹಿತ್ಯವನ್ನು ನೋಡಬಹುದಾದ ಸಾಧ್ಯತೆಯನ್ನು ಇಲ್ಲಿ ಪರಿಚಯಿಸಲಾಗಿದೆ.[2]

| ಶಿಷ್ಟ ಸಾಹಿತ್ಯ | ಜನಪದ ಸಾಹಿತ್ಯ | ಬುಡಕಟ್ಟು ಸಾಹಿತ್ಯ |
|---|---|---|
| 1. ವ್ಯವಸ್ಥಾತ್ಮಕ : ರಕ್ಷಣಾತ್ಮಕ | ಸೃಷ್ಟ್ಯಾತ್ಮಕ : ಹೋರಾಟ | ಪ್ರಾಕೃತಿಕ; ಅಸ್ಮಿತೆಗಾಗಿ ಹೋರಾಟ |
| 2. ಜಾತಿ, ವರ್ಗ, ವರ್ಣ ಕುರಿತದ್ದು ಜನಾಂಗ, ಕುಲ, ಬುಡಕಟ್ಟು ಸಹಿತ | 2. ಜಾತಿ, ವರ್ಗ, ವರ್ಣರಹಿತ, | ಕುಲದಿಂದೊಡಗೂಡಿದ ಸಾಮುದಾಯಿಕ ಪ್ರಜ್ಞೆ |
| 3. ಇರುವುದನ್ನು ಹಂಚಿಕೊಳ್ಳುವ ಭದ್ರ ಪಡಿಸಿಕೊಳ್ಳುವ ಹೋರಾಟ | 3. ಸ್ಥಿತಿ : ಸಂಸ್ಕೃತಿಗಾಗಿ ಹೋರಾಟ | ನಾಳೆಯ ಕಲ್ಪನೆಯಿಲ್ಲದ ಇವತ್ತಿನ ಬದುಕಿನ ಸಾರ್ಥಕತೆ |
| 4. ಅನುಭೋಗ ಮೂಲ ಸೈದ್ಧಾಂತಿಕತೆ, ಶೋಷಣೆ, ಮೂಲಮಾನ, ಸುಲಭ ಸಂಪಾದನೆ, ಮಾರ್ಗಗಳಿಂದ ಯುದ್ಧ ಹಂಚಿಕೆ, ಶಾಪ-ವರ ಪಾಪ-ಪುಣ್ಯ ಇತ್ಯಾದಿ | 4.ಉತ್ಪತ್ತಿಮೂಲ, ಸೈದ್ಧಾಂತಿಕತೆ, ಒಂದಾದರ ಮೇಲೆ ಒಂದು ಕ್ರಮ ಮತ್ತು ಆದ್ಯತೆಯ ಮೇಲೆ ಶ್ರಮ ಸಾಧ್ಯತೆಯಿಂದ ಪಡೆಯುವುದು | ಶ್ರಮಮೂಲ, ಬದುಕಿಗಾಗಿ ಕೂಡಿಡುವುದಕ್ಕಲ್ಲ |

| ಶಿಷ್ಟ ಸಾಹಿತ್ಯ | ಜನಪದ ಸಾಹಿತ್ಯ | ಬುಡಕಟ್ಟು ಸಾಹಿತ್ಯ |
|---|---|---|
| 5. ವರ್ಣ, ಜಾತಿ, ವರ್ಗದೊಳಗೆ ಮಾತ್ರ ಮಾನವೀಯತೆ ಎಲ್ಲರೂ ಒಂದೇ ಎಂಬುದು ಆಡಂಬರ ಸಮೂಹದ ಸಂಘಟನಾತ್ಮಕ ತಂತ್ರ | 5. ಮಾನವತೆ ಪ್ರಧಾನ, ಮಾನವ ಮಾನವನನ್ನು ಶೋಷಿಸುವುದಿಲ್ಲ | ಪ್ರಕೃತಿಯ ಪ್ರತಿ ಜೀವಕೋಟಿಗೂ ಬದುಕುವ ಸಮಾನ ಹಕ್ಕಿದೆ ಎಂಬ ನಂಬಿಕೆ |
| 6. ವರ್ಗ, ವರ್ಣ ಇಲ್ಲದೆ ವಿಶೇಷ ಧರ್ಮ ಸಂಸ್ಕೃತಿಗೆ ಸಂಬಂಧಿಸಿದ ಸ್ಪೃಶ್ಯ ಅಸ್ಪೃಶಯತೆ ಇರುವ (ಮಾನಸಿಕ ದೈಹಿಕ) | 6. ಪರಂಪರೆ, ಜನಪದ ಪರಂಪರೆ ಗುಂಪು, ಗುಣ, ಸಾಮಾನ್ಯ ಆರ್ಥಿಕ ಸಾಮಾಜಿಕ ಸಮೂಹಗಳ ಸಂಸ್ಕೃತಿ | ಅತ್ಯಂತ ವೈಜ್ಞಾನಿಕವಾಗಿ ವಿಂಗಡಿಸಲಾದ ಕುಲದ ಕಲ್ಪನೆ. ಇಲ್ಲಿ ಎಲ್ಲರೂ ಸಮಾನರು. |
| 7. ಭೋಗದ ಜ್ಞಾನ–ವಿಜ್ಞಾನ | 7. ಜ್ಞಾನ, ಸಾಮಾನ್ಯ ಜ್ಞಾನ ವಿಜ್ಞಾನ | ಪಾರಂಪರಿಕ ಜ್ಞಾನ |
| 8. ಕೃತ–ಯೋಜಿಸಿ | 8. ಧರ್ಮ–ದೇವರು, ಪ್ರಾಕೃತಿಕ | ಪ್ರಕೃತಿ– ಆತ್ಮ– ಮನುಷ್ಯ |
| 9. ಸಿದ್ದಿಸಿದ | 9. ರೂಪ–ಬೆಳೆಯುವ | ಅಮೂರ್ತ –ಪ್ರಕೃತಿಜನ್ಯ |
| 10.ಧರ್ಮವೇ ಪುರಾಣವನ್ನು ರೂಪಿಸುತ್ತದೆ | 10.ಪುರಾಣವೇ ಧರ್ಮವಾಗುತ್ತದೆ | ಪುರಾಣದ ಮೇಲಿನ ನಂಬಿಕೆಯೇ ಸಮುದಾಯದ ಜೀವಾಳ. |
| 11. ವ್ಯಕ್ತಿ ಅಥವಾ ವರ್ಗ ಸೃಷ್ಟಿ | 11. ಸಮೂಹ ಸೃಷ್ಟಿ | ಮನುಷ್ಯ ಪ್ರೀತಿಯಿಂದ ಪ್ರಕೃತಿಯ ಪ್ರೇರಣೆಯಿಂದ ಹುಟ್ಟಿರುವಂತದ್ದು |
| 12. ಪ್ರಭು–ಪ್ರಜೆ ವ್ಯವಸ್ಥೆ | 12. ವ್ಯವಸ್ಥೆ : ಸಂಸ್ಕೃತಿಯ ಜವಾಬ್ದಾರಿ ಇರುವವರಲ್ಲೇ ನಾಯಕ ಹುಟ್ಟಬಹುದು | ಸಮುದಾಯದಿಂದಲೇ ನಾಯಕ ಹುಟ್ಟುತ್ತಾನೆ |

ಶಿಷ್ಟ ಮತ್ತು ಜನಪದಕ್ಕಿಂತ ಭಿನ್ನವಾಗಿ ನಾವು ಬುಡಕಟ್ಟು ಮೌಖಿಕ ಸಾಹಿತ್ಯವನ್ನು ಗಮನಿಸಬೇಕಾಗುತ್ತದೆ. ಬುಡಕಟ್ಟು ಸಾಹಿತ್ಯದಲ್ಲಿ ಕಾಡೇ ಸರ್ವಸ್ವ, ಕೊಡಗಿನ ಬುಡಕಟ್ಟು ಸಮುದಾಯಗಳು ಕಾಡಿನೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿವೆ. ಅವರ ಮೌಖಿಕ ಸಾಹಿತ್ಯದಲ್ಲಿ ಕಾಡು, ಪ್ರಕೃತಿ, ಮನುಷ್ಯ ಸಂಬಂಧ ಮತ್ತು ಇವುಗಳ ನಡುವಿನ ದ್ವಂದ್ವಾತ್ಮಕ ಸಂಬಂಧಗಳ ಕುರಿತ ವಿವರಗಳು ಢಾಳಾಗಿವೆ. ಈ ಮೌಖಿಕ ಸಾಹಿತ್ಯದಲ್ಲಿ ಆ ಸಮುದಾಯದ ನಂಬಿಕೆಗಳು, ಆಚಾರ, ವಿಚಾರ, ಸಂಪ್ರದಾಯ, ವಿಧಿನಿಷೇಧಗಳು ಪರೋಕ್ಷವಾಗಿ ವ್ಯಕ್ತವಾಗುತ್ತವೆ. ತಮ್ಮ ಸಮುದಾಯಕ್ಕೆ ನೀತಿ, ನಿಯಮ, ನಂಬಿಕೆಗಳನ್ನು ಪರಿಚಯಿಸುವುದರ ಮೂಲಕ ಮುಂದಿನ ಪೀಳಿಗೆಗೆ ಅವುಗಳನ್ನು ವರ್ಗಾಯಿಸುವ ಆಶಯಗಳನ್ನು ಈ ಸಮುದಾಯಗಳು ತಮ್ಮ ಮೌಖಿಕ ಸಾಹಿತ್ಯದ ಮೂಲಕ ಮಾಡಲು ಪ್ರಯತ್ನಿಸುತ್ತವೆ. ಜೊತೆಗೆ ಆ ಸಮುದಾಯದ ಒಳಗಿನ ಬದುಕು, ಬವಣೆ, ತಲ್ಲಣಗಳು, ಸುಖ, ದುಃಖ ನೋವು, ನಲಿವುಗಳು ಕೂಡ ಹರಿದುಬರುತ್ತವೆ. ಇವಲ್ಲದೆ, ರಸಮಯ, ಹಾಸ್ಯಮಯ

ಸನ್ನಿವೇಶಗಳನ್ನು ಸೃಷ್ಟಿಸಿ ಸಂಭ್ರಮಿಸುತ್ತಾ, ರೋಚಕ, ರಮ್ಯ ಕಲ್ಪನೆಗಳನ್ನು ತಮ್ಮ ಪಾತ್ರಗಳಲ್ಲಿ ಆವಾಹಿಸಿ ಆನಂದಿಸುತ್ತಾರೆ.

ಬುಡಕಟ್ಟುಗಳಲ್ಲಿ ನಂಬಿಕೆ, ನೀತಿ, ನಿಯಮ, ನಿಷೇಧಗಳು ಒಂದು ನಿರ್ದಿಷ್ಟ ಸಮುದಾಯದ ಎಲ್ಲ ಆಗು ಹೋಗುಗಳಿಗೆ ಪ್ರೇರಕ ಶಕ್ತಿಯಾಗಿ ಆ ಸಮುದಾಯದ ಜೀವಂತಿಕೆಯನ್ನು ಕಾಪಾಡುವಲ್ಲಿ ನೆರವಾಗುತ್ತವೆ. ನಂಬಿಕೆ ಎಂಬುದು ಆಚರಣೆಗಳಿಗೆ ಸೂತ್ರಧಾರಿಯಾಗಿರುತ್ತದೆ. ಈ ಎಲ್ಲ ಅಂಶಗಳು ಸಮುದಾಯದ ಸ್ಮೃತಿಯಲ್ಲಿ ಅಪ್ರಜ್ಞಾಪೂರ್ವಕವಾಗಿ ನಡೆದು ಬಂದಿರುವಂತದ್ದು. ಪರೋಕ್ಷವಾಗಿ ಇವು ಸಮುದಾಯದಲ್ಲಿ ಆಳವಾಗಿ ಬೇರು ಬಿಟ್ಟಿರುತ್ತವೆ. ಇದೇ ಮೌಖಿಕ ಸಾಹಿತ್ಯದ ಶ್ರೀಮಂತಿಕೆ ಮತ್ತು ಶಕ್ತಿ ಎಂದು ಹೇಳಬಹುದು.

ಕೊಡಗಿನಲ್ಲಿ ವಾಸವಿರುವ ಎರವರು, ಜೇನುಕುರುಬರು, ಬೆಟ್ಟಕುರುಬರು, ಸೋಲಿಗರು ಮತ್ತು ಕುಡಿಯರ ಬದುಕು ಮತ್ತು ಅವರ ಮೌಖಿಕ ಸಾಹಿತ್ಯವನ್ನು ಕುರಿತು ಪ್ರಸ್ತುತ ಪ್ರಬಂಧದಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ. ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಬಹು ಮುಖ್ಯ ಪ್ರಕಾರವಾದ ಕತೆಗಳನ್ನು ನಾವು ರಮ್ಯ ಕಥೆಗಳು, ಪರಿಸರದ ಕಥೆಗಳು, ಸಾಮಾಜಿಕ ಕಟ್ಟಳೆಗಳನ್ನು ಕುರಿತ ಕತೆಗಳು, ಪ್ರಾಣಿ ಕತೆಗಳು, ಅತಿಮಾನುಷ ಕತೆಗಳು, ನೀತಿ ಕಥೆಗಳು, ಮಕ್ಕಳ ಕಥೆಗಳು, ಹೆಣ್ಣಿನ ಚಾರಿತ್ರ್ಯದ ಕಥೆಗಳು, ಗಂಡು ಹೆಣ್ಣಿನ ಸಂಘರ್ಷದ ಕಥೆಗಳು ಮುಂತಾಗಿ ವಿಭಾಗಿಸಬಹುದು. ಹಾಡುಗಳನ್ನು ತಿಥಿ ಹಾಡು, ಮನರಂಜನೆಯ ಹಾಡು, ಮಕ್ಕಳ ಹಾಡು, ದೇವರ ಹಾಡು, ಬೇಟೆಯ ಹಾಡು ಈ ಮುಂತಾಗಿ ವಿಭಾಗಿಸಬಹುದು. ಕಾವ್ಯಗಳನ್ನು ಮಹಾಕಾವ್ಯಗಳು, ಸೃಷ್ಟಿ ಪುರಾಣಗಳೆಂದು ಹಲವು ಪ್ರಕಾರಗಳನ್ನು ಗುರುತಿಸಲಾಗಿದೆ.

## 2.2. ಕೊಡಗಿನ ಬುಡಕಟ್ಟುಗಳ ಸಂಕ್ಷಿಪ್ತ ಪರಿಚಯ

ಕೊಡಗು ಕರ್ನಾಟದ ಒಂದು ಚಿಕ್ಕ ಜಿಲ್ಲೆ. ಅಪಾರವಾದ ಪ್ರಾಕೃತಿಕ ಸಂಪತ್ತನ್ನು, ಪ್ರಾಣಿ ಸಂಪತ್ತನ್ನು ಹೊಂದಿರುವ ದಟ್ಟವಾದ ಕಾಡಿನಿಂದ ಕೂಡಿದ ಒಂದು ಸುಂದರ ಜಿಲ್ಲೆ. ಸಹ್ಯಾದ್ರಿಯ ಸಾಲಿನಲ್ಲಿರುವ ಈ ಜಿಲ್ಲೆಯು ಹಲವು ನದಿಗಳ ತವರೂರು. ಅತ್ಯಂತ ಕಡಿಮೆ ಜನಸಂಖ್ಯೆಯನ್ನು ಹೊಂದಿರುವ ಈ ಜಿಲ್ಲೆಯ ದಟ್ಟ ಕಾಡಿನಲ್ಲಿ ಸಾವಿರಾರು ವರ್ಷಗಳಿಂದ ಹಲವಾರು ಸಮುದಾಯಗಳು ಬದುಕನ್ನು ಕಟ್ಟಿಕೊಂಡಿವೆ. ಇವರನ್ನು ಕೊಡಗಿನ ಮೂಲನಿವಾಸಿಗಳು ಎಂದು ಕರೆಯಲಾಗುತ್ತದೆ. ಪ್ರಕೃತಿಯೊಂದಿಗೆ ತಾನೂ ಒಂದಾಗಿ ಬದುಕುತ್ತಾ ಕಾಡಿನಲ್ಲಿ ಜೀವನ ನಡೆಸುತ್ತಿದ್ದ ಈ ಸಮುದಾಯಗಳನ್ನು ಬದಿಗಿರಿಸಿ ನಾವು ಕೊಡಗಿನ ಚಿತ್ರಣವನ್ನು ಪೂರ್ತಿಯಾಗಿ ಕಟ್ಟಿ ಕೊಡಲು ಸಾಧ್ಯವಿಲ್ಲ. ಕೊಡಗಿನ ವೈವಿಧ್ಯಮಯ ಸಾಂಸ್ಕೃತಿಕ ಶ್ರೀಮಂತಿಕೆಗೆ ಈ ಸಮುದಾಯಗಳ ಕೊಡುಗೆ

ಅಪಾರ. ತಮ್ಮ ಭಾಷೆ, ಆಚಾರ ವಿಚಾರ, ಸಂಸ್ಕೃತಿ, ನಂಬಿಕೆ, ಸಂಪ್ರದಾಯಗಳಿಂದ ವಿಶಿಷ್ಟತೆಯನ್ನು ಇವರು ಮೆರೆದಿದ್ದಾರೆ. ಕೊಡಗಿನಲ್ಲಿ ನೆಲೆಸಿರುವ ಈ ಬುಡಕಟ್ಟುಗಳಲ್ಲಿ ನಾವು ಎರವರು, ಜೇನುಕುರುಬರು, ಬೆಟ್ಟಕುರುಬರು, ಕುಡಿಯರು, ಮಲೆಕುಡಿಯರು, ಸೋಲಿಗರು, ಮೇದರು ಈ ಮೊದಲಾದ ಸಮುದಾಯಗಳನ್ನು ಮುಖ್ಯವಾಗಿ ಗುರುತಿಸಬಹುದು. ಬೆಟ್ಟ ಗುಡ್ಡಗಳಲ್ಲಿ ದಟ್ಟವಾದ ಕಾಡಿನಿಂದ ಆವೃತವಾಗಿರುವ ಕೊಡಗು ಹಲವಾರು ಬುಡಕಟ್ಟು ಸಮುದಾಯಗಳಿಗೆ ನೆಲೆಯನ್ನು ಕಲ್ಪಿಸಿದೆ.

ರೂತ್ ಬೆನೆಡಿಕ್ಟ್ 'ಆದಿವಾಸಿ ಸಂಸ್ಕೃತಿಗಳು ಮಾನವ ಸಂಸ್ಥೆಗಳ ವೈವಿಧ್ಯವನ್ನು ಅಧ್ಯಯನ ಮಾಡಲು ಪ್ರಯೋಗಶಾಲೆ ಇದ್ದಂತೆ. ಹಲವು ಆದಿವಾಸಿ ಪ್ರದೇಶಗಳು ಹೆಚ್ಚಿನ ಪ್ರತ್ಯೇಕತೆಯಿಂದ ಕೂಡಿವೆ. ಆದ್ದರಿಂದ ಅಲ್ಲಿನ ಆದಿವಾಸಿ ಸಮಾಜಗಳಿಗೆ ತಾವು ಆಯ್ದುಕೊಂಡ ಸಂಸ್ಕೃತಿಯನ್ನು ಪರಿಷ್ಕರಿಸಿ ವಿಸ್ತರಿಸಿಕೊಳ್ಳಲು ಶತಮಾನಗಳ ಕಾಲವೇ ಬೇಕಾಗುತ್ತದೆ. ಮಾನವೀಯ ಹೊಂದಾಣಿಕೆಗಳಲ್ಲಿ ಸಾಧ್ಯವಾಗುವ ವೈವಿಧ್ಯಮಯ ವಿಭಿನ್ನತೆಗಳನ್ನು ಕುರಿತು ಅತ್ಯಗತ್ಯ ವಿವರಗಳನ್ನು ಈ ಆದಿವಾಸಿ ಸಂಸ್ಕೃತಿಗಳು ನಮಗೆ ಸಿದ್ಧರೂಪದಲ್ಲಿ ಒದಗಿಸುತ್ತವೆ. ಸಾಂಸ್ಕೃತಿಕ ಪ್ರತಿಕ್ರಿಯೆಗಳನ್ನು ಅರಿತುಕೊಳ್ಳಲು ಅವುಗಳ ವಿಮರ್ಶಾತ್ಮಕ ಪರಿಶೀಲನೆ ಅತ್ಯವಶ್ಯಕ. ಇದು ಸಾಮಾಜಿಕ ಮಾದರಿಗಳನ್ನು ನಾವು ಪಡೆದಿರುವ, ಪಡೆಯಬಹುದಾದ ಏಕೈಕ ಪ್ರಯೋಗಾಲಯ"[1] ಎಂದಿದ್ದಾರೆ. ಅಂತೆಯೇ ಕೊಡಗಿನಲ್ಲಿ ವಿಭಿನ್ನ ಸಂಸ್ಕೃತಿ, ಜೀವನಪದ್ಧತಿ ಹೊಂದಿರುವ ಬುಡಕಟ್ಟುಗಳು ಒಂದೆಡೆ ನೆಲೆಸಿರುವುದರಿಂದ ಹಲವು ಮಾನವ ಸಮಾಜಗಳನ್ನು ಬಹುಮುಖಿ ಆಯಾಮಗಳಲ್ಲಿ ಅಧ್ಯಯನ ನಡೆಸಲು ಸೂಕ್ತವಾದ ಪ್ರದೇಶವಾಗಿದೆ.

## 2.3. ಎರವರು

ಎರವರು ಬಹು ವಿಭಿನ್ನವಾದ ಸಂಸ್ಕೃತಿಯನ್ನು ಹೊಂದಿರುವ ಒಂದು ಅಲೆಮಾರಿ ಬುಡಕಟ್ಟು ಸಮುದಾಯ. ಬಹು ಹಿಂದಿನಿಂದಲೂ ಕೊಡಗು ಮತ್ತು ಕೇರಳದ ಕಾಡುಗಳಲ್ಲಿ ಇವರು ತಮ್ಮ ಬದುಕನ್ನು ಕಟ್ಟಿಕೊಂಡು ಬಂದಿದ್ದಾರೆ. ಕೊಡಗು ಮತ್ತು ಕೇರಳದ ದಟ್ಟಾರಣ್ಯಗಳಲ್ಲಿ ಈಗಿನಂತೆ ಯಾವುದೇ ಗಡಿಗಳಾಗಲೀ, ರಾಜ್ಯಗಳ ಕಲ್ಪನೆಯಾಗಲೀ ಇಲ್ಲದಿದ್ದ ಕಾಲದಿಂದಲೂ ಸ್ವಚ್ಛಂದ ಕಾಡುಗಳಲ್ಲಿ ಅಲೆಮಾರಿಗಳಂತೆ ಪಶುಪಾಲನೆ ಮತ್ತು ಕುಮ್ರಿ ಬೇಸಾಯವನ್ನು ಮಾಡುತ್ತಾ ಬಂದಿದ್ದಾರೆ. ಎರವರನ್ನು ಕೊಡಗಿನ ಮೂಲನಿವಾಸಿಗಳು ಎಂದು ಗುರುತಿಸಲಾಗಿದೆ. ಎರವರು ತಮ್ಮದೇ ಆದ ವ್ಯವಸ್ಥಿತವಾದ ಕೌಟುಂಬಿಕ ಹಾಗೂ ಒಳಾಡಳಿತ ವ್ಯವಸ್ಥೆಯನ್ನು, ವಿಶಿಷ್ಟವಾದ ಆಚಾರ, ಸಂಪ್ರದಾಯ, ಉಡುಗೆ, ಆಹಾರಪದ್ಧತಿ, ನಂಬಿಕೆಗಳನ್ನು ಹೊಂದಿದ್ದಾರೆ. ಇವರು ಅತ್ಯಂತ ಮುಗ್ಧರು ಮತ್ತು ನಿರುಪದ್ರವಿಗಳು.

ಎರವರಲ್ಲಿ ಮುಖ್ಯವಾಗಿ ನಾಲ್ಕು ಪಂಗಡಗಳಿವೆ. ಅವುಗಳೆಂದರೆ :

1. ಪಂಜರಿ ಎರವ
2. ಫಣಿ ಎರವ
3. ಕಾಕೆ ಎರವ
4. ಬಡಗ ಎರವ

ಈ ಅಧ್ಯಯನದಲ್ಲಿ ಮುಖ್ಯವಾಗಿ ಕೊಡಗಿನಲ್ಲಿ ಹೆಚ್ಚಾಗಿ ವಾಸವಿರುವ ಪಂಜರಿ ಮತ್ತು ಫಣಿ ಎರವರ ಮೌಖಿಕ ಸಾಹಿತ್ಯವನ್ನು ಕುರಿತು ಅಧ್ಯಯನ ಮಾಡಲಾಗಿದೆ.

**ಎರವರ ಕುಲಗಳು**

ಎರವರು ತಮ್ಮ ಸಮುದಾಯದ ಜೊತೆಗೆ ಕಾಡಿನಲ್ಲಿ ಗುಂಪಾಗಿ ವಾಸಿಸುತ್ತಾರೆ. ಇವರು ವಾಸಿಸುವ ಸ್ಥಳವನ್ನು 'ಹಾಡಿ' ಎಂದು ಕರೆಯುತ್ತಾರೆ. ತಮ್ಮ ಕುಲವನ್ನು 'ಚೆಮ್ಮ' ಎಂದು ಕರೆಯುತ್ತಾರೆ. ಎರವರಲ್ಲಿ ಮೂವತ್ತಮೂರು ಚೆಮ್ಮಗಳಿವೆ. ಆ ಮೂವತ್ತಮೂರು ಚೆಮ್ಮಗಳಿಗೆ ಮೂರು ಕುಲದೇವತೆಗಳಿವೆ. ಆ ಮೂವತ್ತಮೂರು ಚೆಮ್ಮಗಳನ್ನು ಅವರು ಪೂಜಿಸುವ ಮೂರು ಕುಲದೇವತೆಗಳಿಗೆ ಅನುಗುಣವಾಗಿ ಮತ್ತೆ ಮತ್ತೆ ಮೂರು ಗುಂಪುಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ

1. ತಿರ್ನೆಲ್ಲಿ ಮಂಜು
2. ಬಡಾಕ್ಕಮಂಜು
3. ಪೊದರ್ಮಂಜು

ಈ ಮೂರು ಕುಲದವರು ಮೂರು ಕುಲದೇವರುಗಳನ್ನು ಪೂಜಿಸುತ್ತಾರೆ.

1. ಬಡಾಕ್ಕಮಂಜು ಕುಲದವರು ಪೂಕರಿಮಗೆ ಕರಿಯಪ್ಪೆ ದೈವವನ್ನು ಆರಾಧಿಸುತ್ತಾರೆ. ಈ ಚೆಮ್ಮಕ್ಕೆ ಸೇರುವ ಕುಲಗಳೆಂದರೆ;

   1. ಬಡಾಕುಮಂಜು
   2. ಪೂದಡಿ
   3. ಅಂಜಿಲ
   4. ಪಾವುಡೆ
   5. ಪುತ್ತೂರು
   6. ಜೇಗಡಿ
   7. ಪನೇಲ
   8. ಚನ್ನೇದು

2. ಪೊದರ್ಮಂಜು ಕುಲದವರು  ಕರಿಚಾತೆ ಮಾಳಿಯಮ್ಮೆಯನ್ನು ಪೂಜಿಸುತ್ತಾರೆ. ಅದರಲ್ಲಿರುವ ಕುಲದರೆಂದರೆ

1. ಪೊದರ್ ಮಂಜು
2. ಬೆಳ್ಳಿಚಾಲು
3. ಐವಿಲ

3. ತಿರ್ನೆಲ್ಲಿ ಮಂಜು ಕುಲದವರು ಪಾಕತ್ತಪ್ಪನನ್ನು ಪೂಜಿಸುತ್ತಾರೆ. ಅದರಲ್ಲಿರುವ ಕುಲದವರೆಂದರೆ;

1. ತಿರ್ನೆಲ್ಲಿ ಮಂಜು
2. ಕೊಟ್ಟೈ ಚರುವಳ್ಳೀಳ
3. ಕುಪ್ಪೆತೋಡು
4. ಬೈನಾಟ್ಲತಿ
5. ಉಳಾಂಗುಚ್ಚು
6. ಮುದಂಗುಚ್ಚು
7. ಕಲ್ಲಿಲ
8. ಕಾಳಕೋಟ್ಟೈ
9. ಮುದರೆ
10. ಮಮ್ಮಟ್ಟೇರ
11. ಮಾಡಚೇರಿ
12. ಇಡಾಮಲ್ಯೆ
13. ನಾಲಪಾಡಿ
14. ಮರೆಂಗಾವು
15. ಜೈಂದ್ಯೆ
16. ತಿರುಮುಂಡ್ಯೆ
17. ಕಾರ್ಯಾಲೆ
18. ಕಲ್ಮಾನಿ
19. ಪುದುಚೇರಿ .
20. ಕಚ್ಚಲೆ
21. ಕದಮಲ್ಯೆ
22. ಬಳೇಪ

'ಕ್ರಿ.ಶ. 7ನೇ ಶತಮಾನದಲ್ಲಿ ದಕ್ಷಿಣ ಭಾರತವನ್ನು ಆಳಿದ ಪಲ್ಲವ ಮನೆತನದವರು, ಇತರೆ ರಾಜರುಗಳಾದ ಕೊಂಗರು, ಚೆಂಗಾಳ್ವರು ಮೊದಲಾದವರಿಂದ ಆಕ್ರಮಣಕ್ಕೆ ಒಳಗಾಗಿ ದಿಕ್ಕಾಪಾಲಾಗಿ ಕಾಡು ಸೇರುತ್ತಾರೆ ಮತ್ತು ಅದರಲ್ಲಿ ಒಂದು ಗುಂಪು ಕೊಡಗಿಗೂ ಬರುತ್ತದೆ. ಈಗಾಗಲೇ ಒಂದು ಬಲಿಷ್ಠವಾಗಿದ್ದ ಈ ಸಮುದಾಯವು, ಸ್ಥಳೀಯವಾಗಿ ತಮ್ಮ ಬದುಕನ್ನು ಕಟ್ಟಿಕೊಂಡಿದ್ದ ಎರವರ ಮೇಲೆ ಆಕ್ರಮಣವನ್ನು ಮಾಡುತ್ತದೆ ಎಂಬುದಕ್ಕೆ ಎರವರ ಮೌಖಿಕ ಸಾಹಿತ್ಯದಲ್ಲಿ ಸುಳಿವು ದೊರೆಯುತ್ತದೆ'[3] ಎಂಬ ಅಭಿಪ್ರಾಯವನ್ನು ಎನ್ ಪಿ ಶಂಕರ್‌ನಾರಾಯಣರಾವ್ ವ್ಯಕ್ತಪಡಿಸುತ್ತಾರೆ.

ವಯನಾಡಿಗೆ ಮಲಯಾಳಿಗಳು ಬಂದು ಸ್ಥಳೀಯವಾದ ಒಂದೆರಡು ಆದಿವಾಸಿ ಬಣಗಳೊಂದಿಗೆ ಬಹುಶಃ ಬೆಟ್ಟಕುರುಬ, ಕಾಡುಕುರುಬ ಸಮುದಾಯದವರೊಂದಿಗೆ ಸ್ನೇಹ ಗಳಿಸಿ ಅವರ ನೆರವಿನಿಂದ ಆ ಪ್ರದೇಶದಲ್ಲಿ ಅಡಿಯರೆಂದು ಹೆಸರಾಗಿರುವ ಜನರನ್ನು ಫಣಿಯರನ್ನು ಹೆದರಿಸಿ, ಬೆದರಿಸಿ ಕ್ರೂರ ಶಿಕ್ಷೆಗಳಿಗೆ ಗುರಿ ಮಾಡಿ ತಮ್ಮ ಗುಲಾಮರನ್ನಾಗಿ ಮಾಡಿಕೊಂಡರು. ಈ ಬಗ್ಗೆ ಫಣಿಯರವರ ತಿಥಿ ಹಾಡಿನಲ್ಲಿ ಸ್ಪಷ್ಟ ಉಲ್ಲೇಖವಿದೆ. 'ಇದಲ್ಲದೆ, ಎರವರ ಮೌಖಿಕ ಸಾಹಿತ್ಯದಲ್ಲಿ 'ಮಾಯಿಲಿ ಕೋಟೆಯ ತಂಬಿರನೂ, ಕಾಳಕುರುಮೆಯೂ, ಬಲೆ ಹೂಡಿ ಎಂಜಲೆಲೆ ಆಯಲು ಬಂದ ಫಣಿಯರನ್ನು ಹಿಡಿದು ನಂತರ ಅಪಾರ ಸಂಖ್ಯೆಯಲ್ಲಿ ಅವರನ್ನು ತಂದು ಗುಲಾಮರನ್ನಾಗಿ ಮಾಡಿಕೊಂಡರು'.[4] ಎಂಬುದರ ಬಗ್ಗೆ ಉಲ್ಲೇಖವಿದೆ. ಇವರು ಕಾಡುಕುರುಬರನ್ನು ಕಾಳಕುರುವೆ ಎಂದಿದ್ದಾರೆ. ಆ ಕಾಡುಕುರುಬರು ಯಾರು ಎಂಬುದರ ಬಗ್ಗೆ ಸ್ಪಷ್ಟ ಮಾಹಿತಿ ಇಲ್ಲ. ತಂಬೀರ ಎಂದರೆ ಮಳಯಾಳ ದೇಶದ ರಾಜ. ಆತನ ಹೆಂಡತಿ ತಂಬಿರಾಟಿ.

ಕೇರಳದಲ್ಲಿ ಪಂಜಿರಿ ಎರವರನ್ನು ಅಡಿಯನ್ ಎಂದೂ ಫಣಿ ಎರವರನ್ನು ಫಣಿಯನ್ ಎಂದೂ ಗುರುತಿಸುತ್ತಾರೆ. ಮಲಯಾಳಂ ಭಾಷೆಯಲ್ಲಿ ಅಡಿಯನ್ ಎಂದರೆ ಗುಲಾಮನೆಂದೂ, ಫಣಿಯನ್ ಎಂದರೆ ಕೂಲಿಕಾರನೆಂದೂ ಅರ್ಥ. ಕೊಡಗಿನಲ್ಲಿ ಇವರನ್ನು ಫಣಿ ಎರವ ಮತ್ತು ಪಂಜರಿ ಎರವ ಎಂದು ಕರೆಯಲಾಗುತ್ತದೆ. ಕೊಡವ ಭಾಷೆಯಲ್ಲಿ 'ಎರ' ಎಂದರೆ 'ಭಿಕ್ಷೆ' ಎಂತಲೂ ಎರವರು ಎಂದರೆ 'ಭಿಕ್ಷೆ ಬೇಡುವವರು' ಎಂದು ಅರ್ಥೈಸುತ್ತಾರೆ. ಒಟ್ಟಾರೆಯಾಗಿ ಇವರನ್ನು ಎರವರು ಎಂದು ಕರೆಯುತ್ತಾರೆ. ಎರವ ಸಮುದಾಯದ ಸೃಷ್ಟಿಯ ಕುರಿತ ಕಥೆಯೊಂದು ಹೀಗಿದೆ.

'ಒಮ್ಮೆ ಕಾಡಿನಲ್ಲಿ ಸಿಕ್ಕಿದ ಇಬ್ಬರು ಫಣಿ ಎರವರ ಗಂಡು ಹೆಣ್ಣುಗಳನ್ನು ರಾಜನು(ಇಪ್ಪಿ ಮಲೆಯ ತಂಬೀರ) ಹಿಡಿದು ತರುತ್ತಾನೆ. ಅವರ ಆಕಾರವನ್ನು ಕಂಡು ರಾಜನ ಪರಿವಾರವು ಅವರನ್ನು ದೆವ್ವದ ಮಕ್ಕಳು(ಮಾನಾತುರ ಮಕ್ಕಳು) ಎಂದು ಕರೆಯುತ್ತಾರೆ. ಅವರಿಬ್ಬರೂ ಅಣ್ಣ-ತಂಗಿಯರು ಎಂಬುದು ರಾಜನಿಗೆ ತಿಳಿಯುತ್ತದೆ. ಆ ರಾಜನ(ತಂಬೀರನ) ಹೆಂಡತಿ(ತಂಬಿರಾಟಿ)ಯು ನಗ್ನರಾಗಿದ್ದ ಅವರಿಬ್ಬರಿಗೂ ಏಳುಮೊಳ ಬಟ್ಟೆ ನೀಡುತ್ತಾಳೆ. ಅವರಿಬ್ಬರೂ ಅದನ್ನು ಅರ್ಧ ಭಾಗ

ಮಾಡಿ ಸೊಂಟದಿಂದ ಕೆಳಕ್ಕೆ ಕಟ್ಟಿಕೊಳ್ಳುತ್ತಾರೆ. ಹೀಗೆ ತಂಬೀರನ ಮನೆಯ ಜೀತದಾಳುಗಳಾಗಿ ಇವರು ಬೆಳೆಯುತ್ತಾರೆ. ಬೆಳೆದು ದೊಡ್ಡವರಾದ ಮೇಲೆ ಇವರಿಬ್ಬರನ್ನು ಯಾರೂ ಮದುವೆಯಾಗಲು ಮುಂದೆ ಬಾರದ ಕಾರಣ ರಾಜ 'ನೀವು ಸೊಂಟದಿಂದ ಕೆಳಕ್ಕೆ ಸತಿಪತಿಗಳಾಗಿಯೂ ಸೊಂಟದಿಂದ ಮೇಲಕ್ಕೆ ಅಣ್ಣತಂಗಿಯಾಗಿ ಬಾಳಿ' ಎನ್ನುತ್ತಾನೆ. ಅಂತೆಯೇ ಅವರು ಗಂಡ ಹೆಂಡತಿಯರಾಗಿ ಬಾಳುತ್ತಾರೆ. ಗಂಡನ ಹೆಸರು 'ಅಂಜಿಲಾತು ಅಪ್ಪೆಮುತ್ತಿ' ಹೆಣ್ಣಿನ ಹೆಸರು 'ಪಾಪಲಾತ್ತು ಅಮ್ಮೆಮುತ್ತಿ'. ಇವರಿಗೆ ಐದು ಗಂಡು, ಐದು ಹೆಣ್ಣುಮಕ್ಕಳು ಹುಟ್ಟುತ್ತಾರೆ. ಇವರ ಸಂತಾನವೇ ಫಣಿ ಎರವರು. ನಾವು ಅಣ್ಣ-ತಂಗಿಯರಿಂದ ಹುಟ್ಟಿದವರು ಎಂಬ ಕೀಳರಿಮೆ ಅವರಲ್ಲಿ ಇಂದಿಗೂ ನೆಲೆಸಿದೆ. ಅಣ್ಣ ತಂಗಿಯರಿಗೆ ಹುಟ್ಟಿದ್ದರಿಂದಲೇ ನಾವು ಹೀನಾಯ ಸ್ಥಿತಿಯಲ್ಲಿ ಬದುಕುತ್ತಿದ್ದೇವೆ ಎಂದು ಇವರು ಹಲುಬುತ್ತಾರೆ. ಎರವರು 'ಇಪ್ಪಿಮಲೆ ತಂಬೀರ'ನನ್ನು ಹಾಗೂ ಆತನ ಹೆಂಡತಿ 'ತಂಬಿರಾಟಿ'ಯನ್ನು ದೈವಗಳಾಗಿ ಪೂಜಿಸುತ್ತಾರೆ.

ಒಂದು ಐತಿಹ್ಯದ ಪ್ರಕಾರ ಎರವರು ತಾವು ರಾವಣಾಸುರನ ಸಂತತಿಯವರು ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಹಿಂದೆ ರಾವಣನು ಈಗಿನ ಕೊಡಗು ಮತ್ತು ಕೇರಳದ ಗಡಿಯಂತಿರುವ ಬ್ರಹ್ಮಗಿರಿ ಪರ್ವತದಲ್ಲಿ ವಾಸಿಸುತ್ತಿದ್ದನಂತೆ. ಒಮ್ಮೆ ರಾಮ, ಲಕ್ಷ್ಮಣ ಸೀತೆಯರು ವನವಾಸಕ್ಕಾಗಿ ಈ ಕಾಡಿಗೆ ಬಂದಾಗ ರಾವಣಾಸುರನು ಸೀತೆಯನ್ನು ಅಪಹರಿಸಿಕೊಂಡು ಹೋದ ದಾರಿ ಇದೇ ಬೆಟ್ಟದ ಸಾಲು ಎನ್ನುತ್ತಾರೆ. ನಂತರ ರಾಮ ರಾವಣರ ಯುದ್ಧದಲ್ಲಿ ರಾವಣ ಸಾಯುತ್ತಾನೆ. ಅಲ್ಲಿಂದ ರಾಮ, ಸೀತೆಯನ್ನು ಕರೆದುಕೊಂಡು ಇದೇ ದಾರಿಯಲ್ಲಿ ಬರುತ್ತಿರುವಾಗ ಶಿವನನ್ನು ಪೂಜಿಸಲು ಹನುಮಂತನಿಗೆ ಶಿವಲಿಂಗ ತರಲು ಹೇಳಿ ಕಳುಹಿಸುತ್ತಾನೆ. ಆದರೆ ಎಷ್ಟು ಹೊತ್ತಾದರೂ ಹನುಮಂತ ಬಾರದಿದ್ದಾಗ ಪೂಜೆಗೆ ವಿಳಂಬವಾಗಬಾರದು ಎಂಬ ಕಾರಣದಿಂದ ರಾಮ ತಾನೇ ಮರಳಿನಿಂದ ಒಂದು ಲಿಂಗ ತಯಾರಿಸಿ ಪೂಜಿಸುತ್ತಾನೆ. ಆ ಪೂಜೆಗೆ ಅಭಿಷೇಕ ಮಾಡಲು ಎಲ್ಲೂ ನೀರು ಸಿಗದಿದ್ದಾಗ ಲಕ್ಷ್ಮಣ ತನ್ನ ಬಲದಿಂದ ದೇವಾಸಿ ಬೆಟ್ಟಕ್ಕೆ ಬಾಣ ಬಿಟ್ಟು ನೀರು ತರಿಸುತ್ತಾನೆ. ಆಗ ಬೆಟ್ಟದಿಂದ ಜಲ ಉಕ್ಕಿ ಬರುತ್ತದೆ. ಅದು ಕೊಡಗಿನಲ್ಲಿ ಲಕ್ಷ್ಮಣ ತೀರ್ಥ ಎಂದು ಪ್ರಸಿದ್ಧಿಯಾಗಿದೆ. ಅಂತೆಯೇ ಪೂಜೆ ಮುಗಿದ ನಂತರ ಹನುಮಂತ ಲಿಂಗ ತರುತ್ತಾನಾದರೂ ಆಗಲೇ ಪೂಜೆ ಮುಗಿದಿರುವುದು ಕಂಡು ಬೇಸರಗೊಳ್ಳುತ್ತಾನೆ. ಆಗ ರಾಮ ಹನುಮಂತನಿಗೆ ಬೇಸರವಾಗಬಾರದು ಎಂಬ ಕಾರಣಕ್ಕೆ 'ಏರ್ಮಾಡು' ಎಂಬ ಸ್ಥಳದಲ್ಲಿ ಹನುಮಂತ ತಂದ ಲಿಂಗ ಪ್ರತಿಷ್ಠಾಪಿಸಿ, ರಾಮನು ಸೃಷ್ಟಿಸಿದ ಲಿಂಗಕ್ಕಿಂತ ಮೊದಲು ಹನುಮಂತ ತಂದ ಲಿಂಗಕ್ಕೆ ಪೂಜೆ ಸಲ್ಲಿಸುವಂತೆ ಏರ್ಪಾಡು ಮಾಡುತ್ತಾನೆ ಎಂಬುದು ಪುರಾಣದ ಕತೆ. ರಾಮ ಮಾಡಿದ ಮರಳು ಲಿಂಗವೇ ಕೊಡಗಿನ ಇರ್ಪು ಜಲಾಶಯದ ಬಳಿ ಇರುವ ರಾಮೇಶ್ವರ ಲಿಂಗ. ಇಲ್ಲಿ ಪ್ರತಿ

ಶಿವರಾತ್ರಿಯಂದು ಭರ್ಜರಿ ಪೂಜೆ ನಡೆಯುತ್ತದೆ. ಈ ಪೂಜೆಯ ಸಂದರ್ಭದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಎರವರು ಪಾಲ್ಗೊಳ್ಳುತ್ತಾರೆ. ಈ ಕತೆಯನ್ನು ಉದಾಹರಿಸುವುದರ ಮೂಲಕ ತಾವು ರಾವಣನ ಸಂತಾನವೆಂದು ಹೇಳಿಕೊಳ್ಳುತ್ತಾರೆ. ಆ ಮೂಲಕ ತಮ್ಮ ಮೂಲವನ್ನು ಪುರಾಣ ಕಾಲದ ನಾಯಕರುಗಳೊಂದಿಗೆ ಸಮೀಕರಿಸಿ ತಾವು ಶ್ರೇಷ್ಠ ಕುಲದವರೆಂದು ಹೆಮ್ಮೆಪಟ್ಟುಕೊಳ್ಳುತ್ತಾರೆ.

## 2.4. ಜೇನುಕುರುಬರು

ಜೇನುಕುರುಬ ಸಮುದಾಯವು ಜೇನು ಸಂಗ್ರಹಿಸುವುದನ್ನೇ ತಮ್ಮ ಕುಲವೃತ್ತಿಯನ್ನಾಗಿಸಿಕೊಂಡು ಬದುಕುತ್ತಿದ್ದವರು. ಇವರು ಜೇನು ಕೊಯ್ಯುವುದಲ್ಲಿ ಪರಿಣತರು. ಆದ್ದರಿಂದಲೇ ಇವರು ತಮ್ಮನ್ನು 'ಜೇನುಕುರುಬರು' ಎಂದು ಹೆಮ್ಮೆಯಿಂದ ಕರೆದುಕೊಳ್ಳುತ್ತಾರೆ. ಹಿಂದೆ ಈ ಎಲ್ಲಾ ಕುರುಬರು ಒಂದೇ ಮೂಲದವರಾಗಿದ್ದು ಅನಂತರದಲ್ಲಿ ಜೇನುಕುರುಬ, ಬೆಟ್ಟಕುರುಬ, ಕಾಡುಕುರುಬ, ಮುಳ್ಳುಕುರುಬ ಎಂದು ಬೇರೆ ಬೇರೆ ಹೆಸರಿನಿಂದ ಗುರುತಿಸಿಕೊಂಡಿರಬಹುದು ಎಂದು ಊಹಿಸಲಾಗುತ್ತದೆ. ಇವರು ಕೊಡಗು, ಮೈಸೂರು ಜಿಲ್ಲೆಯ ಹೆಚ್.ಡಿ.ಕೋಟೆ, ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆಗಳಲ್ಲಿ ಹೆಚ್ಚಾಗಿ ದಟ್ಟ ಅರಣ್ಯದ ನಡುವೆ ವಾಸಿಸುತ್ತಿದ್ದಾರೆ.

ಇವರು ತಮ್ಮ ಸಮುದಾಯದೊಂದಿಗೆ ಗುಂಪು ಗುಂಪಾಗಿ ಬಿದಿರು ಮತ್ತು ಮಣ್ಣಿನಿಂದ ಮನೆಗಳನ್ನು ಕಟ್ಟುತ್ತಾರೆ. ಮತ್ತಿ ಎಲೆ, ಮುತ್ತುಗದ ಎಲೆ, ಸೊಳ್ಳೆಸೊಪ್ಪು, ಸಾಗುವಾನಿ ಸೊಪ್ಪು ಮೊದಲಾದವುಗಳನ್ನು ತಮ್ಮ ಮನೆಯ ಮಾಡಿಗೆ ಹಾಸುತ್ತಾರೆ. ಇತ್ತೀಚೆಗೆ ಹಂಚಿಹುಲ್ಲು, ದಬ್ಬೆಹುಲ್ಲು, ಮೂಡೆಹುಲ್ಲು ಹಾಕಿ ಮನೆ ಕಟ್ಟುತ್ತಾರೆ. ಹೀಗೆ ಕಟ್ಟಿದ ಮನೆ ಹಲವಾರು ವರ್ಷಗಳ ಕಾಲ ಬಾಳಿಕೆ ಬರುತ್ತದೆ. ಇವರದ್ದು ಸಮೂಹ ಜೀವನ. ತಾವು ವಾಸ ಮಾಡುವ ಮನೆಗಳ ಸಮೂಹವನ್ನು ಇವರು 'ಹಾಡಿ' ಎಂದು ಕರೆಯುತ್ತಾರೆ. ಇವರು ತಮ್ಮದೇ ಆದ ಪ್ರತ್ಯೇಕ ಭಾಷೆಯನ್ನು ಹೊಂದಿದ್ದು ಈ ಭಾಷೆಯನ್ನು 'ಜೇನುನುಡಿ' ಎಂದು ಕರೆಯಲಾಗಿದೆ.

ಜೇನುಕುರುಬರಲ್ಲಿ ಮುಖ್ಯವಾಗಿ ಐದು ಮನೆತನಗಳಿವೆ. ಈ ಮನೆತನಗಳನ್ನು ಜಮ್ಮದ ಆಧಾರದ ಮೇಲೆ ವಿಂಗಡಿಸಲಾಗಿದೆ. ಜಮ್ಮ ಎಂದರೆ ಜೇನುಕುರುಬರು ವಾಸಿಸುವ ನಿರ್ದಿಷ್ಟ ಭೌಗೋಳಿಕ ಪರಿಸರದ ವ್ಯಾಪ್ತಿ. ಜೇನುಕುರುಬರಲ್ಲಿರುವ ಪ್ರಮುಖ ಮನೆತನಗಳು ಯಾವುವೆಂದರೆ,

1. ಗುಂಡ್ರೆ ಮನೆತನ
2. ಹೊಸಳ್ಳಿ ಮನೆತನ
3. ಐಯ್ಯನ್‌ಪುರ ಮನೆತನ
4. ಮುತ್ತಿಗೆ ಮನೆತನ

5. ಕುರ್ಸೆ ಮನೆತನ

6. ಬಳ್ಳೆಗದ್ದೆ ಮನೆತನ

7. ಸೇಲ್ರು ಮನೆತನ

ಕಿಕ್ಕೇರಿ ನಾರಾಯಣ ಅವರು 'ಈ ಹಿಂದೆ ಜೇನುಕುರುಬರು ಗಂಗರಾಜರ ಆಳ್ವಿಕೆಯಲ್ಲಿದ್ದಿರ ಬಹುದಾದ ಕಾರಣ ಜೈನರಸರ ಪ್ರಭಾವ ಇವರ ಮೇಲಾಗಿಬರಹುದು. ಆದ್ದರಿಂದಲೇ ಇವರು ಬೊಮ್ಮ, ಬೊಮ್ಮಿ, ಕ್ಯಾತ(ಈತ) ಮಾಚ, ಮಾಚಿ ಎಂಬ ಹೆಸರುಗಳನ್ನು ಇಟ್ಟುಕೊಳ್ಳುತ್ತಾರೆ'[5] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಹಿಂದೆ ಜೇನುಕುರುಬರು ತಮ್ಮ ಸಮುದಾಯಕ್ಕೆ ಸೇರದವರನ್ನು ಕಂಡರೆ ಭಯ ಮತ್ತು ನಾಚಿಕೆಯಿಂದ ಅವಿತುಕೊಳ್ಳುತ್ತಿದ್ದರು. ಇವರು ಬಹಳ ಸ್ವಾಭಿಮಾನಿಗಳು, ಹಸಿವಿನಿಂದ ಇದ್ದರೂ ಯಾರಲ್ಲೂ ಕೈಚಾಚುವವರಲ್ಲ. ಶ್ರಮಜೀವಿಗಳಾದ ಈ ಸಮುದಾಯದವರು ಕುಟುಂಬ ನಿರ್ವಹಣೆಗಾಗಿ ಎಂತಹುದೇ ಸಾಹಸಕ್ಕೂ ಹಿಂಜರಿಯುವುದಿಲ್ಲ.

ಜೇನುಕುರುಬರು ಪ್ರಾಣಿಗಳ ಸೂಕ್ಷ್ಮ ಚಲನವಲನವನ್ನು ಅರಿಯುವ ಸಾಮರ್ಥ್ಯವನ್ನು ಹೊಂದಿದ್ದಾರೆ. ತಾವು ವಾಸಿಸುವ ಕಾಡಿನ ಪ್ರತಿ ಇಂಚು ಇಂಚನ್ನು ಬಲ್ಲ ಇವರು, ಪ್ರಕೃತಿಯೊಂದಿಗೆ ಅನ್ಯೋನ್ಯ ಸಂಬಂಧವನ್ನು ಹೊಂದಿದ್ದಾರೆ. ಆನೆಗಳನ್ನು ಹಿಡಿಯುವುದರಲ್ಲೂ, ಪಳಗಿಸುವುದರಲ್ಲೂ ಇವರು ಬಹಳ ಚಾಣಾಕ್ಷರು. ಆನೆಗಳನ್ನು ಪಳಗಿಸುವ, ಸಂವಹನ ಮಾಡುವ ಕಲೆಯನ್ನು ಇವರು ಹೊಂದಿದ್ದಾರೆ. ಕಾಡಾನೆಗಳ ಕಿವಿ ತುಂಬಾ ಸೂಕ್ಷ್ಮವಾಗಿರುತ್ತದೆ. ಆನೆಯ ಮೇಲೆ ಕುಳಿತು ತನ್ನ ಕಾಲಿನಿಂದಲೇ ಆನೆಯನ್ನು ನಿಯಂತ್ರಿಸುತ್ತಾರೆ. ಹಿಂದಿನಿಂದಲೂ ಇವರು ಮೈಸೂರಿನ ರಾಜರೊಡನೆ ನಿಕಟ ಸಂಬಂಧವನ್ನು ಹೊಂದುತ್ತಾ ಬಂದಿದ್ದಾರೆ. ಆದ್ದರಿಂದ ಮೈಸೂರು ಮಹಾರಾಜರ ಆಳ್ವಿಕೆಯ ಕಾಲದಲ್ಲಿ ಹೆಚ್.ಡಿ.ಕೋಟೆಯ ಭಾಗದಲ್ಲಿ ಆನೆಗಳನ್ನು ಹಿಡಿದು ಪಳಗಿಸಲು ಮೈಸೂರು ಅರಸರು ಇವರ ಸಹಾಯವನ್ನು ಪಡೆಯುತ್ತಿದ್ದರು.

ಮೈಸೂರು ರಾಜರು ಕಾಕನಕೋಟೆ ಅರಣ್ಯಕ್ಕೆ ಖೆಡ್ಡಾ ಕಾರ್ಯಾಚರಣೆಗೆ ಬಂದರೆ ಬುಡಕಟ್ಟುಗಳಿಗೆ ಸಂಭ್ರಮ. ಯುಗಾದಿ ಹಬ್ಬದ ಸಮಯವಾದರೆ ಹಾಡು ಕುಣಿತ ಕೋಲಾಟವೂ ಸೇರಿ ಸಂಭ್ರಮ ಹೆಚ್ಚಾಗುತ್ತಿತ್ತು. ಅಂದು ಬೆಟ್ಟಕುರುಬರು, ಜೇನುಕುರುಬರು, ಸೋಲಿಗರು, ಎರವರು ಸೇರಿದಂತೆ ಇತರೆ ಬುಡಕಟ್ಟುಗಳೆಲ್ಲ ಒಂದೆಡೆ ಸೇರಿ ಬೆಂಕಿ ಸುತ್ತಾ ಕುಣಿಯುತ್ತಿದ್ದರು. ಮೈಸೂರು ರಾಜರಿಗೂ ಈ ಬುಡಕಟ್ಟುಗಳಿಗೂ ಒಂದು ಅನ್ಯೋನ್ಯ ಸಂಬಂಧವಿತ್ತು. ಇಂದು ಕೂಡ ದಸರಾ ಹಬ್ಬದಲ್ಲಿ ಇದೇ ಬುಡಕಟ್ಟುಗಳು ತಾವು ಪಳಗಿಸಿದ ಆನೆಗಳೊಂದಿಗೆ ಬಂದು ದಸರಾದ ಅಂಬಾರಿಯ ಮೆರವಣಿಗೆಯನ್ನು ನಡೆಸಿಕೊಡುತ್ತಾರೆ. ಇದು ಆ ಕಾಲದಿಂದಲೂ ನಡೆದುಬಂದಿದೆ. ಈ ಜನರು 2 ಗುಂಪು ಮಾಡಿಕೊಂಡು ಪ್ರಾಣಿ ಪಕ್ಷಿ ಗಿಡ ಮರ ಬಳ್ಳಿ ಹಣ್ಣು ಗೆಡ್ಡೆ ಗೆಣಸುಗಳ ಹೆಸರು ಹೇಳುವ

ಸ್ಪರ್ಧೆ ಏರ್ಪಡಿಸುತ್ತಿದ್ದರು. ಯಾವ ಗುಂಪಿನವರು ಹೆಚ್ಚು ಹೆಸರು ಹೇಳುತ್ತಿದ್ದರೋ ಅವರು ಗೆದ್ದಂತೆ. ಉದಾಹರಣಗೆ:

1. ಬೆಳದಿಂಗೋಡೆ ಬೆಳದಿಂಗೋಡೆ ಲಾಲಾ ಲಿಕ್ಕಿ
   ಜಿಂಕೆ ಕಾಲ ಲಾಲಾಲಿಕ್ಕಿ,
   ಬೆಳದಿಂಗೋಡೆ ಬೆಳದಿಂಗೋಡೆ ಲಾಲಾ ಲಿಕ್ಕಿ
   ಹಂದಿಕಾಲು ಲಾಲಾಲಿಕ್ಕಿ
   ಹೀಗೇ ನರಿಕಾಲು, ಆನೆಕಾಲು....
   ಇದು ಪ್ರಾಣಿಗಳ ಪರಿಚಯ ಮಾಡಿಸಿದರೆ
   'ಬಾಗು ಬಾಗು ಹೊನ್ನೆ ಮರವೇ ನೆಲಾನೆ ಬಾಗು
   ಬಾಗು ಬಾಗು ಮತ್ತಿ ಮರಾನೆ ನೆಲಾನೆ ಬಾಗು
   ಬಾಗು ಬಾಗು.....'

ಈ ಹಾಡು ಅಸಂಖ್ಯಾತ ಮರಗಳ ಹೆಸರುಗಳನ್ನು ಪರಿಚಯಿಸುತ್ತಿತ್ತು. ರಾತ್ರಿಯಿಡೀ ಸಾಗುತ್ತಿದ್ದ ಈ ಸ್ಪರ್ಧೆ ಅವರಿಗಿದ್ದ ನಿಸರ್ಗದ ಅಗಾಧ ಜ್ಞಾನದ ಪರಿಚಯವನ್ನು ಅನಾವರಣಗೊಳಿಸುತ್ತಿತ್ತು. ಹೀಗೆ ವಿವಿಧ ಗಿಡ, ಮರ, ಪ್ರಾಣಿ ಪಕ್ಷಿಗಳ ಹೆಸರನ್ನು ಪುನರ್ಮನನ ಮಾಡಿಕೊಳ್ಳುವುದರೊಂದಿಗೆ ಅವರ ಪ್ರಾಕೃತಿಕ ಜ್ಞಾನ ಪ್ರದರ್ಶನವೂ ನಡೆಯುತ್ತಿತ್ತು.

ಕಾಡಿನಲ್ಲಿ ಇವರ ಮುಖ್ಯ ಆಹಾರ ವಿವಿಧ ಜಾತಿಯ ಗೆಣಸುಗಳು. ಇವರು ಮುಖ್ಯವಾಗಿ, ನೂರೆ ಗೆಣಸು, ಕಾಲ್ಗೆಣಸು, ವಾಲ್ ಗೆಣಸು, ನಾರಾ ಗೆಣಸು, ಕೊರ್ಣೆ, ನಾರಾಬಾಲಾ ಗೆಣಸು, ಎಕ್ಕ್ ಗೆಣಸು, ಗುಮ್ಮ ಗಾಸು, ಉಗುನಿ, ಆಲೆ ಗೆಣಸು ಮೊದಲಾದ ವಿವಿಧ ಜಾತಿಯ ಗೆಣಸನ್ನು ಆಹಾರವಾಗಿ ಸೇವಿಸುತ್ತಾರೆ. ಅಲ್ಲದೆ ಕಾಡಿನಲ್ಲಿ ಸಿಗುವ ಕಾಡಾಗಲ ಸೊಪ್ಪು, ತಗತೆ ಸೊಪ್ಪು, ಎಲುಗಿರಿ ಸೊಪ್ಪು, ಹಣ್ಣೆ ತುಂಬೆ, ಕನ್ನೆ ಮಾಡ್ಲೆ, ಸೀಗೆ, ಕಟ್ಟ್ ಸೀಗೆ, ಬಳ್ಳೇ, ಒನಗಲೆ, ದೊಡ್ಡ ಒನಗಲೆ, ಸಣ್ಣ ಒನಗಲೆ, ಏರಿ ಸಾಸಿವೆ, ಬೂದಿ, ಬರಗಣಗಲೆ, ಕೆಂಪುಗಣಿಕೆ ಕರಿಗಣಿಕೆ, ಮುಳ್ಳಂದಿ ಸೊಪ್ಪು, ಸಿನಕೆ, ಬೆಂಡ್ಲೆ, ಕರಿಕಡ್ಡಿ, ಗಂಗುಂಗೆ, ತೊಂಡೆ, ಹಾಲೆ, ತಣುವಣ್ಣ, ಲಿಂಗದೊಂಡೆ ಸೊಪ್ಪು ಮೊದಲಾದ ಅಪಾರ ಪೌಷ್ಟಿಕಾಂಶವುಳ್ಳ ಸೊಪ್ಪನ್ನು ಆಹಾರವಾಗಿ ಸೇವಿಸುತ್ತಾರೆ.

## 2.5. ಸೋಲಿಗರು

ಸೋಲಿಗ ಸಮುದಾಯವು ಕರ್ನಾಟಕದ ಪ್ರಮುಖ ಬುಡಕಟ್ಟುಗಳಲ್ಲಿ ಒಂದಾಗಿದೆ. ಈ ಸಮುದಾಯವು ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕು, ಹೆಚ್.ಡಿ.ಕೋಟೆ ತಾಲ್ಲೂಕು,

ಹಾಗೆಯೇ ಚಾಮರಾಜನಗರ ಜಿಲ್ಲೆಯಲ್ಲಿ ಗುಂಡ್ಲುಪೇಟೆ, ಯಳಂದೂರು, ಕೊಳ್ಳೇಗಾಲಗಳಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದಾರೆ. ಕೊಡಗಿನ ಸೋಮವಾರಪೇಟೆ ಮತ್ತು ವಿರಾಜಪೇಟೆಯಲ್ಲಿ ಕಡಿಮೆ ಪ್ರಮಾಣದಲ್ಲಿ ವಾಸವಿದ್ದಾರೆ. ಬಿಳಿಗಿರಿ ರಂಗನಬೆಟ್ಟ ಮತ್ತು ಮಹದೇಶ್ವರಬೆಟ್ಟ ಇವರ ಮುಖ್ಯ ಆವಾಸ ಸ್ಥಾನ. ಇವರು ತಮ್ಮದೇ ಆದ ಪ್ರತ್ಯೇಕ ಭಾಷೆಯನ್ನು ಹೊಂದಿದ್ದು ಅದನ್ನು 'ಸೋಲಿಗ ನುಡಿ' ಎಂದು ಕರೆಯಲಾಗುತ್ತದೆ. ಇದು ಕನ್ನಡ, ತಮಿಳು ಹಾಗೂ ತೆಲುಗು ಮಿಶ್ರಿತವಾಗಿದ್ದು, ದ್ರಾವಿಡದ ಒಂದು ಉಪಭಾಷೆಯಾಗಿದೆ. ಕೆಲವು ಭಾಗದ ಸೋಲಿಗರು ತೆಲುಗು ಮಿಶ್ರಿತ ಕನ್ನಡವನ್ನು, ಕೆಲವರು ತಮಿಳು ಮಿಶ್ರಿತ ಕನ್ನಡವನ್ನು ಮಾತನಾಡುತ್ತಾರೆ. ಇವರು ತಮ್ಮ ಸಮುದಾಯದ ಜೊತೆ ಗುಂಪು ಗುಂಪಾಗಿ ವಾಸಿಸುತ್ತಾರೆ. ಸೋಲಿಗರು ತಾವು ವಾಸಿಸುವ ಪ್ರದೇಶವನ್ನು 'ಪೋಡು' ಎಂದು ಕರೆಯುತ್ತಾರೆ. ಒಂದು ಪೋಡಿನಲ್ಲಿ ಇಪ್ಪತ್ತರಿಂದ ಮೂವತ್ತು ಮನೆಗಳಿರುತ್ತವೆ ಮತ್ತು ತಮ್ಮದೇ ಆದ ಸ್ವಯಂ ಆಡಳಿತ ವ್ಯವಸ್ಥೆಯನ್ನು ಹೊಂದಿದ್ದಾರೆ. ಪೋಡು ಎಂದರೆ ಮನೆಗಳ ಸಮೂಹ ಅಥವಾ ಸೋಲಿಗರ ಗ್ರಾಮವ್ಯವಸ್ಥೆ. ಅಲ್ಲದೆ ಇವರು ಪೋಡನ್ನು ದೊಡ್ಡಿ, ಹಾಡಿ ಎಂದೂ ಸಹ ಕರೆಯುತ್ತಾರೆ. ಇವರು ಇತರೆ ಬುಡಕಟ್ಟುಗಳಾದ ಜೇನುಕುರುಬರು, ಎರವರು, ಬೆಟ್ಟಕುರುಬರಂತೆ ಕಾಡನ್ನೇ ಅವಲಂಬಿಸಿ ಬದುಕುತ್ತಿದ್ದಾರೆ.

**ಸೋಲಿಗರ ಹೆಸರಿನ ಉಗಮ**

ತಮಿಳುನಾಡು ಹಾಗೂ ಕರ್ನಾಟಕದ ಗಡಿಭಾಗವೇ ಇವರ ಮುಖ್ಯ ವಾಸಸ್ಥಳವಾಗಿದ್ದುದರಿಂದ ಸೋಲಿಗ ಎಂಬ ಪದವು 'ಸೋಲೈ' ಎಂಬ ತಮಿಳು ಪದದಿಂದ ನಿಷ್ಪನ್ನವಾಗಿದೆ ಎಂಬುದಾಗಿ ಎ ಎ.ಡಿ.ಲೂಯಿಸ್' ಅವರು[6] ಅಭಿಪ್ರಾಯ ಪಡುತ್ತಾರೆ. ತಮಿಳಿನಲ್ಲಿ ಸೋಲೈ ಎಂದರೆ 'ದಟ್ಟ ಕಾಡು', 'ಕಾನನ', 'ಪೊದರು'. ಸೋಲಿಗರನ್ನು ತಮಿಳಿನಲ್ಲಿ ಶೋಲಿಗ, ಶೋಲಗ, ಶೋಲಿಗರ್, ಕಾಟ್‌ಶೋಲಿಗರ್ ಎಂಬುದಾಗಿ ಹಲವು ಹೆಸರುಗಳಿಂದ ಕರೆಯುತ್ತಾರೆ. 'ಸೋಲಾ' ಎಂದರೆ 'ಬೆಟ್ಟ ಪ್ರದೇಶ' ಅಥವಾ 'ಬಿದಿರಿನಿಂದ ಕೂಡಿದ ಕಾಡು' ಎಂಬರ್ಥವೂ ಇದೆ. ಸೋಲಿಗ ಎಂಬ ಪದವನ್ನು ಅನಂತಕೃಷ್ಣ ಅಯ್ಯರ್ ಅವರು ಸೋಲಿಯ ಎಂದೂ,[7] ಮೊರಬ್‌ರವರು ಸೋಲಿಗ ಎಂದು[8] ಭಿನ್ನ ಭಿನ್ನವಾಗಿ ಹೆಸರಿಸಿದ್ದಾರೆ.

ಈಗಿನ ತಮಿಳುನಾಡಿನಲ್ಲಿರುವ ಕೊಯಮತ್ತೂರು ಜಿಲ್ಲೆಯ ಸತ್ಯಮಂಗಲದಿಂದ ಹದಿನೇಳು ಮೈಲಿ ದೂರದಲ್ಲಿರುವ 'ದಿಂಬಂ' ಎಂಬ ಸಮುದ್ರ ಮಟ್ಟದಿಂದ 1800 ಅಡಿ ಎತ್ತರದಲ್ಲಿರುವ ದಟ್ಟವಾದ ಅರಣ್ಯ ಪ್ರದೇಶವೇ ಸೋಲಿಗರ ಮೂಲಸ್ಥಾನವಿರಬಹುದು ಎಂದು ಸಂಶೋಧನಾಕಾರರು ಅಭಿಪ್ರಾಯ ಪಡುತ್ತಾರೆ. ಥರ್ಸ್ಟನ್ ಅವರು ಉರಾಳಿ ಸೋಲಿಗರನ್ನು ಕುರಿತು ವಿವರಿಸುವಾಗ 'ಈ ಉರಾಳಿ ಸೋಲಿಗರು ತಮ್ಮ ಪೋಡಿನಲ್ಲಿ ಯಾರಾದರೂ ತೀರಿಹೋದರೆ ಸತ್ತ ವ್ಯಕ್ತಿಯ

ಮೂಳೆಯೊಂದನ್ನು ಅನ್ನದೊಂದಿಗೆ ಬೇಯಿಸಿ ಪೋಡಿನಲ್ಲಿರುವ ಎಲ್ಲರೂ ತಿನ್ನುವ ಸಂಪ್ರದಾಯ ರೂಡಿಯಲ್ಲಿತ್ತಂತೆ. ಈ ಸಮುದಾಯದವರು ಯಾವುದೇ ಭಾಗದಲ್ಲಿ ವಾಸಿಸುತ್ತಿದ್ದರೂ ಸತ್ತವರ ಮೂಳೆಯನ್ನು ದಿಂಬಂ'ನಲ್ಲಿಯೇ ಹೂಳುತ್ತಾರೆ. ದಿಂಬಂ ಎಂಬ ಸ್ಥಳ ಈಗಿನ ತಮಿಳುನಾಡಿನಲ್ಲಿದೆ. ಕರ್ನಾಟಕ ಮತ್ತು ತಮಿಳುನಾಡಿನ ಭಾಗದ ಕಾಡುಗಳಲ್ಲಿ ತಮ್ಮ ಬದುಕನ್ನು ಕಟ್ಟಿಕೊಂಡಿದ್ದ ಈ ಸೋಲಿಗರು ಈ ಎರಡೂ  ಪ್ರದೇಶಗಳಲ್ಲಿ ತಮ್ಮ ಸಂಸ್ಕೃತಿಯ ಕುರುಹುಗಳನ್ನು ಹೊಂದಿದ್ದಾರೆ. ಆದರೆ ಇಂದು ಈ ಆಚರಣೆ ಕಾಣಸಿಗುವುದಿಲ್ಲ.

ಹಿಂದೆ ಸೋಲಿಗರು ಊರುಗಳಲ್ಲಿ ವಾಸವಾಗಿದ್ದ ಸಂದರ್ಭದಲ್ಲಿ ಹಲವು ಗುಂಪುಗಳ ನಡುವೆ ಜಗಳ ಏರ್ಪಟ್ಟು ಇವರು ಸೋತು ಓಡಿ ಹೋಗಿ ಕಾಡು ಸೇರಿರಬಹುದು. ಅದಕ್ಕಾಗಿ ಇವರನ್ನು ಸೋತವರು ಎಂದು ಕರೆದಿರಬಹುದು. ಅನಂತರದಲ್ಲಿ 'ಸೋತವರು' ಎಂಬ ಪದ 'ಸೋಲಿಗರು' ಆಗಿರಬಹುದು ಎಂದು ಊಹಿಸುತ್ತಾರೆ. ಈ ಮಾತಿಗೆ ಪುಷ್ಟಿ ನೀಡುವಂತೆ ಸೋಲಿಗರು ತಮ್ಮ ಹೆಸರಿನ ಮುಂದೆ ಗೌಡ ಎಂಬ ಪದ ಸೇರಿಸುತ್ತಾರೆ. ಇವರು ಹಿಂದೆ ಊರಿನಲ್ಲಿ ವಾಸಿಸುತ್ತಿದ್ದವರು ಎಂಬುದಕ್ಕೆ ಸಾಕ್ಷಿಯಾಗಿ ಇವರು ತಮ್ಮ ಹೆಸರಿನ ಮುಂದೆ ಗೌಡ ಎಂಬ ಪದವನ್ನು ಸೇರಿಸಿಕೊಳ್ಳುವುದನ್ನು ಗಮನಿಸಬಹುದು. ಗೌಡ ಪದದ ಮೂಲ ರೂಪವೇ ಗಾವುಂಡ. ಗ್ರಾಮವೃದ್ಧ ಎಂಬ ಪದವು ಅನಂತರದಲ್ಲಿ ಗಾವುಂಡ ಆಗಿದೆ ಎಂದು ಹೇಳಲಾಗುತ್ತದೆ.

ಒಂದು ಐತಿಹ್ಯದ ಪ್ರಕಾರ ಸೋಲಿಗರು ಶಿವನ ಮಕ್ಕಳು. ಪಾರ್ವತಿ ಪರಮೇಶ್ವರರು ಬೆವರಿನಿಂದ ಗಂಡು ಮತ್ತು ಹೆಣ್ಣಿನ ಗೊಂಬೆ ಮಾಡಿ ಅದಕ್ಕೆ ಜೀವ ನೀಡಿದರಂತೆ, ಅವರೇ ಸೋಲಿಗರ ನೀಲಯ್ಯ ಮತ್ತು ಸಂಕಮ್ಮ. ಇವರಿಂದ ಹುಟ್ಟಿದ ಮಕ್ಕಳು ಸೋಲನ ಹಂಬಿನ ಗೆಡ್ಡೆ (ಗೆಣಸು) ತಿಂದು ಜೀವಿಸುತ್ತಿದ್ದರಂತೆ. ಅವರಿಗೆ ಮುಪ್ಪಾದರೂ ಕೂಡ ಈ ಗಿಡ ಚಿಗುರುತ್ತಾ ನಳನಳಿಸುತ್ತಿತ್ತಂತೆ. ಒಮ್ಮೆ ಹೊಸ ಗೆಡ್ಡೆಯನ್ನು ಕೀಳಲು ಮುದುಕ ಬಂದಾಗ ಸೋಲನ ಹಂಬು 'ನೀನು ನನ್ನ ಗೆಡ್ಡೆಯನ್ನು ಸಾಯೂವರೆಗೆ ಕಿತ್ತರೂ ನನ್ನನ್ನು ಸೋಲಿಸಲು ಸಾಧ್ಯವಿಲ್ಲ, ನೀನು ಸೋತವನು ಸೋಲಿಗ' ಎಂದಿತಂತೆ. ಅಂದಿನಿಂದ ಇವರಿಗೆ ಸೋಲಿಗ ಎಂಬ ಹೆಸರು ಬಂತು ಎನ್ನುತ್ತಾರೆ. ಈ ಕತೆಯನ್ನು ಈ ಹಾಡಿನ ರೂಪದಲ್ಲಿ ವ್ಯಕ್ತಪಡಿಸುತ್ತಾರೆ.

'ಅರೆಯ ಕೋಲು ನೂಲೆಯ ಗೆಣಸು
ಕಾಯಂಬು ಗೆಣಸು ಕಾಲಂಬುತ್ತಾರೆ
ಸೋತು ಹೋಗಾದು ಸೋಲನ ಗೆಣಸು'

**ಸೋಲಿಗರ ಕುಲಗಳು**

ಸೊಲಿಗರಲ್ಲಿ ಕುಲವನ್ನು ಎರಡು ಭಾಗವಾಗಿ ವಿಂಗಡಿಸಿದ್ದಾರೆ.

ಅವು ಐದು ಕುಲ ಹಾಗೂ ಏಳು ಕುಲಗಳು. ಐದು ಕುಲದವರು ಯಳಂದೂರಿನ ಬಿಳಿಗಿರಿರಂಗನಾಥನ ಬೆಟ್ಟದ ಅಸುಪಾಸಿನಲ್ಲಿದ್ದಾರೆ. ಪ್ರತಿ ಕುಲ ಒಂದೊಂದು ಕುಲದ ಚಿನ್ನೆಯನ್ನು ಹೊಂದಿದೆ. ಮತ್ತು ಆ ಚಿನ್ನೆಗಳು ಪ್ರಕೃತಿಯನ್ನು ಸಂಕೇತಿಸುತ್ತವೆ.

ಆ ಐದು ಕುಲಗಳು ಯಾವುವೆಂದರೆ:

1. ಬೆಲ್ಲರ ಕುಲ
2. ಸೂರ್ಯನ ಕುಲ
3. ಹಾಲೇರು(ಆಲೂರು)ಕುಲ
4. ತೆನೇರು ಕುಲ
5. ಸೆಳಕೆರ ಕುಲ

ಏಳು ಕುಲದವರು ಹೆಚ್.ಡಿ.ಕೋಟೆ, ಗುಂಡ್ಲುಪೇಟೆಗಳಲ್ಲಿ ಹೆಚ್ಚಾಗಿ ವಾಸವಿದ್ದಾರೆ. ಅವುಗಳೆಂದರೆ:

1. ಹೊಂಗೆಲ ಕುಲ

ಈ ಕುಲದ ಚಿನ್ನೆ ಹೊಂಗೆ ಮರ. ಇವರು ಹೊಂಗೆ ಮರವನ್ನು ಪೂಜಿಸುತ್ತಾರೆ. ಇವರು ಹೊಂಗೆ ಮರವನ್ನು ಕಡಿಯುವುದಿಲ್ಲ ಹಾಗೂ ಉರುವಲಾಗಿ ಕೂಡ ಬಳಸುವುದಿಲ್ಲ. ಸಿದ್ಧೇಶ್ವರ ಈ ಕುಲದವರ ಮನೆದೇವರು,

2. ಆಲೂರು ಕುಲ

ಈ ಕುಲದ ಚಿನ್ನೆ ಆಲದ ಮರ.

3. ಬೆಲ್ಲರ ಕುಲ

ಈ ಕುಲದ ಚಿನ್ನೆ ಬೆಳ್ಳಿ. ಪಂದೇಶ್ವರ ಎಂಬ ಬೆಟ್ಟದಲ್ಲಿ ನೆಲೆಸಿರುವ ಪಂದೇಶ್ವರನ ಆರಾಧಕರು, ಈ ಬೆಟ್ಟ ಕೊಯಮತ್ತೂರಿನ 'ಭನಂ' ತಾಲೂಕಿನಲ್ಲಿದೆ.

4. ಸೂರ್ಯನ ಕುಲ

ಈ ಕುಲದ ಚಿನ್ನೆ ಸೂರ್ಯ, ಇವರು ಭರಮಸ್ವಾಮಿಯ ಆರಾಧಕರು. ಇದು ಕೊಳ್ಳೇಗಾಲದ ಮಾರ್ಚಳ್ಳಿಯಲ್ಲಿದೆ

5. ತೆನೇರು ಕುಲ

ಈ ಕುಲದ ಚಿನ್ನೆ ರಾಗಿ. ತೆನೇರು ಕುಲದವರು ಮಾದೇಶ್ವರನ ಆರಾಧಕರು. ಮಾದೇಶ್ವರ ಈ ಸೋಲಿಗರ ಕುಲವನ್ನು ವಿಚಾರಿಸುತ್ತಿದ್ದಾಗ ಇವಳು ತಲೆಯ ಮೇಲೆ ರಾಗಿ ತೆನೆ ಹೂತ್ತಿದ್ದರಂತೆ ಅದ್ದರಿಂದ ಇವರಿಗೆ ಆ ಹೆಸರು ಬಂದಿದೆ ಎನ್ನುತ್ತಾರೆ.

ಈ ಮೇಲಿನ ಐದು ಕುಲದ ಜೊತೆ ಮತ್ತೆರಡು ಕುಲ ಸೇರಿ ಏಳು ಕುಲಗಳಾಗುತ್ತವೆ.

6. ಜೇನು ಕುಲ – ಇವರ ಕುಲ ಚಿನ್ನೆ ಜೇನು

7. ಕುಂಬಳ ಕುಲ – ಇವರ ಕುಲ ಚಿನ್ನೆ ಕುಂಬಳ ಕಾಯಿ

ಇವಿಷ್ಟೇ ಅಲ್ಲದೆ ಭೌಗೋಳಿಕವಾಗಿ ಅವರು ವಾಸವಿರುವ ಪ್ರದೇಶದ ಹಿನ್ನೆಲೆಯ ಆಧಾರದಿಂದ ಅವರ ಒಳ ಪಂಗಡಗಳನ್ನು ಈ ರೀತಿ ವಿಂಗಡಿಸಬುದು.

1. ಊರಾಳಿ ಸೋಲಿಗರು – ಇವರು ಚಾಮರಾಜನಗರ, ಸತ್ಯಮಂಗಲ ಪ್ರದೇಶಗಳಲ್ಲಿ ಹೆಚ್ಚಾಗಿ ವಾಸಿಸುತ್ತಾರೆ.
2. ಮಲೆ ಸೋಲಿಗರು – ಇವರು ಬಿಳಿಗಿರಿರಂಗನ ಬೆಟ್ಟ, ಮಲೈ ಮಹದೇಶ್ವರ ಬೆಟ್ಟದಲ್ಲಿ ವಾಸವಿದ್ದಾರೆ.
3. ಕಾಡು ಸೋಲಿಗರು – ಇವರು ಬ್ರಹ್ಮಗಿರಿ, ಬಿಳಿಗಿರಿರಂಗನ ಬೆಟ್ಟ, ಮಹದೇಶ್ವರ ಬೆಟ್ಟದ ಕಾಡುಗಳಲ್ಲಿ ವಾಸಿಸುತ್ತಾರೆ
4. ಊರುಬತ್ತಿ ಸೋಲಿಗರು – ಇವರು ಕಾಕನಕೋಟೆ ಕಾಡಿನಲ್ಲಿ ವಾಸವಿದ್ದಾರೆ
5. ಬುರುಡೆ ಸೋಲಿಗರು – ಕೊಳ್ಳೇಗಾಲದ ಸುತ್ತಮುತ್ತ ಮತ್ತು ಕಾಕನಕೋಟೆ
6. ದೇವ ಸೋಲಿಗರು – ಹೆಚ್.ಡಿ.ಕೋಟೆ, ಗುಂಡ್ಲುಪೇಟೆಯಲ್ಲಿ ವಾಸವಿದ್ದಾರೆ. ಎರವರಲ್ಲಿರುವ ನಾಲ್ಕು ಗುಂಪುಗಳಲ್ಲಿ ಒಂದಾದ ಬಡಗ ಎರವರೇ ಈ ದೇವ ಸೋಲಿಗರು ಎಂದು ಹೇಳುತ್ತಾರೆ. ಇದಕ್ಕೆ ಖಚಿತ ಆಧಾರಗಳಿಲ್ಲ.
7. ದಾಸಯ್ಯ ಸೋಲಿಗರು[7]

## ಮದುವೆ ಪದ್ಧತಿ

ಸೋಲಿಗರು ಪ್ರಚಲಿತ ಮದುವೆ ಎಂದರೆ ಸೋಲಿಗರ ಹುಡುಗ ಹುಡುಗಿ ಪರಸ್ಪರ ಹಬ್ಬ, ಜಾತ್ರೆಗಳಲ್ಲಿ ಇಷ್ಟಪಟ್ಟರೆ ಇಬ್ಬರೂ ಕಾಡಿಗೆ ಓಡಿ ಹೋಗಿ ಹಲವು ದಿನಗಳ ನಂತರ ವಾಪಸು ಬರುತ್ತಾರೆ. ಆಗ ಊರಿನ ಯಜಮಾನ ದಂಡ ಕಟ್ಟಿಸಿಕೊಂಡು ಶಾಸ್ತ್ರ ಪದ್ಧತಿಗಳ ಮೂಲಕ ವಿವಾಹವನ್ನು ಅಧಿಕೃತಗೊಳಿಸುತ್ತಾನೆ. ಕೆಲವರಲ್ಲಿ ಏಕಪತ್ನಿತ್ವ ಪದ್ಧತಿಯಿದ್ದರೆ ಕೆಲವರಲ್ಲಿ ಬಹುಪತ್ನಿತ್ವವೂ ರೂಢಿಯಲ್ಲಿದೆ. ಸೋದರಮಾವನ ಮಗಳು ಅಥವಾ ಸೋದರತ್ತೆಯ ಮಗಳೊಂದಿಗಿನ ಮದುವೆ ಇವರಲ್ಲಿ ರೂಢಿಯಲ್ಲಿದೆ. ಸೋಲಿಗರಲ್ಲಿ ವಧುದಕ್ಷಿಣೆ ಪದ್ಧತಿ ಸಾಮಾನ್ಯ. ಮದುವೆಯಾಗಬೇಕಾದರೆ ಗಂಡು ಹೆಣ್ಣಿನ ಕಡೆಯವರಿಗೆ ತೆರವನ್ನು ಕಟ್ಟಿ ಮದುವೆಯಾಗಬೇಕಾಗುತ್ತದೆ. ಇದಕ್ಕೆ ಮಲೆಮಾದೇಶ್ವರ ಕಾವ್ಯದಲ್ಲಿಯೇ ಒಂದು ಉದಾಹರಣೆ ಸಿಕ್ಕುತ್ತದೆ. ಸೋಲಿಗರ ನೀಲಯ್ಯ ಸಂಕಮ್ಮಳನ್ನು ಭಾಷೆ

ಕೊಡು ಎಂದಾಗ ಆಕೆ 'ನೀನು ಕಟ್ಟಿದ ತೆರವನ್ನು ವಾಪಸು ತೆಗೆದುಕೋ ಆದರೆ ನಾನು ನಿನಗೆ ಭಾಷೆ ಕೊಡುವುದಿಲ್ಲ' ಎಂದು ಹಟ ಹಿಡಿಯುತ್ತಾಳೆ. ಆ ಪ್ರಸಂಗವನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಒಂದೇ ಕುಲದವರನ್ನು ಇವರು ಮದುವೆ ಆಗುವಂತಿಲ್ಲ. ಹಾಗೆಯೇ ಐದು ಕುಲದ ಸೋಲಿಗರು ಏಳು ಕುಲದ ಸೋಲಿಗರನ್ನು ಮದುವೆ ಆಗುವಂತಿಲ್ಲ, ಆದರೆ ಇತ್ತೀಚೆಗೆ ಆ ಕಟ್ಟುಪಾಡುಗಳಿಲ್ಲ. ಇವರದು ಮಾತೃಪ್ರಧಾನ ಕುಟುಂಬವ್ಯವಸ್ಥೆ.



**ಸೋಲಿಗರ ಪ್ರಚಲಿತ ಮದುವೆ ಪದ್ಧತಿಗಳು**

1. ಬಲವಂತದ ಮದುವೆ, 2 ಅಪಹರಣದ ಮದುವೆ, 3. ಸೇವಾ ಮದುವೆ,

ಅಪಹರಣದ ಮದುವೆ ಇವರಲ್ಲಿ ಸಹಜ ಮತ್ತು ಪ್ರಚಲಿತ. ಗಂಡು ಹೆಣ್ಣು ಇಷ್ಟ ಪಟ್ಟರೆ ಕಾಡಿಗೆ ಹೋಗಿ 2–3 ದಿನ ಕಳೆದು ತಿರುಗಿ ಬರುತ್ತಾರೆ. ನಂತರ ಹಿರಿಯರ ಒಪ್ಪಿಗೆಯ ಮೇರೆಗೆ ಗಂಡ ಹೆಂಡತಿಯಾಗಿ ಜೀವನ ನಡೆಸುತ್ತಾರೆ. ಇದಕ್ಕೆ ಇವರು ಪುರಾಣದ ಉದಾಹರಣೆಯನ್ನು ನೀಡುತ್ತಾರೆ. ಬಿಳಿಗಿರಿರಂಗನಾಥ ಸ್ವಾಮಿಯು ಸೋಲಿಗ ಬೊಮ್ಮೆಗೌಡನ ಮಗಳು ಕುಸುಮಾಲೆಯನ್ನು ಅಪಹರಿಸಿಕೊಂಡು ಹೋಗಿ ಮದುವೆಯಾಗುತ್ತಾನೆ. ಬಿಳಿಗಿರಿರಂಗನಾಥನನ್ನು ಸೋಲಿಗರು ತಮ್ಮ ಭಾವ ಎಂದು ಭಾವನಾತ್ಮಕವಾಗಿ ನಂಬುತ್ತಾರೆ. ಈ ಕಾರಣಕ್ಕಾಗಿ ಹುಡುಗಿಯನ್ನು ಅಪಹರಿಸಿಕೊಂಡು ಮದುವೆಯಾಗುವ ಪದ್ಧತಿಯನ್ನು ಇವರು ಇಂದಿಗೂ ಅನುಸರಿಸುತ್ತಾರೆ. ಸೇವಾ ವಿವಾಹ ಅಥವಾ ಜೀತ ವಿವಾಹವೂ ಕೂಡ ಹಿಂದೆ ಇತ್ತು. ಅಂದರೆ ಗಂಡಿಗೆ ಕನ್ಯಾ ಶುಲ್ಕ(ತೆರ) ನೀಡಲು ಸಾಧ್ಯವಿಲ್ಲದಾಗ ಈ ರೀತಿಯ ವಿವಾಹ ಮಾಡಿಕೊಂಡು ಅತ್ತೆ ಮನೆ ಅಳಿಯನಾಗಿ ಅವರ ಮನೆಯಲ್ಲಿ ಸೇವೆ ಮಾಡಬೇಕಿತ್ತು. ಇದನ್ನು ಸೇವಾ ವಿವಾಹ ಎಂದು ಕರೆಯಲಾಗುತ್ತದೆ.

ಇವರಲ್ಲಿ ಏಕಪತ್ನಿತ್ವ ಸಾಮಾನ್ಯವಾಗಿದೆ. ಒಬ್ಬ ವಿವಾಹಿತ ಗಂಡಸು ಬೇರೊಂದು ಹೆಣ್ಣನ್ನು ಮದುವೆ ಆದನೆಂದರೆ ಮೊದಲನೇ ಹೆಂಡತಿಯನ್ನು ಬಿಟ್ಟ ಹಾಗೆ ಎಂದು ಭಾವಿಸಲಾಗುತ್ತದೆ. ಮೊದಲನೇ ಹೆಂಡತಿ ಬೇರೆ ಯಾರನ್ನಾದರೂ ಕೂಡಿಕೆ ಮಾಡಿಕೊಳ್ಳಬಹುದು. ಸೋಲಿಗರಲ್ಲಿ ಹೆಣ್ಣಿಗೆ ಆ ಸ್ವಾತಂತ್ರ್ಯವಿದೆ.

**ವಿಧವಾವಿವಾಹ**

ಸೋಲಿಗರಲ್ಲಿ ಇದು ಬಹಳ ಪ್ರಚಲಿತದಲ್ಲಿರುವ ಪದ್ಧತಿ. ವಿಧವಾವಿವಾಹದ ಸಂದರ್ಭದಲ್ಲಿ ಒಂದು ವೇಳೆ ಹೆಣ್ಣಿಗೆ ಒಂದು ಮಗುವಿದ್ದರೂ ಆ ಮಗುವಿನೊಂದಿಗೆ ಗಂಡು ಅವಳನ್ನು ಸ್ವೀಕರಿಸುತ್ತಾನೆ. ಮತ್ತು ಆ ಮಗುವನ್ನು ಎಲ್ಲರೂ ಒಪ್ಪಿಕೊಂಡು ಗೌರವಿಸುತ್ತಾರೆ. ಸೋಲಿಗರ ಮದುವೆ ಪದ್ಧತಿಯಲ್ಲಿ

ಕೂಡಾವಳಿಯು ಪ್ರಚಲಿತದಲ್ಲಿದ್ದು. ಅತ್ಯಂತ ಸರಳ ವಿವಾಹ ಪದ್ಧತಿ ಇದಾಗಿದೆ. ಕೂಡಾವಳಿ ಮದುವೆಗಳು ಯಾವ ಆಡಂಬರಗಳಿಲ್ಲದೆ ನಡೆಯುತ್ತವೆ.

## 2.6. ಬೆಟ್ಟಕುರುಬರು

ಬೆಟ್ಟ ಕುರುಬರು ಮುಖ್ಯವಾಗಿ ತಮಿಳುನಾಡು, ಕರ್ನಾಟಕ ಕೇರಳದ ಗಡಿ ಭಾಗಗಳಲ್ಲಿ ಇತರೆ ಬುಡಕಟ್ಟುಗಳೊಂದಿಗೆ ವಾಸಿಸುತ್ತಾರೆ. ಇವರು ತಮ್ಮ ನೆರೆಹೊರೆಯ ಬುಡಕಟ್ಟು ಸಮುದಾಯಗಳಾದ ಎರವರು, ಜೇನುಕುರುಬರು ಮತ್ತು ಸೋಲಿಗರೊಂದಿಗೆ ವಾಸಿಸುತ್ತಾರೆ. ಇವರು ಗುಂಪುಗುಂಪಾಗಿ ವಾಸ ಮಾಡುವ ಸ್ಥಳಗಳಲ್ಲಿ ಮನೆಗಳನ್ನು ಚೌಕಾಕಾರದಲ್ಲಿ ಕಟ್ಟುತ್ತಾರೆ. ಇವರು ತಮ್ಮ ಮನೆಗಳನ್ನು 'ಮದಗೆರಿ' ಎಂದು ಕರೆಯುತ್ತಾರೆ. ಬಹಳ ತಗ್ಗಾದ ಗುಡಿಸಿಲನ್ನು ಕಟ್ಟುತ್ತಾರೆ. ಹಾಡಿಯ ಮಧ್ಯದಲ್ಲಿ ಒಂದು ಚೌಕಾಕೃತಿಯ 'ಅಂಬಾಲ'ವನ್ನು ನಿರ್ಮಿಸುತ್ತಾರೆ. ಹಾಡಿಯ ಮಧ್ಯೆ ಈ 'ಅಂಬಾಲ'ವನ್ನು ನಿರ್ಮಿಸಲಾಗುತ್ತದೆ. ಬೆಟ್ಟಕುರುಬರ ಗುಡಿಸಲಗಳು ಈ 'ಅಂಬಾಲ'ಕ್ಕೆ ಅಭಿಮುಖವಾಗಿರುತ್ತವೆ. ಇದು ಬೆಟ್ಟಕುರುಬರಿಗೆ ಬಹಳ ಪೂಜ್ಯನೀಯ ಸ್ಥಳವಾಗಿದೆ. ಅದನ್ನು ಸೆಗಣಿಯಿಂದ ಸಾರಿಸಿ ಶುದ್ಧವಾಗಿ ಇಟ್ಟಿರುತ್ತಾರೆ. ಸಮುದಾಯಕ್ಕೆ ಸಂಬಂದಿಸಿದ ಸಭೆ, ಸಮಾರಂಭ, ನಾಮಕರಣ, ನ್ಯಾಯಪಂಚಾಯಿತಿಗಳು ಇಲ್ಲಿಯೇ ಜರುಗುತ್ತವೆ. ಸಮುದಾಯದ ಎಲ್ಲ ಗಂಡಸರು ಒಂದೆಡೆ ಕಲೆತು ಮಾತಾಡಲು, ಹರಟೆಯಾಡಲು, ಮಲಗಲು ಕೂಡ ಈ ಸ್ಥಳವನ್ನು ಬಳಸುತ್ತಾರೆ. ಇವರು 'ಅಂಬಾಲ'ದ ಎದುರು ಬದುರಾಗಿ ಎಲ್ಲರ ಮನೆಗಳ ಬಾಗಿಲುಗಳು ಇರುವಂತೆ ನೋಡಿಕೊಂಡು ಮನೆಯನ್ನು ಕಟ್ಟುತ್ತಾರೆ.

ಬೆಟ್ಟಕುರುಬರ ಬಗ್ಗೆ ಎನ್.ಪಿ.ಶಂಕರನಾರಾಯಣರಾವ್ ಅವರು 'ಒಂದಾನೊಂದು ಕಾಲದಲ್ಲಿ ಈಗಿನ ವಯನಾಡು, ಕೊಡಗು, ಮೈಸೂರು ಜಿಲ್ಲೆಯ ಪಶ್ಚಿಮ ಭಾಗಗಳನ್ನೊಳಗೊಂಡ ವಿಶಾಲ ಭೂಭಾಗದಲ್ಲಿ ಬೆಟ್ಟಕುರುಬರು ಪ್ರಬಲರಾಗಿದ್ದರೆಂದು ಕೆಲವು ಇತಿಹಾಸಕಾರರು ಹೇಳಿದ್ದಾರೆ. ವಯನಾಡಿಗೆ ಮಲಯಾಳಿಗಳು ಬಂದು ಸ್ಥಳೀಯವಾದ ಒಂದೆರಡು ಆದಿವಾಸಿ ಬಣಗಳೊಂದಿಗೆ ಬಹುಶಃ ಬೆಟ್ಟಕುರುಬರು, ಕಾಡುಕುರುಬ ಸಮುದಾಯದವರೊಂದಿಗೆ ಸ್ನೇಹ ಗಳಿಸಿ ಅವರ ನೆರವಿನಿಂದ ಆ ಪ್ರದೇಶದಲ್ಲಿ ಅಡಿಯರೆಂದು ಹೆಸರಾಗಿರುವ ಜನರನ್ನು ಫಣಿಯರನ್ನು ಹೆದರಿಸಿ ಬೆದರಿಸಿ ಕ್ರೂರಶಿಕ್ಷೆಗೆ ಗುರಿಮಾಡಿ ತಮ್ಮ ಗುಲಾಮರನ್ನಾಗಿ ಮಾಡಿಕೊಂಡರು. ಈ ಬಗ್ಗೆ ಫಣಿಯರವರ ತಿಥಿ ಹಾಡಿನಲ್ಲಿ ಸ್ಪಷ್ಟ ಉಲ್ಲೇಖವಿದೆ'[8] ಎನ್ನುತ್ತಾರೆ. ಬೆಟ್ಟಕುರುಬರು ಒಂದೇ ಮೂಲದ ಕುರುಬರು. ಅನಂತರ ವಿವಿಧ ಕವಲುಗಳಾಗಿ ಒಡೆದು ಕಾಡುಕುರುಬ, ಬೆಟ್ಟಕುರುಬ, ಜೇನುಕುರುಬ ಮುಳ್ಳುಕುರುಬ ಮೊದಲಾದ ಪಂಗಡಗಳಾಗಿರಬಹುದು ಎಂಬ ಅಭಿಪ್ರಾಯವಿದೆ. ಕುರುಬ ಎಂಬ ಪದವು 'ಕುರು' ಎಂಬ ಪದದಿಂದ ನಿಷ್ಪನ್ನಗೊಂಡಿದೆ. 'ತಮಿಳು ಭಾಷೆಯ Ancient lexicographer ಪಿಂಗಳ

ಮುನಿ ಕುರುಬರನ್ನು ಕುರುನಿಲಮನ್ನಾರ್ ಅಥವಾ 'Petty chief' 'ಕರುಚಿ' ಎಂದು ಕರೆದಿದ್ದಾರೆ. ಇವರ ದೇವರುಗಳನ್ನು ಒಂದಾದ ಅಣಪೆ ನೂರಾಲ್ ಒಡೆಯ ಅಣಬೆಗಳು ಹೆಚ್ಚು ಬೆಳೆಯುವ ಅಣಬೆತೋಡು ಹತ್ತಿರದ ಮರವೊಂದನ್ನು ಒಂದು ಸಾರಿ ಕಡಿಯಲು ಹೋದಾಗ ಕೊಡಲಿ ಏಟಿಗೆ ಆ ಮರದಿಂದ ರಕ್ತ ಸುರಿಯಿತಂತೆ. ಜೀವವಿರುವ ಆ ಮರವನ್ನು ಕಂಡು ಅಲ್ಲಿ ತಮ್ಮ ಒಡೆಯ ನೆಲೆಸಿದ್ದಾನೆಂಬ ನಂಬಿಕೆಯನ್ನಿಟ್ಟುಕೊಂಡು ಈ ಅಣಪೆ ನೂರಾಳ ಒಡೆಯನೆಂಬ ಹೆಸರು ಕೊಟ್ಟು ಪೂಜಿಸಲು ತೊಡಗಿದರು."[9]

ಬೆಟ್ಟಕುರುಬರಲ್ಲಿ ದೇವರನ್ನು ಕರೆಯುವ ಕ್ರಿಯೆಯನ್ನು 'ಬಿಂಜೆ ಪಾಡುಗ' ಎಂದು ಕರೆಯುತ್ತಾರೆ. ಬಿಂಜೆ ಮರ ಎನ್ನುವ ಒಂದು ಜಾತಿಯ ಬಿದಿರಿನಿಂದ ಮಾಡಿದ ಸಣ್ಣ ಮೊರಕ್ಕೆ ಗೆಜ್ಜೆಯನ್ನು ಕಟ್ಟಿ ಅಲಂಕರಿಸುತ್ತಾರೆ. ಈ ಮೊರವನ್ನು ಮುತ್ತುಲು ಎಂದು ಗೌರವಪೂರ್ವಕವಾಗಿ ಕರೆಯುತ್ತಾರೆ. ಇವರು ಪೂಜಾರಿಯನ್ನು 'ತಮ್ಮಡಿ' ಎಂದು ಕರೆಯುತ್ತಾರೆ. ಇದನ್ನು ಕೈಯಲ್ಲಿ ಹಿಡಿದು ಆಡಿಸುತ್ತಿದ್ದರೆ, ಅದರ ರಭಸಕ್ಕೆ ಸಮನಾಗಿ ತಮ್ಮಡಿಯ ಆವೇಶ ಹೆಚ್ಚಾಗುತ್ತ ದೇವರು ಮೈಮೇಲೆ ಬರುತ್ತಾನೆ. ಇದನ್ನು 'ಬಿಂಜೆ ಕಳುವುಗ' ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಹಾಡುವ ಹಾಡನ್ನು ಬಿಂಜೆ ಪಾಡುಗ ಎನ್ನುತ್ತಾರೆ.

ಬೆಟ್ಟಕುರುಬರು ಕನ್ನಡ, ಮಲಯಾಳಂ, ತಮಿಳು ಮಿಶ್ರಿತ ಭಾಷೆಯನ್ನಾಡುತ್ತಾರೆ. ಹೆಂಗಸರು ರವಿಕೆಯನ್ನು ಧರಿಸದ ವಿಶೇಷವಾದ ರೀತಿಯಲ್ಲಿ ಸೀರೆಯನ್ನು ಉಡುತ್ತಾರೆ. ಗಂಡಸರು ಪಂಚೆಯನ್ನು ಮೀನ ಖಂಡಕ್ಕೆ ಸರಿಯಾಗಿ ಕಟ್ಟುತ್ತಾರೆ. ಪಂಚೆಯನ್ನು ಹಿಮ್ಮಡಿ ತಾಗುವಂತೆ ಕಟ್ಟಿದರೆ ಅಹಂಕಾರ ಎಂದು ಭಾವಿಸುತ್ತಾರೆ. ಹಾಗೆಯೇ ಪಂಚೆಯನ್ನು ಎತ್ತಿ ಕಟ್ಟಿದರೆ ಸೊಕ್ಕು ಎಂದು ಭಾವಿಸುತ್ತಾರೆ. ಆದ್ದರಿಂದ ಮೊಣಕಾಲಿನಿಂದ ಸ್ವಲ್ಪ ಕೆಳಕ್ಕೆ ಪಂಚೆಯನ್ನು ಕಟ್ಟುತ್ತಾರೆ.

'ನಾವು ಕಾಡು ಕುರುಬರ ಮಕ್ಕಳು ದೂರಿ ದೂರಿ
ನಾವು ಕಾಡಿಗೆ ಅರಸರು ದೂರಿ ದೂರಿ'

ಎಂದು ಹಾಡಿ ಸಂಭ್ರಮಿಸುತ್ತಾರೆ.

ಬೆಟ್ಟಕುರುಬರು ಕೊಡಗಿನ ಸೋಮವಾರಪೇಟೆ ಹಾಗೂ ವಿರಾಜಪೇಟೆ ತಾಲ್ಲೂಕುಗಳಲ್ಲಿ, ಮೈಸೂರಿನ ಹೆಚ್.ಡಿ.ಕೋಟೆ ಭಾಗದಲ್ಲಿ ಹೆಚ್ಚಾಗಿ ವಾಸಿಸುತ್ತಾರೆ. ಇವರ ಮುಖ್ಯ ಕಸುಬು ಬಿದಿರಿನ ಬುಟ್ಟಿ, ಮೊರ, ಕುಕ್ಕೆ, ತಡಿಕೆ ಮಾಡುವುದು. ಅಲ್ಲದೆ ಹಿಂದೆ ಸಣ್ಣ ಪುಟ್ಟ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು. ಅದಕ್ಕಾಗಿ ಕುಡುಗೋಲು, ಮಚ್ಚು ಕತ್ತಿಗಳನ್ನು ಬಳಸುತ್ತಿದ್ದರು. ಅಲ್ಲದೇ ಮಾವುತರಾಗಿ, ಕಾವಾಡಿಗಳಾಗಿ ಕೂಡ ಇವರು ಪರಿಣತರು. ತಮಿಳಿನಲ್ಲಿ 'ಕುರುಂಬ' ಎಂದರೆ 'ಗುಲಾಮ' ಎಂದರ್ಥ ಪಂಪಭಾರತದಲ್ಲಿ ಕುರುಂಬು ಎಂಬ ಪದವನ್ನು ಉಲ್ಲೇಖಿಸಲಾಗಿದ್ದು

ಇದಕ್ಕೆ ಅರಣ್ಯವಾಸಿಗಳು ಎಂಬರ್ಥವಿದೆ. ಹಾಗೆಯೇ ಕನ್ನಡ ನಿಘಂಟಿನಲ್ಲಿ 'ಕುರು' ಎಂದರೆ ಸಣ್ಣ, ಚಿಕ್ಕದು ಎಂಬ ಅರ್ಥವಿದೆ.

ಕುರುಬ ಸಮುದಾಯಕ್ಕೆ ಸಂಬಂಧಿಸಿದಂತೆ ಅಧ್ಯಯನಕಾರರು ಹಲವು ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಅದಕ್ಕೆ ಸಂಬಂಧಿಸಿದಂತೆ ಇತಿಹಾಸಕಾರರ ಹಲವು ದಾಖಲೆಗಳನ್ನು ಉಲ್ಲೇಖಿಸುತ್ತಾರೆ. 'ಕುರುಬರು ದಕ್ಷಿಣ ಭಾರತದ ಪ್ರಭಾವಿ ರಾಜರುಗಳಲ್ಲಿ ಒಬ್ಬರಾದ ಪಲ್ಲವರ ವಂಶಸ್ಥರಾಗಿ ಹಿಂದೆ ಪ್ರಬಲರಾಗಿದ್ದವರು. ನಂತರದಲ್ಲಿ ಕೊಂಗು, ಚೋಳ, ಚಾಲುಕ್ಯ, ಮೊದಲಾದವರ ಆಕ್ರಮಣಕ್ಕೆ ಒಳಗಾಗಿ, ದಿಕ್ಕಾಪಾಲಾಗಿ ಓಡಿ ಕಾಡು ಸೇರಿದವರು. ಎಷ್ಟೋ ವರ್ಷಗಳ ಕಾಲ ನಾಗರಿಕ ಜನರ ಸಂಪರ್ಕವಿಲ್ಲದೆ ಕಾಡು ಜನರಾದವರು'[10] ಎಂದು ಈ ಕುರುಬ ಸಮುದಾಯವನ್ನು ಕುರಿತು 1897 ರ ಮದ್ರಾಸ್ ಜನಗಣತಿಯ ವರದಿಯಲ್ಲಿ ಥರ್ಸ್ಟನ್ ಅವರು ಉಲ್ಲೇಖಿಸಿದ್ದಾರೆ.

ಕುರುಬರು ಉತ್ತರ ಮಲಬಾರ್‌ನಲ್ಲಿ ಹೆಚ್ಚಾಗಿ ವಾಸವಿದ್ದಾರೆ ಇವರನ್ನು 1991ರ ಮದ್ರಾಸ್ ಜನಗಣತಿಯಲ್ಲಿ 'ಕುರುಬ್ಬಾಸ್' ಎಂದು ಕರೆದಿದೆ. 'ಕುರುಬರು ಅಥವಾ ಕಾರಬ್ಬರ ಹಿಂದಿನವರು ಪಲ್ಲವರ ಪ್ರತಿನಿಧಿಗಳಾಗಿದ್ದವರು. ಇವರು ಮೊದಲು ದಕ್ಷಿಣ ಭಾರತದ ಪ್ರಭಾವಶಾಲಿ ರಾಜರುಗಳಾಗಿದ್ದ ವರು. ಈ ಕುರುಬರು ಕ್ರಿ.ಶ. ಸುಮಾರು 7–8ನೇ ಶತಮಾನದ ಚೋಳರ ದೊರೆಯಾಗಿದ್ದ ಆದಿತ್ಯನಿಂದ ಸೋಲಿಸಲ್ಪಟ್ಟವರು. ಆಗ ಕುರುಬರು ವಿವಿಧ ರಾಜ್ಯಗಳಲ್ಲಿ ಚದುರಿ ಹೋಗಿ ಅನೇಕರು ನೀಲಗಿರಿ, ವೈನಾಡು ಮತ್ತು ಸುತ್ತಮುತ್ತಲಿನ ಬೆಟ್ಟಗುಡ್ಡಗಳಿಗೆ ಪಲಾಯನ ಮಾಡಿದರು. ಇದರಿಂದ ತಮ್ಮ ಸಂಸ್ಕೃತಿಯಿಂದ ಬೇರೆಯದೇ ಆದ ಸಂಸ್ಕೃತಿಯೊಳಗೆ ಬೆರೆತುಹೋದವರು.'[11]

ಬೆಟ್ಟಕುರುಬರಲ್ಲಿ ಸುಮಾರು ಇನ್ನೂರ ಐವತ್ತಕ್ಕೂ ಹೆಚ್ಚು ಕುಲಗಳು ಇದ್ದವೆಂದು ತಿಳಿದು ಬರುತ್ತದೆ. ಈ ಕುಲಗಳನ್ನು ಇವರು ಜಮ್ಮದ ಆಧಾರದ ಮೇಲೆ ವಿಂಗಡಿಸಿದ್ದಾರೆ. ಆದರೆ ಇವರು ಕಾಡಿನಿಂದ ಹೊರಬಂದು ಊರು ಸೇರಿದ ನಂತರ ಜಮ್ಮದ ಕಲ್ಪನೆಯೂ ಹೊರಟು ಹೋಗಿದೆ. ಈ ಸಮುದಾಯಗಳು ಬೇರೆ ಬೇರೆ ಕಡೆ ಹರಿದು ಹಂಚಿಹೋಗಿವೆ. ಕೆಲವು ಕುಲಗಳಲ್ಲಿ ಕೆಲವೇ ಕೆಲವು ಮಂದಿ ಉಳಿದಿದ್ದಾರೆ. ಕೆಲವು ಕುಲಗಳಲ್ಲಿ ಕೊನೆಯ ತಲೆಮಾರು ಮರಣ ಹೊಂದುತ್ತಿದ್ದಂತೆ ಆ ಕುಲವು ನಾಶ ಹೊಂದಿತೆಂದೇ ಅರ್ಥ. ಅದರಲ್ಲಿ ಈಗ ಅಸ್ತಿತ್ವದಲ್ಲಿರುವ ಸುಮಾರು 109 ಕುಲಗಳನ್ನು ಗುರುತಿಸಲಾಗಿದೆ.

ಆ ಕುಲಗಳು ಹೀಗಿವೆ.

| | | | |
|---|---|---|---|
| 1. | ಕಲ್ಕರ್ ಮಗೆ | 2. | ಕಮಟ್ ಮಗೆ |
| 3. | ಕಣ್ಮೀನ್ ಮಗೆ | 4. | ಕಲಿಕೀರ್ ಮಗೆ |

5. ಕಲ್ಲೀರ್ ಮಗೆ
6. ಕಳ್ನಾರ್ ಮಗೆ
7. ಕಳೇರ್ ಮಗೆ
8. ಕಕ್ಕೇರ್ ಮಗೆ
9. ಕಲಿಕೀನ್ಡ್ ಮಗೆ
10. ಕಳ್ನಾರ್ ಮಗೆ
11. ಕಡ್ಮೀನ್ ಜೀರ್ಗಲ್ ಮಗೆ
12. ಕಣಾರ್ ಜೀರ್ಗಲ್ ಮಗೆ
13. ಕಿಂದ್ದೀರ್ ಮಗೆ
14. ಕಿತ್ತೀರ ಮಗೆ
15. ಕೇಮೀನ್ ಮಗೆ
16. ಕೆಂಸಲ್ ಮಗೆ
17. ಕೆಂರ್ಜಿ ಮಗೆ
18. ಕೈಪಾಟ್ ಮಗೆ
19. ಕಾಸ್ಪರ್ ಮಗೆ
20. ಕ್ವಾಟ್ ಮೇಲ್ ಮಗೆ
21. ಕ್ವಾಟ್ ಕೀನ್ಡ್ ಮಗೆ
22. ಕ್ವಾಲ್ತೀರ್ ಮಗೆ
23. ಕ್ವಾಲಂಬೊಟ್ಟ್ ಮಗೆ
24. ಕುಪ್ಪೇರ್ ಮಗೆ
25. ಕುಪ್ಪೊಚ್ಚೆ ಮಗೆ
26. ಕುಂಭರೇಲ್ ಮಗೆ
27. ಕೂದೇರ್ ಮಗೆ
28. ಕೊಂಜೇರ್ ಮಗೆ
29. ಕೋಯೆರ್ಲ್ ಮಗೆ
30. ಕೊಡುಂಭ್ ಮಗೆ
31. ಕೋಯ್ಲೀರ್ ಮಗೆ
32. ಗುಮೊಟ್ ಮಗೆ
33. ಚಾಂಬಳ್ ಮಗೆ
34. ಚಾಗೋಡ್ ಮಗೆ
35. ಚಿಂಕೀರ್ ಮಗೆ
36. ಚೇಲೇರ್ ಮಗೆ
37. ಚೆರ್ಗೆಲ್ ಮಗೆ
38. ತಿರುಮಂಗಲ್ ಮಗೆ
39. ತಿರ್ಂಬೊಟ್ಟಿ ಮಗೆ
40. ತೆರ್ಕೆಲ್ ಮಗೆ
41. ತೆನ್ಕಲ್ ಮಗೆ
42. ದಡ್ ದಲ್ ಮಗೆ
43. ತ್ವಾಪೊಟ್ಟ್ ಮಗೆ
44. ದಣಗಲ್ ಮಗೆ
45. ದಾಳ್ ಮಗೆ
46. ನಿಮ್ಮಿಲ್ ಮಗೆ
47. ನಿಸ್ಮಿನ್ಕೇರಿ ಮಗೆ
48. ನಾಣ್ಜೆ ಮಗೆ
49. ಪಳೇರ್ ಮಗೆ
50. ಪ್ಯಾರ್ ಮಗೆ
51. ಫಿರ್ಕ್ಕಾಡ್ ಮಗೆ
52. ಫಿಲಿಕಲ್ಪಾರ್ ಮಗೆ
53. ಪೇಡ್ರಿ ಮಗೆ
54. ಪೆರ್ಕ್ಕಡ್ ಗೇರ್ ಮಗೆ
55. ಪೊಡಜ್ಜನ್ ಮಗೆ
56. ಬಗ್ಲೇರ್ ಮಗೆ
57. ಬಳ್ಳಿಲ್ ಮಗೆ
58. ಬಾಡೇರ್ ಮಗೆ

59. ಬಾಳ್ಕೀರ್ ಮಗೆ
60. ಬಾಳಾಜಿ ಮಗೆ
61. ಬಲ್ತಲ್ ಮಗೆ
62. ಬೀರ್ತಲ್ ಮಗೆ
63. ಬಿಲ್ತಜ್ಜನ್ ಮಗೆ
64. ಬೋಗೋಳ್ ಮಗೆ
65. ಬೊಳ್ ಜೇರ್ ಮಗೆ
66. ಬೂಟೆಮೆಲ್ ಮಗೆ
67. ಬೊಣ್ಗೊಟ್ ಮಗೆ
68. ಮತ್ತೀರ್ ಮಗೆ
69. ಮಾವೇರ್ ಮಗೆ
70. ಮಾಜೇಲ್ ಮಗೆ
71. ಮುತ್ತಿಂಗ್ ಮಗೆ
72. ಸಿಂಕೀರ್ ಮಗೆ
73. ಮೋಟ್ಲ ಮಗೆ
74. ಮೊನ್ಗೋಡ್ ಮಗೆ
75. ಮೆರ್ಗ್ಗೇರ್ ಮಗೆ
76. ಯನೆಲ್ ಮಗೆ
77. ಯವರ್ಗಲ್ ಮಗೆ
78. ಯಾನ್ಪಾರ್ ಮಗೆ
79. ಹಡ್ಲಾಟ್ ಮಗೆ
80. ಹಡೀರ್ ಮಗೆ
81. ಹಚ್ಚೇರ್ ಮಗೆ
82. ಹಡ್ಮೇಲ್ ಮಗೆ
83. ಹೇಕೋರ್ಟ್ ಮಗೆ
84. ಆಡ್ಕಾಲ್ ಮಗೆ
85. ಅಂಬುಗೊಟ್ ಮಗೆ
86. ಹೊಸೆಲ್ ಮಗೆ
87. ಎತ್ತೀರ್ ಮಗೆ
88. ಎಳ್ಗೋರ್ ಮಗೆ
89. ಸರ್ಕಲ್ ಮಗೆ
90. ಸುಂಡಜ್ಜ ಮಗೆ
91. ಸುಳ್ಕೋಡ್ ಮಗೆ
92. ಸಿಂಗೆರ್ ಮಗೆ
93. ವಾಳ್ಗೋಡ್ ಮಗೆ
94. ಜೋಡ್ಲ್ ಮಗೆ
95. ನಡ್ಬೊಟ್ಟೆ ಮಗೆ
96. ಕಿಪೆರ್ ಮಗೆ
97. ಮೊಜೆರ್ ಮಗೆ
98. ಶಂಬಗೇರ್ ಮಗೆ
99. ಚೆನ್ಕೀರ್ ಮಗೆ
100. ಪುಂಜೆಲ್ ಮಗೆ
101. ಪಾಂಬಾರ್ ಮಗೆ
102. ಅಡ್ಪೇರ್ ಮಗೆ
103. ಮಾವಾಳ್ ಮಗೆ
104. ಕೈರೋಡ್ ಮಗೆ
105. ತರಿಕಿರ್ ಮಗೆ
106. ಆಟಂಗಾಲ್ ಮಗೆ
107. ಪೆರ್ಕೀರ್ಲ್ ಮಗೆ
108. ಹಡ್ಡೆ ಮಗೆ
109. ವೈಲ್ ಮಂಜಿಲ್ ಮಗೆ
109. ಮತ್ತೀರು ಮಗೆ

110. ತೋಪೆಟ್ ಮಗೆ
111. ಖಿಂದೀರ್ ಮಗೆ
112. ಬಾಳೇಜಿ ಮಗೆ
113. ಬೋಳ್ಗೋಳ್ ಮಗೆ
114. ಸೋಣ್ ಜೇನ್ ಮಗೆ
115. ಕೆಮ್ ಸಲ್ ಮಗೆ
116. ಕಮೆಟಿ ಮಗೆ
117. ಕೋಟುಮ್ ಮಗೆ
118. ಗುಮ್ಮೇಟಿ ಮಗೆ
119. ತಿರುಮಲ್ ಮಗೆ
120. ಕೂಗೂರಕ್‌ನ್ ಮಗೆ
122. ಬಳ್‌ಕುರ್ ಮಗೆ
123. ಕೂದೇರ್ ಮಗೆ
124. ಕಿಂದರಿ ಮಗೆ
125. ಬಲ್ತ್ ಮಗೆ
126. ಕೋಪಸ್ ಮಗೆ
127. ಕೊಜಮಕ್ ಮಗೆ

## 2.7. ಕುಡಿಯರು

ಕುಡಿಯರು ಕರ್ನಾಟಕ ಮತ್ತು ಕೇರಳದ ಮಧ್ಯಭಾಗದ ಬೆಟ್ಟಗಳಲ್ಲಿ, ಕಾಡುಗಳಲ್ಲಿ ವಾಸಿಸುವ ಒಂದು ಬುಡಕಟ್ಟು ಸಮುದಾಯ. ಕೊಡಗಿನ ಬೆಟ್ಟಗಳ ಇಳಿಜಾರುಗಳಲ್ಲಿ ಚದುರಿದಂತೆ ಮನೆಗಳನ್ನು ಕಟ್ಟಿಕೊಂಡು ಇವರು ಜೀವನ ನಡೆಸುತ್ತಾರೆ, 'ಕುಡಿ' ಎಂದರೆ ಬೆಟ್ಟದ ತುದಿ. ಬೆಟ್ಟದ ತುದಿಯಲ್ಲಿ ವಾಸ ಮಾಡುವವರೇ ಕುಡಿಯರು. ಕಾಲಾನಂತರದಲ್ಲಿ ಇತರೆ ಪ್ರಬಲ ಸಮುದಾಯಗಳ ಜೊತೆ ಬೆರೆತು ತಮ್ಮ ಸಂಸ್ಕೃತಿ ಸಂಪ್ರದಾಯಗಳನ್ನು ಸಂಪೂರ್ಣವಾಗಿ ಮೇಲ್ವರ್ಗದವರಂತೆ ಬದಲಾಯಿಸಿ ಕೊಂಡಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯರು ಅಲ್ಲಿನ ಪ್ರಬಲ ಸಮುದಾಯವಾದ ಬಂಟರನ್ನು ಅನುಕರಿಸಿದರೆ, ಕೊಡಗಿನ ಕುಡಿಯರು ಕೊಡವರನ್ನು ಅನುಕರಿಸುತ್ತಾರೆ ಮತ್ತು ಇವರನ್ನು ಊರುಕುಡಿಯರು ಎಂದೂ ಕರೆಯುತ್ತಾರೆ. ವಿಶಿಷ್ಟವಾದ ಆಡುಭಾಷೆಯನ್ನು ಕೂಡ ಇವರು ಹೊಂದಿದ್ದಾರೆ. ಇದು ಕನ್ನಡ, ಮಲಯಾಳಂ, ತುಳು, ಕೊಡವ ಭಾಷೆಗಳ ಮಿಶ್ರಣದಂತಿದೆ. ಆದರೆ ಕೊಡಗಿನ ಪೂಮಲೆ ಕುಡಿಯರು ಕೊಡವ ಭಾಷೆಯನ್ನೇ ಮನೆಭಾಷೆಯನ್ನಾಗಿಸಿಕೊಂಡಿದ್ದಾರೆ. ಥರ್ಸ್ಟನ್ ಅವರು 'ಕುಡಿಯ ಮತ್ತು ಮಲೆಕುಡಿಯ ಗುಂಪುಗಳು ಒಂದೇ ಆಗಿದ್ದು ಇವರಲ್ಲಿ ವೈವಾಹಿಕ ಸಂಬಂಧವೂ ಇದೆ. ಮಡಿಕೇರಿಯ ಬುಡಕಟ್ಟು ಜನರು ಧರ್ಮಸ್ಥಳದ ಸುತ್ತಮುತ್ತಲಿನ ಮಲೆಕುಡಿಯ ಹೆಣ್ಣುಮಕ್ಕಳನ್ನು ಮದುವೆಯಾಗಿರುವುದುಂಟು'[12] ಎನ್ನುತ್ತಾರೆ. ಅನಂತಕೃಷ್ಣ ಅಯ್ಯರ್ ಅವರು 'ಕುಡಿಯ ಮತ್ತು ಮಲೆಕುಡಿಯ ಸಮುದಾಯಗಳು ಎರಡು ಒಂದೇ ಆಗಿದ್ದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇವರನ್ನು ಮಲೆಕುಡಿಯರು ಎಂದು ಕರೆದರೆ, ಕೊಡಗು ಜಿಲ್ಲೆಯಲಿ ಕುಡಿಯರೆಂದೇ ಪರಿಚಿತರಾಗಿದ್ದಾರೆ. ಇವರು ವ್ಯವಸಾಯದ ಜೊತೆಗೆ ಜೇನುಸಂಗ್ರಹಣೆ ಮಾಡುತ್ತಾರೆ ಮತ್ತು ಇಂತಹ ಕೆಲಸವನ್ನೇ ಮಾಡಬೇಕೆಂಬ ಕಟ್ಟುನಿಟ್ಟು ಇವರಲ್ಲಿಲ್ಲ. ಇವರ ಮನೆಗಳು ಬೆಟ್ಟಗುಡ್ಡ ಪ್ರದೇಶಗಳಲ್ಲಿ

ಕಾಡಿನ ಹುಲ್ಲುಗಳಿಂದ ಕಟ್ಟಿಕೊಂಡಿರುತ್ತಿದ್ದರು ಮತ್ತು ಇವರ ಸಮುದಾಯದ ಆಗುಹೋಗುಗಳ ನಿವಾರಣೆಗೆ ಒಬ್ಬ ಗುರಿಕಾರ(ನೈಕ) ಇರುತ್ತಿದ್ದನು. ಇವನ ತೀರ್ಮಾನದಂತೆಯೇ ಅವರ ಎಲ್ಲಾ ಕಾರ್ಯ ಚಟುವಟಿಕೆಗಳು ನಡೆಯುತ್ತಿದ್ದವು. ಮತ್ತು ಇವರಲ್ಲಿ ಸ್ವಜಾತಿ ವಿವಾಹಪದ್ಧತಿ ಜಾರಿಯಲ್ಲಿತ್ತು"[13] ಎನ್ನುತ್ತಾರೆ.

ಕುಡಿಯರು ತಮ್ಮ ಬಳಿ ಅಥವಾ ಕುಲವನ್ನು 'ಒಕ್ಕ' ಎಂದು ಕರೆಯುತ್ತಾರೆ. ಕೊಡವ ಭಾಷೆಯಲ್ಲಿಯೂ ಕೂಡ ಬಳಿಗೆ ಒಕ್ಕ ಎಂಬ ಪದ ಬಳಕೆಯಲ್ಲಿದೆ. ಕುಡಿಯರು ಹೆಚ್ಚಾಗಿ ಮಲೆಗಳಲ್ಲಿ ವಾಸಿಸುವವರು. ಮಲೆ ಎಂದರೆ ಬೆಟ್ಟ ಎಂದರ್ಥ. ಪ್ರತಿಯೊಬ್ಬರಿಗೂ ಒಂದೊಂದು ಮನೆತನದ ಹೆಸರಿದ್ದು ತಾವು ವಾಸಿಸುವ ಮಲೆಯ(ಬೆಟ್ಟದ) ಹೆಸರಿನಿಂದ ತಮ್ಮನ್ನು ಗುರುತಿಸಿಕೊಳ್ಳುತ್ತಾರೆ. ಉದಾಹರಣೆಗೆ ಕೋಪಟ್ಟಿ ಮಲೆ ಒಕ್ಕ, ಕುಂಡುಮಲೆ ಒಕ್ಕ, ಕೋಲಿಂದಮಲೆ ಒಕ್ಕ, ತಾಳತ್‌ಮನೆ ಮಲೆ ಒಕ್ಕ, ಕಬ್ಬೆಮಲೆ ಒಕ್ಕ, ಪಡಿಯತ್‌ಮಲೆ ಒಕ್ಕ, ಕುಪ್ಪಮಲೆ ಒಕ್ಕ ಇತ್ಯಾದಿ. ಕುಡಿಯರಲ್ಲಿ ಒಳ ಪ್ರಭೇದಗಳು ಇಲ್ಲ, ಹಾಗೆಯೇ ಒಂದು ಮಲೆಯಿಂದ ಇನ್ನೊಂದು ಮಲೆಗೆ ಇವರಲ್ಲಿ ವೈವಾಹಿಕ ಸಂಬಂಧವೂ ಇಲ್ಲ. ಪ್ರತಿ ಮಲೆಯವರ ಆಚಾರ ವಿಚಾರಗಳು, ನಂಬಿಕೆಗಳು, ಸಂಪ್ರದಾಯಗಳೂ ವಿಶಿಷ್ಟವಾಗಿದ್ದು, ಭಿನ್ನವಾಗಿರುತ್ತವೆ. ಎಡ್ಗರ್ ಥರ್ಸ್ಟನ್ ಅವರ Caste and tribes of south India (1909) ಹಾಗೂ ಎಲ್.ಕೆ. ಅನಂತಕೃಷ್ಣ ಅಯ್ಯರ್ ಅವರ Coorg tribes and castes (1948) ಮತ್ತು ಶ್ರೀ ಸತ್ಯನ್ ಅವರ ಸಂಪಾದಕತ್ವದ 1965ರಲ್ಲಿ ಪ್ರಕಟವಾದ Coorg Gezetteersನಲ್ಲಿ ಕುಡಿಯರ ಜೀವನವಿಧಾನದ ಪರಿಚಯ ನಮಗೆ ಸಂಕ್ಷಿಪ್ತವಾಗಿ ದೊರೆಯುತ್ತದೆ.

ಕಿಟೆಲ್ ಅವರ ಶಬ್ದಕೋಶದಲ್ಲಿ 'ಕುಡಿ' ಎಂಬ ಪದಕ್ಕೆ 'a house, a tribe' ಎಂಬರ್ಥವಿದೆ. ಹಾಗೆಯೇ ಕುಡಿಯನ್ ಎಂಬ ಪದಕ್ಕೆ 'an inhabitant, a farmer' ಎಂದೂ, ಹಾಗೆಯೇ ಒಕ್ಕಲಿಗ, ಕುಡುಒಕ್ಕಲಿಗ, ಕುಡಿಯೊಕ್ಕಲಿಗ ಎಂಬ ಉಲ್ಲೇಖವಿದೆ. ಅಬೆದುಬಾಯಿ ಅವರು ತಮ್ಮ 'The Hindu Manars Customes and Ceremonies' ಎಂಬ ಗ್ರಂಥದಲ್ಲಿ ಟಿಪ್ಪುವಿನ ಬಗ್ಗೆ ಬರೆಯುತ್ತಾ 'ಟಿಪ್ಪುವಿಗೆ ಸಿಕ್ಕಿದ ಮಲ್ಲೈಗೊಂಡಿಗರ್' ಎಂಬ ಪದವನ್ನು ಉಲ್ಲೇಖಿಸುತ್ತಾರೆ. ಈ ಮಲೈಗೊಂಡಿಗರ್ ಕುಡಿಯರೇ ಇರಬಹುದು ಎಂದು ಊಹಿಸಲಾಗಿದೆ.

ಕುಡಿಯರು ತಾವು ವಾಸವಿರುವ ಪ್ರದೇಶದ ಸ್ಥಳೀಯ ಭಾಷೆಯ ಪ್ರಭಾವದಿಂದಾಗಿ ಕೇರಳ ಭಾಗದಲ್ಲಿ ವಾಸವಿರುವ ಕುಡಿಯರು ಮಲಯಾಳ ಮಿಶ್ರಿತ ಕನ್ನಡವನ್ನು ಮನೆಮಾತಾಗಿಸಿಕೊಂಡಿದ್ದಾರೆ. ಈ ಭಾಷೆಯನ್ನು 'ಕುಡಿಯತಕ್' ಎಂದು ಕರೆಯಲಾಗುತ್ತದೆ. ಇವರಲ್ಲಿ ಮೂರು ಮಲೆಕುಡಿಯರು ಮತ್ತು ನಾಲ್ಕು ಮಲೆಕುಡಿಯರು ಎಂಬ ವಿಂಗಡಣೆಯಿದೆ. ಕೊಡಗಿನಲ್ಲಿರುವವರು ಮೂರು ಮಲೆಕುಡಿಯರು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವವರು ನಾಲ್ಕು ಮಲೆಕುಡಿಯರು.

ಕುಡಿಯರಲ್ಲಿ ಎರಡು ಪಂಗಡಗಳಿವೆ

1. ಪೂಮಲೆ ಕುಡಿಯರು: ಪುಷ್ಪಗಿರಿ(ಕಡಮಂಗಲು), ಗಾಳಿಬೀಡು, ಜೋಡುಪಟ್ಟಿ, ಬೆಟ್ಟತ್ತೂರು, ಕೋಪಟ್ಟಿ, ಶೆಟ್ಟಿಮಲೆ, ಕೊಟ್ಟೆನುಲೆ, ನಾಡುಮಲೆ, ಪಡಿಯಮಲೆ, ಕಕ್ಕಬ್ಬೆ, ಚೇಯಂಡಾಣಿ, ಮರಗೋಡು, ವಿರಾಜಪೇಟೆ ತೋರದಲ್ಲಿ ಹೆಚ್ಚಾಗಿ ವಾಸವಿದ್ದಾರೆ.

2. ತೇನ್‌ಮಲೆ ಕುಡಿಯರು: ಎತ್ತರವಾದ ಪರ್ವತಗಳು, ಮರಗಳು, ಗವಿಗಳು, ಛಾವಣಿಗಳಲ್ಲಿ ಕಟ್ಟಿರುವ ಜೇನನ್ನು ಸಂಗ್ರಹಿಸುತ್ತಿದ್ದುದರಿಂದ ಆ ಗುಂಪನ್ನು ತೇನ್‌ಮಲೆ ಕುಡಿಯರು ಎಂದು ಕರೆಯಲಾಗುತ್ತದೆ. ಇವರು ಕಮ್ಮಾಡಿ, ಕರಜಕೋಟೆ, ಎರವಳ್ಳಿ, ಕಾನಂಗಾಡಿ, ಗಾರೆಮಾರಿ, ಮಾಡತ್‌ಮಲೆಯಲ್ಲಿ ವಾಸವಾಗಿದ್ದಾರೆ. ಇಷ್ಟೇ ಅಲ್ಲದೆ

   1. ನಾಲ್ಕು ಮಲೆಕುಡಿಯ: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸಿಸುವವರು
   2. ಮೂರು ಮಲೆಕುಡಿಯ: ಕೊಡಗಿನಲ್ಲಿರುವವರು
   3. ಅಡಿಕೆ ಕುಡಿಯರು: ಅಡಕೆ ತೋಟದಲ್ಲಿ ಕೆಲಸ ಮಾಡುವವರು

ಎಂಬ ಮೂರು ಪ್ರತ್ಯೇಕ ವಿಭಾಗಗಳೂ ಕೂಡ ಇವೆ.

ಕೊಡಗಿನಲ್ಲಿ ವಾಸಿಸುವ ಸಮುದಾಯವನ್ನು 'ಕುಡಿಯ' ಎಂದು ಕರೆದರೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸಿಸುವ ಈ ಸಮುದಾಯವನ್ನು 'ಮಲೆಕುಡಿಯ' ಎಂದು ಕರೆಯಲಾಗುತ್ತದೆ. ಕುಡಿ ಎಂದರೆ ತುದಿ. ಮಲೆ ಎಂದರೆ ಬೆಟ್ಟ, ಬೆಟ್ಟದ ತುದಿಯಲ್ಲಿ ವಾಸಿಸುವವರು ಮಲೆಕುಡಿಯರು. ಕುಡಿ ಪದಕ್ಕೆ ಸಂತಾನ ಎಂಬ ಅರ್ಥವೂ ಇದೆ. ಬೆಟ್ಟದ ಮೇಲೆ ವಾಸಿಸುವ ಸಂತಾನ ಎಂದು ಅರ್ಥ. ಕುಡಿ ಎಂದರೆ ಮಲಯಾಳಂನಲ್ಲಿ ಗುಡಿಸಿಲು. ಕುಡಿ ಪದಕ್ಕೆ ಒಕ್ಕಲಿಗ ಎಂಬರ್ಥವೂ ಇದೆ. ಕುಡಿಯೊಕ್ಕಲಿಗ ಎಂದರೆ ಬೆಟ್ಟದಲ್ಲಿ ಕೃಷಿ ಮಾಡುವವನು. ಇವರದು ಕುಮುರಿ ಬೇಸಾಯ ಪದ್ಧತಿ. ಇವರು ಒಂದು ಕಾಲದಲ್ಲಿ ನಾಡಿನಲ್ಲಿ ಬದುಕುತ್ತಿದ್ದರು. ಕಾರಣಾಂತರದಿಂದ ಬೆಟ್ಟದ ಮೇಲೆ ಬದುಕು ಕಟ್ಟಿಕೊಂಡವರು ಎಂದು ಹೇಳಲಾಗುತ್ತದೆ. ಇವರು ಬಗನಿ ಮರದ ಹೆಂಡವನ್ನು ಕುಡಿದು ಬದುಕುತ್ತಿದ್ದವರು, ಆ ಕಾರಣದಿಂದಲೂ ಕುಡಿಯರು ಎಂಬ ಹೆಸರು ಬಂದಿರಬಹುದು'.[14]

**ಪೂಮಲೆ ಕುಡಿಯ :** 'ಕಾವೇರಿ ಪುರಾಣದಲ್ಲಿ ಚಂದ್ರವರ್ಮ ರಾಜನ ಆಡಳಿತಲ್ಲಿಯೇ ಕೊಡಗಿನಲ್ಲಿ ಕುಡಿಯ ಜನಾಂಗ ಇದ್ದಿದ್ದರ ಉಲ್ಲೇಖವಿದೆ.'[15] ಒಂದು ಐತಿಹ್ಯದ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯ ಸುಬ್ರಹ್ಮಣ್ಯ ಸಮೀಪದಲ್ಲಿ ಪೂಮಲೆ ಎಂಬ ದಟ್ಟ ಅರಣ್ಯ ಪ್ರದೇಶವಿದ್ದು ಅಲ್ಲಿ ವಾಸ ಮಾಡುತ್ತಿದ್ದ ಕಾಡಿನ ಮಕ್ಕಳು ಉದ್ಯೋಗ ಹುಡುಕಿಕೊಂಡು ಅಲೆಮಾರಿ ಜೀವನ ನಡೆಸುತ್ತಿದ್ದರಂತೆ. ಅಂದಿನ

ಕಾಲದಲ್ಲಿ ರಾಜರ ಅಪ್ಪಣೆಯಂತೆ ಕೊಡಗಿನ ಗಡಿ ಭಾಗದಲ್ಲಿ ಅಂದರೆ ಇಂದಿನ ಪಶ್ಚಿಮ ಘಟ್ಟದ ಸಾಲುಗಳಲ್ಲಿ ಅಂದರೆ ಕುಟ್ಟತ್ ಮಲೆಯಿಂದ ಬೊಟ್ಟತ್ ಮಲೆಯವರೆಗೆ, ಬೊಟ್ಟತ್ ಮಲೆಯಿಂದ ಮೂಜೆ ಮಲೆ ಸುಬ್ರಹ್ಮಣ್ಯದವರೆಗೆ ಗಡಿ ಕಾಯಲು ನಿಂತವರು. ಆಯಾಯ ಜಾಗದಲ್ಲಿ ಗುಡಿಸಲು ಮನೆ ಕಟ್ಟಿಕೊಂಡು ಜೀವನ ನಡೆಸುತ್ತಿದ್ದರು. ಹೀಗೆ ಇವರು ಮಲೆಗಳಲ್ಲಿ ವಾಸ ಮಾಡುತ್ತಿರುವುದರಿಂದ ಇವರಿಗೆ ಮಲೆಕುಡಿಯ ಎಂಬ ಹೆಸರು ಬಂದಿದೆ. ಇವರೆಲ್ಲರೂ ಪೂಮಲೆ ಎಂಬ ಜಾಗದಿಂದ ಬಂದು ನೆಲೆಸಿರುವುದರಿಂದ ಇವರಿಗೆ ಪೂಮಲೆ ಕುಡಿಯ ಎಂಬ ಹೆಸರು ರೂಢಿಯಲ್ಲಿದೆ ಎಂಬ ಅಭಿಪ್ರಾಯವಿದೆ. ಕೊಡಗಿನಲ್ಲಿ ತೇಮಲೆ ಕುಡಿಯರದು ಅಳಿಯ ಸಂತಾನವಾದರೆ, ಪೂಮಲೆ ಕುಡಿಯರದು ಮಕ್ಕಳ ಸಂತಾನ.

ಇತರೆ ಬುಡಕಟ್ಟುಗಳ ಮೌಖಿಕ ಸಾಹಿತ್ಯವು ಪ್ರಕೃತಿಯನ್ನು ಕುರಿತದ್ದಾಗಿದ್ದರೆ, ಕುಡಿಯರ ಮೌಖಿಕ ಸಾಹಿತ್ಯವು ಪ್ರಕೃತಿ ಹಾಗೂ ಪ್ರಕೃತಿಯೊಂದಿಗಿನ ಮನುಷ್ಯನ ಬದುಕಿಗೆ ಸಂಬಂಧಿಸಿದೆ. ಕಾಡನ್ನು ಬಿಟ್ಟು ಹೊರ ಪ್ರಪಂಚದ ಸಂಪರ್ಕ ಬೇಗ ಉಂಟಾದ ಕಾರಣ, ಇವರ ಮೌಖಿಕ ಸಾಹಿತ್ಯದಲ್ಲಿ ಪ್ರಕೃತಿ ಹಾಗೂ ಮಾನವನ ಬದುಕಿನ ಸ್ವಾರಸ್ಯ ಹಾಗೂ ಸಂಘರ್ಷವೂ ಬೆರೆತಿದೆ.

ಕೊಡಗಿನಲ್ಲಿರುವ ಕುಡಿಯರು ಕೊಡವ ಭಾಷೆಯನ್ನು ಮನೆಭಾಷೆಯಾಗಿ ಬಳಸುವುದರೊಂದಿಗೆ ಕೊಡವರದೇ ಆಚಾರ, ವಿಚಾರ ಸಂಪ್ರದಾಯಗಳನ್ನು ರೂಢಿಸಿಕೊಂಡಿದ್ದಾರೆ. ಇವರದು ಪಿತೃಪ್ರಧಾನ ವ್ಯವಸ್ಥೆ. ಒಂದೇ ಕುಲದೊಳಗೆ ಮದುವೆ ನಿಷಿದ್ಧ. ಇವರ ಪ್ರಮುಖ ಕುಲಗಳು ಯಾವುವೆಂದರೆ 'ಕುಂಡಮಲೆ ಒಕ್ಕ, ಕೋಲಿಂದ ಒಕ್ಕ, ತೆಂಬರೆ ಒಕ್ಕ, ಬೊಬ್ಬಿಕಾಡು ಒಕ್ಕ, ಚಟ್ಟೆಮಲೆ ಒಕ್ಕ, ಕಿಪ್ಪಾರೆಮಲೆ ಒಕ್ಕ, ನಾರೋಟ ಒಕ್ಕ, ಬೊಳತೆ ಒಕ್ಕ, ಪಾರೆಮಂಜ ಒಕ್ಕ, ಕುಯಿನಾಲು ಒಕ್ಕ, ಪಂದಕಳ ಒಕ್ಕ, ಬನತ್ ಕಾಡು ಒಕ್ಕ, ಕುಟ್ಟನಾ ಒಕ್ಕ, ಪಾರೆಮಂಜಿ ಒಕ್ಕ, ಪುಡಿಯಡ ಒಕ್ಕ, ಬಾಡತ್ ಒಕ್ಕ, ಬಾಚೊಕ್ಕು ಒಕ್ಕ, ಆಂದೋಳತಕ್ಕ ಒಕ್ಕ, ಕೋಪಟ್ಟಿಮಲೆ ಒಕ್ಕ, ಕಮ್ಮಾಡಿಮಲೆ ಒಕ್ಕ, ಪಡಿಯತ್ ಮಲೆ ಒಕ್ಕ, ಪಾಳೆಮಲೆ ಒಕ್ಕ, ನಾಡುಮಲೆ ಒಕ್ಕ, ಪಡಿಯಡಿ ಮಲೆ ಒಕ್ಕ.'[16]

ಪೂಮಲೆ ಕುಡಿಯರನ್ನು ಊರು ಕುಡಿಯರು ಎಂದು ಸಹ ಕರೆಯುತ್ತಾರೆ. ಇತರೆ ಕುಡಿಯರಿಗಿಂತ ಶ್ರೇಷ್ಠ ಸ್ಥಾನಮಾನ ಇವರಿಗಿದೆ ಎನ್ನುತ್ತಾರೆ. ಬಿದಿರು ವಸ್ತುಗಳನ್ನು ತಯಾರಿಸುವುದು, ಬೈನೆ ಮರದ ಹೆಂಡ ಇಳಿಸುವುದು ಇವರ ಪ್ರಮುಖ ಕಸಬು. ತಮಗೆ ಇರುವ ಅಲ್ಪಸ್ವಲ್ಪ ಜಮೀನಿನಲ್ಲಿ ಇತ್ತೀಚೆಗೆ ಕಾಫಿ, ಏಲಕ್ಕಿ ಕರಿಮೆಣಸು ಬೆಳೆಯುತ್ತಾರೆ.

**ತೇಮಲೆ ಕುಡಿಯ:** ಕಾಡಿನ ಜೇನು ಸಂಗ್ರಹಣೆ ಇವರ ಮುಖ್ಯ ಕುಲಕಸುಬು. 'ತೇನ್ ಎಂದರೆ ಜೇನು, ಆದ್ದರಿಂದಲೇ ತೇನ್‌ಮಲೆ ಕುಡಿಯರೆಂದು ಇವರಿಗೆ ಹೆಸರು ಬಂದಿದೆ. ಇವರು ತಾವು

ವಾಸಿಸುವ ಬೆಟ್ಟ(ಮಲೆ) ಹಾಗೂ ಕುಲದೈವಗಳಿಂದ ತಮ್ಮನ್ನು ಗುರುತಿಸಿಕೊಳ್ಳುತಾರೆ. ಇವರು ಬೈನೆ ಮರದಿಂದ ಬೈನೆ ಸೇಂದಿ ಸಂಗ್ರಹಿಸುವುದು ಹಾಗೂ ಕಾಡಿನಲ್ಲಿ ಕಿರು ಉತ್ಪನ್ನಗಳನ್ನು ಸಂಗ್ರಹಿಸುವುದನ್ನು ಅವಲಂಬಿಸಿದ್ದಾರೆ. ಆದ್ದರಿಂದ ಇವರನ್ನು 'ಕಾಡು ಕುಡಿಯರು' ಎಂದೂ ಕೂಡ ಕರೆಯುತ್ತಾರೆ.'[17] ಇವರ ಪ್ರಮುಖ ಕುಲಗಳು, ಕೊಡನ್ನಾಡ, ಮೂರು ಮಲೆಯ, ಡೆಕ್ಕಿಂಜಾಲು ಮಲೆಯ, ನಡ್ಡ ಮಲೆಯ, ಕಮ್ಮಾಡಿ ಮಲೆಯ, ನಾಯಿರ ಮಲೆಯ, ಚೇರಂಬಾಡಿ ಮಲೆಯ, ಬಿಳಿಯ ಬೈಲಿ, ನಡ್ಯಮಲೆಯ, ಅತಿಕ್ಕಡು, ಕೊಡನ್ನಾಡ ಮಾರು ಮಲೆಯ, ಊರಕ್ಕಾಡು ಮಲೆಯ, ಕುಂಜಂಗಾಡು ಮಲೆಯ, ಕರಿಕೆ ಕೊಡಂದಾಡ 'ಮಾರುಮಲೆಯ ಬಂಟರ ಹುಡುಗಿಯೊಬ್ಬಳು ನಾಯರ್ ಕುಟುಂಬದಲ್ಲಿ ಮನೆಕೆಲಸ ಮಾಡುತ್ತಿದ್ದಳು. ಆಗ ಆಕೆ ಗರ್ಭ ಧರಿಸುತ್ತಾಳೆ. ಇದನ್ನು ಅಪಮಾನವೆಂದು ಭಾವಿಸಿದ ನಾಯರ್ ಕುಟುಂಬ ಅವಳು ಮಾಡಿದ ತಪ್ಪಿಗಾಗಿ ಅವಳನ್ನು ಕೊಲ್ಲಲು ನಿರ್ಧರಿಸುತ್ತಾರೆ. ಆ ಸಮಯದಲ್ಲಿ ಅಲ್ಲಿನ ತೇಮಲೆ ಕುಡಿಯರು ತಮ್ಮಲ್ಲೇ ಒಂದು ತೀರ್ಮಾನಕ್ಕೆ ಬಂದು, ತಮ್ಮ ಸಮುದಾಯದಲ್ಲಿಯೇ ಒಬ್ಬರು ಅವಳನ್ನು ಮದುವೆಯಾಗಲು ನಿರ್ಧರಿಸಿ ತಾವೇ ಅವಳ ಗರ್ಭಕ್ಕೆ ಕಾರಣ ಎಂದು ಹೇಳಿ ಅವಳನ್ನು ಪಾರುಮಾಡುತ್ತಾರೆ. ನಂತರ ಅವಳಿಗೆ ಹುಟ್ಟಿದ ಅವಳಿ ಹೆಣ್ಣುಮಕ್ಕಳಲ್ಲಿ ಒಂದು ಮಗುವನ್ನು ಕೊಡಂದಾಡಿ ಮಲೆಯವರು, ಮತ್ತೊಂದು ಮಗುವನ್ನು ಕಮ್ಮಾಡಿ ಮಲೆಯವರು ತೆಗೆದುಕೊಂಡು ಹೋಗಿ ಸಾಕುತ್ತಾರೆ. ಈ ಇಬ್ಬರು ಹೆಣ್ಣುಮಕ್ಕಳಿಂದ ಜನಿಸಿದವರೇ ಮುಂದೆ ತೇಮಲೆ ಕುಡಿಯರಾಗುತ್ತಾರೆ ಎಂಬುದಾಗಿ ದೇವರ ಕೊಲ್ಲಿಯ ಕೆ.ಟಿ.ಚಂದ್ರ ಅವರ ಮಗಳು ಭಾಗ್ಯಮ್ಮ ಹೇಳಿದ್ದಾರೆ'[18] ಎಂದು ಸಂಶೋಧಕರು ದಾಖಲಿಸಿದ್ದಾರೆ. ತೇಮಲೆ ಕುಡಿಯರು ಮಾತೃಪ್ರಧಾನ ವ್ಯವಸ್ಥೆಯನ್ನು ಪಾಲಿಸುತ್ತಾರೆ. ಇವರು ಅಳಿಯಕಟ್ಟು ಸಂತಾನದವರು. ಈ ಸಮುದಾಯದ ಮುಖ್ಯಸ್ಥನನ್ನು 'ಗುರಿಕಾರ' ಹಾಗೂ 'ಗೌಡರು' ಎಂದು ಕರೆಯುತ್ತಾರೆ.

**ಅಡಿಕೆ ಕುಡಿಯ:** ಅಡಿಕೆ ತೋಟದಲ್ಲಿ ಕೆಲಸ ಮಾಡುವ ಕಾರಣದಿಂದ ಹಾಗೂ ಅಡಿಕೆ ತೋಟಗಳನ್ನು ಬೆಳೆಸಿ ಜೀವನ ನಿರ್ವಹಣೆ ಮಾಡುವುದರಿಂದ ಇವರಿಗೆ ಅಡಿಕೆ ಕುಡಿಯ ಎಂಬ ಹೆಸರು ಬಂದಿದೆ. ಇವರು ತಮ್ಮ ಕುಲವನ್ನು 'ಬರಿ' ಎಂದು ಕರೆಯುತ್ತಾರೆ. ಇವರು ತಮ್ಮ ಬರಿಯನ್ನು ತಮ್ಮ ಪೂರ್ವಜರಿಂದ ತಾವು ವಾಸ ಮಾಡುವ ಸ್ಥಳಗಳಿಂದ, ಪೂಜಿಸುವ ಕುಲದೇವತೆಗಳಿಂದ ಗುರುತಿಸಿಕೊಳ್ಳುತ್ತಾರೆ. ಪ್ರಮುಖ ಬಳಿ(ಕುಲ)ಗಳೆಂದರೆ ಚಾಲಿಯನ್ ಬರಿ, ಕರಂಬೇರಾ ಬರಿ, ಬಾರ್ತೆರಾ ಬರಿ, ಬಂಗೇರ ಬರಿ, ಮೂಲಿಯರ್ ಬರಿ, ಗುಂಡೆರಾ ಬರಿ, ಬಳಸಾರ್ ಬರಿ, ಪೂಲ್‌ಯಾರ್ ಬರಿ, ಪೆರ್ಗನಾ ಬರಿ, ನಂದೇರಾ ಬರಿ ಮುಂತಾದವು.

**ಪೂಮಲೆ ಕುಡಿಯರ ವಾಸಸ್ಥಳ:** ಮಡಿಕೇರಿ, ಯುವಕಪಾಡಿ, ನಾಲಾಡಿ, ತೋತಾಲ್ ಕಾಲೋನಿ ನಾಲಾಡಿ, ಮೇಕೆಕೊಪ್ಪ ಕಾಲೋನಿ, ಜೋಡುಪಾಲು, ದೇವರಕೊಲ್ಲಿ, ಕಟ್ಟಪುಳ್ಳಿ, ಮುರಂದೋಡಿ

ಚೇಲಾವರ, ಬಣವಲು(ನವಾಗ್ರಾಮ) ಗಾಳಿಬೀಡು, ಬೆಟ್ಟತ್ತೂರು, ಕೋಪಟ್ಟಿ ಚಿಂಗೂರು ಸಣ್ಣಪುಳಿಕೋಯ, ಚೆಯಂಡಾಣೆ, ಮದೆಗ್ರಾಮ, ಪೇರೂರು ಮದೆನಾಡು, ಕೋಪಟ್ಟಮ, ಪಡಿಯಮಲೆ, ನಾಡಮಲೆ, ಕಕ್ಕಬ್ಬೆ ಶೆಟ್ಟಿಮಲೆ, ಕೊಟ್ಟಿಮಲೆ, ತರಕ್ಕಮಾನಿ ವೀರಾಜಪೇಟೆ ತೋರ ಚೆಟ್ಟಿಮಾಡು ಕಡೆಮಂಗಲ.

**ಅಡಿಕೆ ಕುಡಿಯರು:** ಗುಡ್ಡೆಗದ್ದೆ, ಅರೆಕಲ್ಲು, ಕುಂಟತ್ತಿಕಾನ ಈ ಮೂರು ಕುಲಗಳಲ್ಲಿ ಹಿಂದೆ ಕೊಡುಕೊಳ್ಳುವ ಸಹಬಾಂಧವ್ಯ ಆಚರಣೆಯಲ್ಲಿ ಇರಲಿಲ್ಲ. ಈಗ ಈ ಕಟ್ಟು ಸಡಿಲವಾಗುತ್ತದೆ. ಮನೆ-ಫಲವತ್ತಾದ ಬೆಟ್ಟದ ಇಳಿಜಾರಿನಲ್ಲಿ ನೀರು ಹರಿಯುವ ಕಡೆಗಳಲ್ಲಿ ವಾಸ ಮಾಡುತ್ತಾರೆ. ಇವರನ್ನು ಶೈವಾರಾಧಕರು ಹಾಗೆಯೇ ವೈಷ್ಣವಾರಾಧಕರೂ ಇದ್ದಾರೆ. ಮದುವೆಗಳಲ್ಲಿ ಈ ಕುಡಿಯರು ಏಲಕ್ಕಿ ಮಾಲೆಯನ್ನು ಕಡ್ಡಾಯವಾಗಿ ಧರಿಸುತ್ತಾರೆ. ಏಲಕ್ಕಿ ಪೋಣಿಸಿದ ಮಾಲೆಯನ್ನು ದೇವರ ಉತ್ಸವಗಳಲ್ಲಿ ತಾವೂ ಧರಿಸಿ, ದೇವರಿಗೂ ಹಾಕುತ್ತಾರೆ.

**ತೇಮಲೆ ಕುಡಿಯರು:** ಮಡಿಕೇರಿ-ಕಟ್ಟಪ್ಪಳ್ಳಿ, ಜೋಡುಪಾಲ, ನಡ್ಯಾಮಲೆ, ಕೊಯ್ನಾಡು, ದೇವರಕೊಲ್ಲಿ, ಕರಿಕೆ ಪೊಂಗಾನ ಕಾಲೋನಿ, ಕರಿಕೆ ಕೊಳುಗಾರೆ ಕಾಲೋನಿ, ಆತ್ಮಕೆರೆ ಕಾಲೋನಿ, ಕರಿಕೆ ಕುಡಿಯಂಗಲ್ ಕಾಲೋನಿ ಕರಿಕೆ ಮುಂಡೆ ಸ್ಥಾನ ಕಾಲೋನಿ, ಕರಿಕ ಕುಂಡತ್ತಿಕಾನ ಕಾಲೋನಿ ಕರಿಕ ಬೇಟ ಗುಂಡತ್ತಿಕಾನ ಕಾಲೋನಿ.

## ಕುಡಿಯರ ಆಹಾರಪದ್ಧತಿ

ಕಾಡಿನಲ್ಲಿ ತಿನ್ನಲು ಯೋಗ್ಯವಾದ ಸೊಪ್ಪು, ಗೆಣಸು, ಅಣಬೆ, ಸಣ್ಣಪುಟ್ಟ ಪ್ರಾಣಿ-ಪಕ್ಷಿಗಳು, ಮೀನು, ನಳ್ಳಿ, ಸೀಗಡಿ ಇತ್ಯಾದಿಗಳು ಕುಡಿಯರ ಆಹಾರದಲ್ಲಿ ಸೇರಿಕೊಂಡಿವೆ. ಬೈನೆ ಮರದಿಂದ ಕೇವಲ ಕಳ್ಳನ್ನು ಮಾತ್ರ ಬಳಸುವುದಿಲ್ಲ, ಬದಲಿಗೆ ಬರಗಾಲದ ಸಮಯದಲ್ಲಿ ಬೈನೆ ಮರದ ಹಿಟ್ಟನ್ನು ಕೂಡ ಆಹಾರವಾಗಿ ಬಳಸುತ್ತಾರೆ. ಬೈನೆಮರ ಕುಡಿಯರ ಆದಾಯದ ಮೂಲ ಹೇಗೋ ಅಂತೆಯೇ, ಬರಗಾಲದ ಸಮಯದಲ್ಲಿ ಆ ಮರದ ತಿರುಳಿನಿಂದ ತಯಾರಿಸಿದ ಗಂಜಿ ಅವರ ಹೊಟ್ಟೆ ತುಂಬಿಸಲು ನೆರವಾಗುತ್ತಿತ್ತು. ಹೀಗೆ ಬೈನೆ ಅವರ ಆಹಾರದ ಭಾಗವಾಗಿದೆ. 'ತಾಳೆ ಮರ ಹೂಬಿಟ್ಟ ತಕ್ಷಣ ಮರವನ್ನು ಕಡಿದು ಅದರ ಹೊರಸಿಪ್ಪೆಯನ್ನು ತೆಗೆದು ಅದರ ಒಳದಂಟನ್ನು ಸಣ್ಣ ಸಣ್ಣ ತುಂಡುಗಳಾಗಿ ಮಾಡಿ ಬಿಸಿಲಿನಲ್ಲಿ ಒಣಗಿಸಿ ತುಂಡುಗಳನ್ನಾಗಿ ಮಾಡಿ ಹೊರಳು ಕಲ್ಲಿನಲ್ಲಿ ಕುಟ್ಟಿ ಪುಡಿ ಮಾಡುತ್ತಾರೆ. ಇದೇ ತಾಳೆ ಹಿಟ್ಟು. ಇದರ ಅಂಬಲಿಯನ್ನು ಬೆಲ್ಲದ ಜೊತೆ ಅಥವಾ ಉಪ್ಪು ಮೆಣಸುಗಳ ಜೊತೆ ಸೇವಿಸುತ್ತಾರೆ. ಇದು ರುಚಿಯಾದ ಆಹಾರ. ಗಾಳಿ ಆಡದ ಮಣ್ಣಿನ ಮಡಕೆಗಳಲ್ಲಿ ಈ ಹಿಟ್ಟನ್ನು ಶೇಖರಿಸಿ ಇಡುತ್ತಾರೆ. ಇದು ಸುಮಾರು ಮೂರು ವರ್ಷ ಕೆಡದೆ

ಇರಬಲ್ಲದು. ಹಾಗೆಯೇ ಕಾಡುನೆಟ್ಟಿ ಮರವನ್ನು ಕಡಿದು ಅದರ ಒಳಭಾಗದ ತಿರುಳನ್ನು ಕೂಡ ಆಹಾರವಾಗಿ ಸೇವಿಸುತ್ತಿದ್ದರು. ಆದರೆ ಇತ್ತೀಚೆಗೆ ಈ ರೀತಿಯ ಆಹಾರದ ಬಳಕೆ ನಿಂತು ಹೋಗಿದೆ.

ಸಾಹಿತ್ಯವನ್ನು ಅಧ್ಯಯನದ ಕಾರಣಕ್ಕಾಗಿ ಜನಪದ, ಲಿಖಿತ ಮತ್ತು ಬುಡಕಟ್ಟು ಸಾಹಿತ್ಯ ಎಂದು ಮಾಡಲಾಗಿದೆ. ಆದರೆ ಈ ವಿಂಗಡಣೆಗಳು ಅತ್ಯಂತಿಕವಲ್ಲ. ಆದರೆ ಸಮಾಜದ ಭಿನ್ನ ಸ್ತರಗಳಲ್ಲಿ ಸೃಷ್ಟಿಯಾದ ಸಾಹಿತ್ಯವು ಏಕರೂಪವಾಗೇನು ಇಲ್ಲ. ಜೊತೆಗೆ ಈ ವಿವಿಧ ಸ್ತರವಿನ್ಯಾಸದಲ್ಲಿ ರೂಪುಗೊಂಡ ಸಾಹಿತ್ಯಕ್ಕೆ ಪರಸ್ಪರ ಪ್ರೇರಣೆಗಳಿದ್ದರೂ ಸಹ ಸಾಮಾಜಿಕ ರಾಜಕೀಯ ಗ್ರಹಿಗಳು ಭಿನ್ನವಾಗಿಯೇ ಇವೆ. ಈ ಕಾರಣದಿಂದ 'ಮುಖ್ಯವಾಹಿನಿಯ' ಜೊತೆಗಿದ್ದೂ ಉಳಿದುಕೊಂಡು ಬಂದ ಗ್ರಾಮಗಳ ಜಾನಪದ ಮತ್ತು ಅರಣ್ಯಗಳ ಒಳಗೇ ಲೋಕವನ್ನು ಗ್ರಹಿಸುವ ಆದಿವಾಸಿಗಳ ನುಡಿರೂಪಗಳಿಗೆ ಪ್ರತ್ಯೇಕ ಅನನ್ಯತೆಗಳಿವೆ.

ಜನಪದ ಮೌಖಿಕ ಸಾಹಿತ್ಯವು ಹೆಣ್ಣಿನ ಬದುಕು, ಬವಣೆ, ಬಡತನ, ಊಳಿಗಮಾನ್ಯ ವಿರೋಧಿತನ, ತವರುಮನೆ, ಗಂಡನಮನೆ, ಪಾವಿತ್ರ್ಯತೆ, ಸ್ತ್ರೀಸ್ವಾತಂತ್ರ್ಯ, ಸುಗ್ಗಿ, ವ್ಯವಸಾಯ ಈ ಮೊದಲಾದ ಅಂಶಗಳನ್ನು ಒಳಗೊಂಡಿರುತ್ತದೆ. ಇನ್ನೂ ಮುಂದೆ ಸಾಗಿದರೆ ಸುಮಾರು 18ನೇ ಶತಮಾನದ ಕಾಲಘಟ್ಟದಲ್ಲಿ ಸಾಮಾಜಿಕವಾಗಿ ಕ್ರಾಂತಿಯನ್ನು ಮಾಡಿದ ಹಲವು ವೀರರ ಹಾಗು ಸಾಮಾಜಿಕ ಆಂದೋಲನಗಳ ಹರಿಕಾರರನ್ನು ಕುರಿತ ಹಾಡುಗಳು, ಲಾವಣಿಗಳು, ಕತೆಗಳು, ಕಾವ್ಯಗಳನ್ನು ಕುರಿತಂತಹ ರಚನಗೆಳೂ ನಮಗೆ ದೊರೆಯುತ್ತವೆ. ಆದರೆ ಬುಡಕಟ್ಟು ಸಾಹಿತ್ಯ ಇವೆಲ್ಲಕ್ಕಿಂತ ಭಿನ್ನವಾಗಿ ಕಾಡು-ಮೇಡು, ಮರ-ಗಿಡ-ಬಳ್ಳಿ, ಪ್ರಾಣಿ, ಪಕ್ಷಿ, ಸ್ವಚ್ಛಂದತೆ, ತಮ್ಮ ಹುಟ್ಟಿನ ಕುರಿತ ಹೆಮ್ಮೆಯೊಂದಿಗೆ ಕೀಳರಿಮೆಯನ್ನೂ, ತಾವು ಕಾಡಿನಲ್ಲಿದ್ದೂ ಪರಕೀಯತೆಯನ್ನು ಅನುಭವಿಸುತ್ತಿರುವ ನೋವು ಸಂಕಟ ಪರಾಧೀನತೆಯೇ ಮೊದಲಾದವುಗಳನ್ನು ಮುಖ್ಯ ವಸ್ತು ವಿಷಯವನ್ನಾಗಿರಿಸಿಕೊಂಡಿದೆ.

ಸಾಹಿತ್ಯವನ್ನು ಶಿಷ್ಟ ಸಾಹಿತ್ಯ, ಜನಪದ ಸಾಹಿತ್ಯ, ಬುಡಕಟ್ಟು ಸಾಹಿತ್ಯ ಎಂದು ವರ್ಗೀಕರಿಸಲಾಗಿದೆ. ಕೊಡಗಿನಲ್ಲಿ ವಾಸವಿರುವ ಎರವರು, ಜೇನುಕುರುಬರು, ಬೆಟ್ಟಕುರುಬರು, ಸೋಲಿಗರು ಮತ್ತು ಕುಡಿಯರ ಬದುಕು ಮತ್ತು ಅವರ ಮೌಖಿಕ ಸಾಹಿತ್ಯವನ್ನು ಕುರಿತು ಪ್ರಸ್ತುತ ಪ್ರಬಂಧದಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ. ಬುಡಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಬಹು ಮುಖ್ಯ ಪ್ರಕಾರವಾದ ಕತೆಗಳನ್ನು ರಮ್ಯ ಕಥೆಗಳು, ಪರಿಸರದ ಕಥೆಗಳು, ಸಾಮಾಜಿಕ ಕಟ್ಟಳೆಗಳನ್ನು ಕುರಿತ ಕತೆಗಳು, ಪ್ರಾಣಿ ಕತೆಗಳು, ಅತಿಮಾನುಷ ಕತೆಗಳು, ನೀತಿ ಕಥೆಗಳು, ಮಕ್ಕಳ ಕಥೆಗಳು, ಹೆಣ್ಣಿನ ಚಾರಿತ್ರ್ಯದ ಕಥೆಗಳು, ಗಂಡು ಹೆಣ್ಣಿನ ಸಂಘರ್ಷದ ಕಥೆಗಳು

ಎಂದೂ ಹಾಡುಗಳನ್ನು ತಿಥಿ ಹಾಡು, ಮನರಂಜನೆಯ ಹಾಡು, ಮಕ್ಕಳ ಹಾಡು, ದೇವರ ಹಾಡು, ಬೇಟೆಯ ಹಾಡು ಈ ಮುಂತಾಗಿ ವಿಭಾಗಿಸಬಹುದು. ಕಾವ್ಯಗಳನ್ನು ಮಹಾಕಾವ್ಯಗಳು, ಸೃಷ್ಟಿ ಪುರಾಣಗಳೆಂದು ಹಲವು ಪ್ರಕಾರಗಳನ್ನು ಗುರುತಿಸಲಾಗಿದೆ. ಮುಂದಿನ ಹಂತದಲ್ಲಿ ಕೊಡಗಿನ ಬುಡಕಟ್ಟುಗಳಾದ ಎರವರು, ಜೇನುಕುರುಬರು, ಬೆಟ್ಟಕುರುಬರು, ಸೋಲಿಗರು ಮತ್ತು ಕುಡಿಯರ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಳ್ಳಲಾಗಿದೆ.

1. ಎರವರನ್ನು ಕೊಡಗಿನ ಮೂಲನಿವಾಸಿಗಳು ಎಂದು ಗುರುತಿಸಲಾಗಿದೆ. ಎರವರು ತಮ್ಮದೇ ಆದ ವ್ಯವಸ್ಥಿತವಾದ ಕೌಟುಂಬಿಕ ಹಾಗೂ ಒಳಾಡಳಿತ ವ್ಯವಸ್ಥೆಯನ್ನು, ವಿಶಿಷ್ಟವಾದ ಆಚಾರ, ಸಂಪ್ರದಾಯ, ಉಡುಗೆ, ಆಹಾರ ಪದ್ಧತಿ, ನಂಬಿಕೆಗಳನ್ನು ಹೊಂದಿದ್ದಾರೆ. ಈ ಅಧ್ಯಾಯದಲ್ಲಿ ಪಂಜರಿ ಎರವ, ಫಣಿ ಎರವರನ್ನು ಕುರಿತು ಪರಿಚಯಿಸಲಾಗಿದೆ. ಹಾಗೆಯೇ ಎರವರ ಕುಲಗಳು, ಬಳಿಗಳು, ದೈವಗಳ ವಿಂಗಡಣೆಯಿದೆ. ತೀ.ನಂ ಶಂಕರನಾರಾಯಣರು 'ವಯನಾಡಿಗೆ ಮಲಯಾಳಿಗಳು ಬಂದು ಸ್ಥಳಿಯವಾದ ಒಂದೆರಡು ಆದಿವಾಸಿ ಬಣಗಳೊಂದಿಗೆ ಬಹುಶಃ ಬೆಟ್ಟಕುರುಬ, ಕಾಡುಕುರುಬ ಸಮುದಾಯದವರೊಂದಿಗೆ ಸ್ನೇಹಗಳಿಸಿ ಅವರ ನೆರವಿನಿಂದ ಆ ಪ್ರದೇಶದಲ್ಲಿ ಅಡಿಯರೆಂದು ಹೆಸರಾಗಿರುವ ಜನರನ್ನೂ ಫಣಿಯರನ್ನು ಹೆದರಿಸಿ, ಬೆದರಿಸಿ ಕ್ರೂರ ಶಿಕ್ಷೆಗಳಿಗೆ ಗುರಿ ಮಾಡಿ ತಮ್ಮ ಗುಲಾಮರನ್ನಾಗಿ ಮಾಡಿಕೊಂಡರು' ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

   ಎರವರ ಮೂಲಪುರುಷರಾದ ಆರ್ಯೆ-ಬಾಣ್ಯೆಯರ ಕತೆಯಿದೆ. ಕಾಡಂಚಿನ ಸಮುದಾಯಗಳ ಸಂಪರ್ಕದಿಂದಾಗಿ ವೈದಿಕದ ರಾಮಾಯಣದ ಕಾಲಕ್ಕೆ ತಮ್ಮ ಇರುವನ್ನು ಸ್ಥಾಪಿಸಲು ಐತಿಹ್ಯವನ್ನು ಉದಾಹರಿಸುತ್ತಾರೆ.

2. ಜೇನುಕುರುಬ ಸಮುದಾಯವು ಜೇನು ಸಂಗ್ರಹಿಸುವುದನ್ನೇ ತಮ್ಮ ಕುಲವೃತ್ತಿಯನ್ನಾಗಿಸಿ ಕೊಂಡು ಬದುಕುತ್ತಿದ್ದವರು. ಇವರು ಜೇನು ಕೊಯ್ಯುವುದಲ್ಲಿ ಪರಿಣಿತರು. ಆದ್ದರಿಂದಲೇ ಇವರು ತಮ್ಮನ್ನು 'ಜೇನುಕುರುಬರು' ಎಂದು ಕರೆದುಕೊಳ್ಳುತ್ತಾರೆ. ಇವರು ಜೈನರಿಂದ ಪ್ರಭಾವಿತರಾದ ಕಾರಣ ತಮ್ಮ ಹೆಸರನ್ನು ಬೊಮ್ಮ, ಕೇತ ಎಂಬಿತ್ಯಾದಿ ಹೆಸರುಗಳನ್ನು ಇಟ್ಟುಕೊಳ್ಳುತಾರೆ ಎಂದು ಕಿಕ್ಕೇರಿ ನಾರಾಯಣರವರು ಊಹಿಸುತ್ತಾರೆ. ಹಾಗೆಯೇ ಮೈಸೂರು ಅರಸರ ಜೊತೆ ನಿಕಟ ಸಂಪರ್ಕವನ್ನು ಇವರು ಹೊಂದಿದ್ದವರು.

3. ಸೋಲಿಗರು ಬಿಳಿಗಿರಿ ರಂಗನಬೆಟ್ಟ ಮತ್ತು ಮಹದೇಶ್ವರಬೆಟ್ಟದ ಭಾಗದಲ್ಲಿ ವಾಸಿಸುತ್ತಿದ್ದಾರೆ. ಇವರು ತಮ್ಮದೇ ಆದ ಪ್ರತ್ಯೇಕ ಭಾಷೆಯನ್ನು ಹೊಂದಿದ್ದು ಅದನ್ನು 'ಸೋಲಿಗ ನುಡಿ' ಎಂದು ಕರೆಯಲಾಗುತ್ತದೆ. ಇದು ಕನ್ನಡ, ತಮಿಳು, ಹಾಗೂ ತೆಲುಗು ಮಿಶ್ರಿತವಾಗಿದ್ದು,

ದ್ರಾವಿಡದ ಒಂದು ಉಪಭಾಷೆಯಾಗಿದೆ. ತಮಿಳುನಾಡಿನ ಸಹ್ಯಾದ್ರಿಯ ಸಾಲು ಇವರ ಮೂಲನೆಲೆಯಾದುದರಿಂದ ಇವರ ಅಸ್ತಿತ್ವವನ್ನು ತಮಿಳುನಾಡಿನಲ್ಲಿ ಗುರುತಿಸಬಹುದು. ಸೋಲಿಗರ ಹೆಸರಿನ ಉಗಮಕ್ಕೆ ಇರುವ ಬೇರೆ ಬೇರೆ ಕಾರಣವನ್ನು ಕತೆಗಳ ಮೂಲಕ ಹಾಡುಗಳ ಮೂಲಕ ಊಹಿಸಲಾಗಿದೆ. ಹಾಗೆಯೇ ಸೋಲಿಗರ ಕುಲವನ್ನು ಬಳಿಗಳನ್ನೂ ಕೂಡ ಇಲ್ಲಿ ಪ್ರಸ್ತಾಪಿಸಲಾಗಿದೆ. ಸೋಲಿಗರ ಪ್ರಚಲಿತ ಮದುವೆ ಪದ್ದತಿಗಳ ಬಗ್ಗೆಯೂ ಪ್ರಸ್ತಾಪವಿದೆ.

**ಬೆಟ್ಟಕುರುಬರು**

ಇವರು ತಮ್ಮ ಮನೆಗಳನ್ನು 'ಮದಗೆರಿ' ಎಂದು ಕರೆಯುತ್ತಾರೆ. ಬಹಳ ತಗ್ಗಾದ ಗುಡಿಸಲನ್ನು ಇವರು ನಿರ್ಮಿಸುತ್ತಾರೆ. ಹಾಡಿಯ ಮಧ್ಯದಲ್ಲಿ ಒಂದು ಚೌಕಾಕೃತಿಯ 'ಅಂಬಾಲ'ವನ್ನು ನಿರ್ಮಿಸುತ್ತಾರೆ. ಹಾಡಿಯ ಮಧ್ಯೆ ಈ 'ಅಂಬಾಲ'ವನ್ನು ನಿರ್ಮಿಸಲಾಗುತ್ತದೆ. ಬೆಟ್ಟಕುರುಬರ ಗುಡಿಸಲಗಳು ಈ 'ಅಂಬಾಲ'ಕ್ಕೆ ಅಭಿಮುಖವಾಗಿರುತ್ತವೆ. ಇದು ಬೆಟ್ಟಕುರುಬರಿಗೆ ಬಹಳ ಪೂಜ್ಯನೀಯ ಸ್ಥಳವಾಗಿದೆ. ಇಲ್ಲಿ ಬೆಟ್ಟಕುರುಬರ 109 ಕುಲಗಳನ್ನು ಹೆಸರಿಸಲಾಗಿದೆ.

**ಕುಡಿಯರು**

'ಕುಡಿ' ಎಂದರೆ ಬೆಟ್ಟದ ತುದಿ. ಬೆಟ್ಟದ ತುದಿಯಲ್ಲಿ ವಾಸ ಮಾಡುವವರೇ ಕುಡಿಯರು. ಕಾಲಾನಂತರದಲ್ಲಿ ಇತರೆ ಪ್ರಬಲ ಸಮುದಾಯಗಳ ಜೊತೆ ಬೆರೆತು ತಮ್ಮ ಸಂಸ್ಕೃತಿ ಸಂಪ್ರದಾಯಗಳನ್ನು ಸಂಪೂರ್ಣವಾಗಿ ಮೇಲ್ವರ್ಗದವರಂತೆ ಬದಲಾಯಿಸಿಕೊಂಡಿದ್ದಾರೆ. ದಕ್ಷಿಣಕನ್ನಡ ಜಿಲ್ಲೆಯ ಮಲೆಕುಡಿಯರು ಅಲ್ಲಿನ ಪ್ರಬಲ ಸಮುದಾಯವಾದ ಬಂಟರನ್ನು ಅನುಕರಿಸಿದರೆ, ಕೊಡಗಿನ ಕುಡಿಯರು ಕೊಡವರನ್ನು ಅನುಕರಿಸುತ್ತಾರೆ.

ಕುಡಿಯರನ್ನು ಪೂಮಲೆ ಕುಡಿಯರು, ತೇನ್ಮಲೆಕುಡಿಯರು, ಮೂರ್ಮಲೆ ಕುಡಿಯರು, ನಾಲ್ಮಲೆ ಕುಡಿಯರು, ಅಡಿಕೆ ಕುಡಿಯರು ಎಂದು ಗುರುತಿಸಿ ಪರಿಚಯಿಸಲಾಗಿದೆ.

**ಅಡಿ ಟಿಪ್ಪಣಿಗಳು**

1. Devy G. N., Ed: Painted Words: An Anthology of Tribal Literature, P IX, Penguin Books, India, 2002.
2. ರಾಮಚಂದ್ರೇಗೌಡ ಹಿ.ಶಿ., ಜಾನಪದ ಪ್ರಕಾರಗಳು. ಪು.66, 2012.
3. ರೂತ್ ಬೆನೆಡಿಕ್ಟ್, ಸಂಸ್ಕೃತಿಯ ರೂಪಿಕೆಗಳು, ಉದ್ಧೃತ; ಹರೀಶ್ ಪಿ.ಎನ್., ಎರವರ ಸಂಸ್ಕೃತಿ ಪು.12, 1993.

4. ಶಂಕನಾರಾಯಣರಾವ್, ಎನ್. ಪಿ., ಪಂಜಿರಿಯರವರ ಸಮಾಜ ಮತ್ತು ಜಾನಪದ ಇತಿಹಾಸ, ಪು.13, 2005.
5. ಕಿಕ್ಕೇರಿ ನಾರಾಯಣ, ಬುಡಕಟ್ಟು ಸಂಸ್ಕೃತಿ, ಅರುಹು ಕುರುಹು, ಪು.45, 2011.
6. Luiz A.A.D, Tribes of Mysore, P 77, 1963.
7. ಚಂದ್ರು ಕಾಳೇನಳ್ಳಿ, ಸೋಲಿಗರ ಸಂಸ್ಕೃತಿ, ಪು.88, 1993.
8. ಶಂಕರನಾರಾಯಣರಾವ್ ಎನ್. ಪಿ., ಪಂಜಿರಿಯರವರ ಸಮಾಜ ಮತ್ತು ಜಾನಪದ ಇತಿಹಾಸ, ಪು.35, 2005.
9. ಅದೇ, ಪು.43.
10. Thrustan Edgar, Vision of Uralis and Sholagas and More marriage customs in southern India, Hook swinging, Paliyans, P 91, 1903.
11. ಅದೇ, ಪು.94
12. Iyar L.K, The Mysore Tribes and Castes, Vol-1,2,3,4. Mittal Publication, Delhi, 1998.
13. ರಮೇಶ್ ಕೆ.ಜಿ., ಮಲೆಕುಡಿಯ ಬುಡಕಟ್ಟು ಸಮುದಾಯದ ಕಳೆದ ಆರು ದಶಕಗಳ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ, ಪು.100, 2014.
14. ಅದೇ, ಪು.100–101, 2014.
15. ಅದೇ, ಪು.100–101, 2014.
16. ಅದೇ, ಪು.101, 2014.
17. ಅದೇ, ಪು.101, 2014.
18. ಅದೇ, ಪು.105, 2014.
19. ಅದೇ, ಪು.13.

# ಅಧ್ಯಾಯ: ಮೂರು

## ಬುಡಕಟ್ಟು ಮೌಖಿಕ ಸಾಹಿತ್ಯ: ಪ್ರಕಾರಗಳು

3.1. ಮೌಖಿಕ ಸಾಹಿತ್ಯ ಬೆಳೆದು ಬಂದ ಬಗೆ

3.2. ಕಥೆಗಳು

3.3. ಹಾಡುಗಳು

3.4. ಗಾದೆಗಳು

3.5. ಒಗಟುಗಳು

3.6. ಐತಿಹ್ಯಗಳು

3.7. ಪುರಾಣಗಳು

3.8. ಸೃಷ್ಟಿ ಪುರಾಣಗಳು

3.9. ಮಹಾಕಾವ್ಯ

# ಅಧ್ಯಾಯ: ಮೂರು

# ಬುಡಕಟ್ಟು ಮೌಖಿಕ ಸಾಹಿತ್ಯ : ಪ್ರಕಾರಗಳು

## 3.1. ಮೌಖಿಕ ಸಾಹಿತ್ಯ ಬೆಳೆದು ಬಂದ ಬಗೆ

ಪ್ರಪಂಚದ ವಿವಿಧ ದೇಶಗಳ ಸಾಹಿತ್ಯ ಚರಿತ್ರೆಯನ್ನು ನಾವು ಗಮನಿಸಿದರೆ, ಕೇವಲ ಸಮಾಜದ ಮೇಲ್‌ಸ್ತರದ ಜನ ಹಾಗೂ ಅಕ್ಷರ ಬಲ್ಲವರ ಸಂಸ್ಕೃತಿಯೇ ವಿದ್ವಾಂಸರ ದೃಷ್ಟಿಯಲ್ಲಿ ಶ್ರೇಷ್ಠ ಎಂದೆನಿಸಿಕೊಂಡಿದೆ. ಈ ಜನಪ್ರಿಯ ವಾದವನ್ನು ನಾವು ಒಪ್ಪಿಕೊಳ್ಳಲೇಬೇಕೆಂಬ ಒತ್ತಡವನ್ನು ಸೃಷ್ಟಿ ಮಾಡಲಾಗಿದೆ. ಮನುಷ್ಯನ ಇತಿಹಾಸವನ್ನು ಗಮನಿಸಿದರೆ ಹಲವು ಹಂತದಲ್ಲಿ ಹಲವು ರೀತಿಯ ಏರಿಳಿತಗಳನ್ನು ನಾವು ಗಮನಿಸಬಹುದು. ಸಮಾಜವೆಂಬುದು ಭಿನ್ನ ಭಿನ್ನ ಬದುಕುಗಳ ಆಗರ. ಬಹುಸಂಸ್ಕೃತಿಗಳ ನೆಲೆವೀಡು. ಇಲ್ಲಿ ಕಣ್ಣಿಗೆ ಗೋಚರಿಸುವುದಷ್ಟೇ ಸತ್ಯವಲ್ಲ. ಅದರಿಂದಾಚೆಗೂ ನಮ್ಮ ದೃಷ್ಟಿ ನಿಲುಕಬೇಕಾಗುತ್ತದೆ. ಆದ್ದರಿಂದ ಸಮಾಜದ ಮೇಲ್‌ಸ್ತರದಲ್ಲಿ ಬದುಕನ್ನು ನಡೆಸಿದಂತಹ, ಅನುಕೂಲಕರವಾದ ಜೀವನದ ಪರಿಧಿಯೊಳಗೆ ಬದುಕು ನಡೆಸಿರುವ ವಿದ್ವಾಂಸರ ಬರವಣಿಗೆಯೇ ಇಲ್ಲಿ ಶ್ರೇಷ್ಠ ಸಾಹಿತ್ಯವಲ್ಲ. ನೋಟಕ್ಕೂ ಮೀರಿದ, ದೃಷ್ಟಿಗೂ ನಿಲುಕದ ಊಹೆಗೂ ಎಟುಕದ, ಸಮಾಜದ ಅವಜ್ಞೆಗೆ ಗುರಿಯಾದ ಅದೆಷ್ಟೋ ಬದುಕುಗಳು ಇಲ್ಲಿವೆ. ಅಷ್ಟೇ ಅಲ್ಲದೆ ಇದಾವುದರ ಜಂಜಾಟಗಳ ಪರಿವೆಯಿಲ್ಲದೆ ನಿಸರ್ಗದೊಂದಿಗೆ ತಾನಾಗಿ ಬೆರೆತು ಬದುಕುತ್ತಿರುವ ಸಮುದಾಯಗಳೂ ಇಲ್ಲಿವೆ. ಇಂತಹ ಸಮುದಾಯದ ಅಭಿವ್ಯಕ್ತಿಯೂ ಅಜ್ಞಾತವಾಗಿ ಉಳಿದಿದೆ. ಈ ರೀತಿ ಬದುಕುತ್ತಿರುವ ನಿಸರ್ಗದ ಒಡನಾಡಿಗಳ ಬದುಕು ನಿಜಕ್ಕೂ ವಿಸ್ಮಯ. ಭಾರತದಂತಹ ಬಹುಸಂಸ್ಕೃತಿಯ ಆಚಾರ–ವಿಚಾರ, ಸಂಪ್ರದಾಯಗಳು, ನಂಬಿಕೆಗಳು ಹಾಗೂ ಬದುಕಿನ ಕ್ರಮವನ್ನು ಹೊಂದಿರುವ ದೇಶದಲ್ಲಿ ಇತ್ತೀಚೆಗೆ ವಿದ್ವಾಂಸರ ಕುತೂಹಲಕ್ಕೆ ಕಾರಣವಾಗಿರುವ ವಿಚಾರವೆಂದರೆ ಕಾಡಿನ ನಂಟನ್ನು ಹೊಂದಿರುವ ಬುಡಕಟ್ಟುಗಳ ಬದುಕು. ಅದರಲ್ಲೂ ಅಗಾಧವಾದ ಪ್ರಾಕೃತಿಕ ಜ್ಞಾನವನ್ನು ಹೊಂದಿರುವ, ಹಾಗೆಯೇ 'ನಾಗರಿಕ'ರೆನಿಸಿಕೊಂಡಿರುವವರಿಂದ ಬೇಸತ್ತು ಬಳಲಿ ಹೋಗಿರುವ ಬುಡಕಟ್ಟುಗಳ ಅಧ್ಯಯನ

ದೊಂದಿಗೆ, ಅವುಗಳ ಅಗಾಧವಾದ ಮೌಖಿಕ ಸಾಹಿತ್ಯವನ್ನು ಸಂಗ್ರಹಿಸುವ ಕೆಲಸಗಳು ಇತ್ತೀಚೆಗೆ ನಡೆಯುತ್ತಿರುವುದು ಶ್ಲಾಘನೀಯ. ಇಂತಹ ದಮನಿತರ ಸಾಹಿತ್ಯದ ಮೂಲಕ ಬಯಲಾಗುತ್ತಿರುವ ವಾಸ್ತವ ಸಂಗತಿಗಳೇ ನಮ್ಮ ಭವ್ಯ ಭಾರತದ ನಿಜವಾದ ಇತಿಹಾಸ. ಕೇವಲ ಮಡಿ–ಮೈಲಿಗೆಗಳ, ವೈಭವ–ಆದರ್ಶಗಳ ಬದುಕಿಗಿಂತ ಭಿನ್ನವಾಗಿರುವ ಬುಡಕಟ್ಟುಗಳ ಬದುಕಿನ ಅಧ್ಯಯನವು, ಇದುವರೆಗೂ ನಂಬಿಕೊಂಡು ಬಂದ ಶಿಷ್ಟ ಸಂಪ್ರದಾಯದ ಇತಿಹಾಸವನ್ನು ಬುಡಮೇಲಾಗಿಸುವ ಶಕ್ತಿಯನ್ನು ಹೊಂದಿದೆ. ನಾವು ಇದುವರೆಗೂ ನಂಬಿದ್ದ ಸತ್ಯವು ಪೂರ್ಣ ಸತ್ಯವಲ್ಲ, ಅದು ಕೇವಲ ಅರ್ಧ ಸತ್ಯ ಮಾತ್ರ ಅಥವಾ ನಿಜದ ಸುತ್ತ ಹೆಣೆದಿರುವ ಕಟ್ಟುಕಥೆ ಎಂಬುದು ಈಗ ನಮಗೆ ಗೋಚರವಾಗುತ್ತದೆ. ಆ ಮೂಲಕ ನಮ್ಮ ಚರಿತ್ರೆಯನ್ನು ವಿಶ್ಲೇಷಣಾತ್ಮಕ ದೃಷ್ಟಿಕೋನದಿಂದ ಮರುಪರಿಶೀಲನೆಗೆ ಒಳಪಡಿಸಲು ಬೇಕಾದ ಸೂತ್ರ ನಮಗೆ ಈ ಮೌಖಿಕ ಸಾಹಿತ್ಯಗಳಿಂದ ದೊರೆಯುತ್ತದೆ.

ಯಾವುದೇ ದೇಶ ಮತ್ತು ಸಮಾಜಕ್ಕೆ ಒಂದು ಅನನ್ಯತೆ ರೂಪುಗೊಳ್ಳುವುದು ಆ ದೇಶ ಅಥವಾ ಸಮಾಜಕ್ಕೆ ಸೇರಿದ ಜನ ಯಾವ ಬಗೆಯ ದುಡಿಮೆಗಳಲ್ಲಿ ತೊಡಗಿಕೊಂಡಿದ್ದಾರೆ ಎಂಬುದನ್ನು ಅವಲಂಬಿಸಿರುತ್ತದೆ. ಭಾರತವನ್ನೂ ಒಳಗೊಂಡಂತೆ ಅಸಮಾನ ಸಮಾಜಗಳು ಇರುವ ಕಡೆಯಲ್ಲೆಲ್ಲ ದುಡಿವ ಜನ ಮೂಕರಂತೆ ಬದುಕಿ ಬಂದಿದ್ದಾರೆ. ಅದರಲ್ಲೂ ಭಾರತದ ಎರಡು ಸಾವಿರ ವರ್ಷಗಳ ಇತಿಹಾಸದಲ್ಲಿ ಕೆಳಜಾತಿಯ ದುಡಿವ ವರ್ಗದ ಜನ ಯಾವ ಹಕ್ಕು ಮತ್ತು ಸ್ವಾತಂತ್ರ್ಯಗಳನ್ನು ಅನುಭವಿಸದೆ ಗುಲಾಮರಂತೆಯೇ ಬದುಕಿ ಬಂದಿದ್ದಾರೆ. 'ಭಾರತ ದೇಶದ ಚರಿತ್ರೆಯುದ್ದಕ್ಕೂ ನಡೆದ ಅನೇಕ ಯುದ್ಧಗಳಲ್ಲಿ, ಸಂಘರ್ಷಗಳಲ್ಲಿ ತಮ್ಮನ್ನು ಅರ್ಪಿಸಿಕೊಂಡೂ, ಈ ದೇಶದ ಸಂಸ್ಕೃತಿ ಸೌಧದ ಅಡಿಗಲ್ಲುಗಳಾಗಿ ಭಾರ ಹೊತ್ತು ನಿಂತಿರುವ ಶ್ರಮಿಕ ಸಮುದಾಯಗಳು ಇಂದಿಗೂ ಸ್ವಾವಲಂಬನೆಯ ಬದುಕಿಗೆ ಹಂಬಲಿಸುತ್ತಿವೆ. ಈ ದೇಶಕ್ಕೆ ಸಾವಿರಾರು ವರ್ಷಗಳ ಇತಿಹಾಸ, 'ಹೆಮ್ಮೆ'ಯಿಂದ ಹೇಳಿಕೊಳ್ಳಲಾಗುವ ಸಾಸ್ಕೃತಿಕ ಪರಂಪರೆ ಇದ್ದರೂ ಇವುಗಳನ್ನು ನಿರ್ಮಾಣ ಮಾಡಿದ ಸಮುದಾಯಗಳು ಇಂದಿಗೂ ಒಪ್ಪತ್ತಿನ ಊಟಕ್ಕೆ ದಿಕ್ಕಿಲ್ಲದೆ ದಿನ ಕಳೆಯುತ್ತಿವೆ. ಕಾರಣ ಆರ್ಥಿಕ ಮತ್ತು ಉತ್ಪಾದನಾ ಕ್ಷೇತ್ರದ ಮೇಲೆ ಆಳುವ ವರ್ಗಗಳು ಸಾಧಿಸಿದ ಹಿಡಿತವು ಜಾತಿ ವ್ಯವಸ್ಥೆಯನ್ನು ಲೌಕಿಕವಾಗಿ ಪೋಷಿಸಿಕೊಂಡು ಬಂದಿದೆ. ಜಾತಿವ್ಯವಸ್ಥೆಯ ಸಂರಕ್ಷಣೆಯೆಂದರೆ, ಆತ್ಯಂತಿಕವಾಗಿ ಆಳುವ ವರ್ಗಗಳು ಉತ್ಪಾದನಾ ಕ್ಷೇತ್ರದ ಮೇಲೆ ಸಾಧಿಸುವ ನಿರ್ಣಾಯಕ ಹಿಡಿತವೆಂದೇ ಅರ್ಥ. ಅಲೌಕಿಕ ಕಾರಣಗಳು, ಹುಟ್ಟಿನಿಂದಾಗಿಯೇ ತನ್ನ ಬದುಕಿನ ಕಾಲಾವಧಿಯ ಉದ್ದಕ್ಕೂ ಸಾಮಾಜಿಕ ಮತ್ತು ಆರ್ಥಿಕ ಅಧಿಕಾರಗಳಿಲ್ಲದೆ ತುಟಿ ಕಚ್ಚಿ ಬದುಕಿ ಇಲ್ಲವಾಗುವ ಅನೇಕ ಜಾತಿ ಸಮುದಾಯಗಳು ಇಂದೂ ಇಂಡಿಯಾದಲ್ಲಿ ಜೀವಂತವಾಗಿವೆ.'[1]

ಸಾವಿರಾರು ವರ್ಷಗಳ ಕಾಲ ಸಾಮಾಜಿಕ ಮತ್ತು ಸಾಂಸ್ಕೃತಿಕ ರಂಗದ ಯಜಮಾನರಾಗಿ ಈ ದೇಶದ ವಿಷಮತೆಯನ್ನು ಸಾಂಗೋಪಾಂಗವಾಗಿ ರಕ್ಷಿಸಿಕೊಂಡು ಬಂದವರು ಇನ್ನೂ ಆಳುವ ವರ್ಗವಾಗಿದ್ದುಕೊಂಡೇ ಭ್ರಮೆಗಳನ್ನು ಹಂಚುತ್ತಿದ್ದಾರೆ. ಈ ಭೂಮಿಯ ಯಾವುದೋ ನಿರ್ವಾತದಲ್ಲಿರುವ ಗ್ರಹವೊಂದರಲ್ಲಿ ಜೀವಸಂಕುಲವಿದೆಯೋ ಇಲ್ಲವೋ ಎಂದು ಶೋಧಿಸಲು ಮನುಷ್ಯ ಆಕಾಶವನ್ನು ಗುರಿ ಮಾಡಿ ಹಾರುತ್ತಿದ್ದರೆ, ಇಂಡಿಯಾದ ದನಿ ಇಲ್ಲದ ಸಮುದಾಯಗಳು ಈ ಹೊತ್ತಿನ ಊಟಕ್ಕೆ ಬೀದಿಗಳಲ್ಲಿ ಬೆವರಾಗಿ, ಪರಂಪರೆಯ ನಿಕೃಷ್ಟ ಕಸಬುಗಳನ್ನೇ ಅವಲಂಬಿಸಿ ಬದುಕುತ್ತಿವೆ. ಈ ಸಮುದಾಯಗಳಿಗೆ ವರ್ತಮಾನದಲ್ಲಿ ವೃತ್ತಿಗಳನ್ನು ಬದಲಿಸಿಕೊಳ್ಳುವಷ್ಟು ಆತ್ಮವಿಶ್ವಾಸವಿಲ್ಲ. 'ಜಾತಿ ಪದ್ಧತಿಯಿಂದಾದ ಈ ವೃತ್ತಿ ವಿಭಾಗ ಅಥವಾ ಕೆಲಸಗಳ ನೇಮಕವು ಖಂಡಿತವಾಗಿ ವಿನಾಶಕಾರಿ ಯಾಗಿದೆ. ಉದ್ಯಮ ಎಂದೂ ನಿಂತ ನೀರಲ್ಲ. ಅದರಲ್ಲಿ ತೀವ್ರವಾದ ಹಾಗೂ ಆಕಸ್ಮಿಕವಾದ ಬದಲಾವಣೆಗಳಾಗುತ್ತಲೇ ಇರುತ್ತವೆ. ಹೀಗೆ ಬದಲಾವಣೆಗಳಾಗುತ್ತಿರುವಾಗ ವ್ಯಕ್ತಿಗೆ ತಮ್ಮ ವೃತ್ತಿಯನ್ನು ಬದಲಾಯಿಸುವ ಸ್ವಾತಂತ್ರ್ಯ ಅವಶ್ಯಕವಾಗುತ್ತದೆ. ಬದಲಾಗುವ ಪರಿಸ್ಥಿತಿಗೆ ಹೊಂದಿಕೊಳ್ಳುವ ಸ್ವಾತಂತ್ರ್ಯವಿಲ್ಲದಿದ್ದರೆ ಅವನಿಗೆ ಜೀವನೋಪಾಯವೇ ಅಸಾಧ್ಯವಾಗುವುದು. ಜಾತಿಪದ್ಧತಿಯಲ್ಲಿ ಇಂತಹ ಸ್ವಾತಂತ್ರ್ಯವಿಲ್ಲ. ತನ್ನ ಜಾತಿಗೆ ಹೊಸದಾದ ವೃತ್ತಿಯನ್ನು ಕೈಕೊಳ್ಳುವ ಬದಲಾಗಿ, ಉಪವಾಸ ಬೀಳುವುದೇ ಹಿಂದೂವಿನ ಗತಿಯಾಗಿದ್ದರೆ, ಅದಕ್ಕೆ ಮೂಲಕಾರಣ ಜಾತಿಯೇ ಆಗಿದೆ'[2] ಎನ್ನುತ್ತಾರೆ ಅಂಬೇಡ್ಕರ್. ಅಂದರೆ ಜಾತಿವ್ಯವಸ್ಥೆಯ ಆಚರಣೆಯು ಅಂತಿಮವಾಗಿ ಒಂದು ವ್ಯವಸ್ಥಿತ ಆರ್ಥಿಕ ವಂಚನೆಯೇ ಆಗಿದೆ. ಯಾವುದೇ ಸಮುದಾಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ರಂಗದ ಆತ್ಮಪ್ರತ್ಯಯವನ್ನು ನಾಶ ಮಾಡಬೇಕೆಂದರೆ, ಮೊದಲು ಆ ಸಮುದಾಯದ ಆರ್ಥಿಕ ಸ್ವಾವಲಂಬನೆಯನ್ನು ನಾಶ ಮಾಡಬೇಕಾಗುತ್ತದೆ. ಇಂಡಿಯಾದ ಜಾತಿ ಶ್ರೇಣೀಕರಣ ಶತಮಾನಗಳಿಂದ ಈ ಕೆಲಸವನ್ನು ಜತನದಿಂದ ಮಾಡಿಕೊಂಡು ಬಂದಿದೆ. ಈ ಕಾರಣಕ್ಕಾಗಿ ಜಗತ್ತಿನ ಎಲ್ಲ ಬಗೆಯ ಅಸಮಾನತೆಗಳಿಗಿಂತ, ಶೋಷಣೆಗಳಿಗಿಂತ ಇಂಡಿಯಾದ ಸಾಮಾಜಿಕಾರ್ಥಿಕ ರಂಗದ ವಿಷಮತೆ ಮತ್ತು ಶೋಷಣೆಯ ಆಯಾಮಗಳು ಅತ್ಯಂತ ಕ್ರೂರವಾದವುಗಳು.

ಜಾಗತೀಕರಣದ ಈ ಹೊತ್ತು ಜಗತ್ತಿನ ಎಲ್ಲ ಸಮುದಾಯಗಳು ಆರ್ಥಿಕ ಸ್ವಾಲಂಬನೆಯ ಮೂಲಕ ತಮ್ಮ ಬದುಕಿಗೆ ಆತ್ಮಪ್ರತ್ಯಯವನ್ನು ತಂದುಕೊಳ್ಳುವತ್ತ ಹೆಜ್ಜೆ ಹಾಕುತ್ತಿವೆ. ಮನುಷ್ಯ ದೇವರನ್ನೇ ನಿಬ್ಬೆರಗಾಗಿಸುವ ಸಾಧನೆಗಳನ್ನು ಮಾಡುತ್ತ ಅಚ್ಚರಿಗಳನ್ನು ಸೃಷ್ಟಿಸುತ್ತಿದ್ದಾನೆ. ಔದ್ಯೋಗಿಕ ರಂಗದಲ್ಲಿ ರೂಪುಗೊಂಡ ಉದ್ಯೋಗಾವಕಾಶಗಳನ್ನು ಪಡೆಯುವತ್ತ ಸಮುದಾಯಗಳು ವೇಗವಾಗಿ ಹೆಜ್ಜೆ ಇರಿಸುತ್ತಿವೆ. ಸಮುದಾಯಗಳ ಪರಂಪರೆಯ ಕುರುಹುಗಳು ಇಲ್ಲವಾಗುತ್ತಾ ಹೋಗುತ್ತಿವೆ. ದಿನ ಬೆಳಗಾದರೆ ಈ ಭೂಮಿಯ ಮೇಲೆ ಮನುಷ್ಯ ಅದ್ಭುತಗಳನ್ನು ಎತ್ತಿ ನಿಲ್ಲಿಸುತ್ತಿದ್ದಾನೆ. ಸುಖದ

ಆಯಾಮಗಳು ಮನುಷ್ಯನ ಬದುಕನ್ನು ಆವರಿಸಿಕೊಳ್ಳುತ್ತಿವೆ. ಆದರೆ ಇಂಡಿಯಾದಲ್ಲಿ ಸಾವಿರ ವರ್ಷಗಳ ಹಿಂದಿನ ಸಮಾಜ ಇನ್ನೂ ಜೀವಂತವಾಗಿರುವ ವೈರುಧ್ಯ ಕಣ್ಣಿಗೆ ಎದ್ದು ಕಾಣುತ್ತಿದೆ. ಒಂದೆಡೆ ಜಗತ್ತಿನ ಅನಂತ ಸುಖಗಳನ್ನು ಅನುಭವಿಸುವ ಕಾರ್ಪೋರೇಟ್ ಜಗತ್ತು ಬದುಕುತ್ತಿದ್ದರೆ, ಅದರ ಕೂಗಳತೆಯ ದೂರದಲ್ಲಿ ಗವಿಗಳಲ್ಲಿ ವಾಸಿಸುತ್ತಾ ಗಡ್ಡೆಗೆಣಸುಗಳನ್ನು ತಿನ್ನುತ್ತಾ ಬದುಕುತ್ತಿರುವ ಆದಿವಾಸಿ ಸಮುದಾಯಗಳು ಅಸ್ತಿತ್ವದಲ್ಲಿವೆ. ಇದು ದೇಶವೊಂದರ ಸಮಾಜದ ಅಮಾನವೀಯ ಮತ್ತು ಅನೈಸರ್ಗಿಕ ಬೆಳವಣಿಗೆ. ಇದು ಇಂಡಿಯಾದಂತಹ ಪಾರಂಪರಿಕ ಸಮಾಜದಲ್ಲಿ ಸಹಜವಾಗಿಯೇ ಮೈದಾಳಿಬಿಡುವ ವೈರುಧ್ಯವೂ ಹೌದು.

'ಇಂದಿಗೂ ಇಂಡಿಯಾದ ದುಡಿವ ವರ್ಗಗಳಿಗೆ ಆರ್ಥಿಕ ಸ್ವಾವಲಂಬನೆ ಇಲ್ಲ. ಇಲ್ಲಿನ ಕೆಳಜಾತಿಗಳು ತಮ್ಮ ಪಾರಂಪರಿಕ ವೃತ್ತಿಗಳಲ್ಲಿಯೇ ಬದುಕುವ ಅನಿವಾರ್ಯತೆಯನ್ನು ಅನುಭವಿಸುತ್ತಿವೆ. ಅದರಲ್ಲೂ ಪಾರಂಪರಿಕ ವೃತ್ತಿಗಳಲ್ಲಿ ಬದುಕುತ್ತಿರುವುದು ಹೆಚ್ಚಾಗಿ ಈ ದೇಶದ ಕೆಳಜಾತಿಗಳು. ಅದರಲ್ಲೂ ಆದಿವಾಸಿಗಳು, ಅಲೆಮಾರಿಗಳು ಮತ್ತು ಅರೆ ಅಲೆಮಾರಿಗಳು ಹೆಚ್ಚಾಗಿ ರೂಢಿಗತ ಅರ್ಥ ವ್ಯವಸ್ಥೆಯನ್ನೇ ನೆಚ್ಚಿಕೊಂಡು ಇನ್ನೂ ತಮ್ಮ ಪಾರಂಪರಿಕ ಕಸಬುಗಳನ್ನು ಬಿಟ್ಟುಕೊಡಲಾಗದ ಸ್ಥಿತಿಯಲ್ಲಿ ಈ ಸಮುದಾಯಗಳಿವೆ. ಇಂತಹ ಸಮುದಾಯಗಳಲ್ಲಿ ಆದಿವಾಸಿಗಳು ಮತ್ತು ಅಲೆಮಾರಿ ಸಮುದಾಯಗಳು ಪ್ರಮುಖವಾದವು. ಶತಮಾನಗಳುದ್ದಕ್ಕೂ ನಿರಂತರ ದಮನ ಮತ್ತು ಹಿಂಸೆಗಳನ್ನು ಅನುಭವಿಸುತ್ತಾ ಬಂದ ಅಲೆಮಾರಿ ಸಮುದಾಯಗಳಿಗೆ ವರ್ತಮಾನದ ಜೊತೆ ಗಟ್ಟಿ ದನಿಯ ಅಭಿವ್ಯಕ್ತಿಯ ಸಾಧ್ಯತೆಗಳಿರಲಿಲ್ಲ. ನಡುಬಗ್ಗಿಸಿ ನಿಂತು ಯಜಮಾನನ ಆಣತಿಗಳನ್ನು ಜಾರಿಗೆ ತರುವುದು, ವರ್ತಮಾನದ ತನ್ನ ಹೀನಾಯ ಸ್ಥಿತಿಗತಿಯನ್ನೇ ಜನ್ಮಾಂತರದ ಪಾಪದ ಫಲವೆಂದು ನಂಬಿಕೊಂಡು ಬಂದಿದ್ದೇ ಹೆಚ್ಚು. ಆದರೆ ದಮನ ಮತ್ತು ಹಿಂಸೆಗಳು ದುಡಿವ ಸಮುದಾಯಗಳಲ್ಲಿ ಒಂದು ಸುಪ್ತ ಸ್ವೋಪಜ್ಞತೆಯನ್ನು ಚಿಗುರಿಸಿದವು. ವರ್ತಮಾನದ ಬವಣೆಗಳಿಗೆ ಈ ಸಮುದಾಯಗಳ ಅಂತಸ್ಥ ಜಗತ್ತು ತಲ್ಲಣಗೊಳ್ಳುತ್ತಲೇ ನಿರಂತರ ಪ್ರತಿಕ್ರಿಯಿಸುವ ಎಚ್ಚರವನ್ನೂ ಹೊಂದುತ್ತಾ ಬಂದಿತು. ಮಾತು ಸಾಧ್ಯವಾಗದ ಕಡೆಯಲ್ಲೆಲ್ಲ ಮೌನಗಳು ಸ್ಮೃತಿಗಳಲ್ಲಿ ಜಾಗೃತಗೊಳ್ಳುತ್ತಾ ಬಂದವು. ಮೌನಗಳ ತೀವ್ರ ಒತ್ತಡಗಳೇ ದುಡಿವ ಅಲಕ್ಷಿತ ವರ್ಗಗಳ ಸೃಜನಶೀಲತೆಯನ್ನು ರೂಪಿಸುತ್ತಾ ಬಂದವು. ದಮನ ಮತ್ತು ಹಿಂಸೆಗಳನ್ನು ಈ ಸಮುದಾಯಗಳು ಅವುಡುಗಚ್ಚಿ ಸಹಿಸಿಕೊಳ್ಳುತ್ತಲೇ ತಮ್ಮ ಪ್ರತಿಭಟನೆಗಳನ್ನು 'ಮಾತಿನ' ರೂಪದಲ್ಲಿ ದಾಖಲಿಸುತ್ತಾ ಬಂದವು. 'ಮಾತು' ಪ್ರತಿರೋಧದ ಹಲವು ವಿನ್ಯಾಸಗಳಲ್ಲಿ ತನ್ನನ್ನು ವಿಸ್ತರಿಸಿಕೊಳ್ಳುತ್ತಾ ಹೋಯಿತು. ಮೌನ, ಎದೆಯ ನೋವಾಗಿ ಕಣ್ಣೀರಾಗಿ,'ಮಾತಾಗಿ' ಪದವಾಗಿ, ಹಾಡಾಗಿ ಅಭಿವ್ಯಕ್ತಿಯ ಹಲವು ಸ್ತರಗಳಲ್ಲಿ ಸಾರ್ಥಕವಾಗುತ್ತಾ ಹೋಯಿತು. ದುಡಿವ ಅಲಕ್ಷಿತ ವರ್ಗಗಳು ಕಾಲದಿಂದ ಕಾಲಕ್ಕೆ ಪ್ರತಿಭಟಿಸಲಾಗದ ತನ್ನ ಇರುವಿಕೆಯನ್ನು

ಅಸಹಾಯಕ ಆತ್ಮದ್ವೇಷದಲ್ಲಿ ಪರಿಭಾವಿಸುತ್ತಾ ಬಂದವು. ಈ ಆತ್ಮದ್ವೇಷ ಪದವಾಗಿ ಹಾಡಾಗಿ ಕಥೆಯಾಗಿ ಮಹಾಕಾವ್ಯವಾಗಿ ರೂಪುಗೊಳ್ಳುತ್ತಾ ಹೋಯಿತು.'[3] ಈ ಅಲಕ್ಷಿತ ಸಮುದಾಯಗಳು ತಮ್ಮ ನಿತ್ಯದ ಬದುಕನ್ನು ಮುಖಾಮುಖಿಯಾಗುವ ಕ್ರಮವೇ ಕಥನಗಳ ರೂಪದಲ್ಲಿ ಒಂದು ತಿಳುವಳಿಕೆಯ ಜಗತ್ತನ್ನು ರೂಪಿಸಿತು. ಈ ಅಲಕ್ಷಿತ ಸಮುದಾಯಗಳಲ್ಲಿ, ಆದಿವಾಸಿಗಳು ತಮ್ಮ ಅಭಿವ್ಯಕ್ತಿಗಳಲ್ಲಿ ಹಲವು ವೈಚಿತ್ರ್ಯಗಳನ್ನು ಕಟ್ಟಿಕೊಂಡು ಬಂದವು. ಈ ವೈಚಿತ್ರ್ಯಗಳ ವಿರಾಟ್‌ಕಥನ ಹಲವು ಅಭಿವ್ಯಕ್ತಿ ಪ್ರಕಾರಗಳಲ್ಲಿ ಮೈದಾಳಿದೆ.

ಒಟ್ಟಾರೆ ಈ ಕಥನಗಳ ತಿಳುವಳಿಕೆಯ ಕ್ರಮವನ್ನು ಮತ್ತು ಅವುಗಳ ವಿರಾಟ್ ದರ್ಶನವನ್ನು ಈ ಪ್ರಬಂಧದಲ್ಲಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಜಗತ್ತಿನ ಆದಿಮ ಸಮಾಜಗಳು ತಮ್ಮ ಸ್ವೋಪಜ್ಞ ಸೃಜನಶೀಲತೆಯ ಮೂಲಕ ಕಟ್ಟಿಕೊಂಡು ಬಂದ ವಾಙ್ಮಯ ಹಲವು ವಿನ್ಯಾಸಗಳಲ್ಲಿ ಸಂಚಯಗೊಂಡಿದೆ. ಹೀಗೆ ಸಂಚಯಗೊಂಡ ವಾಙ್ಮಯವು ಕಾಲ ಮತ್ತು ಸಂದರ್ಭಗಳಿಗೆ ಪಕ್ಕಾಗುತ್ತ ತಲೆಮಾರುಗಳ ನಡಿಗೆಯಲ್ಲಿ ಅನೇಕ ಅವಸ್ಥಾಂತರಗಳಿಗೆ ಒಳಗಾಗುತ್ತಾ ಬಂದಿದೆ. 'ಮಾತು', 'ಬರಹ'ಕ್ಕೆ ಬರುವ ಮೊದಲು ಈ ಸಮಾಜಗಳಿಗೆ ದುಡಿಮೆಯ ಜೊತೆಗಿನ ಧ್ಯಾನವೇ ಅವುಗಳ ಸೃಜನಶೀಲ ಸೆಲೆಗೆ ಮೂಲಧಾತು. ಒಂದು ಅರ್ಥದಲ್ಲಿ ಈ ಸಮಾಜಗಳಿಗೆ 'ಮಾತು' ಎಂದರೆ ಲೌಕಿಕದ ಧ್ಯಾನ. ತಮ್ಮ ಸುತ್ತಲ ಬದುಕು ಮತ್ತು ಬಿಡುವ ತೀವ್ರ ಅನುಭವಗಳೇ ಅವುಗಳ ಸೃಜನಶೀಲತೆಯ ಮೂಲದ್ರವ್ಯ. ಈ ಕಾರಣಕ್ಕಾಗಿಯೇ ಆದಿಮ ಮತ್ತು ದುಡಿವ ವರ್ಗಗಳ ಸಮುದಾಯಗಳ ಅಭಿವ್ಯಕ್ತಿ ಕ್ರಮಗಳು ಲೌಕಿಕ ಬದುಕನ್ನು ಹೀರಿಕೊಂಡೇ ಅನಾವರಣವಾಗುತ್ತವೆ. ಇದು ಆರಂಭದಲ್ಲಿ ಈ ಸಮುದಾಯಗಳ ವಾಙ್ಮಯದ ಅಧ್ಯಯನವೆಂದರೆ ಆದಿಮ ಸಮಾಜದ ನೈಜ 'ಸಾಮಾಜಿಕ ಚರಿತ್ರೆಯ' ಅಧ್ಯಯನವೆಂದೇ ಭಾವಿಸಬೇಕಾಗುತ್ತದೆ. 'ನಮ್ಮ ಶಿಷ್ಟ ಪುರಾಣಗಳು ಅಥವಾ ಕಾವ್ಯಗಳು ಕಟ್ಟಿಕೊಡುವ ಏಕರೂಪಿಯಾದ ಭಾರತೀಯ ಮೌಲ್ಯಗಳು ಇಲ್ಲಿ ಕಾಣಿಸದಿರ ಬಹುದು. ಆದರೆ, ಒಂದು ನಿರ್ದಿಷ್ಟ ಭೂಪ್ರದೇಶದ ವಿಶಿಷ್ಟ ಸಂಸ್ಕೃತಿ ವಲಯವೊಂದರಲ್ಲಿ ಭೌತಿಕವಾಗಿ ಮತ್ತು ಆಂತರಿಕವಾಗಿ ಕಂಡುಬರುವ ಅನನ್ಯ ಲೋಕದೃಷ್ಟಿಯ ಸೃಜನರೂಪಗಳಾಗಿ ಈ ಕಾವ್ಯಗಳನ್ನು ನಾವು ನೋಡಬೇಕು. ಆದ್ದರಿಂದ ಈ ಪ್ರಾತಿನಿಧಿಕ ಕಾವ್ಯರೂಪಗಳನ್ನು ಸಾಂಸ್ಕೃತಿಕ ವಾದ ಸಾಮಾಜಿಕವಾದ ಹಾಗೂ ರಾಜಕೀಯವಾದ ಬಹುನಿಟ್ಟಿನಿಂದ ನಾವು ನೋಡುವುದು ಅನಿವಾರ್ಯವಾಗುತ್ತದೆ. ಆಗ, ಈ ದೇಶದಲ್ಲಿ ಸಂಸ್ಕೃತಿಯ ಎಷ್ಟೆಲ್ಲ ಪರ್ಯಾಯ ಹೆದ್ದಾರಿಗಳು ಹೇಗೆ ಹೇಗೆ ಸಾಗುತ್ತಿವೆ ಮತ್ತು ಸಂಧಿಸುತ್ತಿವೆ ಎಂಬ ಸತ್ಯದ ದರ್ಶನವಾಗುತ್ತದೆ.'[4]

ಮೇಲ್ನೋಟಕ್ಕೆ ಅಸಹಜ ಕಥನಗಳೇನೋ ಎಂಬಂತೆ ಭಾಸವಾಗುವ ಈ ಸಮುದಾಯಗಳ ಸೃಷ್ಟಿ ಪುರಾಣಗಳು ಆಯಾ ಸಮುದಾಯಗಳ ಚಿಂತನಾಕ್ರಮಗಳನ್ನೇ ತನ್ನೆದುರು ತೆರೆದಿಡುತ್ತವೆ.

ಭೂಮಿ ಹುಟ್ಟಿದ ಕಥೆ, ನೀರು ಸೃಷ್ಟಿಯಾದ ಕಥೆ, ನಿಸರ್ಗ ರೂಪುಗೊಂಡ ವಿಸ್ಮಯ, ಗಂಡು ಹೆಣ್ಣಿನ ಪ್ರೇಮ ಮತ್ತು ಮಾನವ ಸಂತತಿಯ ಸಾತತ್ಯಗಳ ಕುರಿತು ವಿಶಿಷ್ಟ ಕಥನಗಳೇ ಈ ಸೃಷ್ಟಿಪುರಾಣಗಳು. ಸೃಷ್ಟಿಪುರಾಣಗಳು ಓದುತ್ತಿದ್ದಂತೆ ರಮ್ಯಕಥನಗಳಂತೆ ಕಾಣುತ್ತವೆ. ಅತಿಮಾನವ ಸಂಗತಿಗಳ ವಾಗ್ರೂಪಗಳಂತೆ ಭಾಸವಾಗುತ್ತವೆ. ಆದರೆ ಅಲ್ಲಿನ ರಮ್ಯತೆಯಲ್ಲಿನ ವಿಷಾದ, ಅತಿಮಾನವ ಸಂಗತಿಗಳಲ್ಲಿನ ಪ್ರತಿರೋಧಗಳು ರೂಪಕಗಳಲ್ಲಿ ವ್ಯಕ್ತವಾಗುತ್ತವೆ. ಸೃಷ್ಟಿಪುರಾಣಗಳ ಅತಿಮಾನವ ಶಕ್ತಿಯ ಹುಡುಕಾಟದಲ್ಲಿದ್ದಂತೆ ಭಾಸವಾದರೂ ಸಹ ಅಲ್ಲಿ ನಿಸರ್ಗದ ಜೊತೆಗಿನ ಅನುಸಂಧಾನ ಮತ್ತು ಅರಿವನ್ನು ಸಂಚಯಿಸುವ ತವಕಗಳು ಎದ್ದು ಕಾಣುತ್ತವೆ. ಇದನ್ನೇ ಮೊಗಳ್ಳಿ ಗಣೇಶ್ ಹೀಗೆ ಹೇಳುತ್ತಾರೆ.

'ಜನಪದ ಕಾವ್ಯಗಳು ಸಂಸ್ಕೃತಿಯ ನಾದ ರೂಪಗಳು ಹೇಗೋ ಹಾಗೆಯೇ ಅವು ನಿಸರ್ಗನಿಷ್ಠ ಸೃಜನಶೀಲತೆಯ ಪ್ರತಿರೂಪಗಳು ಹೌದು. ನಿಸರ್ಗವೇ ಜನಪದ ಪರಂಪರೆಯ ದೊಡ್ಡ ಚೈತನ್ಯ. ಅದರ ಜೊತೆಗಿನ ನಿರಂತರ ಸಂವಾದದಿಂದಲೇ ಅವರ ಸೃಜನಶೀಲತೆಯು ವಿಕಾಸಗೊಂಡಿರುವುದು. ಜನಪದರ ಭಾಷೆಯ ಒಟ್ಟು ಸ್ವರೂಪವೇ ನಿಸರ್ಗವನ್ನು ಪ್ರತಿಬಿಂಬಿಸುತ್ತದೆ. ಹಾಗೆಯೇ ಕ್ರಿಯೆಯನ್ನು ಸದಾ ಅನುಸರಿಸುತ್ತಲೇ ಬರುತ್ತದೆ. ಸೃಜನಶೀಲತೆಯು ಸಂಸ್ಕೃತಿಗೆ ನಿಸರ್ಗವನ್ನು ಅನ್ವಯಿಸಿ ಅನುಸಂಧಾನದ ಧ್ಯಾನ ಕ್ರಮವನ್ನು ಅಳವಡಿಸುತ್ತದೆ. ಹೀಗಾಗಿಯೇ ಮೌಖಿಕ ಪರಂಪರೆಯು ನಿಸರ್ಗದ ಆರಾಧನೆಯನ್ನು ಸಂಸ್ಕೃತಿಯ ವ್ಯಕ್ತಿರೂಪವನ್ನಾಗಿ ಮಾರ್ಪಡಿಸುವುದು.'[5] ಭೂಮಿಯ ಹುಟ್ಟು, ಸಕಲ ಚರಾಚರ ಜೀವಿಗಳ ಹುಟ್ಟು ನೈಸರ್ಗಿಕ ಸೃಷ್ಟಿಶೀಲತೆಯ ಫಲ ಎಂಬ ಈ ಸಮುದಾಯಗಳ ನಿಲುವೇ ಅಪ್ಪಟ ಭೌತವಾದಿಯದು. ಈ ಭೌತವಾದಿ ನಿಲುವೇ ದುಡಿವ ವರ್ಗಗಳ ತಿಳುವಳಿಕೆಯ ಕ್ರಮಗಳನ್ನು ರೂಪಿಸುತ್ತಾ ಬಂದಿದೆ. ಇಲ್ಲಿ ಅತಿಮಾನುಷ್ಯ ಶಕ್ತಿಯ ಭಾವನಾವಾದಿ ನಂಬಿಕೆಗಳಿಗೆ ಆಸ್ಪದವೇ ಇಲ್ಲ. ನಮ್ಮ ಭಾರತದ ಪುರೋಗಾಮಿ ವೈಚಾರಿಕತೆ ರೂಪುಗೊಂಡಿರುವುದು ಆದಿವಾಸಿಗಳನ್ನೂ ಒಳಗೊಂಡಂತೆ ಎಲ್ಲ ದುಡಿವ ಸಮುದಾಯಗಳ ಈ ವಾಗ್ರೂಪಗಳಿಂದ. ಆದಿವಾಸಿಗಳು ತಮ್ಮ ಬದುಕಲ್ಲಿ ಎದುರಿಸುವ ಸಂಘರ್ಷಗಳ ಮೂಲಕ ಒಂದು ಸೃಜನಶೀಲ ಸ್ವೋಪಜ್ಞತೆಯನ್ನು ಅಂತರ್ಗತ ಮಾಡಿಕೊಳ್ಳುತ್ತಲೇ ಬಂದಿವೆ.

ಪ್ರಭುತ್ವದ ಕೊನೆಗಣ್ಣಿಗೂ ಎಟುಕದ, ತಮ್ಮಂತೆ ಬದುಕು ಕಟ್ಟಿಕೊಂಡು ಜೀವನ ನಡೆಸುತ್ತಿದ್ದರೂ ಇತರೆ ಸಮಾಜದ ಲಕ್ಷ್ಯವೂ ಬೀಳದಂತಿರುವ ಈ ಕಾಡಿನ ಮಕ್ಕಳ ಬದುಕು ಸಂತಸ ವಿಷಾದಗಳ ನಡುವಿನ ಪಯಣ. ಪ್ರಕೃತಿ ಇವರಿಗೆ ಸಂತಸವನ್ನು ನೀಡಿದರೆ, ನಾಗರಿಕ ಎಂದು ಕರೆಸಿಕೊಳ್ಳುವ ಮನುಷ್ಯ ತನ್ನ ದುರಾಸೆಯಿಂದ ಇವರನ್ನು ತಲ್ಲಣಗೊಳಿಸುತ್ತಾ ಬಂದಿದ್ದಾನೆ. ಶತಮಾನಗಳ ಕಾಲದ ಊಳಿಗಮಾನ್ಯ ವ್ಯವಸ್ಥೆ, ವಸಾಹತುಶಾಹಿ ಹಾಗೂ ಬಂಡವಾಳಶಾಹಿಗಳಿಂದ ನಲುಗಿದ ಈ

ಬುಡಕಟ್ಟುಗಳು ತಮ್ಮ ಒಡಲಲ್ಲಿ ಅಪಾರವಾದ ಮೌಖಿಕ ಸಾಹಿತ್ಯದ ಆಗರವನ್ನೇ ಬಚ್ಚಿಟ್ಟುಕೊಂಡಿವೆ. ಆದರೆ ಅವು ಇನ್ನಷ್ಟೆ ಬಯಲಿಗೆ ಬರಬೇಕಾಗಿದೆ. 'ಜಗತ್ತಿನ ಬೇರೆ ಬೇರೆ ದೇಶಗಳ ಆದಿವಾಸಿಗಳಿಗೂ ಮತ್ತು ಭಾರತದ ಆದಿವಾಸಿಗಳಿಗೂ ಸಾಂಸ್ಕೃತಿಕವಾಗಿ ಅನೇಕ ಸಾಮ್ಯತೆಗಳಿವೆ. ಗುಂಪುಗಳಲ್ಲಿ ವಾಸಿಸುವ ಇವರ ಸಂಘಟನೆಗೆ ಒಂದು ಸಾವಯವ ಗುಣ ಪ್ರಾಪ್ತವಾಗುತ್ತಾ ಬಂದಿದೆ. ಖಾಸಗಿ ಸಂಪತ್ತನ್ನು ಕೂಡಿಹಾಕಲು ಇವರಿಗೆ ಅಂತಹ ಆಸಕ್ತಿ ಇಲ್ಲ. ಮನುಷ್ಯನ ಶ್ರಮವನ್ನು ಬಳಸಿ ಬಂಡವಾಳವನ್ನು ದ್ವಿಗುಣಗೊಳಿಸುವ ಉದ್ದೇಶವೂ ಇವರಿಗಿಲ್ಲ. ಇವರ ಲೋಕದೃಷ್ಟಿಯಲ್ಲಿ ದೇವರು, ಮನುಷ್ಯ ಮತ್ತು ನಿಸರ್ಗಗಳು ಏಕತ್ರಗೊಂಡ ಸಂಗತಿಗಳು. ಸತ್ಯವನ್ನು ಪ್ರತಿಪಾದಿಸುವ ಇವರು ನಂಬುವುದು ಮನುಷ್ಯನ ಇರುವು ಮತ್ತು ಅವನ ಧೀಶಕ್ತಿಯನ್ನು. ಇವರು ಯಾವುದೋ ಕಾರಣಗಳಿಗಾಗಿ ಬದುಕದೆ, ಸ್ವಯಂಸ್ಫೂರ್ತಿಯಿಂದ ಜೀವಿಸುತ್ತಾರೆ. ತಮ್ಮ ಸುತ್ತಲ ಅನಂತವನ್ನು ಇವರು ಲೌಕಿಕ ಎಂದು ಭಾವಿಸದೆ, ಪವಿತ್ರ ಎಂದು ಭಾವಿಸುತ್ತಾರೆ. ಆದಿವಾಸಿಗಳ ಕಲ್ಪನಾಜಗತ್ತು ಈ ಎಲ್ಲ ಕಾರಣಗಳಿಗಾಗಿ ಮುಖ್ಯವಾಹಿನಿಯ ಸಮಾಜಕ್ಕಿಂತ ಅತ್ಯಂತ ಭಿನ್ನವಾದದ್ದು.'[6] ಆದಿವಾಸಿಗಳ ಅಭಿವ್ಯಕ್ತಿ ಕ್ರಮಗಳಲ್ಲಿ ಕ್ಲೀಷೆಗಳಿಲ್ಲ. ಛಂದೋಬದ್ಧವಾಗುವ ಕಟ್ಟಳೆಗಳಿಲ್ಲ. ಬದುಕನ್ನು ಹೊರತಾಗಿಸಿ ಮಹೋನ್ನತ ಗೊಳ್ಳುವ ಹಪಾಹಪಿಗಳಿಲ್ಲ. ಆದಿವಾಸಿಗಳ ಅಭಿವ್ಯಕ್ತಿ ಅವರ ಬದುಕಿನ ಲೋಕದೃಷ್ಟಿಯ ಒಟ್ಟು ಮೊತ್ತ. 'ಆದರೆ, ನಾಗರಿಕವೆನ್ನುವ ಸಮಾಜದ ಅಭಿವ್ಯಕ್ತಿಗಳೂ ಸಮಷ್ಟಿ ಆಶಯಗಳ ಭಾಗವಾಗಿದ್ದರೂ ಅವು ಏಕವ್ಯಕ್ತಿಯ ಸೃಷ್ಟಿಗಳು. ಆದರೆ ಆದಿವಾಸಿಗಳ ಸೃಜನಶೀಲತೆ ಸ್ವಪ್ನಲೋಕದ್ದು, ಭಾವನಾಶೀಲ ವಾದದ್ದು. ಜಗತ್ತಿನ ವಿವಿಧ ಭಾಗದ ಬದುಕುಗಳನ್ನು ಮತ್ತು ಕಾಲವನ್ನು ಸಹಜವಾಗಿ ಯಾವ ಕೃತಕತೆಗೂ ಅವಕಾಶವಿಲ್ಲದಂತೆ ಬೆಸೆಯುತ್ತದೆ. ಆದಿವಾಸಿಗಳ ಕಥೆಗಳಲ್ಲಿ ಸಮುದ್ರಗಳು ಹಕ್ಕಿಗಳಂತೆ ಆಕಾಶದಲ್ಲಿ ಹಾರುತ್ತವೆ. ಪರ್ವತಗಳು ಸಮುದ್ರದಲ್ಲಿ ಮೀನುಗಳಂತೆ ಈಜುತ್ತವೆ. ಪ್ರಾಣಿಗಳು ಮನುಷ್ಯನಂತೆ ಮಾತಾಡುತ್ತವೆ. ಅಂಬರದಲ್ಲಿನ ನಕ್ಷತ್ರಗಳು ಗಿಡಗಳಂತೆ ಬೆಳೆಯುತ್ತವೆ. ಸ್ಥಳೀಯ ಮತ್ತು ಪ್ರಾಪಂಚಿಕ ಅನುಕ್ರಮಗಳು ಈ ಕಥನಗಳನ್ನು ನಿಯಂತ್ರಿಸುವುದಿಲ್ಲ. ಹಾಗೆಂದು ಆದಿವಾಸಿಗಳ ಅಭಿವ್ಯಕ್ತಿಗಳಿಗೆ ಯಾವ ನಿಯಮ ಮತ್ತು ಅನುಕ್ರಮಗಳಿಲ್ಲ ಎಂದು ಹೇಳುತ್ತಿಲ್ಲ. ಆದಿವಾಸಿಗಳ ಅಭಿವ್ಯಕ್ತಿಗಳಲ್ಲಿ ಭಾವನೆ ಮತ್ತು ಕಥನ ಕೇಂದ್ರದ ನಡುವೆ ಒಂದು ಅವಿಚ್ಛಿನ್ನ ಸಹಸಂಬಂಧ ಇದ್ದೇ ಇರುತ್ತದೆ. ಹಾಗಾಗಿ ಇವರ ಕಥನಗಳಲ್ಲಿಯ ನಕ್ಷತ್ರಗಳು, ಸಮುದ್ರಗಳು, ಪರ್ವತಗಳು, ಮರಗಿಡಗಳು, ಮನುಷ್ಯ ಪ್ರಾಣಿಗಳು ಕೋಪಗೊಳ್ಳಬಹುದು, ದುಃಖಿತರಾಗಬಹುದು, ಇಲ್ಲವೇ ಸಂತೋಷಭರಿತರೂ ಆಗಬಹುದು'[7] ಒಟ್ಟಿನಲ್ಲಿ, ಆದಿವಾಸಿಗಳ ವಾಗ್ರೂಪಗಳು ಒಂದು ಮುಕ್ತ ಅವಕಾಶದಲ್ಲಿ ಮತ್ತು ಮುಕ್ತ ಶೈಲಿಯಲ್ಲಿ ರೂಪುಗೊಳ್ಳುತ್ತಾ ಬಂದಿವೆ.

ಮನುಷ್ಯನ ಅಭಿವ್ಯಕ್ತಿಯನ್ನು ಪರಿಣಾಮಕಾರಿಯಾಗಿ ಹೊರಹೊಮ್ಮಿಸುವ ಒಂದು ಪ್ರಬಲ ಮಾಧ್ಯಮ ಭಾಷೆ. ಪ್ರಪಂಚದಲ್ಲಿರುವ ಭಾಷೆಗಳನ್ನು ಮೃತಭಾಷೆ ಮತ್ತು ಜೀವಂತ ಭಾಷೆಗಳೆಂದು

ಗುರುತಿಸಲಾಗಿದೆ. ಒಂದು ಕಾಲದಲ್ಲಿ ಜನಜೀವನದಲ್ಲಿ ಚಾಲ್ತಿಯಲ್ಲಿದ್ದ ಭಾಷೆ ಕಾಲಾಂತರದಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಆ ಭಾಷೆಯ ಬಳಕೆ ಸಂಪೂರ್ಣವಾಗಿ ಕಣ್ಮರೆಯಾದರೆ ಅಂತಹ ಭಾಷೆಯನ್ನು ಮೃತಭಾಷೆ ಎಂದು ಕರೆಯಲಾಗುತ್ತದೆ. ಹಾಗೆಯೇ ಯಾವ ಒಂದು ಭಾಷೆ ನಿರಂತರವಾಗಿ ಜನರ ಸಂಪರ್ಕದ ಸೇತುವೆಯಾಗಿದ್ದುಕೊಂಡು ನಿರಂತರ ಬದಲಾವಣೆಗಳಿಗೆ ಒಗ್ಗಿಕೊಂಡು ಹೊಸ ರೂಪ ತಾಳುತ್ತಾ ಜನರ ಮಧ್ಯೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವುದೋ ಅಂತಹ ಭಾಷೆಯನ್ನು ಜೀವಂತ ಭಾಷೆ ಎಂದು ಕರೆಯಲಾಗುತ್ತದೆ. ಈ ಭಾಷೆಯ ಸಂವಹನಕ್ಕಿರುವ ಎರಡು ಮುಖ್ಯ ರೂಪಗಳೆಂದರೆ ಶ್ರವಣ ಮತ್ತು ಚಾಕ್ಷುಷ. ಕಿವಿಯಿಂದ ಕೇಳುವ ಬಾಯಿ ಮಾತಿನ ಸಂವಹನವನ್ನು 'ಶ್ರವಣ' ಎಂದು ಕರೆಯಲಾಗುತ್ತದೆ. ಇದು ವಿಶ್ವವ್ಯಾಪಿ ಮತ್ತು ಜನಸಾಮಾನ್ಯರ ಭಾಷೆ. ಭಾಷೆ ಬಲ್ಲ ಯಾವುದೇ ವ್ಯಕ್ತಿ ತನ್ನ ಕಿವಿಯ ಮೂಲಕ ಕೇಳಿಸಿಕೊಳ್ಳುತ್ತಾನೆ. ಹಾಗೆಯೇ ಬರಹದ ರೂಪದಲ್ಲಿರುವ ಭಾಷೆಯನ್ನು 'ಚಾಕ್ಷುಷ' ಎಂದು ಕರೆಯಲಾಗುತ್ತದೆ. ಇದಕ್ಕೆ ಕಣ್ಣು ಮತ್ತು ಲಿಪಿಯ ಜ್ಞಾನ ಮುಖ್ಯ. ಆದರೆ ಪ್ರಪಂಚದಲ್ಲಿ ಅಕ್ಷರಸ್ಥರ ಮತ್ತು ನಿರಕ್ಷರಸ್ಥರೆಲ್ಲರಿಗೂ ಹತ್ತಿರವಾದದ್ದು ಶ್ರವಣದ ಮೂಲಕ ಬೆಸೆಯುವ ಮಾತು. ಇದನ್ನು ಮೌಖಿಕ, ತೋಂಡಿ, ಬಾಯಿಮಾತು ಎಂದೆಲ್ಲಾ ಕರೆಯಲಾಗುತ್ತದೆ. ಇದು ವಿಶಾಲವಾದ ಅರ್ಥ ವ್ಯಾಪ್ತಿಯನ್ನು ಹೊಂದಿದೆ. ಲಿಪಿಯ, ಬರಹಗಳ, ಮುದ್ರಣಗಳ, ಪುಸ್ತಕಗಳ ಹಂಗಿಗೆ ಒಳಪಡದೆ ಸ್ವತಂತ್ರವಾಗಿ ವಾಕ್‌ಪರಂಪರೆಯ ಮೂಲಕ ಜನಸಮುದಾಯದಲ್ಲಿ ಹುಟ್ಟಿ ಬಂದಿರುವುದೇ ಮೌಖಿಕ ಪರಂಪರೆ. ಜನಪದರ ಅನುಭವ ಮಾತಿನ ಮೂಲಕ ಪರಿಣಾಮಕಾರಿಯಾಗಿ ಹೊರಹೊಮ್ಮಿ ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಹರಿದು ಇವತ್ತಿಗೂ ತನ್ನ ಚಹರೆಯನ್ನು ಉಳಿಸಿಕೊಂಡು ಬಂದಿದೆ. ಇದು ಅದರ ಹೆಗ್ಗಳಿಕೆಯೂ ಕೂಡ ಹೌದು.

ವಾಕ್‌ಪರಂಪರೆಯು ಅಜ್ಞಾತವಾದದ್ದು, ಜನಪದರ ಸ್ಮೃತಿಯಲ್ಲಿ ನೆಲೆಸಿರುವಂತದ್ದು. ಮೌಖಿಕ ಸಾಹಿತ್ಯವು ಯಾವುದೇ ಒಬ್ಬ ವ್ಯಕ್ತಿಯಿಂದಾಗಲೀ ಅಥವಾ ಒಂದು ಕಾಲಘಟ್ಟದಲ್ಲಾಗಲೀ ಹುಟ್ಟಿರುವಂತದ್ದಲ್ಲ. ಇದಕ್ಕೆ ಒಬ್ಬ ಗುರುವಾಗಲೀ ಯಾವುದೇ ಸಾಂಪ್ರದಾಯಿಕ ಚೌಕಟ್ಟಾಗಲೀ ಇಲ್ಲ. ಇದು ಅನುಭವಜನ್ಯವಾದದ್ದು. ಮೌಖಿಕ ಸಾಹಿತ್ಯವು ಸಮುದಾಯದ ನಡುವೆ ಅನುಭವದ ಅಥವಾ ಕಲ್ಪನೆಯ ಪ್ರಜ್ಞೆಯಲ್ಲಿ ಹುಟ್ಟುತ್ತದೆ. ವ್ಯಕ್ತಿಯಿಂದ ವ್ಯಕ್ತಿಗೆ, ಒಂದು ಕಾಲಘಟ್ಟದಿಂದ ಮತ್ತೊಂದು ಕಾಲಘಟಕ್ಕೆ, ಹೊಸ ಹೊಸ ಪ್ರತಿಭೆ ಹಾಗೂ ಅನುಭವದ ಅನನ್ಯತೆಗೆ ಅನುಗುಣವಾಗಿ ಹೊಸ ಹೊಸ ಆಲೋಚನೆ, ಆವಿಷ್ಕಾರಗಳೊಂದಿಗೆ ಬೆಳೆಯುತ್ತಾ ಸಾಗುವುದೇ ಇದರ ಗುಣ. ಮೌಖಿಕ ಸಾಹಿತ್ಯವು ಸಮುದಾಯದಲ್ಲಿ ಕಾಲದಿಂದ ಕಾಲಕ್ಕೆ ಹೊಸತನ್ನು ಒಳಗೊಳ್ಳುತ್ತಾ ಜೀವನೋತ್ಸಾಹವನ್ನು ಕಾಪಿಡುತ್ತದೆ. ಇದರದ್ದು ಕೃತಕ ಸೌಂದರ್ಯವಲ್ಲ, ಬದಲಿಗೆ ನಿತ್ಯ ಹಸಿರಿನಿಂದ ಕಂಗೊಳಿಸುವ

ಸಹಜ ಸೌಂದರ್ಯ. ಮೌಖಿಕ ಸಾಹಿತ್ಯವು ಸಮುದಾಯದ ಸ್ಫೂರ್ತಿಯ ನೆಲೆ, ಬತ್ತದ ಸೆಲೆ. ಇದಕ್ಕೆ ಉತ್ತಮ ಉದಾಹರಣೆ ಎಂದರೆ ಶಿಷ್ಟ ರಾಮಾಯಣದಲ್ಲಿ ಸೀತೆ ಜನಕ ಮಹಾರಾಜನ ಮಗಳಾದರೆ ಜನಪದರ ರಾಮಾಯಣದಲ್ಲಿ ಆಕೆ ಭೂಮಿಯಿಂದ ಹುಟ್ಟಿದವಳು. ಇದು ಮೌಖಿಕ ಪರಂಪರೆಯು ಜೀವಪರವಾದದ್ದು ಎಂಬುದಕ್ಕೆ ಸ್ಪಷ್ಟ ನಿದರ್ಶನವನ್ನು ಒದಗಿಸುತ್ತದೆ.

ಮೊಗಳ್ಳಿಯವರು 'ಮೌಖಿಕತೆಯು ನುಡಿ ಸಂಭ್ರಮ, ಮಾತಿನ ಬೆಡಗು, ವ್ಯಕ್ತಪಡಿಸುವ ತುಡಿತ, ಹಾಡುವ ಹಂಬಲ, ಹೇಳುವ ಅನಿವಾರ್ಯತೆ, ಮುಟ್ಟುವ ಬಗ್ಗೆ, ಮೌನವನ್ನು ಧ್ವನಿಸುವ ಕ್ರಿಯೆ, ಆನಂದ ಮತ್ತು ಆಕ್ರಂದನದ ಕೂಗು'[8] ಎಂದಿದ್ದಾರೆ. ಮೌಖಿಕ ಸಾಹಿತ್ಯವು ಮನುಷ್ಯನ ಗತಕಾಲದ ಪರಂಪರೆಯ ಪುನರ್‌ಸೃಷ್ಟಿಯಾಗಿದೆ. ಪ್ರತಿಯೊಂದು ಸಮುದಾಯವೂ ಕೂಡ ತಮ್ಮ ಒಡಲಲ್ಲಿ ಅಪಾರವಾದ ಮೌಖಿಕ ಸಾಹಿತ್ಯವನ್ನು ಇರಿಸಿಕೊಂಡಿದೆ. ಈ ಮೌಖಿಕ ಸಾಹಿತ್ಯ ಆ ನಿರ್ದಿಷ್ಟ ಸಮುದಾಯದ ಆತ್ಮಕಥನಗಳಾಗಿವೆ. ಇದು ಪ್ರತಿ ಕಾಲಘಟ್ಟದಲ್ಲಿ ವಾಸ್ತವದ ಪರಿಸ್ಥಿತಿಗೆ ಅನುಗುಣವಾಗಿ ಸಮುದಾಯಗಳ ಅನುಭವದ ಹಿನ್ನೆಲೆಯಲ್ಲಿ ಹಲವು ಮಾರ್ಪಾಡುಗಳೊಂದಿಗೆ ಪುನರಾವರ್ತನೆಯಾಗುತ್ತಿರುತ್ತದೆ. ಪ್ರತಿಯೊಂದು ಕಾಲಘಟ್ಟದಲ್ಲೂ ಸಮುದಾಯದ ಬದುಕಿನಲ್ಲಿ ಮುಖ್ಯ ಎಂದೆನಿಸಿದ ಅಂಶಗಳನ್ನೆಲ್ಲ ತನ್ನೊಳಗೆ ಸೇರಿಸಿಕೊಳ್ಳುತ್ತಾ ಸಾಗುತ್ತದೆ. ಇದು ಇದರ ಚಲನಶೀಲತೆಗೆ ಸಾಕ್ಷಿಯಾಗಿದೆ. ಈ ಮೌಖಿಕ ಸಾಹಿತ್ಯದಲ್ಲಿ ನಾವು ಸಾರ್ವಕಾಲಿಕವಾದ ನಿರ್ದಿಷ್ಟತೆಯನ್ನಾಗಲೀ ಸತ್ಯವನ್ನಾಗಲೀ ಕಾಣಲು ಸಾಧ್ಯವಿಲ್ಲ. ಬದಲಾಗುವ ಬದುಕಿಗೆ ಅನುಗುಣವಾಗಿ ಇವೂ ಕೂಡ ಬದಲಾಗುತ್ತಾ ಸಾಗುತ್ತಿರುತ್ತದೆ. ಜನಪದರ ಮಾತುಗಳು, ಹಾಡು, ಕತೆ, ಅಭಿನಯ ಹಾಗೂ ಇನ್ನಿತರ ಮಾಧ್ಯಮದ ಮೂಲಕ ಹಲವಾರು ರೀತಿಯಲ್ಲಿ ಇವು ಹೊರಹೊಮ್ಮಿರುವುದನ್ನು ನಾವು ಕಾಣುತ್ತೇವೆ. ಇಂತಹ ಬಾಯಿಮಾತಿನ ಅನುಭವವನ್ನು ಅನಂತರದ ಕಾಲಘಟ್ಟದಲ್ಲಿ ದಾಖಲಿಸುವ ಕಾರ್ಯವು ಕೂಡ ನಡೆಯಿತು. ಇಂದಿಗೂ ಆ ಮಹತ್ವದ ಕಾರ್ಯವು ನಡೆಯುತ್ತಾ ಸಾಗುತ್ತಿದೆ.

ಆಧುನಿಕ ಭಾಷಾಶಾಸ್ತ್ರಜ್ಞನಾದ ಪರ್ಡಿನೆಂಡ್ ಡಿ. ಸಸೂರ್ ಅವರು 'ಭಾಷೆಯು ಮೂಲತಃ ಮೌಖಿಕ ರೂಪದ್ದು, ಭಾಷೆಯ ಸ್ವರೂಪ ಸ್ವಭಾವಗಳೂ ಮೌಖಿಕವೇ, ಆದರೆ ಬರವಣಿಗೆಯೇ ಭಾಷೆಯ ಮೂಲ ಸ್ವರೂಪ ಎಂದು ತಪ್ಪಾಗಿ ಭಾವಿಸಲಾಗಿತ್ತು' ಎಂದಿದ್ದಾರೆ. ಸಮುದಾಯದ ದಿನನಿತ್ಯದ ಬದುಕಿನ ಆಲೋಚನೆಗಳು, ಆಶಯ, ಕನಸು, ಕನವರಿಕೆಗಳು, ಅನುಭವಗಳು ಸಂವಹನಗಳು ಮಾತಿನ ಮೂಲಕ ಹೊರಹೊಮ್ಮುತ್ತವೆ. ಇದು ಲಿಪಿಯ ಮೂಲಕ ಒಂದು ನಿರ್ದಿಷ್ಟವಾದ ಚೌಕಟ್ಟನ್ನು ಪಡೆದುಕೊಳ್ಳುತ್ತದೆ. ಆದರೆ ಮೌಖಿಕ ಸಾಹಿತ್ಯವನ್ನು ನಾವು ಬರಹದ ಮೂಲಕ ಎಷ್ಟೇ ಪರಿಣಾಮಕಾರಿಯಾಗಿ, ಸಮರ್ಥವಾಗಿ ಬಂಧಿಸಿದರೂ ಕೂಡ ಅದರಾಚೆಗೂ ಅದು ತನ್ನ ಅಸ್ತಿತ್ವವನ್ನು ಮತ್ತು ತನ್ನ ಚಹರೆಯನ್ನು ಉಳಿಸಿಕೊಂಡಿರುತ್ತದೆ. ಇದಕ್ಕೆ ಅದರ ಅಗಾಧ ಅಂತಃಸತ್ವವೇ ಸಾಕ್ಷಿಯಾಗಿದೆ.

'ಮಾತು' ನೈಜವಾಗಿದ್ದು ಅದು 'ಬರಹ'ದ ಮೂಲಕ ಮುದ್ರಣಕ್ಕೆ ಇಳಿದ ಕೂಡಲೆ ತನ್ನ ನೈಜತೆಯನ್ನು ಕಳೆದುಕೊಂಡು ಕೃತಕವಾಗುತ್ತದೆ. ಉದಾಹರಣೆಗೆ ಮೂಲ ರಾಮಾಯಣದಲ್ಲಿ ಇರುವ ಸೀತೆಯು ನೈಜ ಎಂದಾದರೆ ಅದನ್ನು ಅಭಿನಯದ ಮೂಲಕ ತೋರಿಸಿದಾಗ ಅದು ಎಷ್ಟೇ ನೈಜವಾದ ಅಭಿನಯವಾದರೂ ಕೂಡ ಮೂಲ ಹಂತವನ್ನು ತಲುಪುವುದಿಲ್ಲ. ಇದು ಬರಹಕ್ಕಿರುವ ಮಿತಿಯೆಂದು ನಾವು ಪರಿಗಣಿಸಬಹುದು. ಮಾತು ಪಠ್ಯಕ್ಕೆ ಅಥವಾ ಮುದ್ರಣಕ್ಕೆ ಒಳಗೊಳ್ಳುವುದು ಎಂದರೆ ನಿಷ್ಕ್ರಿಯವಾಗುವುದು ಎಂದರ್ಥ. ಮಾತು ಲಿಪಿಯ ರೂಪ ಪಡೆದ ಮರುಕ್ಷಣವೇ ನಿಂತ ನೀರಾಗಿ ಬಿಡುತ್ತದೆ. ವಾಕ್ ಪರಂಪರೆಯು ಸಮುದಾಯದ ಆಸ್ತಿ ಎಂದು ಹೇಳಬಹುದಾದರೆ ಅದನ್ನು ಸಂಗ್ರಹಿಸಿ ಪರಿಷ್ಕರಿಸಿ ಮುದ್ರಿಸಿ ಪ್ರಕಟಣೆಗೊಂಡ ನಂತರ ಅದು ಆ ಲೇಖಕರದ್ದಾಗಿಬಿಡುತ್ತದೆ. ಮರುಕ್ಷಣದಿಂದಲೇ ಅದು ತನ್ನ ನಿರಂತರ ಹೊಸತನವನ್ನು ಕಳೆದುಕೊಂಡು ಒಂದು ನಿರ್ದಿಷ್ಟವಾದ ಚೌಕಟ್ಟಿನೊಳಗೆ ಬಂದಿಯಾಗುತ್ತದೆ. ಮಾತು ಶ್ರವಣ ಸಂಸ್ಕೃತಿಯಿಂದ ಲಿಖಿತ ರೂಪವನ್ನು ಪಡೆಯುತ್ತದೆ. ಲಿಖಿತದಿಂದ ಇದು ಮುದ್ರಣಕ್ಕೆ ಒಳಗಾಗಿ ದೃಶ್ಯ ಎಂದೆನಿಸಿಕೊಳ್ಳುತ್ತದೆ. ಶ್ರವಣದಿಂದ ಮುದ್ರಣಕ್ಕೆ ಬದಲಾದ ಕೂಡಲೇ ಅಲ್ಲಿಗೆ ಇದೇ ಅಂತಿಮ ಎಂಬ ತೀರ್ಮಾನವನ್ನು ನೀಡಲಾಗುತ್ತದೆ. ಅದು ಅದರ ಮಿತಿಯೂ ಕೂಡ ಹೌದು. ಆದರೆ ಇಲ್ಲಿಯವರೆಗೆ ಈ ಸಂಗ್ರಹ ಕಾರ್ಯವು ನಡೆಯದಿದ್ದರಿಂದ ಇಂದು ಎಷ್ಟೋ ಅಗಾಧವಾದ ಮೌಖಿಕ ಸಾಹಿತ್ಯವು ಸಮುದಾಯದ ಬದುಕು ಸ್ಥಿತ್ಯಂತರವಾದಂತೆ ಮುಂದುವರಿಸಿಕೊಂಡು ಹೋಗುವವರಿಲ್ಲದೆ ಕಣ್ಮರೆಯಾಗಿದೆ.

ಲಿಖಿತವು ವ್ಯಕ್ತಿನಿಷ್ಠವಾದರೆ, ಮೌಖಿಕವು ವಸ್ತುನಿಷ್ಠವಾಗಿದೆ. ಪಠ್ಯವು ನಿರ್ದಿಷ್ಟ ವ್ಯಕ್ತಿಯ ಸೃಷ್ಟಿಯಾದರೆ, ಮೌಖಿಕವು ಅನಾಮಧೇಯ ಸೃಷ್ಟಿಯಾಗಿದೆ. ಲಿಖಿತ ಸಾಹಿತ್ಯದಲ್ಲಿ ಯಾವುದೇ ಘಟನೆ ಅಥವಾ ಕಾಲವಾಗಲಿ ನಿರ್ದಿಷ್ಟವಾಗಿದ್ದರೆ ಮೌಖಿಕದಲ್ಲಿ ಅದು ಅಮೂರ್ತವಾಗಿರುತ್ತದೆ. ಆದರೆ ಇಲ್ಲಿ ಹಾಡುಗಾರನಾಗಲೀ ಕತೆಗಾರನಾಗಲಿ ಸಮುದಾಯದ ಒಂದು ಭಾಗವೇ ಆಗಿರುತ್ತಾನೆ. ಅವನ ಅಂತರಾಳದಲ್ಲಿ ಸಮುದಾಯದ ಜೀವಸತ್ವ ಇಲ್ಲದೆ ಹೋದರೆ ಆತನಿಗೆ ಅದನ್ನು ಹಾಡಲಾಗಲೀ ಪ್ರದರ್ಶಿಸಲಾಗಲೀ ಸಾಧ್ಯವಿಲ್ಲ. 'ಮೌಖಿಕ ಸಾಹಿತ್ಯವು ಘಟಿಸಿಹೋದ, ವರ್ತಮಾನದ ಹಾಗೆಯೇ ಮುಂಬರುವ ಕಾಲಮಾನದ ಸೃಜನಶೀಲ, ಪ್ರಜ್ಞಾಪೂರ್ವಕ ಸೇತುವೆಯಾಗಿದೆ ಹಾಗೂ ಇದು ಕಾಲಾತೀತವಾಗಿದ್ದು ಎಲ್ಲ ಕಾಲಕ್ಕೂ ಸಲ್ಲುವಂತದ್ದು. ಈ ಮೌಖಿಕ ಸಾಹಿತ್ಯವು ಸಮಷ್ಟಿಪ್ರಜ್ಞೆಯ ಪ್ರತಿರೂಪವಾಗಿದೆ'[9] ಮೌಖಿಕ ಪರಂಪರೆಗೆ ಇರುವ ಅಗಾಧ ಶಕ್ತಿಯೇ ಅದರ ಒಳಗೊಳ್ಳುವಿಕೆ ಹಾಗೂ ಮುಕ್ತತೆ. ಇದು ಜನರ ಸ್ಮೃತಿಯಲ್ಲಿ ಸದಾ ಜೀವಂತವಾಗಿದ್ದು ಪ್ರತಿ ಬಾರಿ ಪ್ರತಿ ವ್ಯಕ್ತಿಯಲ್ಲೂ ಸಂದರ್ಭಕ್ಕೆ ಅನುಗುಣವಾಗಿ ಹೊಸತನದ ಸೇರ್ಪಡೆಯೊಂದಿಗೆ ಕೆಲವೊಂದನ್ನು ಕಳೆದುಕೊಳ್ಳುತ್ತಾ ಸಾಗುತ್ತದೆ. ಅದು ಕತೆಯಾಗಲೀ, ಪದ್ಯವಾಗಲೀ ಸಹಜ. ಏಕಕಾಲಕ್ಕೆ ಬೇರೆ ಬೇರೆ ಪ್ರದೇಶದ ಬೇರೆ

ಬೇರೆ ವ್ಯಕ್ತಿಗಳಲ್ಲಿ, ಆ ನಿರ್ದಿಷ್ಟ ವ್ಯಕ್ತಿಯ ಅನುಭವ ಮತ್ತು ಪ್ರತಿಭೆಗೆ ಅನುಗುಣವಾಗಿ ಬದಲಾವಣೆಗೆ ಒಳಪಡುವಷ್ಟು ತೀವ್ರ ಚಲನಶೀಲತೆ ಮೌಖಿಕ ಸಾಹಿತ್ಯಕ್ಕಿದೆ. ಇನ್ನೂ ಅತಿಶಯೋಕ್ತಿ ಯೆಂದರೆ ಒಬ್ಬನೇ ವ್ಯಕ್ತಿಯಲ್ಲಿ ಒಂದೇ ಪಠ್ಯವನ್ನು ಎಷ್ಟು ಬಾರಿ ಹಾಡಿಸಿದರೂ, ಪ್ರತಿ ಬಾರಿಯಲ್ಲೂ ಕೆಲವನ್ನು ಸೇರಿಸುತ್ತಾ ಕೆಲವನ್ನು ಕೈ ಬಿಡುತ್ತಾ ಇದು ಸಾಗುತ್ತದೆ. ಹೊಸತು ಹಳತುಗಳ ಸಂಗಮ ಅತ್ಯಂತ ಸಹಜ. ಇದಕ್ಕೆ ಉದಾಹರಣೆಯೆಂದರೆ ದರೋಜಿ ಈರಮ್ಮ. ಈಕೆಯ ಬಳಿ ಒಂದೇ ಕಾವ್ಯವನ್ನು ಅದೆಷ್ಟೇ ಬಾರಿ ಹಾಡಿಸಿದರೂ ಈಕೆಗಿರುವ ಅಗಾಧ ಪ್ರತಿಭೆಯಿಂದ ಪ್ರತಿ ಬಾರಿಯೂ ಹೊಸತನ್ನು ಸೇರಿಸುತ್ತಾ ತನ್ನ ಅಗಾಧವಾದ ಪ್ರತಿಭೆಯನ್ನು ಅನಾವರಣಗೊಳಿಸುತ್ತಾಳೆ. ಒಂದೇ ಕಥನದ ಹಲವು ಪಠ್ಯಗಳನ್ನು ಕಟ್ಟುತ್ತಾ ಹೋಗುತ್ತಾಳೆ. ಇದು ಆಕೆಗಿರುವ ಸಹಜ ಸ್ಫೂರ್ತಿ; ಹಾಗೆಯೇ ಜನಪದದಲ್ಲಿ ಅಡಗಿರುವ ಸಹಜ ಚೈತನ್ಯ ಹಾಗೂ ಪ್ರತಿಭೆ. ಈ ಬದಲಾವಣೆಗಳು ಪಠ್ಯಕ್ಕೆ ಪೂರಕವಾಗಿದ್ದು, ಚಿನ್ನವನ್ನು ಎಷ್ಟು ಬಾರಿ ಸಾಣೆ ಹಿಡಿದರೂ ಅದು ಪ್ರತಿ ಬಾರಿ ತನ್ನ ಹೊಳಪನ್ನು ಹೆಚ್ಚಿಸಿಕೊಳ್ಳುವಂತೆ ಪ್ರತಿ ಬಾರಿ ಹಾಡಿದಾಗಲೂ, ಕೇಳಿದಾಗಲೂ ವೈಶಿಷ್ಟ್ಯತೆಯನ್ನು, ಹೊಸತನವನ್ನು ಮೆರೆಯುತ್ತದೆ. ಅದು ಮೌಖಿಕ ಪರಂಪರೆಗಿರುವ ಅಗಾಧವಾದ ಶಕ್ತಿ.

ಮೌಖಿಕ ಸಾಹಿತ್ಯವು ಸ್ಥಾಪಿತವಲ್ಲ, ಜಂಗಮ. ಇದಕ್ಕೆ ಇರುವ ಈ ಸ್ವಾತಂತ್ರ್ಯದ ಕಾರಣದಿಂದ ಇದು ಹಲವಾರು ಆಯಾಮಗಳಲ್ಲಿ ಹೊಸ ಹೊಸದನ್ನು ತನ್ನೊಳಗೆ ಒಳಗೊಳ್ಳುತ್ತಾ ಸಾಗುತ್ತದೆ. ಈ ಕಾರಣದಿಂದಾಗಿ ಇದರ ಮೂಲ ಆಶಯವು ಕೆಲವೊಮ್ಮೆ ಕಣ್ಮರೆಯಾಗುವ ಸಾಧ್ಯತೆಗಳೇ ಹೆಚ್ಚು. ಹೀಗೆ ಒಳಗೊಳ್ಳುವ ಸಂದರ್ಭದಲ್ಲಿ ಜನಪದರು ಬದುಕಿನ ವಿವಿಧ ಆಯಾಮಗಳಾದ ಸೋಲು–ಗೆಲುವು, ಸುಃಖ–ದುಃಖ, ನೋವು–ನಲಿವು, ಅಧೀನತೆ–ಪರಾಧೀನತೆ, ಸ್ವಾತಂತ್ರ್ಯ–ಸಂಕೋಲೆಗಳನ್ನು ಮೌಖಿಕ ಸಾಹಿತ್ಯದ ಮೂಲಕ ಹೊರಹಾಕಿ ತೃಪ್ತರಾಗುತ್ತಾರೆ. ಮೌಖಿಕ ಸಾಹಿತ್ಯವನ್ನು ನಾವು ಇಡಿಯಾಗಿ ನೋಡಿದಾಗ ಮಾತ್ರ ನಮಗೆ ಸಮುದಾಯಗಳ ಪರಿಪೂರ್ಣತೆ ಲಭ್ಯವಾಗುತ್ತದೆ. ಮೌಖಿಕ ಸಾಹಿತ್ಯವನ್ನು ಕುರಿತ ಹಲವು ಜನಪ್ರಿಯ ವ್ಯಾಖ್ಯಾನಗಳು ಹೀಗಿವೆ.

'ಮೌಖಿಕ ಇತಿಹಾಸ ಗತಕಾಲದ ಪುನರಾಭಿನಯ'

'ಕಳೆದು ಹೋದುದುರ ಸ್ಮರಣೆಯಲ್ಲಿ ಕಳೆಯುತ್ತಿರುವ ವರ್ತಮಾನದ ಭಾಷಾಭಿವ್ಯಕ್ತಿ.'

'ಮೌಖಿಕ ಸಾಹಿತ್ಯವು ಘಟಿಸಿಹೋದ, ವರ್ತಮಾನದ ಹಾಗೆಯೇ ಮುಂಬರುವ ಕಾಲಮಾನದ ಸೃಜನಶೀಲ, ಪ್ರಜ್ಞಾಪೂರ್ವಕ ಸೇತುವೆಯಾಗಿದ್ದು ಕಾಲಾತೀತವಾಗಿದೆ. ಎಲ್ಲ ಕಾಲಕ್ಕೂ ಇದು ಸಲ್ಲುವಂತದ್ದು. ಈ ಮೌಖಿಕ ಸಾಹಿತ್ಯವೂ ಸಮಷ್ಟಿ ಪ್ರಜ್ಞೆಯ ಪ್ರತಿರೂಪವಾಗಿದೆ'

ಶಿಷ್ಟ ಸಾಹಿತ್ಯಕ್ಕೆ ಮೂಲ ಆಕರ ಜನಪದ ಸಾಹಿತ್ಯವೇ ಆಗಿದೆ. ಅದರ ಹುಟ್ಟು ಅನಾಮಧೇಯ. ಲೋಕರೂಢಿಯಲ್ಲಿದ್ದ ಪ್ರಚಲಿತ ವಿಷಯಗಳು ಇದರ ಆಕರ. ಇದು ಮೌಖಿಕ ರೂಪದಲ್ಲಿ ಇದ್ದು

ವಿದ್ವಾಂಸರ ಕೃಪೆಯಿಂದ ಬರಹ ರೂಪದಲ್ಲಿ ಪಠ್ಯವಾಯಿತು. ಆದರೆ ತಮ್ಮದೇ ಆದ ನಿರ್ದಿಷ್ಟ ಭಾಷೆಯನ್ನು ಹೊಂದಿದ್ದು, ಲಿಪಿಯಿಲ್ಲದ ಕಾರಣದಿಂದ ಹಾಗೂ ಪ್ರತ್ಯೇಕವಾಗಿ ಕಾಡಿನಲ್ಲಿ ವಾಸಿಸುವುದರಿಂದ ಬುಡಕಟ್ಟು ಮೌಖಿಕ ಸಾಹಿತ್ಯವು ಅವಜ್ಞೆಗೆ ಈಡಾಗಿದೆ. ಈ ಬುಡಕಟ್ಟು ಮೌಖಿಕ ಸಾಹಿತ್ಯವನ್ನು ಬರಹದ ರೂಪಕ್ಕೆ ಇಳಿಸಿ ಪಠ್ಯಗೊಳಿಸುವ ನಿಟ್ಟಿನಲ್ಲಿ ಈಗಾಗಲೇ ಹಂಪಿಯ ಕನ್ನಡ ವಿಶ್ವವಿದ್ಯಾನಿಲಯವು ಶ್ರಮಿಸಿದ್ದು ಹಲವಾರು ಕಾವ್ಯಗಳು ಈಗಾಗಲೇ ಪಠ್ಯಗಳಾಗಿವೆ. ಹಾಗೆಯೇ ಸಂಗ್ರಹಣಾ ಕಾರ್ಯವೂ ಇನ್ನೂ ಕೂಡ ನಡೆಯುತ್ತಿದೆ.

ಪ್ರತಿಯೊಂದು ಬುಡಕಟ್ಟುಗಳು ತಮ್ಮ ಅನನ್ಯತೆಯನ್ನು ಪ್ರತಿಪಾದಿಸಲು ಪ್ರಜ್ಞಾಪೂರ್ವಕವಾಗಿಯೋ ಅಪ್ರಜ್ಞಾಪೂರ್ವಕವಾಗಿಯೇ ಶ್ರಮಿಸುತ್ತಿರುತ್ತವೆ. ಅದು ಅವರ ಮೌಖಿಕ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸದಾ ಧ್ವನಿಸುತ್ತಿರುತ್ತದೆ. ಬುಡಕಟ್ಟುಗಳ ಮೌಖಿಕ ಸಾಹಿತ್ಯದ ಮುಖ್ಯ ತಿರುಳು ಪ್ರಕೃತಿ ಮತ್ತು ಮಾನವ. ಮತ್ತು ಇವೆರಡರ ನಡುವಿನ ಅಂತರ್ ಸಂಬಂಧದ ಒಳನೋಟ. ಮನುಷ್ಯನ ಜೀವನಾ ವರ್ತನದ ಪ್ರಮುಖ ಘಟ್ಟವೆಂದರೆ ಹುಟ್ಟು, ಮದುವೆ, ಸಾವು ಹಾಗೂ ಅದರೊಂದಿಗೆ ಬೆಸೆದುಕೊಂಡಿರುವ ಹಲವು ಆಚರಣೆಗಳು. ಗಂಡು ಹೆಣ್ಣಿನ ನಡುವಿನ ಸಂಬಂಧ–ಸ್ವಾತಂತ್ರ್ಯ, ಪರಸ್ಪರ ಸಹಬಾಳ್ವೆ, ಕೂಡಿ ಬಾಳುವ ಗುಣ, ಸಾಮರಸ್ಯ, ಹಂಚಿ ತಿನ್ನುವ ಗುಣ, ಆತ್ಮಗಳ, ದೈವಗಳ ಆರಾಧನೆ, ನಂಬಿಕೆ, ನ್ಯಾಯ, ನೀತಿ, ನಿಯಮ ಇವೇ ಈ ಬುಡಕಟ್ಟು ಮೌಖಿಕ ಸಾಹಿತ್ಯದ ಮುಖ್ಯ ವಿಷಯ. ಇವೆಲ್ಲವೂ ತಮ್ಮ ಮುಂದಿನ ಪೀಳಿಗೆಗೆ ಮಾರ್ಗಸೂಚಿಯಂತೆ ಮೌಖಿಕ ಪರಂಪರೆಯ ಮೂಲಕ ಉಳಿದು ಬರುತ್ತದೆ.

ಡಾ. ಎಂ. ಎಸ್. ಮುತ್ತಯ್ಯನವರು ತಮ್ಮ ಕನ್ನಡ ಜನಪದ ಮಹಾಕಾವ್ಯ ಮತ್ತು ಪ್ರತಿ ಸಂಸ್ಕೃತಿ ಕೃತಿಯಲ್ಲಿ 'ದುಡಿಯುವ ಸಮುದಾಯಗಳು, ಪ್ರಭುತ್ವದ ಹೇರಿಕೆ ಶಕ್ತಿಗಳನ್ನು ಹೊಡೆದು ಹಾಕಿ ತಮ್ಮದೇ ಆದ ಅಸ್ತಿತ್ವ ಹಾಗೂ ಅಧಿಕಾರವನ್ನು ಸ್ಥಾಪಿಸಲು ಯತ್ನಿಸುತ್ತಿವೆ. ಕೆಲವೊಮ್ಮೆ ಜಗಳದ ಮೂಲಕ, ಇನ್ನೂ ಕೆಲವೊಮ್ಮೆ ಸಂಧಾನದ ಮೂಲಕ ಈ ಸಮುದಾಯಗಳು ತಮ್ಮ ಬದುಕನ್ನು ರೂಪುಗೊಳಿಸುತ್ತವೆ'[10] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಈ ಮಾತು ಕೊಡಗಿನ ಬುಡಕಟ್ಟುಗಳ ಪಾಲಿಗೆ ಅಕ್ಷರಶಃ ಸತ್ಯ. ಈ ಅರಣ್ಯಮೂಲ ಬುಡಕಟ್ಟುಗಳ ಮೌಖಿಕ ಸಾಹಿತ್ಯವು, ಶಿಷ್ಟ ಹಾಗೂ ಜನಪದದಂತೆ ದೈವಕೇಂದ್ರಿತವಲ್ಲ, ಬದಲಿಗೆ ಮನುಷ್ಯಕೇಂದ್ರಿತವಾದದ್ದು. ಇವರಲ್ಲಿ ದೇವರ ಕಲ್ಪನೆ ಇತ್ತೀಚಿನದ್ದು. ಕಾಡನ್ನು ಬಿಟ್ಟು ಊರು ಸೇರಿದ ನಂತರ ತಮ್ಮ ಸುತ್ತಲಿನ ವೈದಿಕರ ಪ್ರಭಾವಕ್ಕೆ ಒಳಗಾಗಿ ವೈದಿಕ ದೈವಾರಾಧನೆಯೂ ಇತ್ತೀಚೆಗೆ ಆಚರಣೆಗೆ ಬಂದಿದೆ. ಈ ಸಮುದಾಯಗಳ ಮೌಖಿಕ ಸಾಹಿತ್ಯದ ಮುಖ್ಯ ವಸ್ತು ಪ್ರಕೃತಿ ಹಾಗೂ ಪ್ರಕೃತಿಯೊಂದಿಗಿನ ಮಾನವನ ಅನ್ಯೋನ್ಯ ಸಂಬಂಧ. ಅತಿಮಾನುಷ ಮತ್ತು ರೋಚಕತೆ ಕಂಡುಬಂದರೂ ಕೂಡ ಅವು ಪೂರಕವಾಗಿರುತ್ತದೆಯೇ

ಹೊರತು ಅದೇ ಎಲ್ಲವೂ ಅಲ್ಲ. ಇವರಲ್ಲಿ ದೈವ ಎಂದರೆ ತೀರಿಕೊಂಡ ತಮ್ಮ ಹಿರಿಯರ ಆತ್ಮಗಳು. ಹಲವಾರು ಸಂದರ್ಭದಲ್ಲಿ ತಮ್ಮ ಸಮುದಾಯದಲ್ಲಿ ಕೇಡು, ನಷ್ಟ ಕಂಡು ಬಂದಾಗ ಇವರು ಮೊರೆ ಹೋಗುವುದು ತಮ್ಮ ಹಿರಿಯರ ಆತ್ಮಗಳನ್ನೇ ಹೊರತು ಪುರೋಹಿತರನ್ನಾಗಲೀ, ನಾಗರಿಕ ಸಮಾಜದ ಒಪ್ಪಿತ ದೇವರುಗಳನ್ನಾಗಲೀ ಅಲ್ಲ.

ಬುಡಕಟ್ಟು ಮೌಖಿಕ ಪರಂಪರೆಯು, ಅವರ ಹಬ್ಬ, ಸಂಪ್ರದಾಯ, ಆಚರಣೆಗಳು, ಮನೋರಂಜನೆ ಮೊದಲಾದ ಆಚರಣೆಗಳೊಂದಿಗಿನ ಕ್ರಿಯೆಗಳೊಂದಿಗೆ ಸಂಬಂಧಿಸಿರುವಂಥದ್ದು. ಒಂದೆಡೆ ಲಿಖಿತ ಅಥವಾ ಶಿಷ್ಟ ಸಾಹಿತ್ಯಕ್ಕೆ ಅಗಾಧವಾದ ಗೌರವ ಪ್ರಾಶಸ್ತ್ಯ ನೀಡುತ್ತಿರುವ ಹೊತ್ತಿನಲ್ಲಿ, ನಿಸರ್ಗ ಮತ್ತು ಮಾನವನ ನಡುವಿನ ಅನುಸಂಧಾನದ ಅಗಾಧ ಪರಂಪರೆಯು ಬರಹದ ರೂಪದಲ್ಲಿಲ್ಲ ಎಂಬ ಕಾರಣಕ್ಕೆ ಇಡೀ ನಾಗರಿಕ ಸಮಾಜದ ಅವಜ್ಞೆಗೆ ಒಳಗಾಗಿದೆ ಹಾಗೂ ಇದಕ್ಕೆ ಸಹಜವಾಗಿ ಸಿಗಬೇಕಾದ ಮನ್ನಣೆಯನ್ನು ನೀಡದೆ ತುಚ್ಛೀಕರಿಸಲಾಗಿದೆ. ಈ ಬುಡಕಟ್ಟು ಮೌಖಿಕ ಸಾಹಿತ್ಯವು ಆಧುನಿಕ ಯುಗದಲ್ಲಿ ವಿಜ್ಞಾನಕ್ಕೆ ಸವಾಲೆಸೆಯುವ ಎಷ್ಟೋ ಸಂಗತಿಗಳನ್ನು ತನ್ನ ಒಡಲಲ್ಲಿ ಗೌಪ್ಯವಾಗಿ ಇರಿಸಿಕೊಂಡಿದೆ. ಹಾಗೆಯೇ ವೈದ್ಯಕೀಯ ಲೋಕಕ್ಕೆ ನಿಲುಕದ ಎಷ್ಟೋ ಸಮಸ್ಯೆಗಳಿಗೆ ಪರಿಹಾರವನ್ನು ತನ್ನೊಳಗೆ ಹುದುಗಿಸಿಕೊಂಡಂತಿದೆ. ಇಂತಹ ಅಗಾಧ ಜ್ಞಾನಪರಂಪರೆ ಹಲವು ಕ್ಷುಲ್ಲಕ ಕಾರಣಗಳಿಂದಾಗಿ ತನಗೆ ಸಿಗಬೇಕಾದ ಗೌರವ ಮನ್ನಣೆ ದೊರಕದೆ ಅಂಚಿಗೆ ತಳ್ಳಲ್ಪಟ್ಟಿದೆ.

ವಿದೇಶಿ ವಿದ್ವಾಂಸರಾದ ಆರ್.ಎಸ್.ಭಾಗ್ಸ್ ಅವರು ಮೌಖಿಕ ಸಾಹಿತ್ಯವನ್ನು ನಾಲ್ಕು ಪ್ರಕಾರವಾಗಿ ವಿಂಗಡಿಸಿದ್ದಾರೆ.

1. ಸಾಹಿತ್ಯಿಕ ಬಗೆ
2. ಭಾಷಿಕ ಬಗೆ
3. ವೈಜ್ಞಾನಿಕ ಬಗೆ
4. ಕ್ರಿಯಾತ್ಮಕ ಬಗೆ

ಬುಡಕಟ್ಟು ಮೌಖಿಕ ಪರಂಪರೆಯ ಹೆಚ್ಚಿನ ಪಾಲು ಆಚರಣೆಗೆ ಸಂಬಂಧಿಸಿದ್ದು, ಎಷ್ಟೋ ಬಾರಿ ಈ ಮೌಖಿಕ ಜ್ಞಾನವನ್ನು ಪಠ್ಯಕ್ಕೆ ಒಳಪಡಿಸುವ ಸಂದರ್ಭದಲ್ಲಿ ಆಚರಣೆಗಳ ಅಣಕು ಪ್ರದರ್ಶನವನ್ನು ಏರ್ಪಡಿಸಿ ಗಾಯಕರನ್ನು ಹಾಗೂ ಅವರ ತಂಡವನ್ನು ಅಭಿನಯಿಸುವಂತೆ, ಹಾಡುವಂತೆ ಪ್ರೇರೇಪಿಸಲಾಗುತ್ತದೆ. ತಮ್ಮ ಬದುಕಿನ ಭಾಗವಾದ ಕಾಡು, ಹಾಡಿ, ಪೋಡು, ಸಮುದಾಯದ ಮಧ್ಯೆ ಸಹಜವಾಗಿ ಹೊರಹೊಮ್ಮಬೇಕಾದ ಈ ಆಚರಣೆಗಳು ಮತ್ತು ಅದಕ್ಕೆ ಸಂಬಂಧಿಸಿದ ಮೌಖಿಕ ಸಾಹಿತ್ಯವು ಇಂತಹ ಸನ್ನಿವೇಶಗಳಲ್ಲಿ ತನ್ನ ನೈಜತೆಯನ್ನು ಕಳೆದುಕೊಂಡು ಹೆಚ್ಚು ನಾಟಕೀಯವಾಗುವ ಹಾಗೂ ತನ್ನ ಅಂತಃಸತ್ವವನ್ನು ಹೊರತರುವಲ್ಲಿ ಭಾಗಶಃ ವಿಫಲವಾಗುವ

ಸಂಭವವೇ ಹೆಚ್ಚು. ಹಾಗೆಂದು ಈ ಕೆಲಸವನ್ನು ನಿರ್ಲಕ್ಷಿಸುವಂತೆಯೂ ಇಲ್ಲ. ಇಂದು ಈ ಬುಡಕಟ್ಟುಗಳ ಮೌಖಿಕ ಸಾಹಿತ್ಯ ಸಂಗ್ರಹಣೆಯಾಗಿರುವುದೇ ಹೆಚ್ಚಾಗಿ ಈ ರೀತಿಯ ಪ್ರಯತ್ನದಿಂದ.

**ಬುಡಕಟ್ಟುಗಳ ಮೌಖಿಕ ಸಾಹಿತ್ಯದ ವಿವಿಧ ಪ್ರಕಾರಗಳು**

ಬುಡಕಟ್ಟುಗಳ ಮೌಖಿಕ ಸಾಹಿತ್ಯವನ್ನು ನಾವು ಈ ಕೆಳಗಿನಂತೆ ವಿಭಾಗಿಸಬಹುದು

1. ಕತೆಗಳು
2. ಹಾಡುಗಳು
3. ಗಾದೆಗಳು
4. ಒಗಟುಗಳು
5. ಸೃಷ್ಟಿಪುರಾಣಗಳು
6. ಮಹಾಕಾವ್ಯಗಳು

**3.2. ಕತೆಗಳು**

ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಬಹು ಪ್ರಚಲಿತವಾದ ಹಾಗೂ ಅಬಾಲವೃದ್ಧರಾಗಿ ಎಲ್ಲರನ್ನು ಸೆಳೆಯುವ ಶಕ್ತಿಯಿರುವುದು ಕತೆಗಳಿಗೆ. ಕತೆಗಳು ಸಾಹಿತ್ಯ ಪ್ರಕಾರಗಳಲ್ಲೇ ಅತೀ ಹೆಚ್ಚು ಮನ್ನಣೆಯನ್ನು ಗಳಿಸಿದೆ. ಕನ್ನಡ ಸಾಹಿತ್ಯದಲ್ಲಿ ವಡ್ಡಾರಾಧನೆಯು(ಕ್ರಿ.ಶ.450) ನಮಗೆ ದೊರೆತಿರುವ ಮೊಟ್ಟ ಮೊದಲ ಕಥಾಸಂಕಲನವಾಗಿದೆ. ಜಾನಪದ ಸಾಹಿತ್ಯದಲ್ಲಿ ಕಥೆಗಳದ್ದು ಅಗ್ರಸ್ಥಾನ. ಕತೆಗಳು ಜನಪದರ ಮೌಖಿಕದಲ್ಲಿ ವಿಪುಲವಾದ ಸಂಖ್ಯೆಯಲ್ಲಿ ಇನ್ನೂ ಉಳಿದುಬಂದಿದೆ.

**ಕತೆಗಳ ಸಂಗ್ರಹ ಕಾರ್ಯ:** ಪ್ರಪಂಚದ ಹೆಚ್ಚಿನ ಜನಪದ ಕತೆಗಳ ಮೂಲ ಒಂದೇ ಆಗಿರುವುದು ಅಧ್ಯಯನದಿಂದ ದೃಢಪಟ್ಟಿದೆ. ಮೊಟ್ಟ ಮೊದಲಿಗೆ ಕತೆಗಳ ಕುರಿತ ಸಂಗ್ರಹ ಕಾರ್ಯ ಪ್ರಾರಂಭವಾದದ್ದು ಜರ್ಮನಿಯಲ್ಲಿ. ಗ್ರಿಮ್ಸ್ ಸಹೋದರರು ಎಂದೇ ಹೆಸರಾದ ಜಾಕಬ್‌ಗ್ರಿಮ್ ಮತ್ತು ವಿಲ್ ಹೆಲ್ಮ್ ಗ್ರಿಮ್ ಅವರು 1817ರಲ್ಲಿ ಜರ್ಮನಿ ದೇಶದ ಕಥಾಸಂಕಲನವನ್ನು ಮೊದಲ ಬಾರಿಗೆ ಹೊರತಂದರು. ಇದು ಪ್ರಪಂಚದಾದ್ಯಂತ ಕತೆಗಳನ್ನು ನೋಡುವ ಒಂದು ವಿಶಿಷ್ಟ ಬಗೆಗೆ ನಾಂದಿಯಾಯಿತು. ನಂತರ ಮ್ಯಾಕ್ಸ್ ಮುಲ್ಲರ್, ಥಾಮಸ್ ಕ್ರೆಟ್ಲಿ, ಪ್ರೊ.ಚೈಲ್ಡ್ ಅವರ ಅಧ್ಯಯನದ ಕುತೂಹಲದಿಂದ ಫಿನ್‌ಲೆಂಡ್, ಸ್ಪೈಯಿನ್ ಮೊದಲಾದ ದೇಶಗಳ ಕತೆಗಳು ಅಂತಾರಾಷ್ಟ್ರೀಯ ಮಟ್ಟದಲ್ಲಿ ಜನಪ್ರಿಯತೆ ಪಡೆದವು. ಆಡುಭಾಷೆಯ ಸರಳ ನಿರೂಪಣೆಯು ಕತೆ ಕಟ್ಟುವವನ ಪ್ರತಿಭೆಯ ಮೇಲೆ

ನಿರ್ಧರಿತವಾಗುತ್ತದೆ. ಮೂಲಭಾಷೆಯಲ್ಲಿ ಕತೆಗಳನ್ನು ಸಂಗ್ರಹಿಸಿದಾಗ ಅದರ ರಸಾಸ್ವಾದವು ಹೆಚ್ಚಾಗಿರುತ್ತದೆ. ಜನಪದದಲ್ಲಿ ಕತೆಗಾರನಿಲ್ಲ, ಅವನು ಕತೆಯನ್ನು ಕಟ್ಟುವವನು. ಜನಪದರಿಗೆ ಸಮಯೋಚಿತವಾಗಿ ಸಂದರ್ಭೋಚಿತವಾಗಿ ಕತೆಯನ್ನು ಕಟ್ಟುವ ಕಲೆ ಸಹಜವಾಗಿಯೇ ಸಿದ್ಧಿಸಿರುತ್ತದೆ. ಅದನ್ನು ಸಂದರ್ಭಕ್ಕೆ ಅನುಗುಣವಾಗಿ ರಸಭಂಗವಾಗದಂತೆ ಕತೆಯನ್ನು ಹಿಗ್ಗಿಸುವ ಕುಗ್ಗಿಸುವ ಸಾಮರ್ಥ್ಯವೇ ಆತನ ಪ್ರತಿಭೆ. ಕಥೆಗಳು ಮನುಷ್ಯನ ಸುಪ್ತ ಮನಸ್ಸಿನಲ್ಲಿರುವ ಆಸೆಗಳು, ಆಕಾಂಕ್ಷೆಗಳು, ಕನಸುಗಳು, ಸಾಹಸಗಳು, ಪ್ರಶ್ನೆಗಳು, ಗೊಂದಲಗಳು ತನ್ನ ಪ್ರತಿಭೆಯ ಮೂಸೆಯಲ್ಲಿ ಕಲ್ಪನೆಯ ರೂಪದಲ್ಲಿ ಹೊರಹೊಮ್ಮುವುದರ ಮೂಲಕ ಅವನ ಸುಪ್ತ ಮನಸ್ಸಿಗೆ ತೃಪ್ತಿಯನ್ನು ತಂದುಕೊಡುತ್ತದೆ. ಮನುಷ್ಯನು ವಾಸ್ತವದಲ್ಲಿ ಈಡೇರದ ಬಯಕೆಗಳನ್ನು ಕತೆಗಳ ಮೂಲಕ ಈಡೇರಿಸಿಕೊಳ್ಳುತ್ತಾನೆ. ರಮ್ಯ, ಮಾನವಾತೀತ, ಅತಿಮಾನುಷ ಶಕ್ತಿಗಳು ಇದರ ತಿರುಳು.

19ನೇ ಶತಮಾನದ ಮೊದಲಿನಿಂದಲೇ ಕಥೆಗಳ ಸಂಗ್ರಹ ಕಾರ್ಯ ಪ್ರಾರಂಭವಾಯಿತು. ಗ್ರಿಮ್ಸ್ ಸಹೋದರರ ಮೊದಲ ಸಂಗ್ರಹಿತ ಕಥಾಸಂಕಲನ "Kinder and Hausmarchen". ಇದು ಜರ್ಮನಿ ಹಾಗು ಫ್ರೆಂಚ್ ಭಾಷೆಗೆ ಅನುವಾದಿಸಲ್ಪಟ್ಟಿತು. ನಂತರದಲ್ಲಿ ಇದು "Grimms House hold Tales," "Grimmes fairy tales" ಎಂದೇ ಪ್ರಸಿದ್ಧವಾಯಿತು. 'borothea wild' ಎಂಬ ಹದಿನಾರು ವರ್ಷದ ಯುವತಿಯಿಂದ ಈ ಕತೆಗಳನ್ನು ಈ ಸಹೋದರರು ಸಂಗ್ರಹಿಸುತ್ತಾರೆ. ಇದರ ಎರಡನೇ ಸಂಪುಟವು 1815ರಲ್ಲಿ ಪ್ರಕಟವಾಗುತ್ತದೆ.

ಮುಖ್ಯವಾಗಿ ಇವರು ಎರಡು ವಾದಗಳನ್ನು ಮುಂದಿಡುತ್ತಾರೆ. ಪ್ರಪಂಚದ ಎಲ್ಲ ದೇಶಗಳ ಕತೆಗಳು ಇಂಡೋ ಯುರೋಪಿಯನ್ ಭಾಷೆಯಿಂದ ಹುಟ್ಟಿದವು. ಮತ್ತು ಕತೆಗಳಿಗೆ ಮೂಲ ಪುರಾಣಕತೆಗಳು. ಈ ಮಾತನ್ನು ಅನಂತರ ಹಲವಾರು ವಿದ್ವಾಂಸರು ಸಮರ್ಥಿಸಿದರು. 'Thomas Keeghatleys'(1828) ಅತಿ ಹೆಚ್ಚು ಕೆಲಸವನ್ನು ಮಾಡುತ್ತಾನೆ. ಯುರೋಪ್ ಮತ್ತು ಇತರೆ ಭಾಗದಲ್ಲಿ 'The Fairy Mythology' ಕತೆಗಳನ್ನು ಈತ ಸಂಗ್ರಹಿಸಿದನು. ಅದುವರೆಗೂ ಜನಪದ ಕತೆಗಳನ್ನು 'Popular Antiquity' ಮತ್ತು Popular literature ಎಂಬ ಪದಗಳನ್ನು ಬಳಸಲಾಗುತ್ತಿತ್ತು. 1846 'W.J. Thomas' ಅವರು 'ಅಥನಿಯ' ಪತ್ರಿಕೆಗೆ ಬರೆದ ಪತ್ರದಲ್ಲಿ ಸಮಗ್ರ ಜಾನಪದವನ್ನು 'FOLKES' ಎಂಬ ಪದದಿಂದ ಸೂಚಿಸಿದನು. ನಂತರ ಅದೇ ಅಧಿಕೃತವಾಯಿತು. ಇಲ್ಲಿ ಫಿನ್‌ಲೆಂಡಿನ ವಿದ್ವಾಂಸರನ್ನು ನಾವು ಸ್ಮರಿಸಲೇಬೇಕು. ಅಗಾಧ ರಾಷ್ಟ್ರೀಯ ಪ್ರೇಮವನ್ನು ಜಾನಪದದಲ್ಲಿ ಕಂಡುಕೊಂಡವರು ಇವರು. ಕಾರ್ಲೆ ಕ್ರೌಹ್ನ, ಆರ್ನೆ ಆಂಟೆ ಇವರಲ್ಲಿ ಪ್ರಮುಖರು(1789), 'Mythology Fennica' ಪ್ರಕಟವಾಯಿತು. 1831ರಲ್ಲಿ ಪ್ರಾರಂಭವಾದ Finnish literary society ಯು 'ಕಲೆವಾಲ'ದಂತಹ ಜಗತ್ತಿನ ಮೊಟ್ಟ ಮೊದಲ ರಾಷ್ಟ್ರೀಯ ಮಹಾಕಾವ್ಯವನ್ನು ಸಂಗ್ರಹಿಸಿತು. ಕಲೆವಾಲವನ್ನು ಮೌಖಿಕದ ಮೂಲಕ ಸಂಗ್ರಹಿಸಿ ಪ್ರಕಟಿಸಿದರು.

ರಷ್ಯಾದ ಅಧೀನಕ್ಕೆ ಒಳಪಟ್ಟಿದ್ದ ಫಿನ್‌ಲ್ಯಾಂಡಿನಲ್ಲಿ ಯಾವುದೇ ಸಾಹಿತ್ಯಿಕ ಕೃತಿಯನ್ನು ಪ್ರಕಟಿಸುವಂತಿರಲಿಲ್ಲ. ಆದರೆ ಈ ನಿರ್ಬಂಧ ಮೌಖಿಕಕ್ಕೆ ಇರಲಿಲ್ಲ. ಆಗ ಅಲ್ಲಿನ ವಿದ್ವಾಂಸರು ಕಲೆವಾಲದಂತಹ ಮೌಖಿಕ ಮಹಾಕಾವ್ಯ ಸಂಗ್ರಹಿಸಿ ಫಿನ್‌ಲ್ಯಾಂಡಿನ ಜನತೆಯ ರಾಷ್ಟ್ರೀಯ ಪ್ರಜ್ಞೆಯನ್ನು ಜಾಗೃತಗೊಳಿಸಿ ಅವರನ್ನೆಲ್ಲ ಒಗ್ಗೂಡಿಸಲು ಸಮರ್ಥವಾಗಿ ಬಳಸಿಕೊಂಡರು. ಕಾರ್ಲೆ ಕ್ರೌಹ್ನ್- ಜೂಲಿಯಸ್ ಗ್ರಾಹ್ನನ ಮಗ ಜನಪದ ಕತೆಗಳನ್ನು ವೈಜ್ಞಾನಿಕ ಹಿನ್ನೆಲೆಯಲ್ಲಿ ಅಧ್ಯಯನ ನಡೆಸುತ್ತಾನೆ. 'Hesinki' ವಿಶ್ವವಿದ್ಯಾಲಯದಲ್ಲಿ(ಫಿನ್‌ಲ್ಯಾಂಡ್) ಮೊಟ್ಟ ಮೊದಲ ಜಾನಪದ ಪೀಠ ಪ್ರಾರಂಭವಾಯಿತು ಮತ್ತು ವಿಶ್ವದ ಪ್ರಥಮ ಜಾನಪದ ಪ್ರಾಧ್ಯಾಪಕ ಪೀಠವೂ ಕೂಡ ಇಲ್ಲಿಯೇ ಪ್ರಾರಂಭವಾಯಿತು.

ಫಿನ್‌ಲ್ಯಾಂಡ್‌ನ ನಂತರ ಫ್ರಾನ್ಸ್ 50 ವರ್ಷ ಕಾಲ ಅಪಾರ ಸಾಧನೆ ಮಾಡಿತು. 'ಈ ಗೈಡೆಜ್' ಎಂಬುವನು 'ಮೆರ್ಲಿನ್' ಪತ್ರಿಕೆಯ ಸಂಪಾದಕನಾಗಿದ್ದನು. ಈತ ಜನಪದ ಪುರಾಣ ಮೂಲ ಕುರಿತು ಅನೇಕ ವಿಡಂಬನಾತ್ಮಕ ಲೇಖನ ಪ್ರಕಟಿಸುತ್ತಾನೆ. (ಪಾಲ್ ಸೆಬಿಲೋಟ್) Pault Sebillot, Cosquin, Emaneul eosquin (1841–1921) ಪ್ರಕಟವಾದ Contes populaises de Lorraine ಜಾನಪದ ಸಂಕಲನ ಅತ್ಯಂತ ಪ್ರಸಿದ್ಧಿ ಪಡೆಯಿತು.

ಜಾನಪದ ಕತೆಗಳಿಗೆ ಭಾರತೀಯ ಸಿದ್ಧಾಂತವನ್ನು ಪ್ರತಿಪಾದಿಸಿದವರು ಬೆನ್ಫೆ. ಭಾರತದ ಕತೆಗಿಂತಲೂ ಹಿಂದಿನ ಈಜಿಪ್ಟ್ ಕತೆಗಳನ್ನು ಪ್ರಸ್ತಾಪಿಸಿ ಈ ಎರಡೂ ಮೂಲಗಳಿಂದಲೂ ಕತೆಗಳು ಹರಡಿರಬಹುದು ಎಂದು ಪ್ರತಿಪಾದಿಸುತ್ತಾನೆ.

ಇಲ್ಲಿಯವರೆಗೂ ಜಗತ್ತಿನ ಎಲ್ಲ ಭಾಷೆಗಳ ಜನಪದ ಕತೆಗಳು ಒಂದೇ ರೀತಿ ಇದ್ದುದರಿಂದ ಇವು ಯಾವುದೋ ಒಂದು ಮೂಲದಿಂದ ಹುಟ್ಟಿ ಬೇರೆ ಕಡೆ ಹರಡಿತು ಎಂಬ ಕಲ್ಪನೆ ಇದ್ದು ಅದಕ್ಕಾಗಿ ಭಾರತೀಯರಲ್ಲಿ ಇಂಡೋ ಆರ್ಯನ್, ಈಜಿಪ್ಟ್ ಮೊದಲಾದ ಉದಾಹರಣೆಗಳನ್ನು ನೀಡುತ್ತಾ ಬರತೊಡಗಿದರು. ಆದರೆ ಅನಂತರ 'ಡಾಸೆಂಟ್' ಮುಂತಾದವರು ಅದನ್ನು ಅಲ್ಲಗಳೆದು ಪ್ರತಿಯೊಂದು ದೇಶಗಳಿಗೂ ಸ್ವತಂತ್ರ ಕಥೆಗಳಿವೆ ಎನ್ನುತ್ತಾರೆ. Reider Christansen ಪ್ರಮುಖವಾದವನು.

Folk tales of Norway : Reider Chirstansen ಕಥಾಸಂಕಲನ(ಐತಿಹ್ಯ) ಹಾಗೆಯೇ ಐರ್ಲೆಂಡಿನ 'Folklore of Ireland Society', 'The Irish Folklore institute and Irish Folklore Commission' ವೈಜ್ಞಾನಿಕವಾಗಿ ಕತೆಗಳ ಸಂಗ್ರಹಣಾ ಕೆಲಸವನ್ನು ಮಾಡುತ್ತವೆ. ಇಂಗ್ಲೆಂಡಿನ ಬಿಷಪ್ ಪೆರ್ಸಿ "Reliques of Ancient English Poetry' ಪ್ರಸಿದ್ಧವಾದ ಪುಸ್ತಕ. 1823 ಟಾಡ್ "The annals and antiquitea of Rajastan" ರೆವರೆಂಡ್ ಮಾರ್ಸ್ನ "ಬಂಗಾರದ ಗಾದೆಗಳು' ಸಂಕಲನದಿಂದಲೇ ಇವತ್ತಿನ English ನಲ್ಲಿಯೇ ಇವೆ. ಪ್ರಮುಖ ವಿದ್ವಾಂಸ ಆರ್ಥರ್ ಡಬ್ಲ್ಯು.

ರೈಡರ್ ಪಂಚತಂತ್ರವನ್ನು ಅನುವಾದಿಸಿದರು. 'ವಿಶ್ವದ ಜಾನಪದ ಕತೆಗಳಿಗೆಲ್ಲ ಭಾರತವೇ ತೌರು' ಎಂದರು.

ಬುಡಕಟ್ಟುಗಳ ಕತೆಗಳು ಮುಖ್ಯವಾಗಿ ಪ್ರಕೃತಿಯನ್ನು ಮತ್ತು ಮನುಷ್ಯನ ಬದುಕನ್ನು ಕುರಿತು ರಚಿಸಲ್ಪಟ್ಟಿವೆ. ಉದಾಹರಣೆಗೆ ಕೊಡಗಿನ ಬುಡಕಟ್ಟುಗಳಲ್ಲಿ ಒಂದಾದ ಕುಡಿಯರು ತಮ್ಮ ಮೂಲ ಶಿವ-ಪಾರ್ವತಿಯರೆಂದೂ, ಅವರಿಂದಲೇ ತಾವು ಹುಟ್ಟಿದವರು ಎಂದು ಹೇಳುತ್ತಾರೆ. ಶಿವ ಪಾರ್ವತಿಯರು ಒಮ್ಮೆ ಭೂಲೋಕಕ್ಕೆ ಬಂದ ಸಂದರ್ಭದಲ್ಲಿ ಪಾರ್ವತಿಗೆ ದಾಹವಾಗುತ್ತದೆ. ಆದರೆ ತನ್ನ ಸವತಿ ಗಂಗೆಯಿಂದ ದಾಹವನ್ನು ನೀಗಿಸಿಕೊಳ್ಳಲು ನಿರಾಕರಿಸುತ್ತಾಳೆ. ಆಗ ಶಿವನು ತನ್ನ ತೊಡೆಯ ಕೊಳೆಯಿಂದ ಮನುಷ್ಯಾಕೃತಿ ಸೃಷ್ಟಿಸಿ ಜೀವ ತುಂಬಿ ಬೈನೆ ಮರದ ರಸವನ್ನು ತಂದು ಕೊಡಲು ಹೇಳುತ್ತಾನೆ. ಈ ಬೈನೆ ಮರದ ರಸ ಕುಡಿದು ಪಾರ್ವತಿ ದಾಹ ನೀಗಿಸಿಕೊಳ್ಳುತ್ತಾಳೆ. ನಂತರ ಶಿವ ಮತ್ತೊಂದು ತೊಡೆಯಿಂದ ಕೊಳೆ ಉಜ್ಜಿ ತೆಗೆದು ಹೆಣ್ಣು ಆಕೃತಿ ಸೃಷ್ಟಿಸಿ ಜೀವ ತುಂಬುತ್ತಾನೆ. ನಂತರ 'ನೀವಿಬ್ಬರೂ ಗಂಡ ಹೆಂಡಿರಾಗಿ ಬಾಳಿ ಹಾಗೂ ಈ ಬೈನೆ ಮರವೇ ಇನ್ನು ಮುಂದೆ ನಿಮ್ಮ ಜೀವನಕ್ಕೆ ಆಧಾರ' ಎಂದು ಹರಸಿ ಹೊರಟು ಹೋಗುತ್ತಾರೆ. ಅವರಿಬ್ಬರಿಂದ ಮುಂದುವರಿದ ಸಂತಾನವೇ ಕುಡಿಯರು. ಹೀಗೆ ಶಿವನಿಂದ ಸೃಷ್ಟಿಯಾದವರು ನಾವು ಎಂದು ಕುಡಿಯರು ಹೇಳುತ್ತಾರೆ.

## 3.3. ಹಾಡುಗಳು

ಬುಡಕಟ್ಟುಗಳ ಮೌಖಿಕ ಸಾಹಿತ್ಯದ ಪ್ರಕಾರಗಳಲ್ಲಿ ಹೆಚ್ಚಿನ ಪಾಲು ಹಾಡುಗಳದ್ದು, ಹಾಡುಗಳನ್ನು ಕೂಡ ನಾವು ಸಾರ್ವತ್ರಿಕವಾಗಿ ಪರಿಗಣಿಸುವಂತಿಲ್ಲ. ಹಾಡುವ ಸಂದರ್ಭಕ್ಕೆ ಅನುಗುಣವಾಗಿ ಈ ಹಾಡುಗಳೂ ಕೂಡ ಭಿನ್ನವಾಗಿರುತ್ತವೆ. ಹಾಡುಗಳು ಮನರಂಜನೆಯ ಹಾಡಾಗಿರಲಿ, ಆಚರಣೆಗೆ ಸಂಬಂಧಿಸಿದ ಹಾಡುಗಳಾಗಿರಲಿ, 'ಸೊಲ್ಲು' ಈ ಹಾಡುಗಳ ಕೇಂದ್ರ ಬಿಂದುವಾಗಿರುತ್ತದೆ. ಸೊಲ್ಲು ಎಂದರೆ ಮುಖ್ಯ ಗಾಯಕ ಅಥವಾ ಗಾಯಕಿ ಹಾಡುತ್ತಿದ್ದರೆ ಅದಕ್ಕೆ ಸೂಕ್ತವಾದ ಧಾಟಿ ಹಾಗೂ ಸ್ವರದಲ್ಲಿ ಅವರ ಸಂಗಡಿಗರು ಕೂಡಿಸುವ ರಾಗಬದ್ಧ ಧ್ವನಿ ಎನ್ನಬಹುದು. ಇದು ಕೇಳಲು ಹಿತವಾಗಿದ್ದು ಹಾಡಿಗೆ ವಿಶೇಷ ಮೆರುಗನ್ನು ನೀಡುವಂತಿರುತ್ತದೆ.

ಉದಾಹರಣೆಗೆ

ಗಾಯಕ – ಗಿಜಗಲಕ್ಕಿನ ಲಕ್ಕಿ ಮರುಕ
ಸೊಲ್ಲು – ಲೇ ಲಮ್ಮ ಲೇಲ
ಗಾಯಕ – ನಿ ಪತ್ತಿ ಪತ್ತಿ ಹಿಡೀನವ್ವ
ಸೊಲ್ಲು – ಲೇ ಲಮ್ಮ ಲೇಲ

ಮನುಷ್ಯನ ಹುಟ್ಟಿನಿಂದ ಸಾವಿನವರೆಗಿನ ಜೀವನಾವರ್ತನದ ಎಲ್ಲ ಸಂದರ್ಭಗಳನ್ನು ಈ ಸಮುದಾಯಗಳು ಹಾಡುಗಳಲ್ಲಿ ಕಟ್ಟಿಕೊಡುತ್ತಾರೆ. ಈ ಸಮುದಾಯಗಳ ವಿವಿಧ ಸಂದರ್ಭದಲ್ಲಿನ ಆಚರಣೆಗಳಿಗೆ ಅನುಗುಣವಾಗಿ ಹಾಡುಗಳನ್ನು ಜನಪದರು ಕಟ್ಟಿದ್ದಾರೆ. ಹಾಡುಗಳನ್ನು ನಾವು ಈ ಕೆಳಗಿನಂತೆ ವಿಭಾಗಿಸಬಹುದು.

**ಶಿಶುಗೀತೆಗಳು:** ಮಕ್ಕಳ ಮನೋರಂಜನೆಗಾಗಿ, ನೀತಿ ಹೇಳಲು, ಅವರ ಜ್ಞಾನಾಭಿವೃದ್ಧಿಗಾಗಿ ಹಾಡುವ ಹಾಡುಗಳು. ಬುಡಕಟ್ಟು ಸಮುದಾಯಗಳು ತಮ್ಮ ಪ್ರಕೃತಿಯ ಕುರಿತಾದ ಪಾರಂಪರಿಕ ಜ್ಞಾನವನ್ನು ಹಾಡುಗಳ ರೂಪದಲ್ಲಿ ಕಟ್ಟಿಕೊಟ್ಟಿವೆ. ಅದನ್ನು ಹಾಡುವುದರೊಂದಿಗೆ ಅವರ ಜ್ಞಾನವೂ ಕೂಡ ಪೀಳಿಗೆಯಿಂದ ಪೀಳಿಗೆಗೆ ಮುಂದುವರಿಯುತ್ತದೆ.

ಈ ಕೆಳಗಿನ ಹಾಡು ಮಕ್ಕಳು ಆಟವಾಡುವ ಸಮಯದಲ್ಲಿ ತಮ್ಮ ಸ್ನೇಹಿತರ ಹೆಸರುಗಳನ್ನು ಸೇರಿಸಿಕೊಂಡು ಮನರಂಜನೆಗಾಗಿ ಹಾಡುವ ಹಾಡು

ತುಂಡು ಬಟ್ಟೆ ಉಟ್ಟೋಡು ಗುಂಗುರು ಕೂದಲು ಬಿಟ್ಟೋಡು
ಬನ್ನ, ಬನ್ನ, ಬನ್ನ ಈ ಕೆಂಚ
ಕಂಡಿರಾ, ಕಂಡಿರಾ, ಈ ಕೆಂಚಾನೆ ಕಂಡಿರಾ ||1||
ತುಂಡು ಬಟ್ಟೆ ಉಟ್ಟೋಡು ಗುಂಗುರು ಕೂದಲು ಬಿಟ್ಟೋಡು
ಬನ್ನ, ಬನ್ನ, ಬನ್ನ ಈ ಕಾಳ
ಕಂಡಿರಾ, ಕಂಡಿರಾ, ಈ ಕಾಳಾನೆ ಕಂಡಿರಾ
||2||
ತುಂಡು ಬಟ್ಟೆ ಉಟ್ಟೋಡು ಗುಂಗುರು ಕೂದಲು ಬಿಟ್ಟೋಡು
ಬನ್ನ ಬನ್ನ ಬನ್ನ ಈ ಬೋಳ
ಕಂಡಿರಾ ಕಂಡಿರಾ ಈ ಬೋಳಾನೇ ಕಂಡೀರ ||3||
ತುಂಡು ಬಟ್ಟೆ ಉಟ್ಟೋಡು ಗುಂಗುರು ಕೂದಲು ಬಿಟ್ಟೋಡು
ಬನ್ನ ಬನ್ನ ಬನ್ನ ಈ ಮಾದ
ಕಂಡಿರಾ, ಕಂಡಿರಾ ಈ ಮಾದಾನೇ ಕಂಡಿರಾ ||4|

ಈ ಸಮುದಾಯದ ಇನ್ನೊಂದು ಗೀತೆ ಹೀಗಿದೆ.

ಚಂದೂ ಚಂದೂನಮ
ಲೀಸೆ ಬಂದು ನಿಂತು ನೋ ಡೋ
ಚಂದೂ ಚಂದೂಮ ಜೋ ಜೋ

ತಾಯಿ ನೀಲಿ ಜೋ ಜೋ
ನೀಲೀ ತಾಯಿ ಜೋ ಜೋ
ಮಾರೆ ತಾಯಿ ಜೋ ಜೋ
ತಾಯಿ ಮಾರೆ ಜೋ ಜೊ
ಕಣ್ಣು ಮುಚ್ಚು ಮಗನೆ ಜೋ ಜೊ
ನಿಂಗ ಅವ್ವ ಹೊಳೆಗೆ ಹೋಗಿ ಜೋ ಜೋ
ನೀರ ತರುತಾಳೆ ಜೋ ಜೋ"[11]

**ಸೋಬಾನೆ ಹಾಡುಗಳು**

ಮದುವೆ, ಮೈನೆರೆದಾಗ ಮೊದಲಾದ ಶುಭಕಾರ್ಯಗಳಲ್ಲಿ ಹಾಡುವ ಹಾಡುಗಳು ಇವಾಗಿದೆ. ಹೆಚ್ಚಿನದ್ದಾಗಿ ಇವು ಹಾಡಿನ ರೂಪದ ಕತೆಗಳು. ಸಮುದಾಯಕ್ಕೆ ರೀತಿ, ನೀತಿ, ನಿಯಮಗಳನ್ನು, ನಿಷೇಧಗಳನ್ನು ಹೇಳಲು ಈ ಹಾಡನ್ನು ಕಟ್ಟಿರುತ್ತಾರೆ. ಇದು ಪರೋಕ್ಷವಾಗಿ ಸಮುದಾಯಕ್ಕೆ ಬುದ್ಧಿ ಹೇಳುವಂತಿರುತ್ತದೆ.

ಜೇನುಕುರುಬ ಹೆಣ್ಣು ಮಗಳು ಮೈನೆರೆದ ಸಂದರ್ಭದಲ್ಲಿ ಹೆಣ್ಣಿಗೆ ಶಾಸ್ತ್ರ ಮಾಡುವಾಗ ಹೆಂಗಸರೆಲ್ಲ ಸೇರಿ ಹಾಡುತ್ತಾರೆ. ಈ ಹಾಡಿನ ಪ್ರತಿ ಸಾಲಲ್ಲಿ ಬರುವ ತೆಂಗಿನಮರ, ಬಾಳೆಮರ, ಇಂಬಿ ಮರ, ಜಾಜಿ ಮರ, ಸಂಪಿಗೆ ಮರಗಳು ಬುಡಕಟ್ಟುಗಳ ಬದುಕಿನ ಭಾಗವಾಗಿರುವ ಪ್ರಕೃತಿಯನ್ನು ನೆನಪಿಸುತ್ತದೆ. ಹೆಣ್ಣು ಮೈನೆರೆಯುವುದು ಫಲವಂತಿಕೆ ಎಂದು ತಿಳಿದು ಸಂಭ್ರಮಿಸುವ ಈ ಸಮುದಾಯ. ಹೂವಿನ ಮರ, ಹಣ್ಣಿನ ಮರಗಳನ್ನು ಜ್ಞಾಪಿಸುವುದರೊಂದಿಗೆ ಬುಡಕಟ್ಟುಗಳು ತಮ್ಮ ಪ್ರತಿ ಆಚರಣೆಯಲ್ಲೂ ಪ್ರಕೃತಿಯ ಗುಣಗಾನ, ಪ್ರಕೃತಿಯ ನೆನಹು ಸಮಾರಂಭಗಳಲ್ಲಿ ಪ್ರಕೃತಿಯ ಕಾಡಿನ ಮೇಳೈಸುವಿಕೆಗೆ ಇದು ಸಾಕ್ಷಿಯಾಗಿದೆ.

ಅರುಸ್ತ್ರೀ ಮೈನೆರೆದಾಳೋ ಅರುಸ್ತ್ರೀ ಮೈನೆರುದಾಗಳಗೇಲಿ
ಅರುಸ್ತ್ರೀ ಮೈನೆರುದಗಳುಗೇಲಿ ನಮ್ಮನುಗೆ ಹಲಸಿನ ಹಾಳೆ ಬರಬೇಕು
ತೆಂಗಿನಮರುದಡುಗೆ ತೆಂಗೆ ಮೈನೆರೊದಾಲೋ ತೆಂಗೆಮೈನೆರುದಾಗಳಗೇಲಿ
ತೆಂಗೆ ಮೈನೆರುವಗಳುಗೇಲಿ ನಮ್ಮನುಗೆ ತೆಂಗಿನಕಾಯಿ ಬರಬೇಕು
ಬಾಳೆಮರದಡುಗೆ ಬಾಲೆಮೈನೆರುದಾಳೊ ಬಾಲೆ ಮೈನೆರುದಾಗಳಗೇಲಿ
ಬಾಲೆ ಮೈನೆರುದಗಳುಗೇಲಿ ನಮ್ಮನುಗೆ ಬಾಳೆಯ ಹಣ್ಣು ಬರಬೇಕು
ಇಂಬಿ ಮರದಡುಗೆ ರಂಭಮೈನೆರೆದಾಲೋ ರಂಬೆಮೈನೆರುದಾಳಗೇಲಿ
ರಂಬೆಮೈನೆರುವ ಗಳುಗೇಲಿ ನಮ್ಮನುಗೆ ಇಂಬಿಯ ಹಣ್ಣು ಬರಬೇಕು

ಜಾಜಿಮರುದಡುಗೆ ಜಾಣಮ್ಮೆನೆರೆದಾಲೋ ಜಾಣೆಮ್ಮೆನೆರುದಾಗಳಗೇಲಿ
ಜಾಣೆ ಮೈನೆರುದ ಗಳುಗೇಲಿ ನಮ್ಮನುಗೆ ಜಾಜಿಯ ಹೂವು ಬರಬೇಕು
ಸಂಪಿಗೆ ಮರದಡುಗೆ ಕೆಂಪೆ ಮೈನೆರೆದಾಳೊ ಕೆಂಪಮ್ಮೆನೆರುದಾಳಗೇಲಿ
ಕೆಂಪೆ ಮೈ ನೆರುವ ಗಳುಗೇಲಿ ನಮ್ಮನುಗೆ ಸಂಪಿಗೆ ಹೂಮ ಬರಬೇಕು
ಜಾಜಿ ಮರದಡುಗೆ ಜಾಣೆ ಮೈನೆರೆದಾಳೊ ಜಾಣೆ ಮೈನೆರುದಾಗಳಗೇಲಿ
ಜಾಣೆ ಮೈ ನೆರುವಗಳುಗೇಲಿ ನಮ್ಮನುಗೆ ಜಾಜಿಯ ಹೂವು ಬರಬೇಕು.[12]

**ಮನರಂಜನೆ ಹಾಡುಗಳು**

ಆಟಗಳು, ನೃತ್ಯಗಳು ಮೊದಲಾದ ಸಂದರ್ಭಗಳಲ್ಲಿ ಹಾಡುವ ಹಾಡುಗಳು. ಇದರಲ್ಲಿ ಇಡೀ ಸಮುದಾಯವೇ ವಯಸ್ಸಿನ ಅಂತರವಿಲ್ಲದೆ ಪಾಲ್ಗೊಳ್ಳುತ್ತದೆ. ಸಾಮೂಹಿಕ ಪಾಲ್ಗೊಳ್ಳುವಿಕೆಯಿಂದಾಗಿ ಸಮುದಾಯದಲ್ಲಿ ಬಾಂಧವ್ಯಗಳನ್ನು ವೃದ್ಧಿಸುವಲ್ಲಿ ಇವು ಮುಖ್ಯವಾಗುತ್ತವೆ.

**ಸೋಲಿಗರ ಕೋಲಾಟದ ಹಾಡು**

ಅಕ್ಕಮ್ಮ ಸಿಕ್ಕಮ್ಮ ಹೇಗಿರಬೇಕು 'ಕೋಲಣ್ಣ ಕೋಲೆ'
ನಮ್ಮಲಕ್ಕಿಯ ಮರದಲಿ ಜೇನಿರಬೇಕು 'ಕೋಲಣ್ಣ ಕೋಲೆ'
ಆ ಜೇನು ಸೀಯಾಲೆ ಎರಡಾಲು ಬೇಕು 'ಕೋಲಣ್ಣ ಕೋಲೆ'
ಒಬ್ಬ ಒತ್ತೆ ಒಬ್ಬ ಪೂಣೆ 'ಕೋಲಣ್ಣ ಕೋಲೆ'
ಒತ್ತೆ ಎತ್ತೋಡುತಾವ 'ಕೋಲಣ್ಣ ಕೋಲೆ'
ಮುಂದಾಕಿನ ಅತ್ತೀಯ 'ಕೋಲಣ್ಣ ಕೋಲೆ'

**ದೇವರನ್ನು ಕರೆಯುವ ಸಂದರ್ಭದ ಹಾಡುಗಳು**

ಬುಂಡೆ ಕರೆಯುವಾಗ, ಮೊರ ಕರೆಯುವಾಗ, ದೇವರ ಸ್ತುತಿ, ತಿಥಿ ಸಂದರ್ಭದಲ್ಲಿ ಹಾಡುವ ಹಾಡು. ಸೋಲಿಗರು ಮಾರಿಹಬ್ಬದಂದು ಹಾಡುವ ಈ ಹಾಡು ತ್ರಿಪದಿಯ ರೂಪದಲ್ಲಿದೆ

'ಮಾರಮ್ಮ ಮಾರಮ್ಮ ಮಳಯಾಳ ದೇಸಾಕೆ ಹೊಂಟವಳೆ
ಮಳೆ ಬಂದ್ರ ಎಲ್ಲ ತಂಗಿವಳೋ ಮಾರಮ್ಮ
ಒಡೆದಂಬಳ ಸುಳಿಯಲ್ಲಿ ತಂಗವಳೆ'

**ದುಡಿಮೆಗೆ ಸಂಬಂಧಿಸಿದ ಹಾಡುಗಳು**

ಬೇಟೆಗೆ, ಜೇನು ಕೀಳಲು ಹೋಗುವಾಗ, ಬಿದಿರು ಕಡಿಯಲು ಹೋಗುವ ಸಂದರ್ಭದ

ಹಾಡುಗಳು, ಹಚ್ಚೆ ಹಾಕುವ ಹಾಡುಗಳು ಇತ್ಯಾದಿ, ಜೇನುಕುರುಬರು ಜೇನು ಬೇಟೆಯನ್ನು ತಮ್ಮ ಕುಲವೃತ್ತಿಯನ್ನಾಗಿಸಿಕೊಂಡವರು. ಅವರು ಗುಂಪಾಗಿ ಜೇನುಕೊಯ್ಯಲು ಹೋಗುವ ಸಮಯದಲ್ಲಿ ಹಾಡುವ ಹಾಡು ಹೀಗಿದೆ;

ಜೇನೆ ನೀ ಹೋಗೋವಾಗ ಒಂದೇ ಹಾದಿ 'ಜೇನೆ ಜೇನೆ'

ಜೇನೆ ನೀ ಬರುವಾಗ ದಿಕ್ಕಾಪಾಲು 'ಜೇನೆ ಜೇನೆ'

ಈ ರೀತಿ ಸಾಗುವ ಹಾಡು ಜೇನಿನ ಆಂತರ್ಯವನ್ನು ಹಾಗೂ ಅದರೊಂದಿಗೆ ಗಾಢ ನಂಟನ್ನು ಹೊಂದಿರುವ ಜೇನುಕುರುಬರ ಬದುಕನ್ನು ತೆರೆದಿಡುತ್ತದೆ.

ಹುರುಳಿ ಹೊನೆ ಕುಸುಮ ಎತ್ತಿ ಉರುಳುರುಳಿ
ಹೊರಟಿಯೋ ಜೇನೆ ನೀ
ಹುಚ್ಚೆಳ್ಳ ಹೂವ ಕುಡಿದು ನೀ ಹುಚ್ಚುಚ್ಚಾಗಿ
ಹೊಂಟಿಯೋ ಜೇನೇ ನೀ
ಸೂರ್ಯನ ಆಕಾರದಲ್ಲಿ ಮಿರಿಮಿರಿನ
ಹೊಂಟಿಯೋ ಜೇನೇ ನೀ

ಎಂದು ಸಾಗುವ ಈ ಹಾಡು ಜೇನುಕುರುಬ ಸಮುದಾಯದ ಶತಮಾನಗಳ ಬದುಕು ಸಾಗಿ ಬಂದ ರೀತಿಯ ಬಗ್ಗೆ ಬೆಳಕು ಚೆಲ್ಲುತ್ತದೆ. ಹಿಂದೆ ವ್ಯವಸಾಯಗಾರರಾಗಿ ಹುರುಳಿ, ಕುಂಬಳ, ಹುಚ್ಚೆಳ್ಳು ಮೊದಲಾದವುಗಳನ್ನು ಬೆಳೆಯುತ್ತಾ ಸಮೃದ್ಧರಾಗಿದ್ದವರು ಇಂದು ತಮ್ಮ ಭೂಮಿಯನ್ನು, ನೆಲೆಯನ್ನು ಕಳೆದುಕೊಂಡು ಅನಾಥರಾಗಿರುವುದು ವಿಪರ್ಯಾಸ. ಜೇನುಕುರುಬರ ಬದುಕಿನ ವಿವಿಧ ಮಗ್ಗುಲುಗಳ ಪರಿಚಯವನ್ನು ಈ ಪದ್ಯ ಮಾಡಿಕೊಡುತ್ತದೆ.

### 3.4. ಗಾದೆಗಳು

'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬುದು ಪ್ರಚಲಿತ ನಾಣ್ಣುಡಿ. ಗಾದೆಗಳಿಗೆ ಇಡೀ ಜಗತ್ತೇ ವಸ್ತು. ಇವು ಅನುಭವಜನ್ಯ ಹಾಗೂ ವಿವೇಕಪೂರಿತ. ಇವು ಸ್ಪಷ್ಟ, ನೇರ, ಸರಳ; ಚಿಕ್ಕದಾದರೂ ವಿಶಾಲವಾದ ಅರ್ಥವ್ಯಾಪ್ತಿಯನ್ನು ಒಳಗೊಂಡಿರುತ್ತದೆ. ಗಾತ್ರದಲ್ಲಿ ವಾಮನ, ಅರ್ಥದಲ್ಲಿ ತ್ರಿವಿಕ್ರಮನಂತಿರುವುದೇ ಇದರ ಶ್ರೇಷ್ಠತೆ. ಗಾದೆಗಳಿಗೆ ಇಡೀ ಲೋಕವೇ ವಸ್ತು, ಅನುಭವವೇ ಸಮಸ್ತವೂ. ಗಾದೆಗಳು ಮನುಷ್ಯ ಜೀವನಕ್ಕೆ ಹತ್ತಿರವಾದವುಗಳು. ಗಾದೆಗಳಲ್ಲಿ ತತ್ವಶಾಸ್ತ್ರ, ವೇದ, ಚರಿತ್ರೆ, ನೀತಿ ಎಲ್ಲವೂ ಇದರಲ್ಲಿ ಸಂಕ್ಷಿಪ್ತವಾಗಿ ಅಡಗಿರುತ್ತದೆ.

**ಗಾದೆಗಳನ್ನು ಕುರಿತ ಪ್ರಚಲಿತ ವ್ಯಾಖ್ಯಾನಗಳು:** ಎ.ಕೆ. ರಾಮಾನುಜನ್ ಅವರ ಪ್ರಕಾರ 'ಗಾದೆ

ಮಾತು ಜನತೆಯ ಮನಸ್ಸನ್ನು ಒಂದು ಮೂಲದಲ್ಲಿ ಬಿಂಬಿಸುತ್ತವೆ. ಮತ್ತೊಂದು ಮೂಲದಲ್ಲಿ ಆಳುತ್ತವೆ. ಅವರ ಅನುದಿನದ ನಂಟುಗಳನ್ನು ನಡೆಸುತ್ತದೆ. ಗಂಟುಗಳನ್ನು ಬಿಡಿಸುತ್ತದೆ.'

ಗೊರೂರು ರಾಮಸ್ವಾಮಿ ಅಯ್ಯಂಗಾರ್ 'ಗಾದೆ ಸಿದ್ಧಿಸಿದ ನುಡಿ, ಜನವಾಣಿ, ದೇವವಾಣಿ. ಸತ್ಯ, ಗಾದೆ, ಮೂರ್ಖ ಈ ಮೂವರನ್ನು ಎದುರಿಸಲಾಗದು, ಗಾದೆ ದೇವರ ಭೇರಿ.'

ಅಫ್ರಿಕಾ ಗಾದೆ 'ಗಾದೆ ಬಲ್ಲವ ಜಗಳ ಬಿಡಿಸಬಲ್ಲ.'

ಮಲಯಾಳಂ ಗಾದೆ 'ಗಾದೆ ಸುಳ್ಳಾದಂದು ಹಾಲು ಹುಳಿಯಾಗುತ್ತದೆ.'

ಜನಪದರ ಪ್ರತಿಭೆಯಿಂದ ಹುಟ್ಟುವ ಈ ಗಾದೆಗಳು ಸಮೂಹ ಸೃಷ್ಟಿಯಲ್ಲ, ಬದಲಿಗೆ ಒಬ್ಬ ವ್ಯಕ್ತಿಯ ಅನುಭವ ಹಾಗೂ ಪ್ರತಿಭೆಯಿಂದ ಹುಟ್ಟಿ ಜನಜನಿತವಾದದ್ದು. ಇದನ್ನು ಕಂಡು ಕವಿರಾಜ ಮಾರ್ಗಕಾರ 'ಕುರಿತೋದದೆಯಂ, ಕಾವ್ಯ ಪ್ರಯೋಗ ಪರಿಣತ ಮತಿಗಳ್' ಎಂದಿದ್ದಾನೆ.

**ಕುಡಿಯರ ಗಾದೆಗಳು**

1. ಅಜ್ಜ ಕುಪ್ಪಿಯ ಮುಳ್ಳಕ್ ಅಂಜ, ಮೊರ್‌ಕಿ ಎರ್‌ಸಕ್ ಅಂಜ

   ಹಳೆಬಟ್ಟೆಗೆ ಮುಳ್ಳಿನ ಭಯವಿಲ್ಲ ಹಾಗೆಯೇ ಕೀಳು ಮನುಷ್ಯನಿಗೆ ಭಿಕ್ಷೆ ಬೇಡುವ ಭಯವಿಲ್ಲ

2. ಅಪವಂಗ್ ಆಕು ಆಕಪಣಿ, ಏಪವಂಗ್ ಆಕ್ ನಾರ್ ಪಣಿ

   ಜೋಡಿಸಬಲ್ಲವನಿಗೆ ನೀರಿನ ಕೆಲಸ, ಸಾಧಿಸಬಲ್ಲವನಿಗೆ ಗದ್ದೆಯ ಕೆಲಸ

## 3.5. ಒಗಟುಗಳು

ಒಗಟುಗಳು ಬುದ್ಧಿಗಮ್ಯ, ಕಾಲ್ಪನಿಕ, ಮನರಂಜನೆಯೇ ಪ್ರಧಾನವಾದದ್ದು. ಇವು ಗೂಢ, ಅಸ್ಪಷ್ಟವಾಗಿದ್ದು ಕೇಳುಗನನ್ನು ಚಿಂತನೆಗೆ ಹಚ್ಚಿ ಅವನ ಬುದ್ಧಿಶಕ್ತಿಯನ್ನು ಪರೀಕ್ಷಿಸುತ್ತವೆ. ಸಾಂಕೇತಿಕ ಭಾಷೆಯನ್ನು ಹೊಂದಿರುವ ಒಗಟುಗಳ ಪ್ರಮುಖ ಲಕ್ಷಣ ಪದ್ಯಮಯತೆ ಮತ್ತು ರಚನಾತ್ಮಕ ಸಮತೋಲನ. ಸೋಮಶೇಖರ ಇಮ್ರಾಪುರ ಅವರು ಒಗಟುಗಳನ್ನು ಕುರಿತು 'ತಾತ್ವಿಕ ಜಿಜ್ಞಾಸೆಯ ಪರಮ ಸಾಧನ' ಎಂದಿದ್ದಾರೆ. ಮತ್ತೂ ಮುಂದುವರಿದು 'ಜನಪದ ರೂಪದ ಒಗಟುಗಳನ್ನು 'ಅಧಮ ಕಾವ್ಯ'ವೆಂದು ಪರಿಗಣಿಸಲಾಗುತ್ತಿತ್ತು. ಕಾಲಾಂತರದಲ್ಲಿ ಅದರ ಹಾಸ್ಯೋಕ್ತಿ, ತಾತ್ವಿಕ ಜಿಜ್ಞಾಸೆ ಮೊದಲಾದ ಗುಣಗಳು ಸಾಹಿತ್ಯಿಕ ಮಟ್ಟದ್ದೆಂದು ಗುರುತಿಸಿ ಅವು ಸಾಹಿತ್ಯಿಕ ನಿರ್ಮಿತಿಗೆ ಕಾರಣವಾಗಿರಬೇಕು ಎನ್ನುತ್ತಾರೆ.' ಒಗಟುಗಳು ವ್ಯಕ್ತಿಯಿಂದ ಹುಟ್ಟಿ ಸಮಷ್ಟಿಯಿಂದ ಮನ್ನಣೆಗೆ ಪಾತ್ರವಾಗಿದೆ. ಮನರಂಜನೆ ಹಾಸ್ಯ, ಗೂಢಾರ್ಥ, ವಿಡಂಬನೆ, ವಿನೋದದೊಂದಿಗೆ ಬುದ್ಧಿಮಟ್ಟದ ಪರೀಕ್ಷೆ ಇದರ ಮೂಲಗುಣ. ಹಾಸ್ಯ ಇದರ ಮುಖ್ಯ ತಿರುಳು. Riddle are probably the oldest

extant form of humoar ಎಂದೂ ಕರೆಯಲಾಗುತ್ತದೆ.

ಇಂಗ್ಲಿಷ್‌ನಲ್ಲಿ 'Riddle' ಇದು ಚಿಂತನಶೀಲ ಪರಂಪರಾಗತ ಅಭಿವ್ಯಕ್ತಿ. ಗೂಢತೆಯೇ ಇದರ ಪ್ರಮುಖ ಲಕ್ಷಣ. ಒಗಟುಗಳ ಕುರಿತ ವಿದ್ವಾಂಸರ ವ್ಯಾಖ್ಯಾನಗಳು ಈ ರೀತಿಯಿವೆ:

ಹಾ.ಮಾ.ನಾ ಅವರು 'ಇದು ಪ್ರಾಚೀನವಾದ ಸುವ್ಯವಸ್ಥಿತಗೊಂಡ ಆಲೋಚನೆಯ ಫಲವಾಗಿದೆ, ಒಗಟುಗಳ ಪ್ರಧಾನ ಗುರಿ ಬುದ್ಧಿಯ ಕಸರತ್ತು ಎಂದಿದ್ದಾರೆ.' ಸಿ.ಪಿ.ಕೆಯವರು, 'ಒಂದು ವಸ್ತುವನ್ನು ಮತ್ತೊಂದು ವಸ್ತುವಿನ ವ್ಯಾಜ್ಯದಿಂದ ಚಮತ್ಕಾರಿತವಾಗಿ ವರ್ಣಿಸುವುದು, ಆ ವಸ್ತುವನ್ನು ಕಂಡು ಹಿಡಿಯುವಂತೆ ಹೇಳುವುದೇ ಒಗಟು.' ಜನಪದ ರೂಪದ ಒಗಟುಗಳನ್ನು ಅಧಮ ಕಾವ್ಯವೆಂದು ಹಿಂದೆ ಪರಿಗಣಿಸಲಾಗುತ್ತಿತ್ತು. ಕಾಲಾಂತರದಲ್ಲಿ ಅದರ ರಹಸ್ಯೋಕ್ತಿ, ತಾತ್ವಿಕ ಜಿಜ್ಞಾಸೆ, ಮೊದಲಾದ ಗುಣಗಳು ಸಾಹಿತ್ಯಿಕ ಮಟ್ಟದೆಂದು ಗುರುತಿಸಿ ಅವು ಸಾಹಿತ್ಯಿಕ ನಿರ್ಮಿತಿಗೆ ಕಾರಣವಾಗಿರಬೇಕು.

'ಮುಂಡಿಗೆ' ಎಂದು ಪದವೂ ಕೂಡ ಒಗಟಿನ ಸಂವಾದಿಯಾಗಿದೆ. ಇಬ್ಬರು ವ್ಯಕ್ತಿಗಳ ಮಧ್ಯೆ ಸವಾಲು ಬಂದಾಗ ಒಬ್ಬ ವ್ಯಕ್ತಿ ತನ್ನ 'ಮುಂಡಾಸ'ನ್ನು ಎತ್ತಿ ನೆಲಕ್ಕೆ ಒಗೆಯುತ್ತಾನೆ. ಇದು ಸವಾಲು ಎಸೆದಂತೆ, ಮತ್ತೊಬ್ಬ ವ್ಯಕ್ತಿ ಆ ಬಟ್ಟೆಯನ್ನು ಎತ್ತಿದರೆ ಸವಾಲನ್ನು ಸ್ವೀಕರಿಸಿದಂತೆ. ಮುಂಡಿಗೆ, ಒಡಮ ಎಂಬೆಲ್ಲಾ ಹೆಸರಿನಿಂದ ಒಗಟನ್ನು ಕರೆಯಲಾಗುತ್ತದೆ. ಒಗಟು ಬುದ್ಧಿ ಪ್ರಧಾನವಾದದ್ದು ಇದು ಶಾಬ್ದಿಕ ಸಂಕೇತವನ್ನು ಹೊಂದಿರುತ್ತದೆ. ರೂಪಕ ಮತ್ತು ಸಾಂಕೇತಿಕತೆ ಇದರ ಮುಖ್ಯ ಲಕ್ಷಣ. ಅಸ್ಪಷ್ಟತೆಯೇ ಇದರ ಗುಣ, ಕೇವಲ ಚಮತ್ಕಾರಿಕ ಪದಗಳಿಂದ ಕೂಡಿದ ಮಾತಿನ ಆಡಂಬರವಲ್ಲದೆ, ಅರ್ಥಪೂರ್ಣವಾಗಿ ಹೋಲಿಕೆಯನ್ನು ಧ್ವನಿಸುವಂತಿರುತ್ತದೆ. ಇದು ಮನುಷ್ಯ ಜೀವನದ ಅನುಭವದ ಸಾರ; ಅದು ಸಾಂಸಾರಿಕ ಅಥವಾ ಪ್ರಾಕೃತಿಕ ಆಧ್ಯಾತ್ಮಿಕ ಯಾವುದೇ ಆಗಿರಬಹುದು. ವಿಶಿಷ್ಟ ಆಕರ್ಷಕ ಪದಗಳ ಮೂಲಕ ಅರ್ಥಬದ್ಧವಾಗಿದ್ದು, ಬುದ್ಧಿಶಕ್ತಿಯನ್ನು ಓರೆಗೆ ಹಚ್ಚುವ ಕೆಲಸವನ್ನು ಒಗಟು ಮಾಡುತ್ತದೆ. ಮೌಖಿಕ ಸಾಹಿತ್ಯದಲ್ಲಿ ರೂಪಕಗಳನ್ನು ಸಮರ್ಥವಾಗಿ ಬಳಸಿಕೊಂಡ ಮನ್ನಣೆ ಒಗಟಿಗಿದೆ. ಉಪಮಾನ(ವಾಚ್ಯ) ಮತ್ತು ಉಪಮೇಯ(ಸೂಚ್ಯ) ಎರಡೂ ಇದರಲ್ಲಿ ಅಡಗಿರುತ್ತದೆ.

**ಜೇನುಕುರುಬರ ಒಗಟುಗಳು**

ಮೂಲಲಿ ಮುದ್ಕಿ ಕೂಯ್ತಾರ – ಹಲಸಿನ ಹಣ್ಣು

ಒಂಟೊಂಟ್ ಒಡಿನಾರಿ, ಎಂಟ್ಯಮ್ಮ ಕರೀನಾರಿ ಆಲುಂಟು ಬೆಣ್ಣೆಯಿಲ್ಲ – ಕಳ್ಳಿ ಗಿಡದ ಹಾಲು

**ಬೆಟ್ಟಕುರುಬರ ಒಗಟುಗಳು**

ಅತ್ತದ್ನ ಅಳೀ ದಾನ ಮಾಡ್ದಂಗ

ಮೊಮ್ಮೂಗಸು ಅಜ್ಜಿಗ್ ಬುದ್ಧಿಯೇಳ್ದಂಗ

ನಾರುಂಟು ಹೀರೆಕಾಯಲ್ಲ, ಕೆಂಪುಂಟು ಇಂಬಿಯಣ್ಣಲ್ಲ, ಹುಳಿ ಉಂಟು ಹುಣಸೆ ಕಾಯಲ್ಲ– ನೆಲ್ಲಿಕಾಯಿ

ಕಟಕಟ್ಟು ಕಟ್ಟಿತ್ತು ಮದ್ಯೆ ಬಿಟ್ಟಿತ್ತು – ತಲೆಗೆ ಟವಲು ಕಟ್ಟಿಕೊಳ್ಳುವುದು. ಆಶ್ಲೀಲ

ಕುದುರೆ ಓಡುತ್ತಿತ್ತು ಕುಂಕುಮ ಚೆಲ್ಲುತಿತ್ತು – ಕುದರೆ ಮೂತ್ರ ಕೆಂಪಾಗಿರುತ್ತದೆ.

ಅಂಕಿ ಉಂಟು ಅಕ್ಷರವಲ್ಲ, ಚಕ್ರ ಉಂಟು ರಥವಲ್ಲ, ಮುಳ್ಳುಂಟು ಸೂಜಿಯಲ್ಲ – ವಾಚು

ಚಿಕ್ಕನೇಲಿ ಚಕ್ಕೆ ತುಂಬವಾ –ಹಲ್ಲು

ಅಕ್ಕ ಹಾಕಿದ್ದು ತಂಗಿ ತೆಗೆಯೋಕೆ ಆಗಲ್ಲ. ತಂಗಿ ಹಾಕಿದ್ದು ಅಕ್ಕ ತೆಗೆಯೋಕೆ ಆಗಲ್ಲ – ಹಚ್ಚೆ

ಸಂದೇಗಂಟ ಬಡಿದರೂ ಸದ್ದಾಗಲ್ಲ – ಕಣ್ಣಿನ ರೆಪ್ಪೆಗಳು

ಸಣ್ಣೇರಿ ಮೇಲೆ ಸಾಲು ಗುಬ್ಬಳಿ ಮರಗಳು – ಹುಬ್ಬು

## 3.6. ಐತಿಹ್ಯಗಳು

ಲೌಕಿಕ ವಸ್ತುಗಳು, ಘಟನೆಗಳು ಮತ್ತು ಸ್ಥಳಗಳಿಗೆ ಸಂಬಂಧಿಸಿದ ವಾಸ್ತವಿಕ ಇಲ್ಲವೆ ಕಾಲ್ಪನಿಕ ಕತೆಗಳನ್ನು ಐತಿಹ್ಯಗಳು ಎಂದು ಕರೆಯಬಹುದಾಗಿದೆ. ಐತಿಹ್ಯವನ್ನು ಕುರಿತ ವಿದ್ವಾಂಸರ ಅಭಿಪ್ರಾಯ ಈ ರೀತಿಯಿದೆ.

ಐತಿಹ್ಯ–ಎಂದರೆ ಇಂಗ್ಲೀಷಿನಲ್ಲಿ Legend ಎಂದರ್ಥ

ಕ.ಸಾ.ಪ. ನಿಘಂಟು 'ಪರಂಪರೆಯಿಂದ ಬಂದದ್ದು'

ಮಚ್ಚುಮಲೆ ಶಂಕರನಾರಾಯಣರಾವ್: 'ಪರಂಪರಾಗತ ವೃತ್ತಾಂತ'

ಕಾರಂತ : 'ಇತಿಹಾಸಕ್ಕೆ ಸಂಬಂಧಿಸಿದ ಚರಿತ್ರೆ'

Ghosh AK : 'History becomes much more exciting and interesting when we read stories of what people said and did no one knows it those stories are true but they are generally beloved to be true : they are legends'

'ಐತಿಹ್ಯಕ್ಕೆ ಹಿಂದೆ, ಹೀಗೆ, ಇತ್ತು ಎಂಬರ್ಥವಿದೆ. ಇತಿಹಾಸಕ್ಕೆ ಸಂವಾದಿಯಾಗಿ ಐತಿಹ್ಯ ಪದ ಬಳಸಬಹುದು. ನಡೆದಿರಬಹುದಾದ ಅಥವಾ ಕಾಲ್ಪನಿಕ ವಿಷಯಕ್ಕೆ ಹಲವಾರು ಅಂಶಗಳು

ಸೇರಿ ಜನರ ಬಾಯಿಮಾತಿನಲ್ಲಿ ಹರಿದುಬರುತ್ತದೆ. ಇದು ಕತೆಗಳಂತೆ ಮನರಂಜನೆಗಾಗಿ ಸೃಷ್ಟಿಯಾದುದಲ್ಲ. ಉದಾ: ಕುಡಿಯರು ತಮ್ಮ ಸೃಷ್ಟಿಯನ್ನು ಕುರಿತು 'ನಾವು ಬೈನೆ ಮರದಿಂದ ಹೆಂಡ ಇಳಿಸುವುದರಿಂದ ಹಾಗೂ ಹೆಂಡ ಕುಡಿಯುವುದರಿಂದ ನಮಗೆ ಕುಡಿಯ ಎಂಬ ಹೆಸರು ಬಂದಿದೆ' ಎಂದು ಅಭಿಪ್ರಾಯ ಪಡುತ್ತಾರೆ. ಇದು ನಿಜವೂ ಇರಬಹುದು. ಹಾಗೆಯೇ ಅವರ ಕಲ್ಪನೆಯೂ ಆಗಿರಬಹುದು. ಇದನ್ನು ಸಾರಾಸಗಟಾಗಿ ಒಪ್ಪುವುದಾಗಲೀ ತಿರಸ್ಕರಿಸುವುದಾಗಲೀ ಸರಿಯಲ್ಲ. ಇವುಗಳನ್ನು ಸಮುದಾಯವೂ ಕೂಡ ಗಂಭೀರವಾಗಿ ಪರಿಗಣಿಸುತ್ತದೆ.

### 3.7. ಪುರಾಣಗಳು

ಪುರಾಣಗಳೆಂದರೆ ಹಳೆಯದು ಎಂದರ್ಥ. ಪುರ>ಪುರಾಣ ಇದರ ಕಾಲ ಊಹಾತೀತ. ಇದು ಲೌಕಿಕ ಮತ್ತು ಆಧ್ಯಾತ್ಮಿಕ ಎರಡರ ಸಮ್ಮಿಳಿತ. ಪುರಾಣ(ಕನ್ನಡ). Myth(ಇಂಗ್ಲಿಷ್), Mythos(ಗ್ರೀಕ್) ಎಂದು ಪ್ರಪಂಚದ ಬೇರೆ ಬೇರೆ ಭಾಷೆಯಲ್ಲಿ ಬೇರೆ ಬೇರೆ ರೀತಿಯಲ್ಲಿ ಕರೆಯಲಾಗುತ್ತದೆ. ಗ್ರೀಕ್ ಭಾಷೆಯಲ್ಲಿ Mytho ಎಂದರೆ ನೀತಿ ಕತೆ ಎಂಬ ಅರ್ಥವಿದೆ. ಜಿ.ಎಲ್. ಗೊಮೆ ಇವರು 'ಪುರಾಣಗಳು ಪೂರ್ವಯುಗದ ವಿಜ್ಞಾನ' ಎಂದಿದ್ದಾರೆ. ಪುರಾಣಗಳು ಧಾರ್ಮಿಕ ಚೌಕಟ್ಟನ್ನು ಹೊಂದಿರುವುದರ ಜೊತೆಗೆ ನಿಸರ್ಗದ ರಹಸ್ಯವನ್ನು ಕೂಡ ಬಿಚ್ಚಿಡುತ್ತವೆ.

'ಬುಡಕಟ್ಟುಗಳ ಧಾರ್ಮಿಕ ಜೀವನದಲ್ಲಿ ಪುರಾಣಗಳು ಕಟ್ಟುಕಥೆಗಳಲ್ಲ. ಆಯಾಯ ಸಮುದಾಯಗಳ ಇತಿಹಾಸ, ಪರಂಪರೆ, ಸಂಸ್ಕೃತಿ, ಸಮುದಾಯದಲ್ಲಿನ ವಿಶಿಷ್ಟ ನಂಬಿಕೆಗಳು ಮತ್ತು ಆ ನಂಬಿಕೆಯ ಪಾತಳಿಯಲ್ಲಿ ರೂಪುಗೊಂಡ ಸೃಜನಶೀಲ ಸೃಷ್ಟಿಗಳು. ಸುತ್ತಲ ಜಗತ್ತನ್ನು ಕುರಿತು ಕಂಡುಕೊಂಡ ದರ್ಶನ. ಅವರು ಕಾಪಾಡಿಕೊಂಡು ಬಂದ ಮೌಲ್ಯಗಳಿಗೆಲ್ಲ ಪುರಾಣಗಳೇ ಮೂಲ ಆಕರಗಳಾಗಿರುತ್ತವೆ'[13] ಎನ್ನುತ್ತಾರೆ. ಹಿ.ಚಿ.ಬೋರಲಿಂಗಯ್ಯನವರು 'ಪುರಾಣಗಳಲ್ಲಿ ಜನಪದ ಪುರಾಣಗಳು ಬೇರೆ ಇವೆಯೇ ಎಂದು ಯಾರಾದರೂ ಪ್ರಶ್ನಿಸಬಹುದು. ವಾಸ್ತವವಾಗಿ ಪುರಾಣಗಳ ಮೂಲ ನೆಲೆಯೇ ಜನಪದ ಜಗತ್ತು. ಪುರಾಣಗಳು ಹುಟ್ಟುವುದೇ ಅಂಥ ಕಡೆ. ಕಾಲಕ್ರಮೇಣ ಅವು ಬೇರೆ ಬೇರೆ ಸ್ವರೂಪ ಪಡೆಯಬಹುದು. ಶಿಷ್ಟಗೊಳ್ಳಬಹುದು. ಪುರೋಹಿತರ ಮತ್ತು ಆಳುವ ವರ್ಗಗಳ ಮುಖವಾಣಿ ಆಗಬಹುದು. ಆದರೆ ಮೂಲದಲ್ಲಿ ಜನಪದ ಮನಸ್ಸೇ ಅದನ್ನು ಸೃಷ್ಟಿಸುತ್ತದೆ, ನಿರುದ್ದೇಶಪೂರ್ವಕವಾಗಿ ಅಪ್ರಜ್ಞಾಪೂರ್ವಕವಾಗಿ'[14] ಎನ್ನುತ್ತಾರೆ.

ಪ್ರೊ. ಹಿ.ಚಿ. ಬೋರಲಿಂಗಯ್ಯರವರು ಪುರಾಣಗಳನ್ನು ಮುಖ್ಯವಾಗಿ ಮೂರು ಭಾಗವಾಗಿ ವಿಂಗಡಿಸಿದ್ದಾರೆ.

1. ಹಿಂದೂ ಪರಂಪರೆಯ ಶಿಷ್ಟ ಪುರಾಣಗಳು

2. ಜನಪದ ಸಮಾಜದ ಜನಪ್ರಿಯ ಪುರಾಣಗಳು

3. ಬುಡಕಟ್ಟು ಸಮುದಾಯಗಳ ವಿಶಿಷ್ಟ ಪುರಾಣಗಳು[15]

ಬುಡಕಟ್ಟು ಸಮುದಾಯದ ಪುರಾಣಗಳೆಂದರೆ ಪೌರಾಣಿಕ ದೇವಾನುದೇವತೆಗಳಿಗೂ ಪುರಾಣದ ಪಾತ್ರಗಳಿಗೂ ತಮ್ಮ ಸಮುದಾಯಕ್ಕೂ ಸಂಬಂಧವನ್ನು ಕಲ್ಪಿಸುವಂತಹ ಕಥೆಗಳು. ಉದಾಹರಣೆಗೆ ಪೌರಾಣಿಕ ಹಿನ್ನೆಲೆಯ ಪ್ರಕಾರ 'ಪಾಂಡವರು ವನವಾಸ ಸಂದರ್ಭದಲ್ಲಿ ಕೊಡಗಿಗೆ ಬಂದಿದ್ದರಂತೆ. ವನವಾಸವನ್ನು ಮುಗಿಸಿ ಹೋಗುವಾಗ ಅಲ್ಲಿ ನೆರೆದಿದ್ದವರಿಗೆಲ್ಲ ಒಂದೊಂದು ವಸ್ತುವನ್ನು ಕೊಡುತ್ತಾ ಬಂದರಂತೆ. ಕುಡಿಯರ ಸರದಿ ಬಂದಾಗ ಕೊಡಲು ಅವರ ಬಳಿ ಏನೂ ಇರಲಿಲ್ಲವಂತೆ. ಹಾಗಾಗಿ ತಮ್ಮ ಬಾಯಲ್ಲಿದ್ದ ತಾಂಬೂಲ ಉಗುಳಿದ ಜಾಗದಲ್ಲಿ ಬೈನೆಮರವೊಂದು ಸೃಷ್ಟಿಯಾಯಿತಂತೆ. ತಮ್ಮ ಮೂಗಿನ ನೆಣ ಹಾಕಿದ ಜಾಗದಲ್ಲಿ ಏಲಕ್ಕಿ ಗಿಡ ಹುಟ್ಟಿತಂತೆ. ಇವುಗಳಿಂದ ನೀವು ಜೀವನ ನಡೆಸಿ ಎಂದು ಪಾಂಡವರು ಹರಸಿ ಹೋದರು ಎಂಬ ಕತೆ ಚಾಲ್ತಿಯಲ್ಲಿದೆ. ಈ ರೀತಿ ಪ್ರತಿ ಬುಡಕಟ್ಟುಗಳು ಪುರಾಣದ ಹಿನ್ನೆಲೆಯ ಕತೆಯನ್ನು ಹೊಂದಿದ್ದಾರೆ. ಹಿ.ಶಿ. ರಾಮಚಂದ್ರೇಗೌಡರು 'ಆದಿಮಾನವ ನಾಗರಿಕನಾಗುವ ಮದ್ಯೆ ಕಂಡುಕೊಂಡ ಅವನ ಸ್ವಕಥನವೇ ಪುರಾಣ. ಅದು ಅವನ ಬದುಕಿನ ಕಥನ ಮತ್ತು ಕಲ್ಪನೆಗಳ ಭಾವರೂಪವೂ ಹೌದು; ಬದುಕೂ ಹೌದು'[16] ಎನ್ನುತ್ತಾರೆ. ಪುರಾಣಗಳು ಸಾಮಾನ್ಯವಾಗಿ ಕಾಲ್ಪನಿಕ ಸೃಷ್ಟಿಯಾಗಿರುತ್ತವೆ. ಇದು ಅಜ್ಞಾತ ಕರ್ತೃತ್ವ ಅಮೂರ್ತತೆ ಇದರ ಪ್ರಮುಖ ಲಕ್ಷಣ. ಇವು ಯಾವುದೇ ನಿರ್ದಿಷ್ಟ ಕಾಲ, ಸ್ಥಳ, ವ್ಯಕ್ತಿಗೆ ಸಂಬಂಧಿಸಿರು ವುದಿಲ್ಲ. ಈ ಕತೆಗಳಲ್ಲಿ ಸಾಮಾನ್ಯವಾಗಿ ಸುಖಾಂತ ಕಂಡುಬಂದರೂ ಕೆಲವೊಮ್ಮ ದುರಂತಗಳೂ ಇರುತ್ತವೆ. ಇವು ಒಳ್ಳೆಯ ಹಾಗೂ ಕೆಟ್ಟದರ ಸಂಘರ್ಷವನ್ನು ಹೇಳುವುದರೊಂದಿಗೆ ಕೊನೆಗೆ ಸತ್ಯಕ್ಕೇ ಜಯ ಎಂಬ ಸಂದೇಶವನ್ನು ಸಾರುವಂತಿರುತ್ತವೆ. ಇವುಗಳಲ್ಲಿ ಮುಖ್ಯವಾಗಿ ರಮ್ಯ, ನೀತಿ ಬೋಧನೆ, ರೋಮಾಂಚನಕಾರಿ, ಅದ್ಭುತ, ಮಾನವಾತೀತ ಶಕ್ತಿಯನ್ನು ಕುರಿತ ಕತೆಗಳು ಹೆಚ್ಚಾಗಿ ಕಂಡುಬರುತ್ತವೆ. ಕತೆಗಳು ಸದ್ದಿಲ್ಲದೆಯೇ ಜನರಲ್ಲಿ ಸತ್ಯ, ಔದಾರ್ಯ, ವಿಶ್ವಾಸ, ಸ್ನೇಹ, ಪ್ರಾಮಾಣಿಕತೆ, ಶೌರ್ಯ, ಭಕ್ತಿ, ನಿಷ್ಕಾಪಟ್ಯ, ಸುಂದರ, ದಯೆ, ಒಗ್ಗಟ್ಟು, ಪ್ರೇಮ ಮೊದಲಾದ ಉದಾತ್ತ ಮೌಲ್ಯಗಳನ್ನು ಉಜ್ವಲೀಕರಿಸಲು ಯತ್ನಿಸುತ್ತಿರುತ್ತವೆ. ಪುರಾಣಗಳು ಪ್ರಕೃತಿಯೊಂದಿಗೆ ಹಾಗೂ ಅತೀಂದ್ರಿಯ ಶಕ್ತಿಯೊಂದಿಗೆ ನಂಟನ್ನು ಹೊಂದಿದೆ. ಪುರಾಣಗಳು ಸಮುದಾಯದೊಂದಿಗೆ ಅವಿನಾಭಾವ ಸಂಬಂಧ ಹೊಂದಿದೆ. ಇದನ್ನು ಸರಿ ತಪ್ಪುಗಳ ಲೆಕ್ಕಾಚಾರಗಳಲ್ಲಾಗಲೀ, ಸಂಬಂಧಗಳ, ನೈತಿಕತೆಗಳ, ಚೌಕಟ್ಟಿನಲ್ಲಾಗಲೀ ಬಂಧಿಸಲು ಪ್ರಯತ್ನಿಸುವುದು ಕೂಡ ದಡ್ಡತನವಾಗುತ್ತದೆ. ಪುರಾಣಗಳೆಂದರೆ 'ಸೃಷ್ಟಿಯ ರಹಸ್ಯ, ಮನುಷ್ಯನ ಉಗಮ, ಮನುಷ್ಯ ವರ್ಗದ ಪ್ರಭೇದಗಳು, ಸೃಷ್ಟಿ, ಶಕ್ತಿ, ಜೀವ ಜಗತ್ತುಗಳಿಗಿರುವ ಸಂಬಂಧ, ನಂಬಿಕೆ ಆಚರಣೆಗಳ ಹುಟ್ಟು, ಭೂಕಂಪಗಳು, ಬಿರುಗಾಳಿ, ಕಾಯಿಲೆ ಮತ್ತು ಅದರ ಪರಿಹಾರ,

ಮಳೆ, ಬೆಳೆ, ಬೇರೆ ಬೇರೆ ಋತುಮಾನಗಳು, ಸಾವು, ಸಾವಿನ ನಂತರದ ಸ್ಥಿತಿ. ಇತ್ಯಾದಿಗಳ ರಹಸ್ಯ ತಿಳಿಯಲು ಮನುಷ್ಯ ಮಾಡಿದ ಪ್ರಯತ್ನ'[17] ಎನ್ನುತ್ತಾರೆ.

ಪುರಾಣಗಳು ಪ್ರತಿಯೊಂದು ಸಮುದಾಯಗಳ ನಂಬಿಕೆ, ಸಂಪ್ರದಾಯ ಆಚರಣೆಗಾಗಿ ಸಮರ್ಥನೆಯನ್ನು ನೀಡುತ್ತಿರುತ್ತವೆ. ಪುರಾಣಗಳನ್ನು ಮತ್ತು ಐತಿಹ್ಯಗಳನ್ನು ಬೇರ್ಪಡಿಸುವುದು ಕಷ್ಟ. 'ಪುರಾಣಗಳು ಎಲ್ಲಿಯವರೆಗೆ ಜೀವಂತವಾಗಿರುವುದೋ ಅಲ್ಲಿಯವರೆಗೆ ತನ್ನ ಸಮಾಜದ ಅಥವಾ ಬುಡಕಟ್ಟಿನ ಸಂಘಟನೆಯನ್ನು ಉಂಟುಮಾಡುತ್ತದೆ. ಈ ದೃಷ್ಟಿಯಿಂದ ಪುರಾಣ ತನ್ನ ಸಮಾಜದಲ್ಲಿ ಅಥವಾ ಬುಡಕಟ್ಟಿನಲ್ಲಿ ಸಕ್ರಿಯವಾದ ಪಾತ್ರ ವಹಿಸುತ್ತದೆ. ಜೀವಂತ ಶಕ್ತಿಯಾಗಿರುತ್ತದೆ. ಪುರಾಣಗಳು ಒಂದು ಸಮಾಜದ ಅಥವಾ ಬುಡಕಟ್ಟಿನ ಜನರಿಗೆ ಪರಮ ಪವಿತ್ರವಾದವುಗಳಾಗಿವೆ'[18] ಎಂದು ಸುನಂದಮ್ಮ ಅಭಿಪ್ರಾಯಪಡುತ್ತಾರೆ.

## 3.8. ಸೃಷ್ಟಿ ಪುರಾಣಗಳು

ಪ್ರತಿಯೊಂದು ಬುಡಕಟ್ಟು ಕೂಡ ಈ ಜೀವಜಗತ್ತು ತಮ್ಮಿಂದಲೇ ಸೃಷ್ಟಿ ಆಯಿತು, ಈ ಲೋಕಕ್ಕೆ ನಾವೇ ಮೊದಲಿಗರು ಎಂದು ಪ್ರತಿಪಾದಿಸುತ್ತಾರೆ. ಅಂದರೆ ಭೂಮಿಯ ಮೇಲೆ ಯಾವ ಜೀವ ಜಂತುಗಳು ಇಲ್ಲದಿದ್ದ ಕಾಲದಲ್ಲಿ ನಮ್ಮ ಸಮುದಾಯದ ಪೂರ್ವಿಕರು ಮೊದಲು ಸೃಷ್ಟಿಯಾದರು ಅನಂತರ ಅವರಿಂದಲೇ ಮನುಷ್ಯಜಗತ್ತು, ಜೀವಸಂಕುಲ ಸೃಷ್ಟಿಯಾಯಿತು ಎಂದು ನಿರೂಪಿಸುವ ಈ ಸೃಷ್ಟಿಪುರಾಣಗಳು ಎಲ್ಲ ಸಮುದಾಯಗಳಲ್ಲಿ ಇದೆ. ಇದು ಇತಿಹಾಸ ಪೂರ್ವಯುಗದ್ದು. ಇಡೀ ವಿಶ್ವದ ಸೃಷ್ಟಿ ಮತ್ತು ಸಮುದಾಯಗಳ ಉಗಮಕ್ಕೆ ಸಂಬಂಧಿಸಿದ್ದು. ಆದ್ದರಿಂದಲೇ ಇದನ್ನು 'ಸೃಷ್ಟಿಪುರಾಣ' ಎಂದೂ ಕೂಡ ಕರೆಯುತ್ತಾರೆ.

**ಎರವರ ಸೃಷ್ಟಿಪುರಾಣ:** ಎರವರ ಸೃಷ್ಟಿಪುರಾಣವು ವಿಶಿಷ್ಟವಾಗಿದೆ. ಇದರ ಪ್ರಕಾರ ಎರವರ ಮೂಲ ಪುರುಷರ ಹೆಸರು ಆರ್ಯೆ ಮತ್ತು ಬಾಣ್ಯೆ. ಹಿಂದೆ ಇಡೀ ಭೂಮಿ ಜೌಗಿನಿಂದ ಕೂಡಿದ್ದ ಕಾಲದಲ್ಲಿ ಭೂಮಿಯನ್ನು ಗಟ್ಟಿಗೊಳಿಸುವ ಸಲುವಾಗಿ ಆರ್ಯೆ ಮತ್ತು ಬಾಣ್ಯೆಯರು ದೇವರ ಬಳಿಯಿಂದ ಹುಲ್ಲು, ಬಿದಿರು, ಮೊದಲಾದವುಗಳ ಬೀಜ ತಂದು ನೆಡುತ್ತಾರೆ. ಇದರಿಂದ ಭೂಮಿಯ ಮೇಲೆ ಸಸ್ಯಸಂಕುಲಗಳು ಹುಟ್ಟಿತು ನಂತರ ಈ ಭೂಮಿಯ ಮೇಲೆ ಪ್ರಾಣಿ, ಪಕ್ಷಿ, ಹಾವು, ಚೇಳು ಮೊದಲಾದ ಪ್ರಾಣಿಸಂಕುಲವನ್ನು ಸೃಷ್ಟಿಸಿದರು. ಹೀಗೆ ಜೀವಜಗತ್ತು ತಮ್ಮ ದೈವ ಪುರುಷರಿಂದ ಸೃಷ್ಟಿಯಾಯಿತು ಎಂಬುದು ಎರವರ ಅಭಿಪ್ರಾಯ.

**ಜೇನುಕುರುಬರ ಸೃಷ್ಟಿಪುರಾಣ:** 'ಪ್ರಳಯದ ಕಾರಣಕ್ಕಾಗಿ ಜಗತ್ತು ನೀರಿನಲ್ಲಿ ಮುಳುಗಿತ್ತು. ನೀರ ಮೇಲೆ ಒಂದು ಪ್ರಾಣಿಯೂ ಬದುಕಿರುವ ಕುರುಹುಗಳಿರಲಿಲ್ಲ. ನೀರಿನ ಮೇಲೆ ಒಂದು ಕಹಿ

ಸೋರೆ ಬುರುಡೆ ತೇಲುತ್ತಾ ಬಂದಿತು. ನೀರಿನ ಅಲೆಯ ಮೇಲೆ ತೇಲುತ್ತಾ ಅದು ಒಂದು ಅಂಗೈ ಅಗಲದ ಭೂಮಿಯ ಮೇಲೆ ನಿಂತಿತು. ಈ ಸೋರೆ ಬುರುಡೆಯನ್ನು ಒಡೆದುಕೊಂಡು ಇಬ್ಬರು ಗಂಡು ಹೆಣ್ಣುಗಳು ಹೊರಬಂದರು. ಅವರಿಬ್ಬರೂ ಅಣ್ಣ ತಂಗಿಯರಾಗಿದ್ದರು. ಅವರಿಬ್ಬರೂ ತಮ್ಮ ಕೈಮುಷ್ಟಿಯಲ್ಲಿ ಮಣ್ಣನ್ನು ಹಿಡಿದು ಹೆಣ್ಣು ಗಂಡನ್ನು ಸೃಷ್ಟಿಸಿದರು. ಸೃಷ್ಟಿಸಲ್ಪಟ್ಟ ಹೆಣ್ಣು ಗಂಡುಗಳಿಂದಲೇ ಜೇನುಕುರುಬ ಸಮುದಾಯ ಅಸ್ತಿತ್ವಕ್ಕೆ ಬಂದಿತು' ಎಂಬುದು ಅವರ ಸಮುದಾಯದ ಸೃಷ್ಟಿಯ ಕುರಿತು ನಂಬಿಕೆ.

**ಬೆಟ್ಟಕುರುಬರ ಸೃಷ್ಟಿಪುರಾಣ:** ಬೆಟ್ಟಕುರುಬರಲ್ಲಿ ಭೂಮಿಯ ಮತ್ತು ಜೀವಿಗಳ ಹುಟ್ಟಿನ ಕುರಿತ ಕಥೆಯೊಂದಿದೆ. 'ಮೊದಲು ಭೂಮಿಯ ಮೇಲೆ ಬರೀ ನೀರೇ ನೀರು. ಯಾವ ಜೀವಿಗಳೂ ಉಗಮವಾಗಿರಲಿಲ್ಲ. ನೀರಿನ ಮಟ್ಟ ಇಳಿಯುತ್ತಿದ್ದಂತೆ ಭೂಮಿಯ ಮೇಲೆ ಇಬ್ಬರು ಅಣ್ಣ ತಂಗಿಯರು ಹುಟ್ಟಿಬಂದರು. ಜೊತೆಗೆ ಹುಟ್ಟಿದವರಾಗಿದ್ದ ಕಾರಣ ಅವರು ಅಣ್ಣ ತಂಗಿಯರೆಂದೇ ಭಾವಿಸಿ ಜೊತೆಗಿದ್ದರು. ಸಂತಾನೋತ್ಪತ್ತಿಯಾಗದೆ ಮಾನವ ಪೀಳಿಗೆಯ ಮುಂದುವರಿಕೆ ಸಾಧ್ಯವಾಗಲಿಲ್ಲ. ಆಗ ಶಿವ ಅಣ್ಣ ತಂಗಿಯರನ್ನು ವಿರುದ್ಧ ದಿಕ್ಕಿನಲ್ಲಿ ಅಭಿಮುಖವಾಗಿ ನಿಲ್ಲಿಸಿದರು. ನಂತರ ಪರಸ್ಪರ ಮುಖ ನೋಡಿಕೊಂಡಾಗ ಇಬ್ಬರೂ ಗಂಡ ಹೆಂಡತಿಯರಾಗಿ ಭಾವಿಸಿಕೊಂಡರು. ಇವರು ತಮ್ಮನ್ನು ತಾವು ಮೂಲಪುರುಷರೆಂದು ಭಾವಿಸಿ ಮಾನವ ಸಂತತಿಯ ಉಗಮಕ್ಕೆ ಕಾರಣರಾದರು. ಇವರ ಮಕ್ಕಳನ್ನು ಕಾಡುಕುರುಬ, ಜೇನುಕುರುಬ ಮತ್ತು ಇತರ ಬುಡಕಟ್ಟುಗಳೆಂದು ಗುರುತಿಸಲಾಯಿತು. ಜೇನುಕುರುಬರು ತಮ್ಮನ ಮಕ್ಕಳಾದರೆ, ಬೆಟ್ಟಕುರುಬರು ಅಣ್ಣನ ಮಕ್ಕಳಾದರು. ಎಲ್ಲರೂ ಕಾಡಿನಲ್ಲಿಯೇ ಜೀವಿಸತೊಡದರು. ಜೇನುಕುರುಬರು ಜೇನನ್ನು ಅರಸುತ್ತಾ ಹೋದರೆ, ಬೆಟ್ಟ ಕುರುಬರು ಬಿದಿರಿನ ವೃತ್ತಿಯನ್ನು ಅವಲಂಬಿಸಿ ಬದುಕತೊಡಗಿದರು. ಈ ಕಾರಣದಿಂದ ಜೇನು ಕುರುಬ ಮತ್ತು ಬೆಟ್ಟಕುರುಬರು ಒಂದೇ ತಾಯಿಯ ಮಕ್ಕಳಾದರು. ಆಯ್ಕೆ ಮಾಡಿಕೊಂಡ ವೃತ್ತಿಯಿಂದಾಗಿ ಇವರು ಬೇರೆ ಬೇರೆ ಸಮುದಾಯಗಳಾಗಿ ರೂಪುಗೊಂಡರು' ಇದು ಅವರ ಸಮುದಾಯಗಳ ಸೃಷ್ಟಿಯ ಕಥೆ.

**ಎರವರ ಸೃಷ್ಟಿಪುರಾಣ:** 'ಇಪ್ಪಿಮಲೆ ಎಂಬ ಜಾಗದಲ್ಲಿ ತಂಬೀರ ಎಂಬ ರಾಜನಿದ್ದನು. ತನ್ನ ಪ್ರದೇಶದಲ್ಲಿನ ಫಲವತ್ತಾದ ಕೃಷಿ ಭೂಮಿಯಲ್ಲಿ ಈತ ಕೃಷಿ ಮಾಡಿಕೊಂಡಿದ್ದ. ಈ ರಾಜ ಕಾಡಿನಲ್ಲಿ ಅಲೆಯುತ್ತಿದ್ದಾಗ ಇಬ್ಬರು ಬೆತ್ತಲೆ ಗಂಡು ಹೆಣ್ಣುಗಳನ್ನು ನೋಡಿದನು. ತನ್ನ ಹೊಲಗದ್ದೆಗಳಲ್ಲಿ ಕೆಲಸ ಮಾಡಲು ಆ ಗಂಡು ಹೆಣ್ಣುಗಳನ್ನು ಬಲಬೀಸಿ ಹಿಡಿಸಿದನು. ಬಂಧಿಗಳಾಗಿದ್ದ ಅವರನ್ನು ವಿಚಾರಿಸಲಾಗಿ ಅವರಿಬ್ಬರೂ ಅಣ್ಣ-ತಂಗಿಯರೆಂದು ತಿಳಿದುಬಂದಿತು. ಅವರು ತಮ್ಮ ಜೀತ ಬಿಟ್ಟು ಹೋಗದಿರಲೆಂದು ಮತ್ತು ತಪ್ಪಿಸಿಕೊಳ್ಳಬಾರದೆಂದು ಏಳು ಮೊಳ ಬಟ್ಟೆಯನ್ನು ಕೊಟ್ಟು ಇಬ್ಬರೂ ಒಂದೊಂದು ತುದಿಯನ್ನು ದೇಹಕ್ಕೆ ಸುತ್ತಿಕೊಳ್ಳಲು ಆಜ್ಞಾಪಿಸಿದನು. ಇಬ್ಬರೂ ಒಂದೇ ಬಟ್ಟೆಯನ್ನು

ಸೊಂಟದಿಂದ ಕೆಳಕ್ಕೆ ಸುತ್ತಿಕೊಂಡರು. ಈ ಚಿಕ್ಕ ಬಟ್ಟೆಯನ್ನು ಸುತ್ತಿಕೊಂಡು ಕೆಲಸ ಮಾಡಲು ಸಾಧ್ಯವಾಗದೇ ಹೋದಾಗ ತಂಬೀರನ ಹೆಂಡತಿ ತಂಬಿರಾಟಿಯು ಇನ್ನು ಏಳು ಮೊಳ ಬಟ್ಟೆಯನ್ನು ನೀಡಿದಳು. ಇಬ್ಬರೂ ಸಮನಾಗಿ ಸೊಂಟದ ಕೆಳಗೆ ಬಟ್ಟೆ ಕಟ್ಟಿಕೊಂಡು ತಂಬೀರನ ಮನೆಯ ಜೀತದಾಳುಗಳಾದರು. ಅವರು ಬೆಳೆದು ದೊಡ್ಡವರಾದ ಮೇಲೆ ಅವರನ್ನು ಮದುವೆಯಾಗಲು ಇತರೆ ಗುಲಾಮ ಜೀತಗಾರರು ನಿರಾಕರಿಸಿದರು. ಆಗ ತಂಬೀರ ರಾಜನು ಆ ಗಂಡು ಹೆಣ್ಣುಗಳಿಗೆ ಸೊಂಟದ ಕೆಳಗೆ ಗಂಡ ಹೆಂಡಿರಾಗಿ, ಸೊಂಟದ ಮೇಲೆ ಅಣ್ಣ ತಂಗಿಯರಾಗಿ  ಬದುಕಿ ಎಂದು ಆಜ್ಞಾಪಿಸಿದನು. ಹೀಗೆ ದಂಪತಿಗಳಾದವರ ಹೆಸರು ಅಂಜಿಲಾತು ಅಪ್ಪೆಮುತ್ತಿ ಮತ್ತು ಪಾಪಲತ್ತು ಅಮ್ಮಮುತ್ತಿ. ಇವರಿಗೆ ಐದು ಜನ ಗಂಡು ಮತ್ತು ಐದು ಹೆಣ್ಣುಮಕ್ಕಳು ಜನಿಸಿದರು. ಇವರೆ ಮುಂದೆ ಎರವ ಸಮುದಾಯದ ಹುಟ್ಟಿಗೆ ಕಾರಣರಾದರು.' ಇದು ಎರವರ ಹುಟ್ಟಿನ ಬಗೆಗಿನ ಒಂದು ಪುರಾಣ.

ಈ ರೀತಿ ಪ್ರತಿ ಬುಡಕಟ್ಟು ಸಮುದಾಯಗಳೂ ಕೂಡ ತಮ್ಮದೇ ಆದ ಸೃಷ್ಟಿಪುರಾಣವನ್ನು ಹೊಂದಿವೆ. ಬುಡಕಟ್ಟು ಮೌಖಿಕ ಸಾಹಿತ್ಯವು ಗೋಚರ ಹಾಗೂ ಅಗೋಚರ ಲೋಕದೊಡನೆ ಸಂಬಂಧ ಬೆಳೆಸುವ ವಿಶಿಷ್ಟ ವಾಹಕವಾಗಿವೆ. ಸಮುದಾಯದ ಶ್ರೀಮಂತ ಸಂಪ್ರದಾಯಗಳನ್ನು ಈ ವಾಕ್ ಪರಂಪರೆಯಿಂದ ನಾವು ತಿಳಿಯಲು ಸಾಧ್ಯ. ಆ ಮೂಲಕ ಇವು ಮನುಷ್ಯ ಜೀವನದ ಸಾರ್ಥಕತೆಯನ್ನು ಅತ್ಯಂತ ಸರಳವಾಗಿ ಸಮಾಜಕ್ಕೆ ತಿಳಿಸಿಕೊಡುತ್ತವೆ. ಏಕಕಾಲದಲ್ಲೆ ಪ್ರಾಕೃತಿಕ ಜ್ಞಾನವನ್ನು, ಜೀವನದ ನಶ್ವರತೆಯನ್ನು, ಸೌಂದರ್ಯನ್ನೂ ನಮಗೆ ಕಟ್ಟಿಕೊಡುತ್ತವೆ.

### 3.9. ಮಹಾಕಾವ್ಯ

ಕರ್ನಾಟಕದಲ್ಲಿ ಜಾನಪದ ಮತ್ತು ಬುಡಕಟ್ಟು ಅಧ್ಯಯನವು ಆರಂಭದಲ್ಲಿ ಜಾನಪದ ಗೀತೆ, ಕಥೆ, ಒಗಟು ಮುಂತಾದ ವಾಗ್ರೂಪಗಳನ್ನು ಸಂಪಾದಿಸುವ ಮೂಲಕ ಪ್ರಾರಂಭವಾಯಿತು. ವಸಾಹತು ಕಾಲಘಟ್ಟದ ಶೈಕ್ಷಣಿಕ ವಿಧಾನವನ್ನು ಅನುಸರಿಸಿ ಕಳೆದ ಶತಮಾನದ ಆರಂಭದಲ್ಲಿ ಈ ಸಂಪಾದನಾ ಕೆಲಸ ಆರಂಭವಾಯಿತು. ನಂತರ ಜನಪದರಲ್ಲಿನ ಗಂಭೀರ ಸ್ವರೂಪದ ಕಥನಗಳನ್ನು ಮಹಾ ಕಾವ್ಯಗಳನ್ನು ಸಂಪಾದಿಸುವ ಬೃಹತ್ ಕೆಲಸವನ್ನು ಸಹ ಇತ್ತೀಚೆಗೆ ಆರಂಭಿಸಲಾಗಿದೆ.  ಆರಂಭದಲ್ಲಿ ಜಿ.ಶಂ.ಪರಮಶಿವಯ್ಯನವರು, ಮಲೆಯ ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಸವದತ್ತಿ ಎಲ್ಲಮ್ಮ ಈ ಮಹಾಕಾವ್ಯಗಳ ಬಗ್ಗೆ ಸಂಗ್ರಹ ಮಾಡಿದರು. ಡಾ.ಪಿ.ಕೆ.ರಾಜಶೇಖರ್ ಅವರು ಮಲೆಮಾದೇಶ್ವರ ಕಾವ್ಯವನ್ನು ಎರಡು ಸಂಪುಟಗಳಲ್ಲಿ ಸಂಪಾದಿಸಿದರು. ಆದರೆ, ಜನಪದ ಮತ್ತು ಬುಡಕಟ್ಟು ಮಹಾಕಾವ್ಯಗಳನ್ನು ಅಧ್ಯಯನ ಮಾಡಿದ ಮೊದಲಿಗರೆಂದರೆ ಜಿ.ಶಂ. ಪರಮಶಿವಯ್ಯನವರು. 'ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು' ಎಂಬ ಅವರ

ಕೃತಿಯಲ್ಲಿ ಮೌಖಿಕ ಕಾವ್ಯಗಳ ಅಧ್ಯಯನಕ್ಕೆ ಒಂದು ಮಹತ್ವದ ಸೈದ್ಧಾಂತಿಕ ನೆಲೆಯನ್ನು ರೂಪಿಸಲು ಯತ್ನಿಸಿದ್ದಾರೆ. ಮೌಖಿಕ ಮಹಾಕಾವ್ಯಗಳ ಐತಿಹಾಸಿಕತೆ, ಆಯಾ ಮಹಾಕಾವ್ಯಗಳಿಗಿರುವ ಪರಸ್ಪರ ಸಂಬಂಧ ಮೊದಲಾದ ವಿಷಯಗಳ ಬಗ್ಗೆ ಗಂಭೀರವಾದ ಅಧ್ಯಯನ ನಡೆಸಿದ್ದಾರೆ. ಪ್ರೊ. ಜೀಶಂಪ ಅವರು 'ಮಂಟೇಸ್ವಾಮಿ' ಕಾವ್ಯವನ್ನು ಸಂಪಾದಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಿದ ಮೊದಲಿಗರು. ರಾಗೌ ಮತ್ತು ಪಿ.ಕೆ. ರಾಜಶೇಖರ್ ಇಬ್ಬರೂ ಒಟ್ಟಾಗಿ ಸೇರಿ ಪ್ರಕಟಿಸಿರುವ ಜನಪದ ರಾಮಾಯಣ, ಜನಪದ ಮಹಾಭಾರತ, ಜನಪದ ಬಸವಪುರಾಣ ಮಹಾಕಾವ್ಯಗಳ ಜನಪದ ಪಾಠಕ್ಕೆ ಸಂಬಂಧಿಸಿದ ಆರಂಭಿಕ ಪ್ರಯತ್ನಗಳಾಗಿವೆ. ಈ ಬಗ್ಗೆ ಇನ್ನೂ ಹೆಚ್ಚಿನ ಕೆಲಸ ನಡೆಯಬೇಕಾಗಿದೆ. ಪ್ರೊ. ವಿವೇಕ ರೈ ಅವರು ಮಂಗಳೂರು ವಿಶ್ವವಿದ್ಯಾಲಯದಲ್ಲಿ ೧೯೯೦ರಲ್ಲಿ ನಡೆಸಿದ Indian Oral Epics ಎಂಬ ವಿಚಾರ ಸಂಕಿರಣ ಭಾರತದ ಮಹಾಕಾವ್ಯಗಳ ಬಗ್ಗೆ ನಡೆದಿರುವ ಗಂಭೀರವಾದ ಹಾಗೂ ಮಹತ್ವದ ಸಂಕಿರಣವಾಗಿದೆ. ಲೌರಿ ಹೋಂಕೋ, ಪೀಟರ್ ಕ್ಲಾಸ್, ಬ್ಲಾಕ್‌ಬರ್ನ್ ಅವರು ಕರ್ನಾಟಕದ ಜನಪದ ಕಾವ್ಯಗಳ ಅಧ್ಯಯನದಲ್ಲಿ ಪ್ರಮುಖ ಪಾತ್ರ ವಹಿಸಿದ ವಿದೇಶಿ ವಿದ್ವಾಂಸರು. ಡಾ. ತೀ.ನಂ. ಶಂಕರನಾರಾಯಣ ಅವರು The Epic of Junjappa: Text and Performance ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದಿಂದ ಈ ಮಹಾಕಾವ್ಯಗಳ ದಾಖಲಾತಿ ಕಾರ್ಯ ಪ್ರಮುಖ ಬೆಳವಣಿಗೆಯಾಗಿದೆ. ಪ್ರೊ. ಹಿ.ಚಿ.ಬೋರಲಿಂಗಯ್ಯ ನವರು ಮಂಟೇಸ್ವಾಮಿ ಮಹಾಕಾವ್ಯ, ಪ್ರೊ. ಮಂಜುನಾಥ ಬೇವಿನಕಟ್ಟಿಯವರು ಮೈಲಾರಲಿಂಗನ ಕಾವ್ಯವನ್ನು, ಕೇಶವನ್ ಪ್ರಸಾದ್ ಅವರು ಮಾದೇಶ್ವರ ಕಾವ್ಯವನ್ನು, ಚಲುವರಾಜು ಅವರು ಜುಂಜಪ್ಪನ ಕಾವ್ಯವನ್ನು, ಪ್ರೊ. ಮೈತ್ರಿಯವರು ಕಾಡುಗೊಲ್ಲ ಮತ್ತು ಕುಮಾರರಾಮನ ಕಾವ್ಯವನ್ನು, ಎ.ವಿ.ನಾವಡ ಅವರ ಸಿರಿ ಕಾವ್ಯವನ್ನು, ಗಂಗಾಧರ ದೈವಜ್ಞ ಅವರು ಮಾಳಿಂಗರಾಯನ ಕಾವ್ಯವನ್ನು, ಎ.ಎಸ್.ಪ್ರಭಾಕರ ಅವರು ಮ್ಯಾಸಬೇಡರ ಕಥನಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಭಾರತೀಯ ಭಾಷೆಗಳಲ್ಲಿಯೇ ಇಷ್ಟು ಪ್ರಮಾಣದಲ್ಲಿ ಜನಪದ ಮತ್ತು ಬುಡಕಟ್ಟು ಕಾವ್ಯಗಳನ್ನು ಸಂಪಾದಿಸಿ ಪ್ರಕಟಿಸಿದ ಉದಾಹರಣೆಗಳಿಲ್ಲ. ಈ ಮಹತ್ಕಾರ್ಯವು ಕನ್ನಡದ ಅಲಕ್ಷಿತ ಅಧ್ಯಯನಗಳ ದಿಕ್ಕನ್ನೇ ಬದಲಿಸಿತು ಎಂದರೆ ತಪ್ಪಾಗಲಿಕ್ಕಿಲ್ಲ. ಇಲ್ಲಿಂದ ಕನ್ನಡದಲ್ಲಿ ಬುಡಕಟ್ಟು ಮತ್ತು ಜನಪದ ಮಹಾಕಾವ್ಯಗಳ ಸಂಪಾದನೆ ಮತ್ತು ಅಧ್ಯಯನದ ದಿಕ್ಕೂ ಸಹ ಬದಲಾಗುತ್ತಾ ಬಂದಿದೆ.

ಮಹಾಕಾವ್ಯ ಎಂಬ ಪದವು ಅಪರಿಚಿತವಾದದ್ದು ಮತ್ತು ಭಾರತೀಯ ನೆಲಕ್ಕೆ ಹೊರಗಿನದ್ದು. ಈ ಶಿಷ್ಟ ಮಹಾಕಾವ್ಯಗಳ ಅಚ್ಚಿನಲ್ಲಿ ನಾವು ಬುಡಕಟ್ಟು ಮಹಾಕಾವ್ಯಗಳನ್ನು ಅಧ್ಯಯನ ನಡೆಸುವುದೇ ಸರಿಯಾದ ಕ್ರಮವಲ್ಲ. ಸಿದ್ಧಮಾದರಿಯ ಆಕರದೊಳಗೆ ನಾವು ಈ ಬುಡಕಟ್ಟುಗಳ ಸಹಜ ಬದುಕನ್ನು ಹಿಡಿದಿಡಲು ಹೋಗುವುದೇ ಒಂದು ವ್ಯಂಗ್ಯ ಮತ್ತು ಅವು ಆರಂಭದಲ್ಲಿಯೇ ಎಡವಿದಂತಾಗುತ್ತದೆ.

ಬುಡಕಟ್ಟು ಅಂತಃಸತ್ವವನ್ನು ದುರ್ಬೀನು ಹಾಕಿ ಹುಡುಕುವುದಕ್ಕಿಂತ ಅವರಲ್ಲಿ ಒಂದಾದಾಗ ಮಾತ್ರ ಅವರ ಸೂಕ್ಷ್ಮ ಪ್ರಪಂಚದ ಅರಿವು ನಮಗಾಗುತ್ತದೆ. ಇದನ್ನೇ ವಿದ್ವಾಂಸರು ಒಳಗಿನವರಾಗುವುದು ಮತ್ತು ಹೊರಗಿನವರಾಗುವುದು ಎಂದಿದ್ದಾರೆ. ಮಹಾಕಾವ್ಯಗಳು ಮನುಷ್ಯ ಸಮಾಜದ ಸಂಘರ್ಷದಿಂದ ಜನಿಸುತ್ತದೆ. ಮಹಾಕಾವ್ಯಗಳ ಹುಟ್ಟನ್ನು ಕುರಿತು ಸ್ಟುವರ್ಟ್ ಬ್ಲಾಕ್‌ಬರ್ನ್ ಅವರು 'ಒಂದು ವ್ಯವಸ್ಥೆಯಿಂದ ಇನ್ನೊಂದು ವ್ಯವಸ್ಥೆಗೆ ಆ ಸಮುದಾಯ ವರ್ಗಾವಣೆಗೊಳ್ಳುವ ಸಂಕ್ರಮಣಾವಸ್ಥೆಯಲ್ಲಿ ಈ ಮಹಾಕಾವ್ಯಗಳು ಹುಟ್ಟಿಕೊಂಡಿವೆ' ಎಂದು ಅಭಿಪ್ರಾಯ ಹೇಳುತ್ತಾರೆ.

ಟಿ.ಎಸ್.ಎಲಿಯೆಟ್ ಅವರು 'ಯಾವ ಒಂದು ಅಭಿವ್ಯಕ್ತಿ ಪ್ರಕಾರ, ಸಣ್ಣದೋ ಅಥವಾ ದೊಡ್ಡದೋ ಆದ ಸಹೃದಯ ಸಮೂಹವೊಂದನ್ನು ಉದ್ದೇಶಿಸಿ ಮಾತನಾಡಿದಂತೆ ಇರುತ್ತದೋ ಅದು ಮಹಾಕಾವ್ಯ' ಎನ್ನುತ್ತಾರೆ. 'ಯಾವುದೇ ಜನಪದ ಮಹಾಕಾವ್ಯ ಜಗತ್ತಿನ ಉದಯದ, ಹಾಗೂ ಸಚರಾಚರ ಜೀವರಾಶಿಗಳ ಸೃಷ್ಟಿಯ ಕಥನಗಳ ಮೂಲಕ ಆರಂಭವಾಗುತ್ತದೆ. ಸಾಂಸ್ಕೃತಿಕ ನಾಯಕನ ಹುಟ್ಟಿನ ಬಗ್ಗೆಯೂ ಕಥೆಗಳಿರುತ್ತವೆ. ಜನಪದ ಮಹಾಕಾವ್ಯ ಎಂದರೆ ಅದೊಂದು ಸಮಷ್ಟಿ ಪ್ರಜ್ಞೆಯ ಸಂಕೇತವಾಗಿ ಹಾಗೂ ಅವರ ಲೋಕದೃಷ್ಟಿಯ ಸಂಕೇತವಾಗಿ ನಿರ್ಮಾಣಗೊಳ್ಳುತ್ತದೆ. ಜನಪದ ಮಹಾಕಾವ್ಯದ ಬಹುತೇಕ ಕಥನ ನಾಯಕನ ಪಯಣವನ್ನು ಆಧರಿಸಿರುತ್ತದೆ. ಅದನ್ನು ಹಾಡುವ ಗಾಯಕರು ಪಂಥ ಪ್ರಸಾರಕರಾಗಿದ್ದು ಅವರು ಅಲೆಮಾರಿಗಳಾಗಿರುತ್ತಾರೆ. ಹೀಗೆ ಕಥನವನ್ನು ಪ್ರಸಾರ ಮಾಡುವ ಗಾಯಕರಿಗೆ ಆಯಾ ಸಾಂಸ್ಕೃತಿಕ ನಾಯಕನ ಹೆಸರಲ್ಲಿ ಅಥವಾ ದೈವದ ಹೆಸರಲ್ಲಿ ದೀಕ್ಷೆಯನ್ನು ನೀಡಲಾಗಿರುತ್ತದೆ. ಹೀಗೆ ದೀಕ್ಷೆ ಪಡೆದ 'ಗುಡ್ಡರು' ಆ ಪರಂಪರೆಯ ಪೋಷಕರು ಮತ್ತು ಕಾವ್ಯವನ್ನು ಬೆಳೆಸುವ ನಿರ್ಮಾತೃಗಳಾಗಿರುತ್ತಾರೆ. ಆದ್ದರಿಂದ ಜನಪದ ಕಾವ್ಯ ಪರಂಪರೆ ಎಂಬುದು ಗುರು ಶಿಷ್ಯ ಪರಂಪರೆಯೂ ಹೌದು. ಜನಪದ ಮಹಾಕಾವ್ಯದಲ್ಲಿ ಸಮುದಾಯಗಳ ಚರಿತ್ರೆ, ಐತಿಹ್ಯ ಮತ್ತು ಪುರಾಣಗಳು ಒಂದಕ್ಕೊಂದು ಸಂಬಂಧವಿಟ್ಟುಕೊಂಡು ಹೆಣೆಯಲ್ಪಟ್ಟಿರುತ್ತವೆ. ಆದಿಯಲ್ಲಿ ಅದೊಂದು ವಾಸ್ತವ ಘಟನೆ ಇರಬಹುದು. ನಂತರ ಅದೊಂದು ಕಲ್ಪಿತ ಚರಿತ್ರೆ, ತದನಂತರ ಅದಕ್ಕೆ ಐತಿಹ್ಯದ ರೂಪ ಉಂಟಾಗುತ್ತದೆ. ಐತಿಹ್ಯಕ್ಕೆ ಕಲ್ಪನೆಯ ಆವರಣ, ತದನಂತರ ಆ ಆವರಣಕ್ಕೆ ಪುರಾಣದ ಲೇಪನವಾಗುತ್ತದೆ'[19] ಎನ್ನುತ್ತಾರೆ. ಬುಡಕಟ್ಟು ಮಹಾಕಾವ್ಯಗಳ ಕಥಾನಾಯಕರನ್ನು ನಾವು ಸಾಂಸ್ಕೃತಿಕ ನಾಯಕರು, ಸಾಂಸ್ಕೃತಿಕ ವೀರರು ಎಂದೆಲ್ಲ ಕರೆಯಲಾಗುತ್ತದೆ. ಆದರೆ ನಿಜ ಅರ್ಥದಲ್ಲಿ ಈ ಕಥಾನಾಯಕರು ಅನುಭಾವಿಗಳಂತೆ ಒಂದು ತತ್ವದರ್ಶನ ಮಾಡಿಸಲು ಕಾವ್ಯದುದ್ದಕ್ಕೂ ಹೆಣಗುತ್ತಾರೆ. ಬುಡಕಟ್ಟು ಇಲ್ಲವೇ ಜನಪದ ಮಹಾಕಾವ್ಯಗಳು ಆಯಾ ಸಮುದಾಯಗಳು ತಲಾಂತರಗಳಿಂದ ಕಟ್ಟಿಕೊಂಡು ಬಂದ ತತ್ವದರ್ಶನಗಳೇ ಆಗಿವೆ.

'ಜನಪದ ಮಹಾಕಾವ್ಯವೆಂಬುದು ಕಥೆ, ಭಾವಗೀತಾತ್ಮಾಕ ಶೈಲಿ ಎರಡನ್ನೂ ರೂಢಿಸಿಕೊಂಡ ದೃಶ್ಯಕಾವ್ಯ'[20] ಬುಡಕಟ್ಟು ಮೌಖಿಕ ಸಾಹಿತ್ಯದ ಮುಖ್ಯ ಲಕ್ಷಣ ಎಂದರೆ ಅಂದರೆ ಸಂಕ್ಷಿಪ್ತತೆ. ಒಟ್ಟಾರೆ ಇಡೀ ಕಾವ್ಯವು ತಲೆಮಾರುಗಳ ವಿಷಯವನ್ನು ಅತ್ಯಂತ ಅರ್ಥಗರ್ಭಿತವಾಗಿ, ಸರಳವೂ, ಸುಂದರವೂ ಆಗಿ ನಮಗೆ ಕಟ್ಟಿಕೊಡುತ್ತದೆ. ಶಿಷ್ಟ ಮಹಾಕಾವ್ಯಗಳು ಅಖಿಲ ಭಾರತ ಮಟ್ಟದ ವೈದಿಕ ವೀರರ ಕಥನಗಳಾಗಿವೆ. 'ಇದಕ್ಕೆ ಪ್ರತಿಯಾಗಿ ಸ್ಥಳೀಯ ಸಾಂಸ್ಕೃತಿಕ ವೀರರ ಕಥನಗಳನ್ನು, ಪವಾಡ ಪುರುಷರು, ಬೈರಾಗಿಗಳು, ಸಾಧಕರ ಮಹಿಮೆಗಳನ್ನು, ಅವರ ಜೀವನ ಪ್ರೀತಿಯ ವಿಶೇಷಗಳೆನಿಸಿದ ಮದ್ಯ, ಮಾಂಸ, ಮೈಥುನ, ಭಂಗಿಸೇವನೆಯಂಥ ನಿರಾಕರಿಸಲಾಗದ ವಿಚಾರಗಳನ್ನು, ಸ್ತ್ರೀಪ್ರಧಾನವಾದ ದ್ರಾವಿಡ ಮೂಲ ಮೌಲ್ಯಗಳನ್ನು ಪ್ರತಿನಿಧಿಸುವ ದೀರ್ಘ ಕಥಾನಕಗಳು ನಮ್ಮಲ್ಲಿವೆ. ಈ ಕಥನಗಳೇ ನಿಜವಾದ ಅರ್ಥದಲ್ಲಿ ನಮ್ಮ ಸಂಸ್ಕೃತಿಯ ಇತಿಹಾಸವನ್ನು ನಿರೂಪಿಸಬಲ್ಲಂಥ ಶಕ್ತಿ ಪಡೆದವುಗಳು. ರಾಜಮಹಾರಾಜರ ಆಳ್ವಿಕೆಯ ವಿಧಾನಗಳೇ ನಮ್ಮ ಭವ್ಯ ಇತಿಹಾಸ ಎಂದು ಸಾರುತ್ತ ಬಂದಿರುವ ನಮ್ಮ ಬಹುಪಾಲು ಇತಿಹಾಸಕಾರರ ಕಣ್ಣು ತೆರೆಸಿ ಜನಸಾಮಾನ್ಯರ ಇತಿಹಾಸಕ್ಕಾಗಿ ಒತ್ತಾಯಿಸಬಲ್ಲ, ಆ ಬಗೆಗಿನ ಅರಿವು ಮೂಡಿಸಬಲ್ಲ ಶಕ್ತಿ ಈ ಕಥನಗಳಿಗಿವೆ. ಪರಂಪರಾಗತವಾದ ಶಿಷ್ಟ ಮನಸ್ಸಿನ ನಂಬಿಕೆಗಳಿಗೆ ತದ್ವಿರುದ್ಧವಾದ ಈ ಕಥನಗಳು ತಮ್ಮದೇ ಮೌಲ್ಯಗಳನ್ನು, ಜೀವನ ದೃಷ್ಟಿಯನ್ನು ಆ ಮೂಲಕ ಒಂದು ನಿರ್ದಿಷ್ಟ ನೆಲದ ಲೋಕದೃಷ್ಟಿಯನ್ನು ಹಾಗೂ ಅವರ ವಿವೇಕವನ್ನು ಹೇಳುತ್ತವೆ.'[21]

ಜೇನುಕುರುಬರ ಮಹಾಕಾವ್ಯವನ್ನು ಕಿಕ್ಕೇರಿ ನಾರಾಯಣ ಅವರು ಸಂಗ್ರಹಿಸಿದ್ದಾರೆ. ಇದರ ಹೆಸರು 'ತಂಗಿ'. ಈ ಕಾವ್ಯದಲ್ಲಿಯ ಕೆಲವು ಸಾಲುಗಳು ಹೀಗಿವೆ.

ಇವರು ಏಳಾಳೂ ಅಣ್ಣದೀರೂ ಸುವ್ವನಾರಿ
ನಿನ್ನ ವದ್ದಾರು ದಮ್ಮಯ್ಯ ಸುವ್ವನಾರಿ ॥
ನಿನ್ನ ಓಗೂವೆ ನಾಡೆಂದು ಸುವ್ವನಾರಿ
ಅವ್ರು ಹರೀವೆ ಅಣ್ಣಾವೋ ಸುವ್ವನಾರಿ॥

ಈ ರೀತಿ ಸಾಗುವ ಇದೊಂದು ದುರಂತ ಕಾವ್ಯ. ಈ ಕಾವ್ಯವನ್ನು ಕುರಿತು ಕಿಕ್ಕೇರಿ ನಾರಾಯಣ ಅವರು ಹೀಗೆ ಹೇಳುತ್ತಾರೆ. 'ಇದು ಒಂದು ರೀತಿಯಲ್ಲಿ ಅಪೂರ್ಣವಾದ ಕಥೆ. ಏಳು ಜನ ಸಹೊದರರಿಗೆ ಇಬ್ಬರು ಸಹೋದರಿಯರು. ಆದರೆ ಕಿರಿಯ ಸಹೋದರಿ ಮಾತ್ರ ಈ ಎಲ್ಲಾ ಸಹೋದರರಿಗೆ ಪ್ರೀತಿಯವಳು ಮತ್ತು ಅವಳೇ ಈ ಕಥೆಯ ದುರಂತ ನಾಯಕಿ. ಮನೆತನದ ದೇವರಿಗೆ ಹರಕೆ ಹೊತ್ತ ಸಹೋದರರು ಒಂದು ದಿನ ಇದ್ದಕ್ಕಿದ್ದಂತೆ ದೇವರಿಗೆ ಹೋಗಲು ನಿಶ್ಚಯಿಸುತ್ತಾರೆ.

ಆಕಸ್ಮಿಕ ಎನ್ನುವಂತೆ ಅದೇ ದಿನ ಅವರ ಪ್ರೀತಿಯ ಕಿರಿಯ ಸಹೋದರಿ ಋತುಮತಿಯಾಗುತ್ತಾಳೆ. ಹೀಗಾಗಿ ಅನಿವಾರ್ಯವಾಗಿ ಆಕೆಯನ್ನು ಬಿಟ್ಟು ಹೋಗಬೇಕಾಗುತ್ತದೆ. ಹೆಂಡತಿಯ ತಂಗಿಯ ಮೇಲೆ ಆಸೆಯ ಕಣ್ಣು ಇಟ್ಟುಕೊಂಡು ಕುಳಿತ ಭಾವ ಈ ಏಳೂ ಜನ ಸಹೋದರರ ಕಣ್ಣು ತಪ್ಪಿಸಿ ತಿರುಗಿ ಬಂದು ಕಿರಿಯ ಸಹೋದರಿಯನ್ನು ಕರೆದೊಯ್ಯುತ್ತಾನೆ. ಈ ಮಧ್ಯದಲ್ಲಿ ಈತನಿಂದ ಆ ಸಹೋದರಿ ಗರ್ಭಿಣಿಯಾಗಿ ಒಂದು ಮಗುವಿಗೆ ಜನ್ಮವನ್ನು ಕೊಡುತ್ತಾಳೆ. ದೇವರಿಗೆ ಹೋದ ಸಹೋದರರಿಗೆ ಯಾವುದೋ ಮೂಲದಿಂದ ಈ ವಿಷಯ ಗೊತ್ತಾಗಿ ತಂಗಿ ಮತ್ತು ಭಾವನನ್ನು ಕೊಲೆ ಮಾಡುತ್ತಾರೆ. ಇವರಿಬ್ಬರಿಗೆ ಹುಟ್ಟಿದ ಅನಾಥ ಮಗು ಕೊನೆಗೆ ಮಾವಂದಿರನ್ನೆಲ್ಲಾ ಕೊಂದು ಪಟ್ಟಣ ಸೇರುತ್ತದೆ'.[22]

ನಮ್ಮ ಬುಡಕಟ್ಟು ಮೌಖಿಕ ಸಾಹಿತ್ಯದಲ್ಲಿ ವಿಶೇಷವಾದ ಹಾಗೆಯೇ ವಿಭಿನ್ನವಾದ ಕಥೆ ಇದಾಗಿದೆ. ಬುಡಕಟ್ಟುಗಳಲ್ಲಿ ಹೆಣ್ಣಿಗೆ ಆಗಲಿ, ಗಂಡಿಗೆ ಆಗಲಿ ಸಂಗಾತಿಯ ಆಯ್ಕೆಯಲ್ಲಿ ಸ್ವಾತಂತ್ರ್ಯವಿದೆ. ಆದರೆ ಅದಕ್ಕೆ ವಿಭಿನ್ನವಾಗಿ ಈ ಮಹಾಕಾವ್ಯ ರಚನೆಯಾಗಿದೆ. ಬುಡಕಟ್ಟು ಸಾಹಿತ್ಯದಲ್ಲಿ ಸೇಡು ಕೇಡು ಎರಡೂ ಇಲ್ಲದಿರುವಾಗ ಜೇನುಕುರುಬರ ಈ ಕಥೆಯ ತಿರುಳು ವಿಶೇಷವಾಗಿ ನಮಗೆ ಕಂಡುಬರುತ್ತದೆ. ಮುಖ್ಯವಾಗಿ ಸೋಲಿಗರ ಬಿಳಿಗಿರಿರಂಗನ ಕಾವ್ಯ, ಮಾದೇಶ್ವರ ಕಾವ್ಯ, ಎರವರ ಬಾಯನ, ಕುಡಿಯರ, ಬೆಟ್ಟಕುರುಬರ ಮತ್ತು ಜೇನುಕುರುಬರ ಕಥನಕಾವ್ಯಗಳು ಅತ್ಯಂತ ಮಹತ್ವದ ವಾಗ್ರೂಪಗಳಾಗಿವೆ. ಕರ್ನಾಟಕದ ಆದಿಮ ಸಮಾಜದ ಕುರುಹುಗಳು ಈ ಕಥನಗಳಲ್ಲಿವೆ.

ಬುಡಕಟ್ಟು ಮೌಖಿಕ ಸಾಹಿತ್ಯವು ಪ್ರಧಾನ ಸಂಸ್ಕೃತಿಗಿಂತ ಭಿನ್ನವಾದ ಈ ನೆಲದ ಅಧೀನ ಸಮುದಾಯಗಳ ಬದುಕಿನ ಸತ್ವವನ್ನು ತನ್ನಲ್ಲಿ ಅಡಕಗೊಳಿಸಿದೆ. ಈ ಮೌಖಿಕ ಸಾಹಿತ್ಯವು ಸಮಾಜದ ಅವಜ್ಞೆಗೆ ಗುರಿಯಾಗಿದ್ದು ದಾಖಲೆಯಾಗದೆ ಕಳೆದುಹೋಗುತ್ತಿದೆ. ಕಥೆ, ಹಾಡು, ಗಾದೆ, ಒಗಟು, ಸೃಷ್ಟಿ ಪುರಾಣ, ಮಹಾಕಾವ್ಯ, ಐತಿಹ್ಯಗಳನ್ನು ಇಂದು ಬಹಳ ಜರೂರಾಗಿ ಸಂಗ್ರಹಿಸಬೇಕಾಗಿದೆ. ಬುಡಕಟ್ಟುಗಳ ಮೌಖಿಕ ಕಾವ್ಯ ಸಂಗ್ರಹಕ್ಕಾಗಿ ಪ್ರತ್ಯೇಕ ಸಂಸ್ಥೆಗಳು ರಚನೆಯಾಗಿ ಅವುಗಳ ಮೂಲಕ ಈ ಸಂಗ್ರಹ ಕಾರ್ಯವು ಶೀಘ್ರವಾಗಿ ನಡೆಯಬೇಕಿದೆ. ಅಗಾಧವಾದ ಮೌಖಿಕ ಸಾಹಿತ್ಯವನ್ನು ತಮ್ಮೊಳಗೆ ಅಂತರ್ಗತಗೊಳಿಸಿಕೊಂಡಿರುವ ಗಾಯಕರನ್ನು ಗುರುತಿಸಿ ಅವರಿಂದ ಸಂಗ್ರಹಿಸಬೇಕಿದೆ. ಒಬ್ಬ ವ್ಯಕ್ತಿಯೊಂದಿಗೆ ಈ ಅಪಾರ ಜ್ಞಾನಪರಂಪರೆಯು ಕಣ್ಮರೆಯಾಗುವುದರ ಮೂಲಕ ಒಂದು ವಿಶಿಷ್ಟ ಸಂಸ್ಕೃತಿಯು ಕೊನೆಯಾಗುವ ಸಂಭವವಿರುವುದರಿಂದ ಈ ಸಂಸ್ಕೃತಿಯ ರಕ್ಷಣೆ ಅನಿವಾರ್ಯ. ಭಾಷೆಯು ಕಣ್ಮರೆಯಾಗುತ್ತಿದ್ದಂತೆ ಆ ಭಾಷೆಯನ್ನಾಡುವ ಸಮುದಾಯದ ಒಂದು ಸಂಸ್ಕೃತಿಯು ನಾಶವಾಗುತ್ತದೆ. ಆದ್ದರಿಂದ ಸರಕಾರವು ಈ ಭಾಷೆಯನ್ನು ಉಳಿಸುವುದಕ್ಕಾಗಿ ಕಾರ್ಯಕ್ರಮಗಳನ್ನು ರೂಪಿಸಬೇಕು.

ಸಮುದಾಯದ ವಿಶಿಷ್ಟ ಆಚರಣೆಗಳಿಗೆ ಸಂಬಂಧಿಸಿದ ಸಾಹಿತ್ಯವನ್ನು ರಕ್ಷಿಸುವುದರ ಮೂಲಕ ಆಚರಣೆಗಳ ಮೌಲ್ಯವು ಮುಂದಿನ ಸಮುದಾಯಕ್ಕೆ ಕಾಪಿಟ್ಟಂತಾಗುತ್ತದೆ.

ಸಮಾಜವೆಂಬುದು ಭಿನ್ನ ಭಿನ್ನ ಬದುಕುಗಳ ಆಗರ, ಬಹುಸಂಸ್ಕೃತಿಗಳ ನೆಲೆವೀಡು. ಇಲ್ಲಿ ಕಣ್ಣಿಗೆ ಗೋಚರಿಸುವುದಷ್ಟೇ ಸತ್ಯವಲ್ಲ. ಅದರಿಂದಾಚೆಗೂ ನಮ್ಮ ದೃಷ್ಟಿ ನಿಲುಕಬೇಕಾಗುತ್ತದೆ. ಆದ್ದರಿಂದ ಸಮಾಜದ ಮೇಲ್ತಸರದಲ್ಲಿ ಬದುಕನ್ನು ನಡೆಸಿದಂತಹ, ಅನುಕೂಲಕರವಾದ ಜೀವನದ ಪರಿಧಿಯೊಳಗೆ ಬದುಕು ನಡೆಸಿರುವ ವಿದ್ವಾಂಸರ ಬರವಣಿಗೆಯೇ ಇಲ್ಲಿ ಶ್ರೇಷ್ಠ ಸಾಹಿತ್ಯವಲ್ಲ. ನೋಟಕ್ಕೂ ಮೀರಿದ, ದೃಷ್ಟಿಗೂ ನಿಲುಕದ ಊಹೆಗೂ ಎಟುಕದ, ಸಮಾಜದ ಅವಜ್ಞೆಗೆ ಗುರಿಯಾದ ಅದೆಷ್ಟೋ ಬದುಕುಗಳು ಇಲ್ಲಿವೆ. ಅಷ್ಟೇ ಅಲ್ಲದೆ ಇದಾವುದರ ಜಂಜಾಟಗಳ ಪರಿವೆಯಿಲ್ಲದೆ ನಿಸರ್ಗದೊಂದಿಗೆ ತಾನಾಗಿ ಬೆರೆತು ಬದುಕುತ್ತಿರುವ ಸಮುದಾಯಗಳೂ ಇಲ್ಲಿವೆ. ಇಂತಹ ಸುದಾಯದ ಅಭಿವ್ಯಕ್ತಿಯೂ ಅಜ್ಞಾತವಾಗಿ ಉಳಿದಿದೆ.ಬರಹ ಮತ್ತು ಮಾತಿಗು ಇರುವ ಭಿನ್ನತೆಗಳನ್ನು ಇಲ್ಲಿ ಗುರುತಿಸಲಾಗಿದೆ.

ಬುಡಕಟ್ಟುಗಳ ಮೌಖಿಕ ಸಾಹಿತ್ಯವನ್ನು ಕತೆಗಳು, ಹಾಡುಗಳು, ಗಾದೆಗಳು, ಒಗಟುಗಳು, ಸೃಷ್ಟಿ ಪುರಾಣಗಳು, ಮಹಾಕಾವ್ಯಗಳು ಎಂದು ವಿಂಗಡಣೆಯನ್ನು ಮಾಡಲಾಗಿದೆ.

**ಕತೆಗಳು:** ಜರ್ಮನಿಯಲ್ಲಿ ಗ್ರಿಮ್ಸ್ ಸಹೋದರರು ಎಂದೇ ಹೆಸರಾದ ಜಾಕಬ್‌ಗ್ರಿಮ್ ಮತ್ತು ವಿಲ್ ಹೆಲ್ಮ್ ಗ್ರಿಮ್‌ರವರು 1817 ರಲ್ಲಿ ಜರ್ಮನಿ ದೇಶದ ಕಥಾ ಸಂಕಲವನ್ನು ಮೊದಲ ಬಾರಿಗೆ ಹೊರತಂದರು. ಇದು ಪ್ರಪಂಚದಾದ್ಯಂತ ಕತೆಗಳನ್ನು ನೋಡುವ ಒಂದು ವಿಶಿಷ್ಟ ಬಗೆಗೆ ನಾಂದಿಯಾಯಿತು. 1831 ರಲ್ಲಿ ಪ್ರಾರಂಭವಾದ ಈಟಿಟ್ಟು ಟುಣಜಡಿಚಿಡಿಥಿ, ಠಿಬಿ– ಜಣಥಿ ಯು 'ಕಲೆವಾಲ' ದಂತಹ ಜಗತ್ತಿನ ಮೊಟ್ಟ ಮೊದಲ ರಾಷ್ಟ್ರೀಯ ಮಹಾಕಾವ್ಯವನ್ನು ಸಂಗ್ರಹಿಸಿತು. ಕಲೆವಾಲವನ್ನು ಮೌಖಿಕದ ಮೂಲಕ ಸಂಗ್ರಹಿಸಿ ಪ್ರಕಟಿಸಿದರು.

ಬುಡಕಟ್ಟುಗಳ ಮೌಖಿಕ ಸಾಹಿತ್ಯದ ಪ್ರಕಾರಗಳಲ್ಲಿ ಹೆಚ್ಚಿನ ಪಾಲು ಹಾಡುಗಳದ್ದು, ಹಾಡುಗಳನ್ನು ಕೂಡ ನಾವು ಸಾರ್ವತ್ರಿಕವಾಗಿ ಪರಿಗಣಿಸುವಂತಿಲ್ಲ. ಹಾಡುವ ಸಂದರ್ಭಕ್ಕೆ ಅನುಗುಣವಾಗಿ ಈ ಹಾಡುಗಳೂ ಕೂಡ ಭಿನ್ನವಾಗಿರುತ್ತವೆ.

ಶಿಶು ಗೀತೆಗಳು: ಮಕ್ಕಳ ಮನೋರಂಜನೆಗಾಗಿ, ನೀತಿ ಹೇಳಲು, ಅವರ ಜ್ಞಾನಾಭಿವೃದ್ಧಿಗಾಗಿ ಹಾಡುವ ಹಾಡುಗಳು. ಬುಡಕಟ್ಟು ಸಮುದಾಯಗಳು ತಮ್ಮ ಪ್ರಕೃತಿಯ ಕುರಿತಾದ ಪಾರಂಪರಿಕ ಜ್ಞಾನವನ್ನು ಹಾಡುಗಳ ರೂಪದಲ್ಲಿ ಕಟ್ಟಿಕೊಟ್ಟಿರುತ್ತವೆ.

ಸೋಭಾನೆ ಹಾಡುಗಳು: ಮದುವೆ, ಮೈನೆರೆದಾಗ ಮೊದಲಾದ ಶುಭಕಾರ್ಯಗಳಲ್ಲಿ ಹಾಡುವ ಹಾಡುಗಳು ಇದಾಗಿದೆ. ಹೆಚ್ಚಿನದ್ದಾಗಿ ಇವು ಹಾಡಿನ ರೂಪದ ಕತೆಗಳು. ಸಮುದಾಯಕ್ಕೆ

ರೀತಿ, ನೀತಿ, ನಿಯಮಗಳನ್ನು, ನಿಷೇಧಗಳನ್ನು ಹೇಳಲು ಈ ಹಾಡನ್ನು ಕಟ್ಟಿರುತ್ತಾರೆ. ಇದು ಪರೋಕ್ಷವಾಗಿ ಸಮುದಾಯಕ್ಕೆ ಬುದ್ದಿ ಹೇಳುವಂತಿರುತ್ತದೆ.ದ

ದೇವರ ಹಾಡುಗಳು: ಬುಂಡೆ ಕರೆಯುವಾಗ, ಮೊರ ಕರೆಯುವಾಗ, ದೇವರ ಸ್ತುತಿ, ತಿಥಿ ಸಂದರ್ಭದಲ್ಲಿ ಹಾಡುವ ಹಾಡು

ಮನರಂಜನೆಯ ಹಾಡು: ಆಟಗಳು, ನೃತ್ಯಗಳು ಮೊದಲಾದ ಸಂದರ್ಭಗಳಲ್ಲಿ ಹಾಡುವ ಹಾಡು ಗಳು. ಇದರಲ್ಲಿ ಇಡೀ ಸಮುದಾಯವೇ ವಯಸ್ಸಿನ ಅಂತರವಿಲ್ಲದೆ ಪಾಲ್ಗೊಳ್ಳುತ್ತವೆ. ಸಾಮೂಹಿಕ ಪಾಲ್ಗೊಳ್ಳುವಿಕೆಯಿಂದಾಗಿ ಸಮುದಾಯದಲ್ಲಿ ಬಾಂಧವ್ಯಗಳನ್ನು ವೃದ್ಧಿಸುವಲ್ಲಿ ಇವು ಮುಖ್ಯವಾಗುತ್ತವೆ.

ದುಡಿಮೆಯ ಹಾಡುಗಳು: ಬೇಟೆಗೆ, ಜೇನು ಕೀಳಲು ಹೋಗುವಾಗ, ಬಿದಿರು ಕಡಿಯಲು ಹೋಗುವ ಸಂದರ್ಭದ ಹಾಡುಗಳು, ಹಚ್ಚೆ ಹಾಕುವ ಹಾಡುಗಳು ಇತ್ಯಾದಿ,

ಗಾದೆಗಳಿಗೆ ಇಡೀ ಜಗತ್ತೇ ವಸ್ತು. ಇವು ಅನುಭವಜನ್ಯ ಹಾಗು ವಿವೇಕ ಪೂರಿತ. ಇವು ಸ್ಪಷ್ಟ, ನೇರ, ಸರಳ, ಚಿಕ್ಕದಾದರೂ ವಿಶಾಲವಾದ ಅರ್ಥ ವ್ಯಾಪ್ತಿಯನ್ನು ಒಳಗೊಂಡಿರುತ್ತದೆ. ಗಾತ್ರದಲ್ಲಿ ವಾಮನ, ಅರ್ಥದಲ್ಲಿ ತ್ರಿವಿಕ್ರಮನಂತಿರುವುದೇ ಇದರ ಶ್ರೇಷ್ಟತೆ.

ಗೊರೂರು ರಾಮಸ್ವಾಮಿ ಅಯ್ಯಂಗಾರ್ 'ಗಾದೆ ಸಿದ್ಧಿಸಿದ ನುಡಿ, ಜನವಾಣಿ, ದೇವವಾಣಿ. ಎನ್ನುತ್ತಾರೆ ಮತ್ತೂ ಮುದುವರೆಸದು ಸತ್ಯ, ಗಾದೆ, ಮೂರ್ಖ ಈ ಮೂವರನ್ನು ಎದುರಿಸಲಾಗದು ಎಂಬ ಕಟುಸತ್ಯವನ್ನು ಹೇಳಿದ್ದಾರೆ.

ಒಗಟುಗಳು: ಸಾಂಕೇತಿಕ ಭಾಷೆಯನ್ನು ಹೊಂದಿರುವ ಒಗಟುಗಳ ಪ್ರಮುಖ ಲಕ್ಷಣ. ಪದ್ಯಮಯತೆ ಮತ್ತು ರಚನಾತ್ಮಕ ಸಮತೋಲನ. ಇವು ಗೂಢ, ಅಸ್ಪಷ್ಟವಾಗಿದ್ದು ಕೇಳುಗನನ್ನು ಚಿಂತನೆಗೆ ಹಚ್ಚಿ ಅವನ ಬುದ್ಧಿಶಕ್ತಿಯನ್ನು ಪರೀಕ್ಷಿಸುತ್ತವೆ.

ಐತಿಹ್ಯಗಳು: ಲೌಕಿಕ ವಸ್ತುಗಳು, ಘಟನೆಗಳು ಮತ್ತು ಸ್ಥಳಗಳಿಗೆ ಸಂಬಂಧಿಸಿದ ವಾಸ್ತವಿಕ ಇಲ್ಲವೆ ಕಾಲ್ಪನಿಕ ಕತೆಗಳನ್ನು ಐತಿಹ್ಯಗಳು ಎಂದು ಕರೆಯಬಹುದಾಗಿದೆ.

ಪುರಾಣ (ಕನ್ನಡ). Myth (ಇಂಗ್ಲೀಷ್), Mythos (ಗ್ರೀಕ್) ಎಂದು ಪ್ರಪಂಚದ ಬೇರೆ ಬೇರೆ ಭಾಷೆಯಲ್ಲಿ ಬೇರೆ ಬೇರೆ ರೀತಿಯಲ್ಲಿ ಕರೆಯಲಾಗುತ್ತದೆ. ಗ್ರೀಕ್ ಭಾಷೆಯಲ್ಲಿ Mytho ಎಂದರೆ ನೀತಿ ಕತೆ ಎಂಬ ಅರ್ಥವಿದೆ. ಇದು ಇತಿಹಾಸ ಪೂರ್ವಯುಗದ್ದು

ಸೃಷ್ಟಿಪುರಾಣ: ಭೂಮಿಯ ಮೇಲೆ ಯಾವ ಜೀವ ಜಂತುಗಳು ಇಲ್ಲದಿದ್ದ ಕಾಲದಲ್ಲಿ ನಮ್ಮ ಸಮುದಾಯದ ಪೂರ್ವಿಕರು ಮೊದಲು ಸೃಷ್ಟಿಯಾದರು ಅನಂತರ ಅವರಿಂದಲೇ

ಮನುಷ್ಯ ಜಗತ್ತು, ಜೀವ ಸಂಕುಲ ಸೃಷ್ಟಿಯಾಯಿತು ಎಂದು ನಿರೂಪಿಸುವ ಈ ಸೃಷ್ಟಿಪುರಾಣಗಳು ಎಲ್ಲಾ ಸಮುದಾಯಗಳಲ್ಲಿ ಇದೆ.

ಮಹಾಕಾವ್ಯಗಳು: ಮಹಾಕಾವ್ಯ ಎಂಬ ಪದವು ಅಪರಿಚಿತವಾದದ್ದು ಮತ್ತು ಭಾರತೀಯ ನೆಲಕ್ಕೆ ಹೊರಗಿನದ್ದು, ಈ ಶಿಷ್ಟ ಮಹಾಕಾವ್ಯಗಳ ಅಚ್ಚಿನಲ್ಲಿ ನಾವು ಬುಡಕಟ್ಟು ಮಹಾಕಾವ್ಯಗಳನ್ನು ಅಧ್ಯಯನ ನಡೆಸುವದೇ ಸರಿಯಾದ ಕ್ರಮವಲ್ಲ.

ಕಿಕ್ಕೇರಿ ನಾರಾಯಣರವರು ಸಂಗ್ರಹಿಸಿ ಜೇನುಕುರುಬರ ಮಹಾಕಾವ್ಯವನ್ನು ಇಲ್ಲಿ ಹೇಳಲಾಗಿದೆ.

**ಅಡಿ ಟಿಪ್ಪಣಿಗಳು**

1. ಪ್ರಭಾಕರ ಎ.ಎಸ್., ಕರ್ನಾಟಕದ ಡೊಂಬರು: ಒಂದು ಅಲೆಮಾರಿ ಸಮುದಾಯದ ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.116, 2006.
2. ಅಂಬೇಡ್ಕರ್, ಡಾ. ಅಂಬೇಡ್ಕರ್ ಬರೆಹ ಮತ್ತು ಭಾಷಣಗಳು, ಪು.95, 1990.
3. ಪ್ರಭಾಕರ ಎ.ಎಸ್., ಕರ್ನಾಟಕದ ಡೊಂಬರು: ಒಂದು ಅಲೆಮಾರಿ ಸಮುದಾಯದ ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.119, 2006.
4. ಬೋರಲಿಂಗಯ್ಯ ಹಿ.ಚಿ., ದೇಶಿ ಕನ್ನಡ ಪರಂಪರೆ, ಪು.188, 2016.
5. ಮೊಗಳ್ಳಿ ಗಣೇಶ್, ಮೌಖಿಕ ಸಂಕಥನ, ಪು.28–29, 2006.
6. Devy G N., Ed: Painted Words: An Anthology of Tribal Literature, P X, Penguin Books India, 2002.
7. Ibid, P. XI,
8. ಮೊಗಳ್ಳಿ ಗಣೇಶ್, ಅವ್ಯಕ್ತ ಚರಿತ್ರೆ, ಪು.179, 2009.
9. ಅಂಬಳಿಕೆ ಹಿರಿಯಣ್ಣ, ಜನಪದ ಮಹಾಕಾವ್ಯ ಸ್ವರೂಪ, ಸಂ: ಜನಪದ ಸಾಹಿತ್ಯ ಪ್ರಕಾರಗಳು, ಪು.79, 2004.
10. ಮುತ್ತಯ್ಯ ಎಸ್.ಎಂ., ಕನ್ನಡ ಜನಪದ ಮಹಾಕಾವ್ಯ ಮತ್ತು ಪ್ರತಿಸಂಸ್ಕೃತಿ, ಪು.77, 2008.
11. ಕ್ಷೀರಸಾಗರ, ಜೇನು ಆಕಾಶದ ಅರಮನೆಯೋ, ಪು. 112, 2008.
12. ಅದೇ, ಪು.33–34.
13. ಸುನಂದಮ್ಮ, ಮೈಸೂರು ಮತ್ತು ಚಾಮರಾಜನಗರಗಳಲ್ಲಿ ಸೋಲಿಗ ಬುಡಕಟ್ಟು ಜನಾಂಗದ

ಅಭಿವೃದ್ಧಿಗೆ ಕರ್ನಾಟಕ ಸರಕಾರದ ಕಾರ್ಯಕ್ರಮಗಳು(ಒಂದು ವಿಮರ್ಶಾತ್ಮಕ ಅಧ್ಯಯನ), ಪು.87, 2011.

14. ಬೋರಲಿಂಗಯ್ಯ ಹಿ.ಚಿ., ದೇಶಿ ಕನ್ನಡ ಪರಂಪರೆ, ಪು.226, 2016.

15. ಅದೇ, ಪು.227.

16. ರಾಮಚಂದ್ರೇಗೌಡ ಹಿ.ಶಿ., ಜಾನಪದ ಪ್ರಕಾರಗಳು, ಪು.91, 2012.

17. ಚಿದಾನಂದಮೂರ್ತಿ ಎಂ., ಜನಪದ ಕತೆ, ಐತಿಹ್ಯ ಮತ್ತು ಪುರಾಣ, ಪು.108, 1999.

18. ಸುನಂದಮ್ಮ, ಮೈಸೂರು ಮತ್ತು ಚಾಮರಾಜನಗರಗಳಲ್ಲಿ ಸೋಲಿಗ ಬುಡಕಟ್ಟು ಜನಾಂಗದ ಅಭಿವೃದ್ಧಿಗೆ ಕರ್ನಾಟಕ ಸರಕಾರದ ಕಾರ್ಯಕ್ರಮಗಳು(ಒಂದು ವಿಮರ್ಶಾತ್ಮಕ ಅಧ್ಯಯನ) ಪು.83, 2011.

19. ಬೋರಲಿಂಗಯ್ಯ ಹಿ.ಚಿ., ದೇಶಿ ಕನ್ನಡ ಪರಂಪರೆ, ಪು. 238, 2016.

20. ಬೋರಲಿಂಗಯ್ಯ ಹಿ.ಚಿ., ಗಿರಿಜನಕಾವ್ಯ ಹಲವು ತೊರೆಗಳ ತಪ್ತ ಪ್ರವಾಹ, ಪು 295, 2006.

21. ಬೋರಲಿಂಗಯ್ಯ ಹಿ.ಚಿ., ದೇಶಿ ಕನ್ನಡ ಪರಂಪರೆ, ಪು. 235, 2016.

22. ಕಿಕ್ಕೇರಿ ನಾರಾಯಣ, ಜೇನುಕುರುಬ ಬುಡಕಟ್ಟು ಜನಾಂಗದ ಅವ್ಯಕ್ತ ಸಾಂಸ್ಕೃತಿಕ ಪರಂಪರೆ, ಪು.266, 2011.

# ಅಧ್ಯಾಯ: ನಾಲ್ಕು

# ಬುಡಕಟ್ಟುಗಳ ಮೌಖಿಕ ಸಾಹಿತ್ಯದ ಪ್ರಕಾರಗಳು ಮತ್ತು ಸ್ವರೂಪ

**4.1.** ಎರವರ ಮೌಖಿಕ ಸಾಹಿತ್ಯದ ಪ್ರಕಾರಗಳು

**4.2.** ಜೇನುಕುರುಬರ ಮೌಖಿಕ ಸಾಹಿತ್ಯದ ಪ್ರಕಾರಗಳು

**4.3.** ಬೆಟ್ಟಕುರುಬರ ಮೌಖಿಕ ಸಾಹಿತ್ಯದ ಪ್ರಕಾರಗಳು

**4.4.** ಸೋಲಿಗರ ಮೌಖಿಕ ಸಾಹಿತ್ಯದ ಪ್ರಕಾರಗಳು

**4.5.** ಕುಡಿಯರ ಮೌಖಿಕ ಸಾಹಿತ್ಯದ ಪ್ರಕಾರಗಳು

## ಅಧ್ಯಾಯ: ನಾಲ್ಕು

# ಬುಡಕಟ್ಟುಗಳ ಮೌಖಿಕ ಸಾಹಿತ್ಯದ ಪ್ರಕಾರಗಳು ಮತ್ತು ಸ್ವರೂಪ

**ಪೀಠಿಕೆ**

ಬುಡಕಟ್ಟು ಸಮುದಾಯಗಳ ಅಭಿವ್ಯಕ್ತಿಯ ರೂಪಗಳು ಹಲವು. ಚಿತ್ತಾರಗಳು, ನೃತ್ಯ, ಆಚರಣೆ ಮತ್ತು ಮೌಖಿಕವಾಗಿ ಕಾಪಾಡಿಕೊಂಡು ಬಂದಿರುವ ಅಪಾರ ಸಾಹಿತ್ಯ ಈ ಸಮುದಾಯಗಳ ಭಿನ್ನ ಸೃಜನಶೀಲ ಆಯಾಮಗಳಲ್ಲಿ ಪ್ರಧಾನವಾದವು. ಅದರಲ್ಲೂ ಬುಡಕಟ್ಟು ಸಮುದಾಯಗಳ ಮೌಖಿಕ ಸಾಹಿತ್ಯವು ಕನ್ನಡದ ಸಂಸ್ಕೃತಿ ಚರ್ಚೆಯನ್ನು ಹೊಸ ದಿಕ್ಕಿನೆಡೆಗೆ ನಡೆಸಿಕೊಂಡು ಬಂದಿದೆ. ನಮ್ಮ ಸಾಹಿತ್ಯಿಕ ಚರ್ಚೆಗಳಲ್ಲಿ 'ಸಾಹಿತ್ಯವನ್ನು' ಮೌಖಿಕ ಮತ್ತು ಲಿಖಿತ, ಶಿಷ್ಟ ಮತ್ತು ಜಾನಪದ ಎಂಬ ಕ್ಲೀಷೆಯ ವಿಂಗಡಣೆಯ ಕ್ರಮದಲ್ಲಿಯೇ ನೋಡಿ ಕೊಂಡು ಬರಲಾಗಿದೆ. ಈ ಬಗೆಯ ವಿಂಗಡಣಾಕ್ರಮ ವೈಧಾನಿಕವಾಗಿ ಶುಷ್ಕವಾದದ್ದು. ಸಮುದಾಯಗಳ ಅಭಿವ್ಯಕ್ತಿಯನ್ನು 'ಮಾಖಿಕ' ಮತ್ತು 'ಲಿಖಿತ' ಎಂಬ ಸಾಂಪ್ರದಾಯಿಕ ವಿಂಗಡಣಾಕ್ರಮಕ್ಕೆ ಹೊರತಾಗಿ ವಿವಿಧ ಸಾಹಿತ್ಯ ರೂಪಗಳನ್ನು ಏಕೀಭವಿಸಿ ನೋಡುವ ಮತ್ತು ವಿಶ್ಲೇಷಿಸುವ ಅಗತ್ಯವಿದೆ. ಆದಿವಾಸಿಗಳು, ಅಲೆಮಾರಿಗಳು ಮತ್ತು ತುಳಿತಕ್ಕೊಳಗಾಗುತ್ತಲೇ ಬಂದ ಶೋಷಿತ ಸಮುದಾಯಗಳು ಸಾವಿರಾರು ವರ್ಷಗಳಿಂದ ಸ್ಮೃತಿಗಳ ಮೂಲಕ ತಮ್ಮ ಬದುಕಿನ ಆಗುಹೋಗುಗಳನ್ನು ಕಟ್ಟಿಕೊಳ್ಳುತ್ತಾ ಬಂದಿದ್ದಾರೆ. ಜೊತೆಗೆ ಈ ಸ್ಮೃತಿಗಳಲ್ಲಿ ಸಾಂದ್ರಗೊಂಡ ಈ ಸಮುದಾಯಗಳ ದುಮ್ಮಾನಗಳು, ನಲಿವು ನೋವುಗಳಿಗೆ 'ಮಾತೇ' ಮಾಧ್ಯಮ, ಕುಣಿತ, ಚಿತ್ತಾರ, ಆಚರಣೆಗಳು ಆನುಷಂಗಿಕ ಮಾತ್ರ.

'ಮಾತು' ಈ ದುಡಿವ ವರ್ಗದ ಪ್ರಬಲ ಅಭಿವ್ಯಕ್ತಿ ಮಾಧ್ಯಮ. ಬರಹದಲ್ಲಿ ಒಡ ಮೂಡದ ಸಮುದಾಯಗಳ ನೋವು ಮತ್ತು ಅಸಹಾಯಕತೆಗಳು ಮಾತುಗಳಲ್ಲಿ ರೂಪುಗೊಳ್ಳುತ್ತಾ

ಸ್ಮೃತಿ ಪ್ರಪಂಚದಲ್ಲಿ ಸಂಚಯಗೊಳ್ಳುತ್ತಾ ತಲೆಮಾರುಗಳನ್ನು ದಾಟಿ ಬೀಜಗಟ್ಟುತ್ತಾ ಬಂದವು. ಈ ಸ್ಮೃತಿಗಳಲ್ಲಿ ಸಂಘರ್ಷವಿದೆ, ನಿರಾಕರಣೆ ಇದೆ, ಸ್ವೀಕಾರವಿದೆ, ಅನುಸಂಧಾನದ ಜೊತೆ ತೀವ್ರ ಮುಖಾಮುಖಿಯ ತಲ್ಲಣಗಳೂ ಇವೆ. ಒಂದು ಅರ್ಥದಲ್ಲಿ ಅಂಚಿನ ಶೋಷಿತ ಸಮುದಾಯ ಗಳು ತಮ್ಮದೇ ವರ್ತಮಾನದ ಜೊತೆ ಅನುಸಂಧಾನ ಮಾಡುತ್ತಲೇ ಸಂಘರ್ಷಕ್ಕಿಳಿಯುತ್ತ ಬಂದಿವೆ. ನಿತ್ಯದ ದುಮ್ಮಾನಗಳನ್ನು ಅವುಡುಗಚ್ಚಿ ಸಹಿಸುತ್ತಲೇ ಬಂಡೆದ್ದು ಪ್ರತಿಭಟಿಸುತ್ತ ಬಂದಿವೆ. ವರ್ತಮಾನದ ಬದುಕಿಗೆ ಹೀಗೆ ದ್ವಂದ್ವಾತ್ಮಕವಾಗಿ ಮುಖಾಮುಖಿಯಾದ ಅಂಚಿನ ಸಮುದಾಯಗಳು 'ಆಚರಣೆ' ಮತ್ತು 'ಮಾತು'ಗಳೆರಡರಲ್ಲೂ ತಮ್ಮ ಅಂತರಂಗವನ್ನು ಅಭಿವ್ಯಕ್ತಿಸುತ್ತಾ ಬಂದಿವೆ. ಹೀಗೆ 'ಆಚರಣೆ', 'ಮಾತು' ಮತ್ತು 'ಬರಹ'ಗಳ ಮೂಲಕ ಅಭಿವ್ಯಕ್ತಗೊಂಡ ಅಂಚಿನ ಸಮುದಾಯಗಳ ಅಂತರಂಗ ಹಲವು ನುಡಿರೂಪಗಳಲ್ಲಿ ಅನಾವರಣಗೊಂಡಿದೆ. ಈ ಸಮುದಾಯಗಳು ಕಟ್ಟಿಕೊಂಡು ಬಂದ ಗಾದೆ, ಒಗಟು, ಒಡಪು, ಹಾಡು, ಕಥೆ, ಮಹಾಕಾವ್ಯ ಮತ್ತು ಆತ್ಮಕಥೆಗಳಲ್ಲಿ ಅಂಚಿನ ಸಮುದಾಯಗಳ ಅಂತಸ್ಥ ಜಗತ್ತು ಹರಳುಗಟ್ಟುತ್ತಾ ಬಂದಿದೆ.

ಜಗತ್ತಿನ ಆದಿಮ ಸಮಾಜಗಳು ತಮ್ಮ ಸ್ವೋಪಜ್ಞ ಸೃಜನಶೀಲತೆಯ ಮೂಲಕ ಕಟ್ಟಿಕೊಂಡು ಬಂದ ವಾಙ್ಮಯ ಹಲವು ವಿನ್ಯಾಸಗಳಲ್ಲಿ ಸಂಚಯಗೊಂಡಿದೆ. ಹೀಗೆ ಸಂಚಯ ಗೊಂಡ ವಾಙ್ಮಯವು ಕಾಲ ಮತ್ತು ಸಂದರ್ಭಗಳಿಗೆ ಪಕ್ಕಾಗುತ್ತ ತಲೆಮಾರುಗಳ ನಡಿಗೆಯಲ್ಲಿ ಅನೇಕ ಅವಸ್ಥಾಂತರಗಳಿಗೆ ಒಳಗಾಗುತ್ತಾ ಬಂದಿದೆ. 'ಮಾತು', 'ಬರಹ'ಕ್ಕೆ ಬರುವ ಮೊದಲು ಈ ಸಮಾಜಗಳಿಗೆ ದುಡಿಮೆಯ ಜೊತೆಗಿನ ಧ್ಯಾನವೇ ಅವುಗಳ ಸೃಜನಶೀಲ ಸೆಲೆಗೆ ಮೂಲಧಾತು. ಒಂದು ಅರ್ಥದಲ್ಲಿ ಈ ಸಮಾಜಗಳಿಗೆ 'ಮಾತು' ಎಂದರೆ ಲೌಕಿಕದ ಧ್ಯಾನ. ತಮ್ಮ ಸುತ್ತಲ ಬದುಕು ಮತ್ತು ಕಾಡುವ ತೀವ್ರ ಅನುಭವಗಳೇ ಅವುಗಳ ಸೃಜನಶೀಲತೆಯ ಮೂಲದ್ರವ್ಯ. ಈ ಕಾರಣಕ್ಕಾಗಿಯೇ ಆದಿಮ ಮತ್ತು ದುಡಿವ ವರ್ಗಗಳ ಸಮುದಾಯಗಳ ಅಭಿವ್ಯಕ್ತಿಕ್ರಮಗಳು ಲೌಕಿಕ ಬದುಕನ್ನು ಹೀರಿಕೊಂಡೇ ಅನಾವರಣವಾಗುತ್ತವೆ. ಈ ಸಮುದಾಯಗಳ ವಾಙ್ಮಯದ ಅಧ್ಯಯನವೆಂದರೆ ಆದಿಮ ಸಮಾಜದ ನೈಜ 'ಸಾಮಾಜಿಕ ಚರಿತ್ರೆಯ' ಅಧ್ಯಯನವೆಂದೇ ಭಾವಿಸಬೇಕಾಗುತ್ತದೆ. ಮೇಲ್ನೋಟಕ್ಕೆ ಅಸಹಜ ಕಥನಗಳೇನೋ ಎಂಬಂತೆ ಭಾಸವಾಗುವ ಈ ಸಮುದಾಯಗಳ ಸೃಷ್ಟಿಪುರಾಣಗಳು ಮತ್ತು ಕಥನಗಳು ಆಯಾ ಸಮುದಾಯಗಳ ಚಿಂತನಾಕ್ರಮಗಳನ್ನೇ ನಮ್ಮೆದುರು ತೆರೆದಿಡುತ್ತವೆ. ಭೂಮಿ ಹುಟ್ಟಿದ ಕಥೆ, ನೀರು ಸೃಷ್ಟಿಯಾದ ಕಥೆ, ನಿಸರ್ಗ ರೂಪುಗೊಂಡ ವಿಸ್ಮಯ, ಗಂಡು ಹೆಣ್ಣಿನ ಪ್ರೇಮ ಮತ್ತು ಮಾನವ ಸಂತತಿಯ ಸಾತತ್ಯಗಳ ಕುರಿತ ವಿಶಿಷ್ಟ ಕಥನಗಳೇ ಈ ಸೃಷ್ಟಿ ಪುರಾಣಗಳು. ಸೃಷ್ಟಿಪುರಾಣಗಳು ಓದುತ್ತಿದ್ದಂತೆ ರಮ್ಯ ಕಥನಗಳಂತೆ ಕಾಣುತ್ತವೆ. ಅತಿಮಾನವ ಸಂಗತಿಗಳ

ವಾಗ್ರೂಪಗಳಂತೆ ಭಾಸವಾಗುತ್ತವೆ. ಆದರೆ ಅಲ್ಲಿನ ರಮ್ಯತೆಯಲ್ಲಿನ ವಿಷಾದ, ಅತಿಮಾನವ ಸಂಗತಿಗಳಲ್ಲಿನ ಪ್ರತಿರೋಧಗಳು ರೂಪಕಗಳಲ್ಲಿ ವ್ಯಕ್ತವಾಗುತ್ತವೆ. ಸೃಷ್ಟಿಪುರಾಣಗಳ ಅತಿಮಾನವ ಶಕ್ತಿಯ ಹುಡುಕಾಟದಲ್ಲಿದ್ದಂತೆ ಭಾಸವಾದರೂ ಸಹ ಅಲ್ಲಿ ನಿಸರ್ಗದ ಜೊತೆಗಿನ ಅನುಸಂಧಾನ ಮತ್ತು ಅರಿವನ್ನು ಸಂಚಯಿಸುವ ತವಕಗಳು ಎದ್ದುಕಾಣುತ್ತವೆ. ಭೂಮಿಯ ಹುಟ್ಟು, ಸಕಲ ಚರಾಚರ ಜೀವಿಗಳ ಹುಟ್ಟು ನೈಸರ್ಗಿಕ ಸೃಷ್ಟಿಶೀಲತೆಯ ಫಲ ಎಂಬ ಈ ಸಮುದಾಯಗಳ ನಿಲುವೇ ಅಪ್ಪಟ ಭೌತವಾದಿಯದು. ಈ ಭೌತವಾದಿ ನಿಲುವೇ ದುಡಿವ ವರ್ಗಗಳ ತಿಳುವಳಿಕೆಯ ಕ್ರಮಗಳನ್ನು ರೂಪಿಸುತ್ತಾ ಬಂದಿದೆ. ಇಲ್ಲಿ ಅತಿಮಾನುಷ್ಯ ಶಕ್ತಿಯ ಭಾವನಾವಾದಿ ನಂಬಿಕೆಗಳಿಗೆ ಆಸ್ಪದವೇ ಇಲ್ಲ. ಹೀಗಾಗಿ ಸೃಷ್ಟಿಪುರಾಣಗಳು ಈ ಸಮುದಾಯ ಗಳ ವರ್ತಮಾನದ ಬದುಕನ್ನು ರೂಪಕಗಳ ಮಟ್ಟದಲ್ಲಿ ವಿವರಿಸುವುದರ ಜೊತೆಗೆ, ಈ ಸಮುದಾಯಗಳನ್ನು ತೀವ್ರವಾಗಿ ಬಾಧಿಸುವ ಆತ್ಮದ್ವೇಷವನ್ನೂ ಢಾಳಾಗಿ ಎತ್ತಿ ತೋರಿಸುತ್ತವೆ. ಹೀಗಾಗಿ ಅಲೆಮಾರಿಗಳ ಸೃಷ್ಟಿಪುರಾಣಗಳಲ್ಲಿ ಆತ್ಮದ್ವೇಷ ಮತ್ತು ವಿಷಾದದ ಶಾಪಗ್ರಸ್ತ ಪಯಣಗಳು ಅನಿವಾರ್ಯದ ಸಂಗತಿಗಳಾಗಿ ಕಂಡುಬರುತ್ತವೆ. ಇನ್ನು ಆದಿವಾಸಿಗಳ ಮೌಖಿಕ ಕಥನಕಾವ್ಯಗಳು ಭಾರತದ ಸಾಮಾಜಿಕ ತತ್ವದ ಇನ್ನೊಂದು ಆಯಾಮವನ್ನು ನಮ್ಮ ಮುಂದಿಡುತ್ತವೆ. ಮಂಟೇಸ್ವಾಮಿ, ಮಾದೇಶ್ವರ, ಜುಂಜಪ್ಪ, ಗಾದ್ರಿಪಾಲನಾಯಕ, ಜಗಳೂರಿನ ಪಾಪನಾಯಕ, ಸಿರಿ ಮತ್ತು ಬಿಳಿಗಿರಿರಂಗನ ಕಾವ್ಯಗಳು ಆದಿಮ ಸಮಾಜಗಳ ಅನುಭಾವವನ್ನು ವಿಭಿನ್ನವಾಗಿ ಕಟ್ಟಿಕೊಡುತ್ತವೆ. ಆದಿಮ ಸಮಾಜಗಳ ಅನುಭಾವ, ಈ ದೇಶದ ರೂಢಿಗತ ಚಿಂತನೆಗೆ ಭಿನ್ನವಾದ ಸಾಮಾಜಿಕ ದರ್ಶನವಾಗಿ ಅನಾವರಣಗೊಳ್ಳುತ್ತದೆ. 'ಈ ಕಥನಗಳೇ ನಿಜವಾದ ಅರ್ಥದಲ್ಲಿ ನಮ್ಮ ಸಂಸ್ಕೃತಿಯ ಇತಿಹಾಸವನ್ನು ನಿರೂಪಿಸಬಲ್ಲಂಥ ಶಕ್ತಿ ಪಡೆದವುಗಳು. ರಾಜಮಹಾರಾಜರ ಆಳ್ವಿಕೆಯ ವಿಧಾನಗಳೇ ನಮ್ಮ ಭವ್ಯ ಇತಿಹಾಸ ಎಂದು ಸಾರುತ್ತ ಬಂದಿರುವ ನಮ್ಮ ಬಹುಪಾಲು ಇತಿಹಾಸಕಾರರ ಕಣ್ಣು ತೆರೆಸಿ ಜನಸಾಮಾನ್ಯರ ಇತಿಹಾಸಕ್ಕಾಗಿ ಒತ್ತಾಯಿಸಬಲ್ಲ, ಆ ಬಗೆಗಿನ ಅರಿವು ಮೂಡಿಸಬಲ್ಲ ಶಕ್ತಿ ಈ ಕಥನಗಳಿಗಿದೆ. ಪರಂಪರಾಗತವಾದ ಶಿಷ್ಟ ಮನಸ್ಸಿನ ನಂಬಿಕೆಗಳಿಗೆ ತದ್ವಿರುದ್ಧವಾದ ಈ ಕಥನಗಳು, ತಮ್ಮದೇ ಮೌಲ್ಯಗಳನ್ನು, ಜೀವನ ದೃಷ್ಟಿಯನ್ನು ಆ ಮೂಲಕ ಒಂದು ನಿರ್ದಿಷ್ಟ ನೆಲದ ಲೋಕದೃಷ್ಟಿ ಯನ್ನು ಹಾಗೂ ಅವರ ವಿವೇಕವನ್ನು ಹೇಳುತ್ತವೆ. ಜನಸಾಮಾನ್ಯರ ನಡುವಿನ ಸರಳ ವ್ಯಕ್ತಿತ್ವದ ಈ ಕಥನಗಳ ನಾಯಕರು ಸಂದರ್ಭ ಬಂದಾಗ ಮಾತ್ರ ತಮ್ಮ ಅಗಾಧತೆಯನ್ನು ಮೆರೆಯಬಲ್ಲವರು. ಸ್ವಾಭಿಮಾನಕ್ಕೆ ಕುಂದು ಬಂದಾಗ ಉಗ್ರವಾಗಿ ಪ್ರತಿಭಟಿಸಿ ನಿಲ್ಲಬಲ್ಲವರು. ಈ ನಾಯಕರಾದರೂ ಎಂಥವರು? ಮಾದಿಗನೆಂದು ಹೇಳಲಾಗುವ ಮಾದಪ್ಪ, ಹೊಲೆಯನೆಂದು ಕರೆಯಲಾಗುವ ಮಂಟೇಸ್ವಾಮಿ, ದನಕಾಯುವ ಬದುಕಿನ ಜುಂಜಪ್ಪ, ಕುರಿ ಕಾಯುವ

ಕಾಯಕದ ಮೈಲಾರಲಿಂಗ ಮುಂತಾದವರು. ಕಾಡು ಮತ್ತು ನಾಡಿನ ನಡುವೆ ಸಂಬಂಧ ಸ್ಥಾಪಿಸಿಕೊಳ್ಳಬಲ್ಲ ಇವರು ಪ್ರಕೃತಿಯಲ್ಲಿನ ದುಷ್ಟಮೃಗಗಳನ್ನು ಒಲಿಸಿಕೊಂಡು ಅವುಗಳನ್ನು ಸ್ನೇಹದಿಂದ ಕಾಣಬಲ್ಲವರು, ಬೇಟೆಗಾರರಂತೂ ಅಲ್ಲ. ನಾಗರಿಕ ಸಮಾಜದ ಅಥವಾ ಪ್ರಭುತ್ವದ ದಬ್ಬಾಳಿಕೆಯಿಂದ ತಮ್ಮನ್ನು ನಂಬಿದ ಜನವರ್ಗಗಳನ್ನು ರಕ್ಷಿಸಬಲ್ಲವರು.'[1] ಇಂತಹ ಕಥನಗಳು ಕದನಗಳ ಕಥೆ ಹೇಳುವುದಿಲ್ಲ. ಹಿಂಸೆ ಮತ್ತು ಕೇಡುಗಳನ್ನು ವಿಜೃಂಭಿಸುವುದಿಲ್ಲ. ಈ ಕಥನಗಳು ದುಡಿಮೆಗಾರ ಸಮುದಾಯಗಳ ತತ್ವದರ್ಶನದ ಮಾಧ್ಯಮಗಳಂತೆ ನಮ್ಮ ಮುಂದಿವೆ. ಪ್ರಸ್ತುತ ಅಧ್ಯಾಯದಲ್ಲಿ ನಾನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕೊಡಗಿನ ಬುಡಕಟ್ಟುಗಳ ಮೌಖಿಕ ಸಾಹಿತ್ಯದ ಪ್ರಕಾರ ಮತ್ತು ಸ್ವರೂಪಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಬುಡಕಟ್ಟು ಬದುಕಿನ ಸಂಪೂರ್ಣ ಒಳನೋಟವನ್ನು ಕಟ್ಟಿಕೊಡುವ ಸಾಮರ್ಥ್ಯ ಇವರ ಮೌಖಿಕ ಸಾಹಿತ್ಯಕ್ಕಿದೆ. ಬುಡಕಟ್ಟು ಸಾಹಿತ್ಯವು ಬರಿಯ ವರ್ಣನೆಯಲ್ಲ. ಜನಪ್ರಿಯ ಸಾಹಿತ್ಯದ ಪುನರ್ ಸೃಷ್ಟಿ ಕ್ರಿಯೆಗೆ ಹೊಸ ಜೀವ ತುಂಬುವ ಅನುಭವದಿಂದ ಹುಟ್ಟಿದ ಜ್ಞಾನದೀವಿಗೆ. ಬುಡಕಟ್ಟುಗಳ ಕಾಡಿನ ಬದುಕು ಒಂದು ಸುಂದರ ಕಾವ್ಯವಿದ್ದಂತೆ. ಪ್ರಕೃತಿ ಮತ್ತು ಮನುಷ್ಯನ ನಡುವಿನ ಅನುಸಂಧಾನದಂತಿರುವ ಈ ಮೌಖಿಕ ಸಾಹಿತ್ಯವು ಅತ್ಯಂತ ಸಮೃದ್ಧವಾಗಿದೆ. ಪ್ರಕೃತಿಯ ನಿಗೂಢತೆ, ರಹಸ್ಯ, ವಿಸ್ಮಯಗಳ ಜೊತೆ ಜೊತೆಗೆ ಬದುಕಿನ ಸ್ವಾರಸ್ಯವನ್ನು ವರ್ಣಿಸುತ್ತದೆ. ನಡುವೆ ವಿಷಾದದ ಹೊನಲೂ ಹರಿಯುತ್ತದೆ. ಶತಮಾನಗಳ ಕಾಲ ಸಾಗಿ ಬಂದಿರುವ ಸಮುದಾಯಗಳ ಬದುಕಿನ ಸ್ವಚ್ಛಂದತೆ, ನೋವು ನಲಿವು, ಸಮುದಾಯದ ಮೇಲಾಗಿರುವ ಆಕ್ರಮಣಗಳು, ಅವರ ಆಕ್ರಂದನಗಳು ಈ ಕುರಿತಂತ ವೈರುಧ್ಯಗಳನ್ನು ಬುಡಕಟ್ಟು ಸೃಷ್ಟಿಪುರಾಣಗಳು ಮತ್ತು ಮಹಾಕಾವ್ಯಗಳು ದಾಖಲಿಸುತ್ತವೆ. ಆದರೆ ಅದನ್ನು ಕಾಣುವ ಸೂಕ್ಷ್ಮತೆ ಓದುಗನಲ್ಲಿದ್ದಾಗ ಮಾತ್ರ ಅದು ಕಾಣುತ್ತದೆ. ಬುಡಕಟ್ಟುಗಳ ಮೌಖಿಕ ಸಾಹಿತ್ಯದ ಪ್ರಕಾರಗಳನ್ನು ನಾವು ಈ ಕೆಳಗಿನಂತೆ ವಿಂಗಡಿಸಬಹುದಾಗಿದೆ. 1. ಕತೆಗಳು, 2. ಹಾಡುಗಳು, 3. ಗಾದೆಗಳು, 4. ಒಗಟುಗಳು, 5. ಐತಿಹ್ಯಗಳು, 6. ಸೃಷ್ಟಿಪುರಾಣಗಳು, 7. ಮಹಾಕಾವ್ಯಗಳು. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕೊಡಗಿನ ಬುಡಕಟ್ಟುಗಳಲ್ಲಿ ಈ ಪ್ರಕಾರಗಳಿಗೆ ಸೇರಿದ ಮೌಖಿಕ ಸಾಹಿತ್ಯವನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

### 4.1. ಎರವರ ಮೌಖಿಕ ಸಾಹಿತ್ಯದ ಪ್ರಕಾರಗಳು

ಎರವರು ಕೊಡಗಿನ ಮೂಲನಿವಾಸಿಗಳಲ್ಲಿಯೇ ಅತ್ಯಂತ ವಿಶಿಷ್ಟ ಸಮುದಾಯವಾಗಿದೆ. 'ದಕ್ಷಿಣ ಭಾರತದ ಅತ್ಯಂತ ಪ್ರಾಚೀನ ಸಮಾಜಗಳಲ್ಲಿ ಎರವ ಸಮಾಜವೂ ಒಂದು. ಎರವರ

ದೈಹಿಕ ಚಹರೆ, ಅವರ ಸಂಸ್ಕೃತಿ ಮತ್ತು ಜೀವನ ವಿಧಾನಗಳು ಎರವರು ಅತ್ಯಂತ ಪ್ರಾಚೀನ ಸಾಂಸ್ಕೃತಿಕ ಪಂಗಡಕ್ಕೆ ಸೇರಿದವರೆಂಬುದಕ್ಕೆ ಅನೇಕ ಗಟ್ಟಿ ಆಧಾರಗಳನ್ನು ಒದಗಿಸುತ್ತವೆ. ದಪ್ಪ ತುಟಿಗಳ, ಅಗಲ ಹಣೆಯ, ನೀಳ ಮೂಗಿನ, ಗುಂಗುರು ಕೂದಲುಗಳ, ಎತ್ತರದ ನಿಲುವಿನ ಎರವರು ನೀಗ್ರೋ ಆಸ್ಟ್ರಾಲಾಯ್ಡ್ ಲಕ್ಷಣಗಳನ್ನು ಹೊಂದಿದ್ದಾರೆ. ದಕ್ಷಿಣ ಭಾರತದ ಅನೇಕ ದ್ರಾವಿಡ ಬುಡಕಟ್ಟಿನ ಲಕ್ಷಣಗಳನ್ನು ಎರವರು ಹೊಂದಿದ್ದಾರೆ. ಎರವರನ್ನು ಕೇರಳದಲ್ಲಿ ಅಡಿಯನ್ ಎಂದು, ತಮಿಳುನಾಡಿನಲ್ಲಿ ಪಣಿಯನ್ ಎಂದು ಕರೆಯಲಾಗುತ್ತದೆ.'[2] ಕೊಡಗಿನಲ್ಲಿ ಮುಖ್ಯವಾಗಿ ಫಣಿ ಎರವ ಮತ್ತು ಪಂಜರಿ ಎರವ ಎಂಬ ಎರಡು ಮುಖ್ಯವಾದ ಪಂಗಡಗಳಿವೆ. ದಕ್ಷಿಣ ಭಾರತದಲ್ಲಿಯೇ ಅತ್ಯಂತ ಆದಿಮ ಚಹರೆಗಳನ್ನು ಹೊಂದಿದ ಕೆಲವೇ ಕೆಲವು ಬುಡಕಟ್ಟುಗಳಲ್ಲಿ ಎರವ ಬುಡಕಟ್ಟೂ ಒಂದು. ಕೊಡಗು ಜಿಲ್ಲೆಯ ವಿರಾಜಪೇಟೆ, ಮಡಿಕೇರಿ ಮತ್ತು ಸೋಮವಾರಪೇಟೆಯನ್ನೂ ಒಳಗೊಂಡಂತೆ ಹಲವು ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಎರವರು ಕೊಡಗಿನ ಪಶ್ಚಿಮ ಭಾಗದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಕೇರಳದ ಗಡಿಭಾಗಗಳಾದ ಕುಟ್ಟಾ, ಮಾಕುಟ್ಟಾ ಭಾಗಗಳಲ್ಲಿ, ಮಾನಂದವಾಡಿ ಅರಣ್ಯ ಪ್ರದೇಶಕ್ಕೆ ಹೊಂದಿಕೊಂಡಿರುವ ಕೊಡಗಿನ ಗಡಿಯಲ್ಲಿ ಹೆಚ್ಚಾಗಿ ವಾಸಿಸುತ್ತಾರೆ. 'ಇಲ್ಲಿರುವ ಇನ್ನೊಂದು ಬಹುಸಂಖ್ಯಾತ ಬುಡಕಟ್ಟೆಂದರೆ ಫಣಿಯನ್. 'ಇವರು ವೈನಾಡಿನ ಭೂರಹಿತ ಕೃಷಿ ಕೂಲಿಗಳು. ಇಲ್ಲಿನ ಭೂಮಾಲೀಕರು ತಮ್ಮ ಜಮೀನುಗಳಂತೆಯೇ ಫಣಿಯನ್ನರನ್ನು ತಮ್ಮ ಖಾಸಗಿ ಆಸ್ತಿಗಳೆಂದೇ ಪರಿಗಣಿಸಿರುವುದರಿಂದ, ಇವರು ಪಾರಂಪರಿಕವಾಗಿ ಜೀತ ಮಾಡುತ್ತಲೇ ಬಂದಿದ್ದಾರೆ'.[3] ಕೊಡಗಲ್ಲಿ ಯರವರ ಸ್ಥಿತಿಗತಿಗಳು ಭಿನ್ನವಾಗೇನೂ ಇಲ್ಲ. ಕುಟ್ಟಾ ಪ್ರದೇಶದ ಕೇರಳದ ಗಡಿಯಲ್ಲಿ ಎರವರು, ಅದರಲ್ಲೂ ಫಣಿ ಎರವರು ದೀನ ಸ್ಥಿತಿಯಲ್ಲಿ ಬದುಕುತ್ತಿದ್ದಾರೆ. ಆದರೆ ಇವರ ಸಾಂಸ್ಕೃತಿಕ ಬದುಕು ಸುಸ್ಥಿರವಾಗಿದೆ. ಹಾಡು, ಕುಣಿತಗಳು ಇನ್ನೂ ಈ ಸಮುದಾಯದಲ್ಲಿ ಉಳಿದುಕೊಂಡು ಬಂದಿವೆ. ಪ್ರಸ್ತುತ ಎರವ ಸಮುದಾಯದ ಮೌಖಿಕ ಸಾಹಿತ್ಯವನ್ನು ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಬುಡಕಟ್ಟುಗಳ ಆಚರಣೆಯೊಂದಿಗೆ ಅವರ ಹಾಡುಗಳು ಅವಿಚ್ಛಿನ್ನವಾಗಿ ಮಿಳಿತಗೊಂಡಿವೆ. ಅವರ ಪ್ರತಿಯೊಂದು ಆಚರಣೆಯ ಹಿಂದಿರುವ ಮೌಲ್ಯಾಧಾರಿತ ತಿಳುವಳಿಕೆ ನಮಗೆ ಈ ಹಾಡುಗಳ, ಕಥೆಗಳ ಮೂಲಕವೇ ದೊರೆಯುತ್ತದೆ. ಎರವರಲ್ಲಿ ಮುಖ್ಯವಾಗಿ ಸೋಬಾನೆ ಹಾಡು, ಮೈನೆರೆದಾಗ ಹಾಡುವ ಹಾಡು, ಮದುವೆ ಸಂದರ್ಭದಲ್ಲಿ ಹಾಡುವ ಹಾಡು, ತಿಥಿಯ ಹಾಡು, ದೇವರ ಹಾಡು, ಮನರಂಜನೆಯ ಹಾಡು, ಬೇಟೆಯ ಹಾಡು ಈ ಮುಂತಾಗಿ ನಾವು ಗುರುತಿಸಬಹುದು.

**ಎರವರ ಹಾಡುಗಳ ವಿಧಗಳು**

**ದೇವರ ಪದಗಳು :** ಬುಡಕಟ್ಟುಗಳು ಕಾಡಿನಿಂದ ಹೊರಬಂದು ಇತರೆ ಸಮುದಯಗಳೊಂದಿಗೆ ಬದುಕುವುದರ ಜೊತೆಗೆ ನಾಡಿನವರ ದೇವರುಗಳನ್ನು ಕೂಡ ತಮ್ಮದಾಗಿಸಿಕೊಂಡರು. ತಮ್ಮ ಸುತ್ತಲಿನ ಇತರೆ ಭಾಷಿಕ ಸಮುದಾಯದವರಿಂದ ಪ್ರಭಾವಿತರಾದ ಬುಡಕಟ್ಟುಗಳು ಅವರ ಸಂಸ್ಕೃತಿಯ ಪರಿಚಯದಿಂದ ಪ್ರೇರೇಪಿತರಾಗಿ ತಾವೂ ಕೂಡ ಅವರ ದೈವಗಳನ್ನು ಪೂಜಿಸಲು ಪ್ರಾರಂಭಿಸಿದರು. ಇತರೆ ಸಮುದಾಯದವರ ದೇವಸ್ಥಾನಗಳಿಗೆ ಹೋಗುವುದು, ದೇವರುಗಳಿಗೆ ನಡೆದುಕೊಳ್ಳುವುದು, ಹರಕೆ ಕಟ್ಟಿಕೊಳ್ಳುವುದನ್ನು ಪ್ರಾರಂಭಿಸಿದರು. ಆ ಮೂಲಕ ದೇವರುಗಳಿಗೆ ಸಂಬಂಧಿಸಿದ ಹಾಡುಗಳು ಕೂಡ ಹುಟ್ಟಿಕೊಂಡಿರಬಹುದು. ಈ ದೇವರ ಹಾಡುಗಳನ್ನು ಗದ್ದಿಗೆ ಹಾಡುಗಳು ಎಂದೂ ಕೂಡ ಕರೆಯುತ್ತಾರೆ. ಎರವರಲ್ಲಿ 'ಚಿಕ್ಕಮ್ಮ' ಎಂಬ ದೇವರ ಕುರಿತ ಹಾಡಿದೆ. ಎರವರಲ್ಲಿ 'ಚಿಕ್ಕಮ್ಮ' ಎಂಬ ಮೌಖಿಕ ಕಾವ್ಯವಿರುವಂತೆ ಇಲ್ಲಿಗರಲ್ಲಿ 'ದೊಡ್ಡಮ್ಮ' ಎಂಬ ಕಾವ್ಯವಿದೆ. ಈ ಹಾಡು ಕೊಡಗು ಹಾಗೂ ಪಿರಿಯಾಪಟ್ಟಣದ ಬಳಿಯ ಚಿಲ್ಕುಂದದ ಬಳಿ ಇರುವ ಬೆಟ್ಟದಲ್ಲಿರುವ ಚಿಕ್ಕಮ್ಮ ಎಂಬ ದೇವತೆಯನ್ನು ಕುರಿತ ಹಾಡಾಗಿದೆ. ಎರವರು ಸ್ಥಳೀಯ ಪ್ರಭಾವಿ ಭಾಷೆಯಾದ ಕನ್ನಡದಲ್ಲಿ ಈ ಹಾಡನ್ನು ಹಾಡುತ್ತಾರೆ. ಚಿಲ್ಕುಂದ ಬೆಟ್ಟದ ಮೇಲೆ ಈ ದೇವಿಯ ವಾಸಸ್ಥಾನವಿದೆ. ಆ ಬೆಟ್ಟದ ಮೇಲಿಂದ ನೋಡಿದರೆ ಕೊಡಗಿನ ವಿರಾಜಪೇಟೆಯ ಕುಟ್ಟದ ಬೆಟ್ಟವೂ ಕಾಣಿಸುತ್ತಿತ್ತಂತೆ. ಅಂದರೆ ಹಿಂದೆ ಕುಟ್ಟದಿಂದಲೂ ಕೂಡ ಎರವರು ಈ ದೇವಿಯ ದೇವಸ್ಥಾನಕ್ಕೆ ಹೋಗಿ ಬರುವ ಪರಿಪಾಟವಿದ್ದಿರಬಹುದು.

'ಹೂ ಅಮ್ಮ ಇರುವೋದು ಹೂವಸ್ಥಾನವೇ
ಗಂಗಮ್ಮ ಇರುವೋದು ಗಂಗಸ್ಥಾನವೇ
ನೀಲಮ್ಮ ಇರುವೋದು ನೀಲಗಿರಿ ಬೆಟ್ಟಾವೇ
ಅಕ್ಕಮ್ಮ ಇರುವೋದು ಹನ್ನೆರಡು ಬೆಟ್ಟವೇ
ಚಿಕ್ಕಮ್ಮ ಇರುವೋದು ಚಿಲ್ಕುಂದ ಬೆಟ್ಟವೇ
ಚಿಲ್ಕುಂದ ಕೊನೆ ಬೆಟ್ಟದ್ಮೇಲ್ನೋಡಿದರೆ
ದೇವಿ ದೇವಕಳು ಕೂಟ ಕೂಡಿ ಜಾಗ ನೋಡುವರೆ
ಜಾಗ ನೋಡುವರು-ತಳವ ನೋಡುವರು
ಕುಟ್ಟ ನೋಡುವರು-ಬೆಟ್ಟ ನೋಡುವರು.
ಚಿನ್ನದಲಿ ಕಂಬದಲಿ ನೋಡಿದರೆ ದೇವಿ
ರತ್ನದಾಲೆ ತೊಟ್ಲು ಹುಟ್ಟಿತ್ತಾಲ್ಲೊ

ರತ್ನದಾಲೆ ತೊಟ್ಲಲ್ಲಿ ಹುಟ್ಟಿತ್ತಲ್ಲೊ
ಎಳೆಯ ಮಗುವಾಗಿ ಹುಟ್ಟಿ-ಹುಟ್ಟಿದಳೋ
ಸೂರ್ಯ ಚಂದ್ರರಾಗಿ ಹುಟ್ಟಿದಳೋ ದೇವಿ
ಕಾಮ ಭೀಮನಾಗಿ ಹುಟ್ಟಿದಳೋ
ದಾಳಿಂಬೆ ಹೂವಾಗಿ ಬೆಳುದಾಳು ದೇವಿ
ದಾನಾದ ಕೋಲಂಗೆ ಬೆಳುದಾಳು ದೇವಿ"[4]

ಮಕ್ಕಳಿಲ್ಲದವರು ಈ ತಾಯಿಗೆ ಹರಕೆ ಕಟ್ಟಿದರೆ ಮಕ್ಕಳಾಗುತ್ತವೆ ಎಂಬುದು ಅವರ ನಂಬಿಕೆ. ಅದಕ್ಕಾಗಿ ಎಲ್ಲ ಕಡೆಯಿಂದಲೂ ಜನರು ಇಲ್ಲಿಗೆ ಬರುತ್ತಾರೆ. ಈ ಹಾಡು ಚಿಕ್ಕಮ್ಮ ದೇವಿಯ ಸೌಂದರ್ಯ, ಬಣ್ಣ, ರೂಪ ಲಾವಣ್ಯ, ವೈಭವವನ್ನು ವರ್ಣಿಸುತ್ತದೆ.

"ಒಂದಳ್ಳಿ, ಉಳಿಸವಳೆ ಒಂದಳ್ಳಿ ಕೆಡಿಸವಳೆ
ಎಂಟುವ ದಿಕ್ಕಿಗೆ ಎಸ್ರುವಾ ಪಡೆದವಳೆ
ಮಕ್ಳಿಲ್ಲದವರಿಗೆ ಮಕ್ಳ ಕೊಡಿಸುವಳೆ
ಕಂದ್ನಿಲ್ಲದವರಿಗೆ ಕಂದ್ನ ಕೊಡಿಸುವಳೆ"

ಈ ದೇವಿಗೆ ಚಿಕ್ಕಮ್ಮ ಎಂದು ಹೆಸರು ಬಂದುದಕ್ಕೆ ಕಾರಣ

"ಕೋಟಾನು ಕೋಟಿ ಚುಕ್ಕೀನೇ
ಕೋಟಾನು ಕೋಟಿ ಚುಕ್ಕೀನೆ
ಲೆಕ್ಕ ಮಾಡಿದಳೋ, ಲೆಕ್ಕ ಮಾಡಿದಳೋ
ಚಿಕ್ಕಮ್ಮ ಲೆಕ್ಕ ಮಾಡಿದಳೂ..."[5]

ಎಂಟೂ ದಿಕ್ಕಿನಲ್ಲಿ ಹೆಸರು ಪಡೆದ ಚಿಕ್ಕಮ್ಮ ಆಕಾಶದ ಕೋಟ್ಯಂತರ ಚುಕ್ಕಿಗಳನ್ನು ಎಣಿಸಿದವಳು. ಮಕ್ಕಳಿಲ್ಲದವರಿಗೆ ಮಕ್ಕಳನ್ನು ಕೊಟ್ಟವಳು ಎಂಬ ವರ್ಣನೆ ಇದೆ. ಆದಿವಾಸಿಗಳು ತಮ್ಮ ಸ್ತ್ರೀ ದೈವಗಳನ್ನು ಫಲವತ್ತತೆಯ ದೈವಗಳನ್ನಾಗಿ ಪರಿಗಣಿಸುವುದು ಹೆಚ್ಚು. ಜೊತೆಗೆ ಅತ್ಯಂತ ಲೌಕಿಕದ ಕಾರಣಗಳಿಗಾಗಿ ದೈವಗಳಿಗೆ ಅಸಾಧಾರಣ ಪ್ರಭಾವಳಿಯನ್ನು ಕಲ್ಪಿಸುತ್ತಾರೆ. ಹಾಗಾಗಿ ಚಿಕ್ಕಮ್ಮ ದೇವತೆ ಮಕ್ಕಳನ್ನು ಕೊಡುವ ದೇವತೆಯೂ ಹೌದು, ಆಕಾಶದ ಚುಕ್ಕಿಗಳನ್ನು ಎಣಿಸಿದವಳೂ ಹೌದು.

ಎರವರಲ್ಲಿ 'ಬಾಯನ' ಎಂಬ ಸುದೀರ್ಘ ಕಾವ್ಯವಿದೆ. ಇದೊಂದು ದೀರ್ಘ ಕಾವ್ಯ ವಾಗಿದ್ದು ಈಗಾಗಲೇ ಸಂಗ್ರಹವಾಗಿದೆ. ಎರವರ ಮೌಖಿಕ ಸಾಹಿತ್ಯದಲ್ಲಿ ಹೆಚ್ಚಿನ ಪಾಲು

ಹಾಡುಗಳದ್ದು, ಇವು ಬರಿಯ ಹಾಡುಗಳಲ್ಲದೆ ಹಾಡಿನ ರೂಪದ ಕತೆಗಳು. ಅಂದರೆ ಕಥನ ಪ್ರಧಾನ ಹಾಡುಗಳು. ಈ ಹಾಡುಗಳು ಸಮುದಾಯದ ಆಚರಣೆಗಳೊಂದಿಗೆ ಬೆಸೆದುಕೊಂಡಿವೆ. ಅವರು ತಮ್ಮ ಆಚರಣೆಗಳಿಗೆ ಅನುಗುಣವಾಗಿ ಹಾಡುಗಳನ್ನು ಹಾಡುತ್ತಾರೆ. ಈ ಹಾಡುಗಳನ್ನು ಕೇಳಬೇಕೆಂದರೆ ನಾವೂ ಅವರ ಆಚರಣೆಗಳಲ್ಲಿ ಭಾಗವಹಿಸಬೇಕಾಗುತ್ತದೆ. ಕಣಿಲಾಡಿಯು ಈ ಸುದೀರ್ಘವಾದ ಹಾಡನ್ನು ಹಾಡುತ್ತಾನೆ. ಇದು ರಾತ್ರಿ ಹಗಲು ಹಾಡುವಷ್ಟು ದೀರ್ಘವಾದದ್ದು. ಕಣಿಲಾಡಿಗೆ ಇದು ಕಂಠಸ್ಥವಾಗಿರುತ್ತದೆ. ಆತನಲ್ಲದೆ ಬೇರಾರು ಈ ಹಾಡನ್ನು ಹಾಡುವುದಿಲ್ಲ. ಎರವ ಸಮುದಾಯವು ಸಾಗಿಬಂದ ಬದುಕಿನ ಚಿತ್ರಣವನ್ನು ನಮಗೆ ಈ ಕಾವ್ಯಗಳು ಕಟ್ಟಿಕೊಡುತ್ತವೆ. ಸಮುದಾಯಕ್ಕೆ ಸಂಬಂಧಿಸಿದ ಪ್ರಮುಖ ಅಂಶಗಳನ್ನು ಈ ಕಾವ್ಯವು ಒಳಗೊಂಡಿದೆ. ಎರವರ ಕಾವ್ಯಗಳಲ್ಲಿ ಮುಖ್ಯವಾದವುಗಳೆಂದರೆ;

1. **ಒಲೆಪಾಟ್ಟು:** ಈ ಹಾಡನ್ನು ಮದುವೆ, ಇನ್ನಿತರ ಶುಭಕಾರ್ಯದಲ್ಲಿ ಹಾಡಲಾಗುತ್ತದೆ. ಇದು ಎರವರ ಮೂಲ ಪುರುಷರಾದ ಆರ್ಯೆ ಮತ್ತು ಬಾಣ್ಯೆಯರನ್ನು ಕುರಿತಾದದ್ದು.

2. **ಸೋಬಾನೆಪಾಟ್ಟು:** ಹೆಣ್ಣು ಋತುಮತಿಯಾದ ಸಂದರ್ಭದಲ್ಲಿ ಓಲೆಪಾಟ್ಟಿನ ಒಂದು ಕಥಾ ಪ್ರಸಂಗವನ್ನು ಹಾಡಿನ ರೂಪದಲ್ಲಿ ಕಣಿಲಾಡಿ ಹಾಡುತ್ತಾನೆ. ಸೋಬಾನೆಪಾಟ್ಟು ಎಂಬುದು ಅಧ್ಯಯನದ ಅನುಕೂಲಕ್ಕಾಗಿ ಬಳಸಿಕೊಂಡ ಪದವೇ ಹೊರತು ಪ್ರತ್ಯೇಕವಾಗಿ ಸೋಬಾನೆ ಪಾಟ್ಟು ಎಂಬುದು ಇಲ್ಲ.

3. **ಪೇಯಿಪಾಟ್:** ತಿಥಿಯ ದಿನದಂದು ರಾತ್ರಿ ಕಣಿಲಾಡಿಯು ಈ ಹಾಡನ್ನು ರಾತ್ರಿಯಿಡೀ ಹಾಡುತ್ತಾನೆ. ಹಾಗೆಯೇ ದೆವ್ವ ಭೂತಗಳಿಗೆ ಸಂಬಂಧಿಸಿದ ಆಚರಣೆಯ ಸಂದರ್ಭದಲ್ಲಿ ಕೂಡ ಈ ಹಾಡನ್ನು ಹಾಡಲಾಗುತ್ತದೆ.

**ಓಲೆಪಾಟ್ಟು:** ಇದು ಒಂದು ಸುದೀರ್ಘವಾದ ಕಾವ್ಯ, ಎರವರ ಮಹಾಕಾವ್ಯ ಎಂದು ಇದನ್ನು ಪರಿಗಣಿಸಬಹುದಾಗಿದೆ. ಮಾತೃಮೂಲೀಯ ಬುಡಕಟ್ಟಾದ ಎರವರ 'ಕಾರು ಮಚುಣಿ' ಮತ್ತು 'ಬೆಳ್ಳಿ ಮಚುಣಿ' ಸೋದರಿಯರು ಅವಿವಾಹಿತರು. ಗಂಡಸಿನ ಹಂಗಿಲ್ಲದೆಯೇ ಕೋಟೆ ಕಟ್ಟಿ ಬದುಕುತ್ತಿದ್ದವರು. ಬಂಜೆಯರಾದ ಇವರು ಇಬ್ಬರು ಗಂಡುಮಕ್ಕಳನ್ನು ಕದ್ದು ತಂದು ಅವರಿಗೆ ಆರ್ಯೆ, ಬಾಣ್ಯೆ ಎಂದು ಹೆಸರಿಟ್ಟು ಸಾಕುತ್ತಾರೆ. ಆ ಮಕ್ಕಳು ಬೆಳೆದು ಎಲ್ಲ ರೀತಿಯ ವಿದ್ಯೆ ಪಡೆದು ಸಾಮ್ರಾಜ್ಯ ವಿಸ್ತರಣೆ ಮಾಡುತ್ತಾರೆ. ಎರವರ ಮೂಲಪುರುಷರಾದ ಇವರಿಬ್ಬರು ಈ ಭೂಮಿಯ ಮೇಲೆ ಸಕಲ ಜೀವರಾಶಿಗಳನ್ನು ಸೃಷ್ಟಿಸುತ್ತಾರೆ. ಈ ಎಲ್ಲ ಅಂಶಗಳು ಈ ಕಾವ್ಯದಲ್ಲಿವೆ. ಎರವರ ಬದುಕು ಅವರ ಸಂಪ್ರದಾಯ, ನೀತಿನಿಯಮ ಎಲ್ಲವೂ ಈ ಕಾವ್ಯದಲ್ಲಿ ಮೂಡಿಬರುತ್ತವೆ. ಯಾವುದೋ ಒಂದು ಕಾಲಘಟ್ಟದಲ್ಲಿ ಈ ಹಾಡು ಸೃಷ್ಟಿಯಾದರೂ

ಬಾಯಿಂದ ಬಾಯಿಗೆ ಸಾಗಿ ಬರುತ್ತಿರುವಾಗ ಅವರ ಜೀವನದ ಸಮಸ್ತ ನೋವು ನಲಿವುಗಳು, ಆದರ್ಶಗಳೂ ನಿಯಮ ನಂಬಿಕೆಗಳು ಸೇರಿಕೊಂಡು ಹೊಸ ಹೊಸ ಅನುಭವಗಳನ್ನು ದಾಖಲಿಸುತ್ತಾ ಸಾಗಿದೆ.

ಬಡಾಕು ಎಂಬ ದೇಶದಲ್ಲಿ ಇಲಾಚಿತೇವರು ಅಮ್ಮೆ, ಪಲಾಚು ತೇವರು ಅಮ್ಮೆ ಎಂಬ ಸೋದರಿಯರಿದ್ದರು... ಎಂದು ಸಾಗುವ ಈ ಕತೆಯಲ್ಲಿ ಆರ್ಯೆ ಬಾಣ್ಯೆಯರು ಭೂಮಿಯ ಮೇಲಿನ ಎಲ್ಲಾ ಸಮುದಾಯದವರಿಗೂ ವಿದ್ಯೆಯನ್ನು ದಾನ ಮಾಡುತ್ತಾರೆ. ಆದರೆ ಎರವರು ಮಾತ್ರ ವಿದ್ಯೆಯಿಂದ ವಂಚಿತರಾಗುತ್ತಾರೆ. ಎರವರು ತಮ್ಮ ಇಂದಿನ ದುರ್ಗತಿಗೆ ತಾವು ಅವಿದ್ಯಾವಂತರಾಗಿರುವುದೇ ಕಾರಣ ಎಂದುಕೊಳ್ಳುತ್ತಾರೆ. ತಮ್ಮ ನಾಯಕರ ಮೂಲಕ ವಿದ್ಯೆಯನ್ನು ಓಲೆಗರಿಯ ಮೂಲಕ ಪಡೆಯಲಾಗದ್ದಕ್ಕೆ ನೊಂದುಕೊಳ್ಳುತ್ತಾರೆ. ಆದರೆ ಓಲೆಗರಿಯ ವಿದ್ಯೆ ಪಡೆಯಲಾಗದಿದ್ದರೂ ತಮ್ಮ ನಾಲಿಗೆಯ ಮೂಲಕ ತಮ್ಮ ಮೌಖಿಕ ವಿದ್ಯೆ ಪಡೆದು ಎಲ್ಲರನ್ನೂ ಮೀರಿಸುತ್ತಾರೆ. ಕಾಲಚಿತ್ರ ಬಲಾಮಗನ ಕತೆಯಲ್ಲೂ ಕೂಡ ಎರವರು ಭೂಮಿಯನ್ನು ಪಡೆಯುವಲ್ಲಿ ವಂಚಿತರಾಗುತ್ತಾರೆ, ಮತ್ತು ಕಾಲಚಿತ್ರ ಬಲಾಮಗನು ಮತ್ತೆ ಅದನ್ನು ಕೊಡಿಸುವಲ್ಲಿ ಯಶಸ್ವಿಯಾಗುತ್ತಾನೆ. ಕೊನೆಗೆ ಭೂಮಿ ಹೋರಾಟದ ಮೂಲಕ ಭೂಮಿ ಪಡೆಯುವುದೇ ಈ ಕಾವ್ಯದ ಮುಖ್ಯ ವಸ್ತು.

'ಊಡೆಕೂಣ ಆಣು ಜನಾಮು ಪೈನಾಟೇರಿ ಬಾವು
ಬೇಟೆಕರಿಮಗೇಂಜ ನುವೇಲು ಪಡಿಕ
ನೂತೆಟ್ಟು ಕುಲ ಪದ್ನೆಟ್ಟು ಜಾದಿಯ ಓಡಿಕೂಡೋಣು
ತೆಕ್ಕುಥೆಯ್ಯ ತಂಬಿರಮಾರು ಬಡಾಕುಥೆಯ್ಯ ತಂಬಿರಮಾರು
ಅವ್ಡೆಕೂಣ ನೂತೆಟ್ಟುಕುಲ ಪದ್ನೆಟ್ಟು ಜಾದಿಕೂ
ಅಂಗ್ಯೆರಳ ಕುಂಜುಕಂಡ ಮಂಜುಮಲೆದಾರಮು
ಅಳಾಂದು ಪೌಥುಳಾರಲ್ಲಾ, ಕಂಡೆಮ್-ಕರೇಮು
ಬಿತ್ತುನೆಲ್ಲುಮ್, ಪೊನ್ನುಮ್-ಪಣಾಮು
ಕಾಲಿಕಡೇಚು ಕೊಡ್ತುಳಾರಿಲ್ಲಾ
ಉಳೇಚು ಬಾವುದೆಂಯೆ ಉಳೇಚು ಬಾವುಂದುಳಾನು
ನಡಾಂದು ಬಾವುಂದೆಯೇ ನಡಾ ದು ಬಾವುಂದುಳಾನು
ಊದುಬಾವುಂದೆಯೇ ಊದುಬಾಂದುಳಾನು

ಸೇರುಬಾವುಂದೆಯೇ ಸೇರುಬಾವುಂದುಳಾನು

ಆನೆ ಏರಿನೇ–ಆನೆಏರಳಾನು ಅಂದಳ ಏರಿನಿಯೇ'[6]

ಎಂದು ಹಾಡು ಸಾಗುತ್ತದೆ. ಎಲ್ಲರೂ ಹಣ, ನೆಲ್ಲು, ಎತ್ತು, ಭೂಮಿಯನ್ನು ದಾನ ಪಡೆಯುತ್ತಾರಾದರೂ ತಾವು ಅದರಿಂದ ವಂಚಿತರಾದ ಬಗೆಯನ್ನು ಈ ಕಥೆ ವರ್ಣಿಸುತ್ತದೆ.

**ಸೋಬಾನೆಪಾಟ್**: ಸೋಬಾನೆಪಾಟ್ಟು ಅನ್ನು ಹೆಣ್ಣು ಋತಿಮತಿಯಾದಾಗ ಕಣಿಲಾಡಿಯು ಹಾಡುತ್ತಾನೆ. ಈ ಹಾಡಿನ ಮೂಲಕ ಸಮುದಾಯದ ಕಟ್ಟುಪಾಡುಗಳನ್ನು. ಹೆಣ್ಣುಮಕ್ಕಳು ಪಾಲಿಸಬೇಕಾದ ನಿಯಮಗಳನ್ನು ಹಾಡಿನ ರೂಪದಲ್ಲಿ ಪ್ರಸ್ತುತಪಡಿಸುತ್ತಾನೆ. ಮುದುವಿಲಿ ಕೋಟೆಯೆಂಬ ದೇಶದಲ್ಲಿ 'ಮುದುವಿಲಿ ಮುತ್ತಪ್ಪ' ಮತ್ತು 'ಮುದುವಿಲಿ ಮುತ್ತಮ್ಮ' ದಂಪತಿಗಳಿಗೆ ವಯಸ್ಸಾದರೂ ಮಕ್ಕಳಾಗಿರಲಿಲ್ಲ. ಮುತ್ತಮ್ಮ ಒಮ್ಮೆ ನೀರು ತರಲು ಕೆರೆಯ ಬಳಿಗೆ ಹೋದಾಗ ಕೆರೆಯ ನೀರಲ್ಲಿದ್ದ ಕಮಲದ ಹೂವು ಬಿಂದಿಗೆಯೊಳಗೆ ಬಂದು ಸೇರುತ್ತಿತ್ತು. ಬಿಂದಿಗೆಯಿಂದ ಎಷ್ಟು ಸಲ ದೂಡಿದರೂ ಅದು ಮತ್ತೆ ಮತ್ತೆ ಬಂದು ಕೊಡದೊಳಗೆ ಬಂದು ಸೇರುತ್ತಿದ್ದುದನ್ನು ನೋಡಿ ಕೊನೆಗೆ ಮುತ್ತಮ್ಮ ನೀರಿನೊಂದಿಗೆ ಬಂದ ಆ ಕಮಲದ ಹೂವನ್ನು ತನ್ನ ಮುಡಿಗೇರಿಸಿಕೊಳ್ಳುತ್ತಾಳೆ. ತಕ್ಷಣ ಆ ಕಮಲದ ಹೂ ಅವಳ ಗರ್ಭ ಸೇರಿ ಗರ್ಭವತಿ ಯಾಗುತ್ತಾಳೆ. ಇದರಿಂದ ಆ ದಂಪತಿಗಳಿಬ್ಬರೂ ವಿಸ್ಮಯಕ್ಕೆ ಒಳಗಾಗುತ್ತಾರೆ. ಇಳಿವಯಸ್ಸಿನಲ್ಲಿ ಮುತ್ತಮ್ಮ ಒಂದು ಹೆಣ್ಣುಮಗುವನ್ನು ಹಡೆಯುತ್ತಾಳೆ. ಆ ಮಗುವಿಗೆ 'ಪೆರುಂಗಾಲಿ' ಎಂದು ನಾಮಕರಣ ಮಾಡಿ ತುಂಬ ಮುದ್ದಿನಿಂದ ಅವಳನ್ನು ಸಾಕುತ್ತಾರೆ. ಪೆರುಂಗಾಲಿಗೆ ಹತ್ತು ವರ್ಷಗಳಾದಾಗ ತನ್ನ ತಂದೆಯ ಬಳಿ ಜಿಂಕೆಯ ಕೊಂಬಿನ ಜೋಕಾಲಿ ಮಾಡಿಕೊಡು ಎಂದ ಹಟ ಮಾಡುತ್ತಾಳೆ. ಆ ಆಸೆಯನ್ನು ಪೂರೈಸುವ ಸಲುವಾಗಿ ಅವಳ ತಂದೆ ಜಿಂಕೆಯನ್ನು ಹುಡುಕುತ್ತಾ ಕಾಡಿಗೆ ಬರುತ್ತಾನೆ. ಕಾಡಿನಲ್ಲಿ ಒಂದು ಸುಂದರವಾದ ಜಿಂಕೆ ಆತನಿಗೆ ಕಾಣಸಿಗುತ್ತದೆ. ಆಗ ಆತ ಮನದಲ್ಲಿ ತನ್ನ ಮಗಳಾದ 'ಪೊರುಂಗಾಲಿ ಪೂಲಿಯು' ನಿಜಕ್ಕೂ ಸತ್ಯವಂತಳೇ ಆಗಿದ್ದರೆ ಆ ಜಿಂಕೆ ಕೊಂಬು ಮುರಿದು ಬೀಳಲಿ ಎಂದು ದೇವರಲ್ಲಿ ಪ್ರಾರ್ಥಿ ಸುತ್ತಾನೆ. ಕೂಡಲೇ ಆ ಜಿಂಕೆಯ ಕೊಂಬು ಮುರಿದು ಬೀಳುತ್ತದೆ. ಅದನ್ನು ತೆಗೆದುಕೊಂಡು ಹೋಗಿ ತನ್ನ ಮಗಳಿಗೆ ಜೋಕಾಲಿ ಮಾಡಿಕೊಡುತ್ತಾನೆ.

ಒಮ್ಮೆ ಮಾವುಂಡ ಕೋಟೆಯ ರಾಜ ಬೇಟೆಗೆಂದು ಬಂದವನು ನೀರು ಕುಡಿಯಲೆಂದು ಅವಳ ಮನೆಗೆ ಬರುತ್ತಾನೆ. ಆಗ ಅವಳಿಗೆ ಮನಸೋತು ಅವಳನ್ನು ಮದುವೆಯಾಗ ಬಯಸುತ್ತಾನೆ. ಆತನಿಗೆ ಈಗಾಗಲೇ ಏಳು ಜನ ಹೆಂಡತಿಯರಿದ್ದು ಆತ ಹೆಳವನಾಗಿದ್ದರೂ ಕೂಡ ರಾಜನ ಕೋಪಕ್ಕೆ ಗುರಿಯಾಗಬಾರದೆಂಬ ಭಯದಿಂದ ಪೆರುಂಗಾಲು ಪೊಲಿಯನ್ನು

ರಾಜನಿಗೆ ಮದುವೆ ಮಾಡಿಕೊಡುತ್ತಾರೆ. ಇದರಿಂದ ಮತ್ಸರಗೊಂಡ ಸವತಿಯರು ಒಮ್ಮೆ ರಾಜನಿಲ್ಲದ ಸಮಯದಲ್ಲಿ ಪೆರುಂಗಾಲಿಯ ಸೀರೆಯ ಮೇಲೆ ತಾಂಬೂಲದ ರಸ ಉಗಿದು ಸೀರೆಯನ್ನು ಕೆಡಿಸಿ ಇಡುತ್ತಾರೆ. ಶಿಕಾರಿಯಿಂದ ವಾಪಸ್ಸು ಬಂದ ರಾಜನಿಗೆ ನಿನ್ನ ಹೆಂಡತಿ ನೀನಿಲ್ಲದ ಸಮಯದಲ್ಲಿ ಕೆಟ್ಟು ನಿಂತಿದ್ದಾಳೆ ಎಂದು ಕಿರಿ ಹೆಂಡತಿಯ ಮೇಲೆ ಚಾಡಿ ಹೇಳುತ್ತಾರೆ. ಈ ಮಾತಿನಿಂದ ಕೋಪಗೊಂಡ ಆತ ಪೆರುಂಗಾಲು ಪೊಲಿಯನ್ನು ಅವಮಾನಿಸಿ ಹೊಡೆದು ಅರಮನೆಯಿಂದ ಹೊರಹಾಕುತ್ತಾನೆ. ಗಂಡನಿಂದ ತಿರಸ್ಕೃತಳಾದ ಆಕೆ ಇತ್ತ ತನ್ನ ತವರು ಮನೆಗೂ ಹೋಗಲು ಮನಸ್ಸಾಗದೆ ಕಾಡಿನಲ್ಲಿ ಬರುತ್ತಿರುವ ಸಂದರ್ಭದಲ್ಲಿ ದಾರಿಯಲ್ಲಿ 'ನಾಡುತಳ್ಳಿಕೋಟೆ ತಾಂದಿಪಾತೆ ಮಾದೇವರು' ಎದುರಾಗುತ್ತಾನೆ. ಆತ ಅವಳ ರೂಪಕ್ಕೆ ಮರುಳಾಗಿ ತನ್ನನ್ನು ಮದುವೆಯಾಗುವಂತೆ ಕೋರುತ್ತಾನೆ. ಆದರೆ ಪರುಂಗಾಲಿಯು ತನ್ನ ಹಿಂದಿನ ಕತೆಯನ್ನೆಲ್ಲ ಆತನಿಗೆ ಹೇಳಿ ಅವನ ಕೋರಿಕೆಯನ್ನು ನಿರಾಕರಿಸುತ್ತಾಳೆ. ಅಲ್ಲಿಂದ ಮುಂದೆ ಆಕೆ ನಡೆದು ಬರುತ್ತಿರುವಾಗ 'ಕೊಟ್ಟಿಪಾತೆ ಮಾದೇವರು' ಎದುರಾಗುತ್ತಾನೆ. ಆತನೂ ಕೂಡ ಅವಳನ್ನು ಮದುವೆಯಾಗಲು ಬಯಸುತ್ತಾನೆ. ಪೆರುಂಗಾಲಿಯು ಆತನಿಗೂ ಕೂಡ ನಿರಾಸೆಯನ್ನುಂಟು ಮಾಡುತ್ತಾಳೆ. ಮುಂದೆ 'ಕಡಲರಕವೆ' ಎಂಬುವವನು ಅವಳನ್ನು ಭೇಟಿ ಯಾಗುತ್ತಾನೆ. ಆತನೂ ಕೂಡ ಅವಳ ಸೌಂದರ್ಯಕ್ಕೆ ಮರುಳಾಗಿ ಅವಳನ್ನು ಮದುವೆಯಾಗ ಬಯಸುತ್ತಾನೆ. ಅವನ ರೂಪ ಮತ್ತು ಅವನ ನಡವಳಿಕೆಯನ್ನು ಕಂಡು ಹೆದರಿದ ಆಕೆ ಅವನೊಂದಿಗೆ ಅವನ ಮನೆಗೆ ಹೋಗುತ್ತಾಳೆ. ಆತ ಸ್ನಾನಕ್ಕೆ ಹೋಗುವ ಮೊದಲು ಏಳನೆಯ ಕೋಣೆಗೆ ಹೋಗಬಾರದೆಂದು ತಾಕೀತು ಮಾಡಿ ಸ್ನಾನಕ್ಕೆ ತೆರಳುತ್ತಾನೆ. ಪೆರುಂಗಾಲಿಯು ಕುತೂಹಲದಿಂದ ಅವನು ಮನೆಯಲ್ಲಿಲ್ಲದ ಸಮಯದಲ್ಲಿ ಅವನು ನಿರ್ಬಂಧಿಸಿದ್ದ ಏಳನೆಯ ಕೋಣೆಯ ಬಾಗಿಲು ತೆರೆದು ನೋಡುತ್ತಾಳೆ. ಆ ಕೋಣೆಯಲ್ಲಿ ರಾಶಿ ಬಿದ್ದಿದ್ದ ನೀರೆಮ್ಮೆಯ ಎಲುಬನ್ನು ನೋಡಿ ದಿಗ್ಭ್ರಾಂತಳಾಗುತ್ತಾಳೆ. ಅವಳಿಗೆ ಆತ ಕೀಳುಜಾತಿಯ ಹೊಲೆಯ ಎಂಬುದು ಸ್ಪಷ್ಟವಾಗುತ್ತದೆ. ತಾನು ಜಾತಿ ಭ್ರಷ್ಟಳಾದೆನೆಂಬ ನೋವು ಅಪಮಾನದಿಂದ ಕುಗ್ಗುತ್ತಾಳೆ. ಮನೆಗೆ ಬಂದ ಕಡಲಕರವೆ ಇದಾವುದರ ಅರಿವಿಲ್ಲದೆ ಸ್ನಾನ ಮಾಡಲು ತೆರಳು ತ್ತಾನೆ. ಆಗ ಪೆರುಂಗಾಲಿಯು ಉಪಾಯ ಮಾಡಿ ಸೀಗೆ ಪುಡಿ ಎಂದು ಹೇಳಿ ಆತನ ಕಣ್ಣಿಗೆ ಮೆಣಸಿನ ಪುಡಿ ಹಾಕಿ ಅಲ್ಲಿದ್ದ ದೊಡ್ಡ ಗುಂಡಿಗೆ ಆತನನ್ನು ದೂಡಿ ಅಲ್ಲಿಂದ ತಪ್ಪಿಸಿಕೊಂಡು ಓಡಿ ಬರುತ್ತಾಳೆ.

ಇತ್ತ ತನ್ನ ಹಣೆಬರಹವನ್ನು ತಾನೇ ಹಳಿಯುತ್ತಾ ಕಾಡಿನಲ್ಲಿ ಬರುತ್ತಿರುವ ಸಮಯದಲ್ಲಿ ತನ್ನದೇ ಕುಲದ 'ಮುತ್ತುಕುಡಿ ಸಾದವೆ' ಎಂಬುವವನು ಸಿಗುತ್ತಾನೆ. ಆತನೂ ಕೂಡ ಅವಳನ್ನು

ಮದುವೆಯಾಗುವಂತೆ ಕೇಳುತ್ತಾನೆ. ಆಗ ಅವಳು ಈವರೆಗೆ ನಡೆದ ಕತೆಯನ್ನೆಲ್ಲಾ ಹೇಳಿ 'ಈಗಾಗಲೇ ನಾನೊಬ್ಬನನ್ನೂ ಮದುವೆಯಾಗಿ ಗಂಡ ಬಿಟ್ಟವಳಾಗಿದ್ದೇನೆ. ಗಂಡನಿಂದ ತಿರಸ್ಕಾರಕ್ಕೆ ಒಳಗಾಗಿ ಹೊಲೆಯನ ಮನೆಹೊಕ್ಕು ಹೊಲತಿಯಾಗಿದ್ದೇನೆ. ನನ್ನನ್ನು ಮುಟ್ಟಬೇಡ'[7] ಎನ್ನುತ್ತಾಳೆ. ಅದನ್ನು ಕೇಳಿದ ಆತ ತನ್ನ ಜಾತಿಯ ಕುಲಪುರೋಹಿತರನ್ನು ಕರೆಸಿ ಹೊಲೆಯನ ಮನೆಹೊಕ್ಕು ಅಶುದ್ಧಿಯಾದವಳನ್ನು ಹೊಳೆಯಲ್ಲಿ ನಿಲ್ಲಿಸಿ ಶುದ್ಧಿ ಮಾಡಿಸಿ ಮದುವೆಯಾಗುತ್ತಾನೆ.

ಮುತ್ತುಕುಡಿ ಸಾದವೆ ದನ ತಿನ್ನುವ ಹೊಲೆಯನೆಂದು, ದನವನ್ನು ತಿನ್ನುವವರು ಹೀನಕುಲದವರೆಂದೂ ತಿಳಿಸುವುದರ ಮೂಲಕ ಎರವರು ಕಡ್ಡಾಯವಾಗಿ ಪಾಲಿಸಬೇಕಾದ ಜಾತಿ ವ್ಯವಸ್ಥೆಯನ್ನು ತಿಳಿಸುತ್ತದೆ. ಹೊಲೆಯನ ಮನೆ ಹೊಕ್ಕಿದ್ದಕ್ಕಾಗಿ ತನಗೆ ಮೈಲಿಗೆಯಾಗಿದೆ ಎಂದು ಭಾವಿಸುವ ಪೆರುಂಗಾಲಿಯ ಕತೆಯ ಮೂಲಕ ಬುಡಕಟ್ಟುಗಳು ಪಾಲಿಸಬೇಕಾದ ಜಾತಿಯ ಕಟ್ಟುಪಾಡುಗಳನ್ನು ಹಾಗೂ ಬುಡಕಟ್ಟುಗಳಲ್ಲಿ ತಾವು ಹೊಲೆಯರಿಗಿಂತ ಶ್ರೇಷ್ಠ ಎಂಬ ಇರುವ ಮೇಲರಿಮೆ ಭಾವನೆಯನ್ನು ಸಮಾಜದಲ್ಲಿ ಈಗಾಗಲೇ ಚಾಲ್ತಿಯಲ್ಲಿದ್ದ ಅಸ್ಪೃಶ್ಯತೆಯನ್ನು ತಾವೂ ಅನುಕರಿಸುವಂತಿದೆ. ಒಂದು ವೇಳೆ ಎರವರ ಹೆಣ್ಣು ಕೀಳುಜಾತಿಯವನನ್ನು ಮದುವೆಯಾದರೆ ಅದಕ್ಕೆ ಪ್ರಾಯಶ್ಚಿತ್ತವನ್ನೂ ಕೂಡ ಸೂಚಿಸಿದ್ದಾರೆ. ಮನುಷ್ಯನಿಗಿಂತ ಮಿಗಿಲಾದುದು ಯಾವುದೂ ಅಲ್ಲ, ಪ್ರತಿಯೊಂದು ಸಮಸ್ಯೆಗೆ ಪರಿಹಾರವಿದೆ ಎಂಬ ಆದರ್ಶವನ್ನು ಇವರು ರೂಪಿಸಿಕೊಂಡಿದ್ದಾರೆ.

**ಗಾದೆಗಳು**

ಗಾದೆಗಳು ಈ ಸಮುದಾಯದ ಬದುಕಿನಲ್ಲಿ ಮನರಂಜನೆಯೊಂದಿಗೆ ಸಮಾಜಕ್ಕೆ ಒಳ್ಳೆಯದನ್ನು ತಿಳಿಹೇಳುವ ಉದ್ದೇಶದಿಂದಲೇ ಸೃಷ್ಟಿಯಾದಂತಿವೆ. ಉದಾ: ಪಾಮು ಇಲಿಂಜ ಮರತೆಕು ಪುಳ್ಳುವ ನೂರು–ಫಲ ಬಿಟ್ಟ ಮರಕ್ಕೆ ನೂರಕ್ಕೆ

ಒಂದು ಮರ ಹಣ್ಣು ಬಿಟ್ಟಾಗ ನೂರಾರು ಪಕ್ಷಿಗಳನ್ನು ಆಕರ್ಷಿಸುವಂತೆ ಹೆಣ್ಣು ಯೌವನಾವಸ್ಥೆಗೆ ಬಂದಾಗ ಅವಳ ಮೇಲೆ ನೂರಾರು ಕಣ್ಣುಗಳು ಇರುವುದು ವಾಸ್ತವ ಎಂಬುದನ್ನು ರೂಪಕದ ಮೂಲಕ ಹೇಳಿದ್ದಾರೆ. ಹಾಗಾಗಿ ಹಣ್ಣನ್ನು ತಿನ್ನಲು ಬಯಸುವುದು ಎಷ್ಟು ಸಹಜವೋ ಹೆಣ್ಣನ್ನು ಪಡೆಯಲು ಬಯಸುವುದು ಕೂಡ ಅಷ್ಟೇ ಸಹಜ ಎಂಬುದನ್ನು ಗಾದೆಯ ಮೂಲಕ ಹೇಳುತ್ತಾರೆ.

**ಒಗಟುಗಳು**

ಎರವ ಭಾಷೆ– ಕೇಂಬುಕರಿಕು ಉಪ್ಪು ಮಡಿಪ ಕಾಣಿ

ಎಂಡ್ಯು ಕಿರೆಂಜ ರಾಳಿರೆಮ್ಮೆ

ಮಗೇನ್ರಾಟಿ ತಾಳಿಕು ಮುತ್ತು ಕೆಟ್ಟುವ ಕಾಣಿ

ಎಂಡ್ಯು ಕಿರೆಂಜ

ಕನ್ನಡ: ಅತ್ತೆ ಕೆಸುವೆ ಸೊಪ್ಪಿನ ಸಾರಿಗೆ ಉಪ್ಪಿಲ್ಲ ಅಂತ ಅತ್ತರೆ

ಸೊಸೆ, ತಾಳಿ ಜೊತೆಗೆ ಮುತ್ತಿಲ್ಲ ಅಂತ ಅತ್ಲಂತೆ

ಅತ್ತೆ ಸೊಸೆಯರ ವಯೋಸಹಜವಾದ ಭಿನ್ನತೆಯನ್ನು, ಬಡತನವನ್ನು ನಾವು ಇಲ್ಲಿ ಗಮನಿಸಬಹುದು. ಕೆಸುವೆ ಸೊಪ್ಪು ನೀರಿನ ತೇವಾಂಶವಿರುವ ಜಾಗದಲ್ಲಿ ಧಾರಾಳವಾಗಿ ಬೆಳೆಯುವ ಒಂದು ಜಾತಿಯ ಗಿಡ. ಬಹಳ ಪೌಷ್ಟಿಕಾಂಶಭರಿತವಾದುದು.

ಎರವ ಭಾಷೆ- ರಾಳೆಂಜಮ್ಮ ಸತ್ತೀಚು ಆರು ತಿಂಗ ಕಾಂಜು

ಪಿಞಗೆ ಮಂಗೇಜಾಟ್ರಿ ಕಣ್ಣಲ್ಲಿ ನೀರು ಬಂದ

ಅಯ್ನೊರು ದುಃಖವೊ?

ಕನ್ನಡ - ಅತ್ತೆ ಸತ್ತ ಆರು ತಿಂಗಳ ನಂತರ ಸೊಸೆ ಕಣ್ಣಲ್ಲಿ

ನೀರು ಬಂದರೆ ಅದನ್ನು ನಿಜವಾದ ದುಃಖ ಎಂದು ಭಾವಿಸಲಾಗುತ್ತದೆಯೇ?

ಇವು ಅತ್ತೆ ಸೊಸೆಯರ ನಡುವಿನ ಸಂಬಂಧದ ಚಿತ್ರಣವಾಗಿದೆ. ಅತ್ತೆ ಸತ್ತಳೆಂದು ಖುಷಿಪಡುವ ಸೊಸೆಯು ಅನಂತರ ಅತ್ತೆಯನ್ನು ನೆನೆದು ದುಃಖಿಸಿದರೆ ಅದನ್ನು ಪ್ರೀತಿ ಎಂದು ಭಾವಿಸಲಾಗುವುದಿಲ್ಲ.

## 4.2. ಜೇನುಕುರುಬರ ಮೌಖಿಕ ಸಾಹಿತ್ಯದ ಪ್ರಕಾರಗಳು

ಜೇನುಕುರುಬರ ಮೌಖಿಕ ಸಾಹಿತ್ಯವು ಮುಖ್ಯವಾಗಿ ಪ್ರಕೃತಿಯನ್ನು ಕುರಿತದ್ದಾಗಿದೆ. ಕಾಡಿನಲ್ಲಿ ಬುಡಕಟ್ಟುಗಳ ಬದುಕಿನ ಹಾದಿಯಲ್ಲಿ ಹಾದು ಬರುವ ಪ್ರಾಣಿ-ಪಕ್ಷಿ, ಗಿಡ-ಮರ ಹಳ್ಳ-ತೊರೆಗಳು ಇವರ ಸಾಹಿತ್ಯದಲ್ಲಿ ಜೀವವನ್ನು ಪಡೆಯುತ್ತವೆ. ಮನುಷ್ಯನ ಜೀವನಾವರ್ತದ ಆಚರಣೆಗಳಾದ ಹುಟ್ಟು, ಸಾವು, ಮದುವೆ, ಮೈನೆರೆಯುವ ಸಂದರ್ಭ, ಬಸಿರು, ಬಾಣಂತನಗಳಲ್ಲಿ ಹಾಡುಗಳನ್ನು ಕಟ್ಟಿ ಹಾಡಲಾಗುತ್ತದೆ. ತಮ್ಮ ಸಮುದಾಯದ ದೈವಗಳ ಜೊತೆಗೆ ಇತರೆ ಸಮುದಾಯದ ದೈವಗಳ ಆರಾಧನೆಯ ಭಾಗವಾಗಿ ಕಟ್ಟಿರುವ ಹಾಡುಗಳು ಕೂಡ ಇವೆ. ಅಲ್ಲದೆ ಗಾದೆ, ಒಗಟು, ಕತೆ, ಕಾವ್ಯಗಳು ಅವರ ಬದುಕಿನ ಚಿತ್ರಣವನ್ನು ನಮ್ಮ ಮುಂದಿಡುತ್ತವೆ. ಈ ರೀತಿ ಹಲವಾರು ಪ್ರಕಾರಗಳ ಮೌಖಿಕ ಸಾಹಿತ್ಯವನ್ನು ನಾವು ಗುರುತಿಸ ಬಹುದು.

**ಬೇಟೆಯ ಹಾಡುಗಳು**

ಜೇನುಕುರುಬರಿಗೂ ಬೇಟೆಗೂ ನಂಟು ಬಹಳ. ಅದರಲ್ಲೂ ಇವರು ಜೇನು ಬೇಟೆಯಲ್ಲಿ ಬಹಳ ಪರಿಣತರು. ಆದ್ದರಿಂದಲೇ ಅವರನ್ನು ಜೇನುಕುರುಬರು ಎಂದು ಕರೆಯಲಾಗಿದೆ. ಈ ಜೇನಿಗೆ ಸಂಬಂಧಿಸಿದಂತೆ ಹಾಡುಗಳು, ಕತೆಗಳಿವೆ. ಈ ಕೆಳಗೆ ನೀಡಲಾಗಿರುವ ಹಾಡು ಜೇನಿನ ಬೇಟೆಯ ಕುರಿತ ಹಾಡು ಮಾತ್ರವಲ್ಲ, ಬದಲಿಗೆ ಶತಮಾನಗಳ ಕಾಲ ಈ ಜೇನುಕುರುಬ ಸಮುದಾಯ ಸಾಗಿ ಬಂದ ಬದುಕಿನ ಹಲವು ಮಗ್ಗುಲುಗಳನ್ನು ನಮಗೆ ಪರಿಚಯಿಸುತ್ತದೆ. ಇದು ನೋವು ನಲಿವುಗಳ ಸಂಗಮವಾಗಿದೆ.

'ಜೇನೆ ಜೇನೆ ಆಕಾಶದ ಅರಮನೆ
ಜೇನೆ ಮರೆಕಾರ ಬಂದನಲ್ಲೋ
ಜೇನುಯ್ಯೋ ಬುಣು ಬುಣು ಬುಣು ಬುಣು
ಜೇನೆ ಹೊಂಬಾಳೇ ಹೂವಾಕೀಯ್ದು
ಜೇನೆ ನೀ ಹಿಂಬಾಳೆ ಹೋಗಾದು ಸಂದ
ಜೇನೆ ಹೊಂಗೇಯ ಹೂವಾಕೀಯ್ದು
ಜೇನೆ ಹೊನ್ನಾಡಿ ಲಾರಗೀದೆ
ಜೇನುಯ್ಯೋ ಬುಣು ಬುಣು ಬುಣು ಬುಣು
ಜೇನೆ ಆಕಾಶದ ಅರಮನೆ
ಜೇನೆ ಮರೆಕಾರ ಬಂದನಲ್ಲೋ
ಜೇನೆ ಹುಟ್ಟುವಾಗ ಅಣ್ಣತಮ್ಮ
ಜೇನೆ ನೀ ಬೇಳೀವಾಗ ದಾದಿಪಾಲು
ಜೇನೇ ನೀ ಹೋಗೋವಾಗ ಒಂದೇ ಹಾದಿ
ಜೇನೆ ನೀ ಬರುವಾಗ ಚೆಲ್ಲಾಪಿಲ್ಲಿ
ಜೇನೆ ನೀ ರಾಗಿಯ ಹೂವ ಎತ್ತಿ
ಜೇನೆ ನೀ ರಾಗ ಮಾಡಲೊರಗಿದೆ
ಜೇನೆ ನೀ ತಾರಿಯ ಹೂವ ಎತ್ತಿ
ಜೇನೆ ನೀ ತಾರಾಡಿಲಾರಗಿದೆ
ಜೇನೆ ನೀ ಸುಳಿಗೊಡು ನೀರೆ ಎತ್ತಿ
ಜೇನೆ ನೀ ಸುಳಿದಾಡಲಾರಗಿದೆ....'[8]

ಈ ರೀತಿ ಸಾಗುವ ಈ ಹಾಡಿನಲ್ಲಿ ಜೇನುಕುರುಬರು ಹಿಂದೆ ವ್ಯವಸಾಯಗಾರರಾಗಿದ್ದವರು, ರಾಗಿ, ಕುಂಬಳ, ಹುರುಳಿ ಮೊದಲಾದವುಗಳನ್ನು ಬೆಳೆಯುತ್ತಾ ಸ್ವಾವಲಂಬಿಗಳಾಗಿ ಬದುಕಿದವರು ಎಂಬ ಮಾಹಿತಿಯಿದೆ. ಜೇನುಹುಳುಗಳಂತೆ ಸಮೃದ್ಧವಾದ ದಟ್ಟ ಕಾನನದ ನಡುವೆ ಹೊನ್ನೆ, ಮತ್ತಿ, ತಾರಿ ಮರಗಳ ನಡುವೆ ಸ್ವಚ್ಛಂದವಾಗಿ ಬದುಕಿದವರು ನಾವು ಎಂಬುದನ್ನು ಹೇಳುತ್ತದೆ.

'ಜೇನು ಕುರುಬರು ನಂಗವೆ ಕಣೆ
ಜೇನು ಕೀಯಾದು ನಂಗವೇ
ಅಜ್ಜಯ್ಯ ಹೇಳಿದ ಮಾತು ಕಣೇ
ಕಾಡಿನ ಕುರುಬರು ನಂಗವೇ
ಗಾಸು ಅಗಿಯಾದು ನಂಗವೇ
ಜೇನು ಕೀಯಾಲು ಒತ್ತವೆ ಬೇಕು
ತುಪ್ಪ ಇಳುಕಲು ಪೂಣಿವೇ ಬೇಕು
ತುಪ್ಪ ಹಾಕಲೆ ಮಡಕೆವೇ ಬೇಕು
ತುಪ್ಪ ಹಿಂಡಲು ಕೊಟ್ಟವೇ ಬೇಕು
ಅಜ್ಜಯ್ಯ ಹೇಳಿದ ಮಾತು ಕಣಪ್ಪ ಅಜ್ಜಯ್ಯ ಹೇಳಿದ ಮಾತು ಕಣೆ'

ಜೇನು ಕೀಳುವ ಸಂದರ್ಭದಲ್ಲಿ ಅನುಸರಿಸುವ ವಿಧಾನವನ್ನು ಈ ಹಾಡಿನಲ್ಲಿ ಅನುಕರಿಸುತ್ತಾರೆ. ಈ ಜೇನು ಕೀಳುವ ಕಾಯಕ ನಮಗೆ ನಮ್ಮ ಹಿರಿಯರಿಂದ ಬಂದಿದ್ದು ಅಜ್ಜಯ್ಯ ನಮಗೆ ಹೇಳಿಕೊಟ್ಟಿದ್ದು ಎಂಬುದು ಇದರ ಅರ್ಥ.

**ಮನರಂಜನೆಯ ಹಾಡುಗಳು**

ಇದೊಂದು ಸಾಮೂಹಿಕ ನೃತ್ಯ. ಸಮುದಾಯದವರೆಲ್ಲ ಒಟ್ಟಿಗೆ ಸೇರಿದ ಸಂದರ್ಭದಲ್ಲಿ ಜೊತೆಗೂಡಿ ಹಾಡುತ್ತಾ ನರ್ತಿಸುತ್ತಾರೆ. ಕಾಡನ್ನು ಬಿಟ್ಟು ಏನನ್ನೂ ಯೋಚಿಸದವರು. ಇವರ ಮನರಂಜನೆಯ ವಸ್ತು ವಿಷಯ ಕೂಡ ಕಾಡು ಮತ್ತು ಕಾಡಿನ ಪ್ರಾಣಿ ಪಕ್ಷಿಗಳಿಗೆ ಸಂಬಂಧಿಸಿದ್ದು. ಕಾಡಿನಲ್ಲಿ ಒಂದು ಹಕ್ಕಿಯ ಹೆಸರು ಸಿದಗಲಕ್ಕಿ. ಇದು ಒಂದು ಜಾತಿಯ ಸಣ್ಣ ಕೋಳಿಯ ಆಕಾರದ ಪಕ್ಷಿ. ಅವು ಕಾಡಲ್ಲಿ ಗುಂಪು ಗುಂಪಾಗಿ ಇರುತ್ತವೆ. ಅಕ್ಕ ತಂಗಿಯರಂತೆ ಸದಾ ಶಬ್ದ ಮಾಡುವುದರಿಂದ ಅದನ್ನು ಸಿದಗಲಕ್ಕಿ ಎಂದು ಕರೆಯುತ್ತಾರೆ. ಜೇನುಕುರುಬರಿಗೆ ಬಹಳ ಇಷ್ಟವಾದ ಆಹಾರ. ಅದನ್ನು ಬೇಟೆಯಾಡುವ ಅಣುಕು ನೃತ್ಯವಿದು. ಆಸಕ್ತಿ ಇರುವ ಎಲ್ಲ ವಯೋಮಾನದವರು ಈ ನೃತ್ಯದಲ್ಲಿ ಪಾಲ್ಗೊಳ್ಳಬಹುದು. ಹೆಣ್ಣುಮಕ್ಕಳು

ಹೆಚ್ಚಾಗಿ ಈ ನೃತ್ಯವನ್ನು ಮಾಡುತ್ತಾರೆ. ಈ ನೃತ್ಯವು ಬೇಟೆಯಾಡುವಾಗಿನ ಅವರ ಭಾವ, ಭಾಷೆಯನ್ನು ಅನುಕರಿಸಿ ಅಭಿನಯಿಸುವಂತಿರುತ್ತದೆ.

'ಸಿದಗಲಕ್ಕಿನ ಲಕ್ಕಿ ಮರುಕ್ಕ
(ಸೊಲ್ಲು) ಬಾರೆ ಸಿದಗಲೆ
ಗುಂಪು, ಗುಂಪು ಕೂತದಿಗೆ
(ಸೊಲ್ಲು) ಬಾರೆ ಸಿದಗಲೆ
ಕುಪ್ಪೋಡೆ ಬತ್ತಾದೆ
(ಸೊಲ್ಲು) ಬಾರೆ ಸಿದಗಲೆ
ಕುಪ್ಪಿ ಕುಪ್ಪಿ ಬತ್ತದೆ
(ಸೊಲ್ಲು) ಬಾರೆ ಸಿದಗಲೆ
ಹಾರಿ ಹಾರಿ ಹಿಡಿನವ್ವ
(ಸೊಲ್ಲು) ಬಾರೆ ಸಿದಗಲೇ
ಪತ್ತಿ ಪತ್ತಿ ಹಿಡಿನವ್ವ
(ಸೊಲ್ಲು) ಬಾರೆ ಸಿದಗಲ
ಅಡ್ಡ ಹಾಕಿ ಹಿಡಿನವ್ವ
(ಸೊಲ್ಲು) ಬಾರೆ ಸಿದಗಲೆ
ಗುತ್ತಿ ಒಳಗೆ ಕೂತದಿಗೆ
(ಸೊಲ್ಲು) ಬಾರೆ ಸಿದಗಲೆ
ಗೂಡೊಳಗೆ ಕೂತದಿಗೆ
(ಸೊಲ್ಲು) ಬಾರೆ ಸಿದಗಲೇ
ಬಿಲ್ಲು ಉರುಣೆ ಎತ್ತೋಡು
(ಸೊಲ್ಲು) ಬಾರೆ ಸಿದಗಲೆ
ಅದಕ್ಕಾದರೇ ಹಿಡಿತೀನಿ
(ಸೊಲ್ಲು) ಬಾರೆ ಸಿದಗಲೆ
ಇಲ್ಲಿವೆ ಕೂತದಿಗೆ

(ಸೊಲ್ಲು) ಬಾರೆ ಸಿದಗಲೆ

ಕಾಲಾದರು ಮುರುದು ಹೋತು

(ಸೊಲ್ಲು) ಬಾರೆ ಸಿದಗಲೆ

ಎಲ್ಲ ಹಕ್ಕಿ ಹಿಡಿತೋಣೆ

(ಸೊಲ್ಲು) ಬಾರೆ ಸಿದಗಲೆ'

**ದೇವರ ಹಾಡುಗಳು**

ಕಾಡಿನ ದೇವರುಗಳಾದ ಮಾಸ್ತಮ್ಮ, ಬಿಸಿಲೋಡಿ ದೇವರು, ಮಾರಮ್ಮನನ್ನು ಪೂಜಿಸುತ್ತಿದ್ದ ಈ ಸಮುದಾಯವು ಅನಂತರದಲ್ಲಿ ವೈದಿಕ ದೇವರುಗಳನ್ನು ಕೂಡ ಪೂಜಿಸಲು ಪ್ರಾರಂಭಿಸಿತು. ಅಜ್ಜಯ್ಯನೇ ಇವರ ಮುಖ್ಯ ದೇವರು, ಅನಂತರವೇ ಉಳಿದ ದೇವರುಗಳು ಎಂಬ ಮಾತನ್ನು ಹೇಳುತ್ತಾರೆ.

ಹಾಡೀಯ ದೇವನೇ ನಂಬಕ ನಂಗ
ದೇವರ ದರುಶನ ಮಾಡಾಕನಂಗ
ಭಕ್ತಿಯ ಪೂಜೆ ನೀಡಾಕ ನಂಗ
ವರವ ಕೇಳಿ ಕುಳಿಯಾಕ ನಂಗ
ಹಾಡಿಯ ದೇವನೇ ಮರಿಯಾ ಬ್ಯಾಡಾ
ಹಾಡಿಯಾ....
ಹಾಡಿಯ ಜನ ದೇವರ್ನೇ ನಂಬಿ
ದೇವರ ಹಬ್ಬ ಮಾಡಕ ನಂಗ
ದೇವರ ಭಕ್ತಿ ಇರಾಕ ನಂಗ
ದೇವರ ಬಲವೇ ನಂಗಾಕ ಬೇಕು
ಹಾಡಿಯ....
ದೇವರ್ನೇ ನಂಗ ದೂರಾದು ಬೇಡ
ದೇವರು ಒಂದೇ ನಾಮ ಬೇರೆ
ನಂಗಾಕ ಇರೋದು ಒಂದೊಂದು ದೇವರು
ಅಜ್ಜಯ್ಯ ಮಾಡಿದ ಸಂಪಾದ್ನೆ
ಹಾಡಿಯಾ...."

## ಜೇನುಹಕ್ಕಿಯ ಕಥೆ

ಒಂದು ಕಾಡಿನಲ್ಲಿ ಆರು ಜನ ಜೇನುಕುರುಬ ಸೋದರರಿಗೆ ಒಬ್ಬಳೇ ತಂಗಿಯಿದ್ದಳಂತೆ. ಆಕೆ ಬಹಳ ಚಲುವೆಯಾಗಿದ್ದಳಂತೆ. ಅದೇ ಕಾಡಿನಲ್ಲಿದ್ದ ಒಬ್ಬ ಸುಂದರ ತರುಣನಿಗೆ ಈ ತರುಣಿ ಮನಸೋಲುತ್ತಾಳೆ. ಅಣ್ಣಂದಿರಿಗೆ ಇಷ್ಟವಿಲ್ಲದೇ ಇದ್ದರೂ ತಾನು ಪ್ರೀತಿಸಿದ ತರುಣನನ್ನು ಮದುವೆಯಾಗುತ್ತಾಳೆ. ಇದರಿಂದ ಕೋಪಗೊಂಡ ಅಣ್ಣಂದಿರು ಹೇಗಾದರೂ ಮಾಡಿ ಆ ಹುಡುಗನನ್ನು ಕೊಲ್ಲಲು ಉಪಾಯ ಮಾಡುತ್ತಾರೆ. ಅಂತೆಯೇ ಜೇನು ಕೀಳುವ ನೆಪದಲ್ಲಿ ತಂಗಿಯ ಗಂಡನನ್ನು ಕಾಡಿಗೆ ಕರೆದುಕೊಂಡು ಹೋಗಿ ಅತ್ಯಂತ ಎತ್ತರವಾದ 'ಬರೆ' ಎನ್ನುವ ಮರಕ್ಕೆ ಹತ್ತಿಸುತ್ತಾರೆ. ಮರ ಹತ್ತಿದ ತರುಣ ಎಲ್ಲ ಗೂಡುಗಳನ್ನು ಕತ್ತರಿಸಿ ಪೂಣಿಯ ಮೂಲಕ ಕೆಳಗೆ ಇಳಿಸುತ್ತಾನೆ. ಆದರೆ ಒಂದು ಗೂಡು ಮಾತ್ರ ಬಹಳ ಎತ್ತರದಲ್ಲಿದ್ದ ಕಾರಣ ಅದನ್ನು ಕತ್ತರಿಸಲು ಆತನಿಂದ ಸಾಧ್ಯವಾಗುವುದಿಲ್ಲ. ಆದರೆ ಕೆಳಗೆ ನಿಂತಿದ್ದ ಸಹೋದರರು ಆ ಒಂದು ಕೊನೆಯ ಗೂಡನ್ನು ಇಳಿಸಿದರೆ ಮಾತ್ರ ನಿನ್ನನ್ನು ನಾವು ಕೆಳಗೆ ಇಳಿಸುತ್ತೇವೆಂದು ಹೇಳಿ ಮನೆಗೆ ಹೊರಟು ಹೋಗುತ್ತಾರೆ. ಮರದ ಮೇಲಿದ್ದ ತರುಣನನ್ನು ಜೇನುಹುಳಗಳೆಲ್ಲ ಮುತ್ತಿಕೊಳ್ಳುತ್ತವೆ. ಇತ್ತ ತನ್ನ ಅಣ್ಣಂದಿರು ಮಾತ್ರ ಬಂದುದನ್ನು ಕಂಡು ಕಳವಳಗೊಂಡ ತಂಗಿ ಗಂಡನನ್ನು ಹುಡುಕುತ್ತ ಆ ಮರದ ಬಳಿಗೆ ಬರುತ್ತಾಳೆ. ನಡೆದ ವಿಷಯವನ್ನೆಲ್ಲಾ ಹೇಳಿದ ಆಕೆಯ ಗಂಡ ನಾನು ಕೆಳಗೆ ಇಳಿದು ಬರಬೇಕಾದರೆ ನೀನು ಒಂದು ಮೊರ, ಬರಲು ಬೆಂಕಿಕೊಳ್ಳಿ ಮತ್ತು ಬತ್ತಿಯನ್ನು ತಂದು ಮರದ ಕೆಳಗೆ ಪೂಜಿಸಿ ಹೊರಟು ಹೋಗಬೇಕು. ಆದರೆ ಯಾವುದೇ ಕಾರಣಕ್ಕೂ ಹಿಂತಿರುಗಿ ನೋಡಬಾರದು ಎನ್ನುತ್ತಾನೆ. ಅದರಂತೆ ಅವಳು ಪೂಜಿಸಿ ವಾಪಸ್ಸು ಬರುತ್ತಿರುವಾಗ ಆ ಮರದ ಕೊಂಬೆ ನಿಧಾನವಾಗಿ ಕೆಳಗೆ ಇಳಿಯ ತೊಡಗುತ್ತದೆ. ಆಗ ಉಂಟಾದ ಶಬ್ದ ಕೇಳಿದ ಆಕೆ ತನ್ನ ಗಂಡ ಇಳಿದನೆಂದು ಭಾವಿಸಿ ಹಿಂತಿರುಗಿ ನೋಡಿಬಿಡುತ್ತಾಳೆ. ತಕ್ಷಣ ಮರದ ಕೊಂಬೆ ಮಾಮೂಲಿಯಂತೆ ಮೇಲೆರುತ್ತದೆ. ಗಂಡನ ಪ್ರಾಣ ಹೊರಟುಹೋಗುತ್ತದೆ. ಸಾಯುವ ಮೊದಲು ತಾನು ಪಕ್ಷಿಯಾಗಿ ಬರುತ್ತೇನೆಂದು ಹೇಳಿ ಸಾಯುತ್ತಾನೆ. ಅಂತೆಯೇ ಮೊರ ರೆಕ್ಕೆಯಾಗುತ್ತದೆ, ಬರಲು ಬಾಲವಾಗಿ ಬೆಂಕಿಕೊಳ್ಳಿ ಮೈಬಣ್ಣವಾಗಿ ಆತ ಹಕ್ಕಿಯಾಗುತ್ತಾನೆ. ಈಗಲೂ ಜೇನು ಕೀಳುವಾಗ ಜೇನುಹಕ್ಕಿ ಬಂದು ಕೂಗುತ್ತದೆ ಎಂದು ಜೇನುಕುರುಬರು ನಂಬುತ್ತಾರೆ. ಈ ಜೇನುಹಕ್ಕಿ ಜೇನನ್ನು ತಿಂದು ಬದುಕುವ ಪಕ್ಷಿ ಎನ್ನುತ್ತಾರೆ.

## ಜೇನುಕುರುಬರ ಒಗಟುಗಳು ಅಥವಾ ಒಂಟು

ಅತ್ಯಂತ ಸ್ವಾರಸ್ಯಕರವಾಗಿರುವ ಇವರ ಒಗಟುಗಳು ಬುದ್ಧಿಗೆ ಸಾಣೆ ಹಿಡಿಯುತ್ತವೆ. ಪ್ರಕೃತಿಯನ್ನು ವಿಸ್ಮಯದಿಂದ ಗಮನಿಸುವವರು ಅದನ್ನು ತಮ್ಮ ಬುದ್ಧಿಶಕ್ತಿಗೆ ಅನುಗುಣವಾಗಿ

ಗಾದೆ ಒಗಟುಗಳ ರೂಪದಲ್ಲಿ ಹೇಳುತ್ತಾರೆ. ಆಧುನಿಕತೆಯ ಮುಖಾಮುಖಿಯಾಗುವ ಸಮಯದಲ್ಲಿ ಇವರಿಗೆ ಪ್ರತಿಯೊಂದು ಕೂಡ ಸೋಜಿಗದ ಸಂಗತಿಯಾಗಿದೆ.

1. ದೊಡ್ಡ ಉಂಡಿಲಿ ದನ ಕೂಡಿ ಎದ್ದು ಬಂದು ನೋಡಿದಾಗ ಒಂದು ಇರಾದಿಲ್ಲೆ – ನಕ್ಷತ್ರ
2. ಅಳ್ಳದೊಳ್ಳ ಒಬ್ಬ ಕುಳ್ಳ ಕೂತ್ಗುಂಡು ಬಂದವರ್‍ಗೆಲ್ಲ ಸವಾಲಾಗ್ತಾನೆ – ನಾಲಿಗೆ
3. ಬೆಟ್ಟ ಉಂಟ್ಕತು, ಬಿದ್ರು ತಡ್ಕತು – ಅನ್ನದ ಚಿಟ್ಲು
4. ಕೆರೇಲಿ ಒಂದು ಮರ ಉಟ್ಟಿ ನೀರ್‍ನು ಕುಡ್ಕತು ಬತ್ತೀನು ತಿನ್ತು –ದೀಪ
5. ಅವ್ವೆ ಕೂತವಳೆ ಮಗಳು ಓಡಾಡುತಾವ್ಳೆ – ನೀರು ತುಂಬುವ ಮಡಕೆ ಮತ್ತು ಚೊಂಬು
6. ಹೋಗಂದರೆ ಹೋತದೆ ಬಾ ಅಂದರೆ ಬತ್ತದೆ– ಬಾಗಿಲು
7. ಬೇಲಿ ಸುತ್ತ ಕತ್ತೆತ್ತುಕೊಂಡು ಹೋತದೆ – ಕುಂಬಳ ಬಳ್ಳಿ
8. ಸತ್ತೋದವ ಸಂತೆಗೆ ಬತ್ತಾನೆ – ಮೀನು
9. ಹುಲ್ಲಿಟ್ರೆ ಬರಲ್ಲ ಕಲ್ಲಿಟ್ಟರೆ ಬತ್ತದಿಗೆ– ಕಳ್ಳಿ ಮರದ ಹಾಲು
10. ಹೆಬ್ಬಲ್ಸು ಮರ ತಬ್ಬಲೆಸಾಗ, ನಾಯಿ ಬೆತ್ತ ಹಾಕಲು ಹಿಡಿಯಲೆ ಸಾಗ – ಕೋವಿ

### 4.3. ಬೆಟ್ಟಕುರುಬರ ಮೌಖಿಕ ಸಾಹಿತ್ಯದ ಪ್ರಕಾರಗಳು

ಬೆಟ್ಟಕುರುಬರು ತಮ್ಮ ಬೆಟ್ಟಕುರುಬ ಭಾಷೆಯಲ್ಲಿ ಅಪಾರವಾದ ಮೌಖಿಕ ಸಾಹಿತ್ಯವನ್ನು ಹೊಂದಿದ್ದಾರೆ. ಬೆಟ್ಟಕುರುಬರು ಕಾಡಿನ ಅವಿಭಾಜ್ಯ ಅಂಗದಂತೆ ಬದುಕಿದವರು. ಕಾಡಿನ ಸಮಸ್ತದ ಅರಿವು ಅವರಿಗಿದ್ದು ಕಾಡೆ ಅವರ ಉಸಿರು ಎಂಬಂತೆ ಬದುಕುವವರು. ಈ ಹಾಡಿನಲ್ಲಿ ಅರಣ್ಯ ಇಲಾಖೆಯು ಕಾಡಿನಲ್ಲಿ ತೇಗದ ಮರಗಳನ್ನು ಈ ಬುಡಕಟ್ಟುಗಳಿಂದಲೇ ನೆಡಿಸುತ್ತಾರೆ. ಅರಣ್ಯ ಕಾನೂನಿನ ನೆಪದಲ್ಲಿ ತಮ್ಮ ಭೂಮಿಯನ್ನು ಅರಣ್ಯ ಇಲಾಖೆ ಕಸಿದು ಕೊಳ್ಳುತ್ತದೆ ಎಂಬ ಅರಿವಿಲ್ಲದೆ ಅವರು ಆ ಕೆಲಸವನ್ನು ಬಹಳ ಶ್ರದ್ಧೆಯಿಂದ ಮಾಡುತ್ತಾರೆ. ಈ ತೇಗದ ಕಾಡನ್ನು ನೆಟ್ಟವರು ನಾವು ಮತ್ತು ಈ ಕಾಡಿನ ರಕ್ಷಕರು ನಾವು ಎಂಬುದು ಈ ಸಾಲುಗಳ ಅರ್ಥ.

'ತ್ಯಾಕೆ ಮರ ನಟ್ನ್ ಬಂದ ಬೆಟ್ಟಕುರುಬನ್
ಕೊರಗಾಡನ ಉಳಸೊಂಡ್ ಬಂದ ಬೆಟ್ಟಕುರುಬನ್
ಮದ್ದ್ ಬೇರ ಕಂಡ್ ಬಂದ ಬೆಟ್ಟಕುರುಬನ್

ತೊಂಡಿ ಕಾಡ ಕೆತ್ತನ್ ಬಂದ ಬೆಟ್ಟಕುರುಬನ್
ಮೊರಗಾಡ್ನ ಪಾಲಸೊಂಡ್ ಬಂದ ಬೆಟ್ಟಕುರುಬನ್
ಮದ್ದ್ ಬೇರ ಕಂಡ್ ಬಂದ ಬೆಟ್ಟಕುರುಬನ್'

ಕರ್ನಾಟಕದಲ್ಲಿ ಹನ್ನೆರಡನೇ ಶತಮಾನದಲ್ಲಿ ನಡೆದ ಸಾಮಾಜಿಕ ಕ್ರಾಂತಿಯು ಅರಣ್ಯದೊಳಗಿನ ಈ ಬುಡಕಟ್ಟು ಸಮುದಾಯಗಳ ಮೇಲೂ ಪ್ರಭಾವ ಬೀರಿತು. 'ಹಿಂದೆ ಈ ಪ್ರದೇಶದಲ್ಲಿ ಬೆಟ್ಟಕುರುಬರು ಪ್ರಬಲರಾಗಿದ್ದಾಗ ಆ ಜನರ ಏಳಿಗೆಗಾಗಿ ಎಂಟು ಮಠಗಳು ಇದ್ದುವೆಂದು ತಿಳಿದುಬರುತ್ತದೆ'.[10] ಅವರ ಹಾಡುಗಳಲ್ಲೂ ಕೂಡ ಈ ಮಠಗಳ ಬಗ್ಗೆ ಪ್ರಸ್ತಾಪವಿದೆ. ಅದಕ್ಕೆ ಉದಾಹರಣೆಯಾಗಿ ಇಲ್ಲಿ ದೇವರ ಹಾಡನ್ನು ನೀಡಲಾಗಿದೆ.

ಯಾರು ಬಂದರೂ ಮಠಕೆ
ದೀಪದ ಮಂಜಿನೊಳಗೆ
ಹುಲಿಯಾದ ಮೇಲೆ ವಾಲಾಡಿ ಬರುವ
ಯಾರೂ ಬಂದರೂ ಮಠಕೆ
॥ಯಾರೂ ಬಂದರೂ॥
ಸೋಮಾರದಿವ್ಸ ಮನೆ ಮಠ ತಾರಿಸಿ
ಅಂಡೆ ತುಂಬಲು ಕರುದವಳೆ
ಯಾರೂ ಬಂದರೂ ಮಠಕೆ
॥ ಯಾರೂ ಬಂದರೂ ॥
ಅಂಡೆಯ ಹೊತ್ತಿಕೊಂಡು
ಹಿಂಡೆಮ್ಮೆ ಹೊಡಕೊಂಡು
ಅಂಡೆ ತುಂಬಲು ಕರುದವಳೆ
ಯಾರೂ ಬಂದರೂ ಮಠಕೆ
॥ ಯಾರೂ ಬಂದರೂ ॥
ಅರಿವಾಣದೊಳಗವ್ರೆ ಕಿತ್ತೋಳೆ ಹರುದವ್ರೆ
ಕಿತ್ತಾಡಿ ಬರುವ ಪರುಸೆಗೆ
ಯಾರೂ ಬಂದರೂ ಮಠಕೆ
॥ ಯಾರೂ ಬಂದರೂ ॥೧೧

ಹೀಗೆ ಸಾಗುವ ಈ ಹಾಡಿನಲ್ಲಿ ಈ ಸಮುದಾಯವು ಮಠಗಳಿಗೆ ನಡೆದುಕೊಳ್ಳುತ್ತಿದ್ದ ವಿವರಗಳು ದೊರೆಯುತ್ತವೆ. ಧಾರ್ಮಿಕವಾಗಿ ಬಹಳ ನೇಮನಿಷ್ಠರಾದವರು. ಬೆಟ್ಟಕುರುಬರು ಬಹಳ ಭಯ ಭಕ್ತಿಯಿಂದ ತಮ್ಮ ನಂಬಿಕೆಗಳನ್ನು ಪಾಲಿಸುವವರು.

**ಗಾದೆಗಳು**

ಮನುಷ್ಯನ ಬದುಕಿಗೆ ಸಂಬಂಧಿಸಿದ, ಮನುಷ್ಯನ ವರ್ತನೆಗೆ ಸಂಬಂಧಿಸಿದ ಗಾದೆಗಳು ಬೆಟ್ಟಕುರುಬರ ಭಾಷೆಯಲ್ಲಿವೆ. ಇವು ಬೆಟ್ಟಕುರುಬರ ಬದುಕಿನ ಮೌಲ್ಯಗಳನ್ನು ಕುರಿತು ವಿವರಗಳನ್ನು ನೀಡುವ ಮೂಲಕ ನೀತಿಯ ಸಂದೇಶವನ್ನು ಸಾರುತ್ತವೆ.

1. ಮುಂಡೆ ಪಟ್ಟನೆ ಮಂಡ್ ಪಡಿಕ್ ಬರ ಇಲ್ಲ – ತಲೆ ಇದ್ದರೆ ಪೇಟಕ್ಕೆ ಬರ ಇಲ್ಲ– ಸಮಸ್ಯೆಗಳಿದ್ದರೆ ಅದಕ್ಕೆ ಪರಿಹಾರವೂ ಕೂಡ ಇರುತ್ತದೆ ಎಂಬುದು ಈ ಮಾತಿನ ಅರ್ಥ
2. ಇಕ್ಕಿ ತಿಂಬಾಳ್ ಪೋಸನ್, ಭತ್ತ ತಿಂಬಾಳ್ ಬವ್ವೆ

   ಅಕ್ಕಿ ತಿನ್ನುವವಳು ಹೋದರೆ ಭತ್ತ ತಿನ್ನುವವಳು ಬರುತ್ತಾಳೆ ಎಂದು ಅರ್ಥ.
3. ಆಡ್ಲಿ ಬಾರ್ಲದೆ ಪಡುಳಂಗ ನೆಲನೇ ಡೊಂಕಂಗ

   ಕುಣಿಯೋಕೆ ಬರದವಳು ನೆಲ ಡೊಂಕು ಎಂದ್ಲಂತೆ.

## 4.4. ಸೋಲಿಗರ ಮೌಖಿಕ ಸಾಹಿತ್ಯದ ಪ್ರಕಾರಗಳು

ಸೋಲಿಗರ ಮೌಖಿಕ ಸಾಹಿತ್ಯವನ್ನು ನಾವು ಹಾಡುಗಳು, ಕತೆಗಳು, ಒಗಟುಗಳು, ಗಾದೆಗಳು, ಸೃಷ್ಟಿಪುರಾಣಗಳು, ಕಾವ್ಯಗಳು ಈ ಮುಂತಾಗಿ ವಿಭಾಗಿಸಬಹುದಾಗಿದೆ.

**ಹಾಡುಗಳು:** ಸೋಲಿಗರ ಹಾಡುಗಳನ್ನು ನಾವು ಮಕ್ಕಳ ಹಾಡುಗಳು, ಮನರಂಜನೆಯ ಹಾಡು, ದೈವಸಂಬಂಧಿ ಹಾಡು, ಬೇಟೆಯ ಹಾಡು ಎಂದು ಪ್ರತ್ಯೇಕವಾಗಿ ಗುರುತಿಸಬಹುದು.

**ಮಕ್ಕಳ ಹಾಡು:** ಮಕ್ಕಳಲ್ಲಿ ಮನರಂಜನೆಯ ಮೂಲಕ ಪರಿಸರದ, ಸಾಮುದಾಯಿಕ ಪ್ರಜ್ಞೆ ಮತ್ತು ಬದುಕಿನ ಕುರಿತ ಜ್ಞಾನವನ್ನು ಪಸರಿಸಲು ಈ ಹಾಡುಗಳು ಪರಿಣಾಮಕಾರಿಯಾಗಿ ಕೆಲಸ ಮಾಡುತ್ತವೆ.

'ಕೈ ಕೈ ಎಲ್ಲಿಗೋಯ್ತು
ಅಡಿ ಮೂಲಕೆ ಹೋಯ್ತು
ಅಡಿ ಏನು ಕೊಡ್ತು
ಚಕ್ಕೆ ಕೊಡ್ತು

ಚಕ್ಕೆ ಏನು ಮಾಡ್ದೆ

ಒಲಿಕ್ಕಾಕಿದೆ"[12]

**ಬೇಟೆಯ ಹಾಡು**

ಜೇನು ಬೇಟೆ ಎಂಬುದು ಸೋಲಿಗರ ಬದುಕಿನ ಭಾಗವಾಗಿದೆ. ಜೇನು ಅವರ ಆಹಾರ ದಲ್ಲೂ ಕೂಡ ಬಹುಮುಖ್ಯ ಸ್ಥಾನ ಪಡೆದಿದೆ ಮತ್ತು ಬುಡಕಟ್ಟುಗಳ ಆರೋಗ್ಯದ ಗುಟ್ಟು ಕೂಡ ಜೇನಿನ ನಿಯಮಿತ ಸೇವನೆಯೇ ಆಗಿದೆ. ಯಾವುದೇ ಜಾತಿಯ ಜೇನಾಗಲೀ ಸೋಲಿಗರು ಅದನ್ನು ಕೊಯ್ಯುವುದರಲ್ಲಿ ಪರಿಣತರು. ಇದು ಒಂದು ರೀತಿಯ ಸಾಹಸದ ಕೆಲಸವಾಗಿದ್ದರೂ ಕೂಡ ತಾವು ನಂಬಿದ ದೈವಗಳು ತಮ್ಮನ್ನು ಕಾಪಾಡುತ್ತವೆ ಎಂಬುದು ಅವರ ನಂಬಿಕೆ. ಆದಿ ದೈವಗಳಾದ ಕಾರಯ್ಯ ಬಿಲ್ಲಯ್ಯರು ತಮ್ಮ ಜೊತೆ ಬೇಟೆಗೆ ಬರುವುದರಿಂದ ತಮ್ಮನ್ನು ಅವರೇ ಕಾಪಾಡುತ್ತಾರೆ ಎಂಬುದು ಅವರ ಆತ್ಮವಿಶ್ವಾಸಕ್ಕೆ ಕಾರಣವಾಗಿದೆ.

**ಜೇನಿಗೆ ಸಂಬಂಧಿಸಿದ ಹಾಡು**

ಕಾರನಾ ಕರೆಯೋ ಕಾರಯ್ಯ

ಸೊಪ್ಪಿನರಕೆ ಕಾರನಾ

ಜೇನು ಕುಯ್ಯೋ ಬಿಲ್ಲಯೋ...

**ಪ್ರಾಣಿ ಬೇಟೆಯ ಹಾಡು:** ಸೋಲಿಗರು ಕಾಡಿನಲ್ಲಿ ಕಿರುಬೇಟೆಯನ್ನಾಡುವುದರಲ್ಲಿ ಸಿದ್ಧಹಸ್ತರು. ಇವರು ಕಾಡಿನಲ್ಲಿ ಮುಶು ಎಂಬ ಕೋತಿಯಾಕಾರದ ಪ್ರಾಣಿಯನ್ನು ಬೇಟೆಯಾಡಿ ಆಹಾರವಾಗಿ ಸೇವಿಸುತ್ತಾರೆ. ಆ ಸಮಯದಲ್ಲಿ ಅವರ ನಡುವೆ ನಡೆಯುವ ಸಂಭಾಷಣೆಯನ್ನು ಅನುಕರಿಸುವ ಹಾಡು ಈ ಕೆಳಗಿನಂತಿದೆ.

"ಜಲ್ಲೆಮರುವಾದಾ ಸೀಮೇಲೀ

ಜಲ್ಲೆಂದು ಬಿದ್ದೊ ಮುಶು ಹಿಂಡು ॥1॥

ಜ್ವಾರೆ ಬೆಟ್ಟ ದಾರೀಲಿ

ಬೆದರೀವೆ ಬೆಟ್ಟ ಸೇರೀದೋ ॥2॥

ಅಡ್ಡಕಾಲೇ ದಾರಿಯಲ್ಲಿ

ಅಡ್ವಾಕಾ ಹೋದ್ರೋ ಮುಳಿವಿಂಡು ॥3॥"[13]

ಕಾಡಿನ ನಾಡಿ ಮಿಡಿತವನ್ನು ಅರಿತಿರುವ ಬುಡಕಟ್ಟುಗಳು ಪ್ರಾಣಿಗಳ ಪಕ್ಷಿಗಳ ಚಲನವಲನವನ್ನು ಅದರ ವಾಸನೆಯಿಂದ, ಶಬ್ದಗಳಿಂದ, ಹಾರಾಡುವ ದಿಕ್ಕಿನಿಂದ, ಬೀಸುವ

ಗಾಳಿಯಿಂದ ತಿಳಿಯುವಷ್ಟು ಸೂಕ್ಷ್ಮಮತಿಗಳು. ಕಾಡಿನಲ್ಲಿ ಯಾವ ಸಮಯದಲ್ಲೇ ಆಗಲಿ ತೊಂದರೆ ಎದುರಾಗಬಹುದು. ಅದಕ್ಕೆ ಅವರು ಸದಾ ಜಾಗ್ರತರಾಗಿರುತ್ತಾರೆ. ಸನ್ನಿವೇಶದ ತೀವ್ರತೆಯನ್ನು ಅರಿತು ರಕ್ಷಣಾತಂತ್ರಗಳನ್ನು ಹೆಣೆಯುವಷ್ಟು ತೀಕ್ಷ್ಣಮತಿಗಳು. ಈ ಪದ್ಯವು ಅದಕ್ಕೊಂದು ಉದಾಹರಣೆಯಾಗಿದೆ.

ಆನೆ ಎದುರಾದಾಗ ಅದರಿಂದ ತಪ್ಪಿಸಿಕೊಳ್ಳುವ ಉಪಾಯವನ್ನು ಹೇಳುವ ಹಾಡು

ಕೊಂಬಿನಾನಿ ಬಂದಾನೆ

ಬೇಗಾನೆ ಮರುವಾನೇರಾನೆ

ಈ ಹಾಡುಗಳು ಕೇವಲ ಮನರಂಜನೆಯ ಉದ್ದೇಶದಿಂದಷ್ಟೇ ರಚನೆಯಾದುವಲ್ಲ. ಸಾಮೂಹಿಕವಾಗಿ ಹಾಡುವ ಈ ಹಾಡುಗಳು ತಮ್ಮ ಸಮುದಾಯಕ್ಕೆ ಜ್ಞಾನವನ್ನು ಹರಿಸುವ ಮಾಧ್ಯಮವಾಗಿವೆ. ಹಿರಿಯರ ಅನುಭವದ ಮೂಸೆಯಲ್ಲಿ ಅರಳಿರುವ ಇಂತಹ ಹಾಡುಗಳಿಂದ ಇದರಲ್ಲಿ ಭಾಗಿಯಾಗುವ ಸಣ್ಣಮಕ್ಕಳಿಂದ ಹಿಡಿದು ಎಲ್ಲ ವಯೋಮಾನದ ಗಂಡು ಹೆಣ್ಣುಗಳಿಗೆ ತಮ್ಮ ಪ್ರಾಕೃತಿಕ ಜ್ಞಾನವನ್ನು ವಿಸ್ತರಿಸಿಕೊಳ್ಳಲು ಸಹಕಾರಿಯಾಗಿದೆ.

**ದೈವಸಂಬಂಧಿ ಹಾಡುಗಳು:** ಸೋಲಿಗರ ಮುಖ್ಯ ದೇವರು ದೊಡ್ಡ ಸಂಪಿಗೆಯ ಒಡೆಯ. ಬಿಳಿಗಿರಿರಂಗನ ಬೆಟ್ಟದಲ್ಲಿ ಕಾಡಿನಲ್ಲಿರುವ ಸಾವಿರಾರು ವರ್ಷಗಳಷ್ಟು ಪುರಾತನವಾದ ಸಂಪಿಗೆ ಮರದಲ್ಲಿ ಈ ದೇವರು ನೆಲೆಸಿದ್ದಾನೆ ಎಂದು ಅದಕ್ಕೆ ಪ್ರತಿ ವರ್ಷ ಪೂಜೆ ಸಲ್ಲಿಸುತ್ತಾರೆ. ಗೋರುಖಾನ ಹಾಡಿನಲ್ಲಿ ಈ ಸಾಲುಗಳು ಮೂಡಿಬಂದಿವೆ.

'ದೊಡ್ಡ ಸಂಪಿಗೆ ನನ್ನೊಡೆಯ
ಕಾತು ಕಾಪಾಡು ಮಡುಗನ್ನಯ್ಯ
ಗೋರು ಗೋರುಕ ಗೋರುಕಾನ
ಕಾವಿಕಂತೆ ಹೊತ್ತೂರಯ್ಯ
ಬಂದು ನಿಂದವನೆ ರಂಗಲದಲಿ "ಗೋರು"
ಹೂವಿನ ಕೊಂಬು ಮುರಿಯಾಗಿಲ್ಲೆ
ಮೊಗ್ಗಿನ ಕೊಂಬು ಬಾಡಾಗಿಲ್ಲೆ
ಮೊಗ್ಗು ಮೊಗ್ಗುರೆಲ್ಲಾ ನಿನ್ನದಯ್ಯಾ?
ಕಣ್ಣಿಟ್ಟು ನೋಡುನು ದೇವಾರೆ "ಗೋರು'

2. ಸೋಲಿಗರು ಮಾತೃದೇವತಾರಾಧಕರು. ಮಾರಮ್ಮನ ಭಕ್ತರಾದ ಇವರು ಪ್ರತಿ ವರ್ಷ ಆಚರಿಸುವ ಮಾರಿ ಹಬ್ಬದಂದು ಹಾಡುವ ಈ ಹಾಡು ತ್ರಿಪದಿಯ ರೂಪದಲ್ಲಿದೆ.

'ಮಾರಮ್ಮ ಮಾರಮ್ಮ ಮಳಯಾಳ ದೇಸಾಕೆ ಹೊಂಟವಳೆ
ಮಳೆಬಂದ್ರ ಎಲ್ಲ ತಂಗಿವಳೋ ಮಾರಮ್ಮ
ಒಡೆದಂಬಳ ಸುಳಿಯಲ್ಲಿ ತಂಗವಳೆ'

**ಗಾದೆಗಳು**

1. ಕದ್ದ ಕೂಳು ಮದ್ದನಕಿಲ್ಲ
   ಸತ್ತ ಕೂಳು ಸಂದೇಕಿಲ್ಲ

**ಒಗಟುಗಳು**

1. ಕೊಕ್ಕುಮುಳ್ಳು ಅದ್ದುಗುಂಡು
   ಕುರಿಮರಿ ದಬ್ಬುಗುಂಡು
   ಜಾಣಗಾರ ಹಕ್ಕಿ ಮರದಮ್ಯಾಲೆ ಕೂತಾದೆ
   -ಹಲಸಿನ ಹಣ್ಣು
2. ಹಗಲು ಹೊತ್ತಲಿ ಹಾಳುತ್ವಾಟ
   ಇರುಳು ಹೊತ್ತಲಿ ಹೂವಿನ ತ್ವಾಟ
   -ದನಗಳ ಕೊಟ್ಟಿಗೆ

**ಸೃಷ್ಟಿಪುರಾಣ:** ಸೋಲಿಗರ ಮೂಲವನ್ನು ಹೇಳುವ ಈ ಕಥೆ ಅತ್ಯಂತ ಪ್ರಚಲಿತವಾದದ್ದು. ಬುಡಕಟ್ಟುಗಳು ತಮ್ಮ ಸೃಷ್ಟಿಯನ್ನು ಪ್ರಕೃತಿಯೊಂದಿಗೆ ಸಮೀಕರಿಸುತ್ತಾರೆ.

ಐತಿಹ್ಯದ ಪ್ರಕಾರ 'ಒಮ್ಮೆ ಪಾರ್ವತಿ ಪರಮೇಶ್ವರರು ತಮ್ಮ ಬೆವರ ಕೊಳೆಯಿಂದ ಎರಡು ಬೊಂಬೆಗಳನ್ನು ಮಾಡಿ ಅವಕ್ಕೆ ಜೀವ ನೀಡಿದರು. ಅವಕ್ಕೆ ನೀಲಯ್ಯ ಸಂಕಮ್ಮ ಎಂದು ನಾಮಕರಣ ಮಾಡಿದರು. ಮುಂದೆ ಇವರಿಗೆ ಮಹದೇಶ್ವರರ ದಯೆಯಿಂದ ಮಕ್ಕಳಾಗಿ ಹುಟ್ಟಿದವರು ಕಾರಯ್ಯ ಬಿಲ್ಲಯ್ಯ ಎಂಬ ಹೆಸರಿನಿಂದ ಪ್ರಸಿದ್ಧರಾದರು. ಇವರಿಂದ ಹುಟ್ಟಿದವರೇ ಸೋಲಿಗರು. ಇವರನ್ನು ಸೋಲಿಗರ ಮೂಲಪುರುಷರೆಂದು ತಿಳಿಯಲಾಗಿದೆ.'[14]

## 4.5. ಕುಡಿಯರ ಮೌಖಿಕ ಸಾಹಿತ್ಯದ ಪ್ರಕಾರಗಳು

ಕುಡಿಯರಲ್ಲೂ ಕೂಡ ಹೆಚ್ಚಿನ ಮೌಖಿಕ ಸಾಹಿತ್ಯವು ಆಚರಣೆಗೆ ಸಂಬಂಧಿಸಿವೆ. ಅವುಗಳನ್ನು ಕತೆಗಳು, ಹಾಡುಗಳು, ಒಗಟುಗಳು, ಗಾದೆಗಳು, ಐತಿಹ್ಯಗಳು, ಸೃಷ್ಟಿಪುರಾಣಗಳು

ಎಂದು ವಿಭಾಗಿಸಬಹುದು. ಈ ಮೌಖಿಕ ಸಾಹಿತ್ಯದಲ್ಲಿ ಆ ಸಮುದಾಯದ ನಂಬಿಕೆಗಳು, ಆಚಾರ, ವಿಚಾರ, ಸಂಪ್ರದಾಯ, ವಿಧಿನಿಷೇಧಗಳು ಪ್ರತಿಯೊಂದು ಅಡಗಿರುತ್ತವೆ. ಇವು ಸಮುದಾಯಕ್ಕೆ ನೀತಿ, ನಿಯಮಗಳನ್ನು ಹೇಳುವ ಮತ್ತು ಅದನ್ನು ಮುಂದಿನ ಪೀಳಿಗೆಗೆ ವರ್ಗಾಯಿಸುವ ಜವಾಬ್ದಾರಿಯನ್ನು ಹೊಂದಿರುತ್ತವೆ. ಆ ಸಮುದಾಯದ ಒಳಗಿನ ಬದುಕು ಬವಣೆ ತಲ್ಲಣಗಳು ಸುಖ, ದುಃಖ ನೋವು, ನಲಿವುಗಳು ಕೂಡ ಬಾಯಿಂದ ಬಾಯಿಗೆ ಈ ಮೂಲಕ ಹರಿದುಬರುತ್ತವೆ. ರಸಮಯ, ಹಾಸ್ಯಮಯ ಸನ್ನಿವೇಶಗಳನ್ನು ಸೃಷ್ಟಿಸಿ ಸಂಭ್ರಮಿಸುತ್ತಾರೆ. ರೋಚಕ, ರಮ್ಯ ಕಲ್ಪನೆಗಳನ್ನು ತಮ್ಮ ಪಾತ್ರಗಳಲ್ಲಿ ಸೃಷ್ಟಿಸಿ ಆನಂದಿಸುತ್ತಾರೆ. ಆ ಮೂಲಕ ತೃಪ್ತಿಯನ್ನು ಹೊಂದುತ್ತಾರೆ. ಇವರ ಆಡುಭಾಷೆ ಕೊಡವ ಭಾಷೆಯಾಗಿರುವುದರಿಂದ ಇವರ ಮೌಖಿಕ ಸಾಹಿತ್ಯದ ಹೆಚ್ಚಿನ ಭಾಗ ಕೊಡವ ಭಾಷೆಯಲ್ಲಿದೆ.

**ಹಾಡುಗಳು:** ಈ ಹಾಡು ಕುಡಿಯರ ಸರಳ ಮತ್ತು ಸಹಜ ಬದುಕನ್ನು ನಮಗೆ ಪರಿಚಯಿಸುತ್ತದೆ. ಮುನಿಸಿಕೊಂಡ ಹೆಂಡತಿಯನ್ನು ಒಲಿಸಿಕೊಳ್ಳಲು ಗಂಡ ಅವಳನ್ನು ರಮಿಸುವ ಹಾಡು.

ಗಂಡ– ಕಳ್ಳು ಕುಡಿಯುವ ಬಾ ಚೀಮಕ್ಕ
ಹೆಂಡತಿ– ಆ ಮೇಲೆ ಕುಡಿಯೋಣ ಚಿಪ್ಪಿ
ಗಂಡ– ಚಿಪ್ಪಿಯ ಸೇಂದಿಗೆ ಏನು ಸಾರು
ಹೆಂಡತಿ– ಚಿಪ್ಪಿಯ ಸೇಂದಿಗೆ ಅಳಿಲ ಸಾರು
ಗಂಡ– ಅಳಿಲ ಸಾರು ಬಲು ರುಚಿ

ಕಳ್ಳು ಕುಡಿದು ಸೇಂದಿ ಕುಡಿದ ನಂತರ ಗಂಡ ಹೆಂಡತಿ ರಾಜಿಯಾಗುತ್ತಾರೆ.

'ಗಂಡ ಹೆಂಡತಿ ಜಗಳ ಉಂಡು ಕುಡಿಯುವವರೆಗೆ' ಎಂಬುದು ಕುಡಿಯರ ತಮಾಷೆಯ ಮಾತು.

**ಕೊರ್ತಿ ಕಾಡಿನ ಕಥೆ**

ಕುಪ್ಪ ಮೊಟ್ಟೆ ಎಂಬ ಬೆಟ್ಟದ ಮೇಲೆ ಇರುವ ಅಯ್ಯಪ್ಪ ದೇವರಿಗೆ ಕುಡಿಯರು ಏಪ್ರಿಲ್ ತಿಂಗಳಲ್ಲಿ ಪ್ರತಿ ವರ್ಷ ಪೂಜೆ ನಡೆಸುತ್ತಾರೆ. ಈ ಕಾಡಿಗೆ ಮಾಕಾಡು(ಮಹಾಕಾಡು) ಎಂದು ಹೆಸರು. ಮಾಕಾಡು ಎಂದರೆ ಮಾಯಕಾಡು ಎಂದರ್ಥ. ಒಮ್ಮೆ ಕುಡಿಯನೊಬ್ಬ ಈಚಲ ಮರದಿಂದ ಕಳ್ಳನ್ನು ತರುತ್ತಿದ್ದಾಗ ಶಿವನ ಆದೇಶದಂತೆ ವಿಷ್ಣು ಹೆಣ್ಣಿನ ರೂಪ ಧರಿಸಿ ಕಾಡಿನಲ್ಲಿ ಕುಡಿಯನಿಗೆ ಎದುರಾಗುತ್ತಾನೆ. ಆ ಹೆಣ್ಣಿನ ರೂಪಕ್ಕೆ ಮೋಹಗೊಂಡ ಕುಡಿಯನು 'ಕಳ್ಳು

ಬೇಕಾ?' ಎಂದು ಕೇಳುತ್ತಾನೆ. ಆಕೆ ಕುಡಿಯಲು ಒಪ್ಪುತ್ತಾಳೆ. ಆದರೆ ಕುಡಿಯಲು ಪಾತ್ರೆ ಇರಲಿಲ್ಲ. ಆಗ ಕುಡಿಯನು ನೀರು ಹರಿಯುವ ಸ್ಥಳದಲ್ಲಿ ಬೆಳೆಯುವ 'ಕುವ್ವಾಲೆ' ಎಂಬ ಸಸ್ಯದ ಎಲೆಯನ್ನು ತರಲು ನೀರಿನ ಬಳಿಗೆ ಹೋಗುತ್ತಾನೆ. ಹೋಗುವ ಮೊದಲು ಕಳ್ಳನ್ನು ಆ ಹೆಣ್ಣಿಗೆ ಒಪ್ಪಿಸಿ ಅದನ್ನು ಜೋಪಾನವಾಗಿ ಕಾಯಬೇಕೆಂದು ಹೇಳುತ್ತಾನೆ. ಈ ಸಂದರ್ಭದಲ್ಲಿ ಹೆಣ್ಣಿನ ರೂಪದಲ್ಲಿ ವಿಷ್ಣು ಕಳ್ಳಿನೊಂದಿಗೆ ಮಾಯವಾಗುತ್ತಾನೆ. 'ಕುವ್ವಾಲೆ' ಎಲೆಯೊಂದಿಗೆ ತಿರುಗಿ ಬಂದ ಕುಡಿಯನು ಹೆಣ್ಣಿನೊಂದಿಗೆ ಕಳ್ಳು ಕಾಣದಿದ್ದಾಗ ಕೋಪಗೊಂಡು ಆಕೆಯನ್ನು ಹುಡುಕಲು ಪ್ರಾರಂಭಿಸುತ್ತಾನೆ. ಕೊನೆಗೆ 'ನೇರಡ ಮೊಟ್ಟೆ'ಯ ತನ್ನ ಮನೆಗೆ ಬರುತ್ತಾನೆ. ಅಲ್ಲಿ ಅವನ ಹೆಂಡತಿ ಮತ್ತೆ ಅವನು ತಿರುಗಿ ಹೋಗದಂತೆ ತಡೆಯುತ್ತಾಳೆ. ಆದರೆ ತನ್ನ ಹೆಂಡತಿಯ ಮಾತನ್ನು ಕೇಳದೆ ಮತ್ತೆ ಆ ಹೆಣ್ಣನ್ನು ಹುಡುಕುತ್ತಾ ಕಾಡಿನೊಳಗೆ ಬಂದವನು ಅಲ್ಲೇ ಕಳೆದುಹೋಗುತ್ತಾನೆ. ಅವನನ್ನು ವಿಷ್ಣು 'ಮಾಕಾಡು' ಎಂಬ ಜಾಗದಲ್ಲಿ ಕಲ್ಲಾಗಿಸಿದ್ದಾನೆ ಎಂಬುದು ಕುಡಿಯರ ನಂಬಿಕೆ. ಆತ ಆ ಕಾಡಿನಲ್ಲಿ ಮಾಯವಾದುದ್ದರಿಂದ ಆ ಕಾಡಿಗೆ 'ಮಾಕಾಡು' ಅಥವಾ 'ಮಾಯಕಾಡು' ಎಂದು ಹೆಸರು ಬಂತು ಎನ್ನುತ್ತಾರೆ. ದೇವರು ತನ್ನ ಸೇವೆಗಾಗಿ ಆ ಕುಡಿಯನನ್ನು ಕಲ್ಲಾಗಿಸಿದ್ದಾನೆ ಎಂದು ತಿಳಿದ ಆ ಕುಟುಂಬದವರು ಈಗಲೂ ಆ ಕಲ್ಲಿಗೆ ಪೂಜೆ ನೆರವೇರಿಸುತ್ತಾರೆ.

**ಗಾದೆಗಳು:** ಕೊಡಗಿನಲ್ಲಿರುವ ಕುಡಿಯರಾದಿಯಾಗಿ ಕೊಡವ ಬಾಷೆಯನ್ನಾಡುವ ಕೊಡವ ಭಾಷಿಕರೆಲ್ಲರೂ ಇದೇ ಗಾದೆ ಒಗಟುಗಳನ್ನು ಬಳಸುತ್ತಾರೆ.

1. ಕಾಲಕ್ ಬುದ್ದವಂಡ ಎದೆ ಚವುಟತೆ

   – ಕಾಲಿಗೆ ಬಿದ್ದವರ ಎದೆ ಮೆಟ್ಟಬಾರದು

2. ಆನೆನ ಕಂಡಿತ್ ಅಣಕೆ ಮರ ಪತ್ತನಕೆ

   – ಆನೆಯನ್ನು ಕಂಡು ಹರಳು ಕಾಡ ಏರಿದಂತೆ

3. ಕಾಕೆರ ಕುಂಞ ಕಾಕೆಕ್ ಬಲ್ಯದ್

   – ಕಾಗೆಯ ಮರಿ ಕಾಗೆಗೆ ಹೆಚ್ಚು

1. ಆನೆ ಬಿದ್ದಲ್ಲಿ ಸಾವಿರ ಕಾಲು – ಹಲಸು

2. ಹಾರೋ ಪಕ್ಷಿಯ ತಿಕದಲಿ ಬಾಣ – ಜೇನು ನೊಣ

3. ಎದುರು ಬದುರು ಕೂತಾಗ

ಸಿಟ್ಟು ಕೋಪ ಯಾವಾಗ,

ನಗು ಬರುವುದು ಆವಾಗ

ಪೂರೊಳಗೆ ಹೋದಾಗ – ಬಳೆ ತೊಡಿಸುವುದು

4. ಪಟ್ಟಿ ಪಟ್ಟಿ ಕಾಯಿ ಪರಿಮಳ ಕಾಯಿ – ಏಲಕ್ಕಿ

ಮಾತು ಈ ದುಡಿವ ವರ್ಗದ ಪ್ರಬಲ ಅಭಿವ್ಯಕ್ತಿ ಮಾಧ್ಯಮ. ಬರಹದಲ್ಲಿ ಒಡಮೂಡದ ಸಮುದಾಯಗಳ ನೋವು ಮತ್ತು ಅಸಹಾಯಕತೆಗಳು ಮಾತುಗಳಲ್ಲಿ ರೂಪುಗೊಳ್ಳುತ್ತಾ ಸ್ಮೃತಿ ಪ್ರಪಂಚದಲ್ಲಿ ಸಂಚಯಗೊಳ್ಳುತ್ತಾ ತಲೆಮಾರುಗಳನ್ನು ದಾಟಿ ಬೀಜಗಟ್ಟುತ್ತಾ ಬಂದವು. ಈ ಸ್ಮೃತಿಗಳಲ್ಲಿ ಸಂಘರ್ಷವಿದೆ, ನಿರಾಕರಣೆ ಇದೆ, ಸ್ವೀಕಾರವಿದೆ, ಅನುಸಂಧಾನದ ಜೊತೆ ತೀವ್ರ ಮುಖಾಮುಖಿಯ ತಲ್ಲಣಗಳೂ ಇವೆ. ಒಂದು ಅರ್ಥದಲ್ಲಿ ಅಂಚಿನ ಶೋಷಿತ ಸಮುದಾಯಗಳು ತಮ್ಮದೇ ವರ್ತಮಾನದ ಜೊತೆ ಅನುಸಂಧಾನ ಮಾಡುತ್ತಲೇ ಸಂಘರ್ಷಕ್ಕಿಳಿಯುತ್ತ ಬಂದಿವೆ. ನಿತ್ಯದ ದುಮ್ಮಾನಗಳನ್ನು ಅವುಡುಗಚ್ಚಿ ಸಹಿಸುತ್ತಲೇ ಬಂಡೆದ್ದು ಪ್ರತಿಭಟಿಸುತ್ತ ಬಂದಿವೆ. ಈ ಸಮುದಾಯಗಳ ಮೌಖಿಕ ಸಾಹಿತ್ಯಗಳನ್ನು ಈ ಕೆಳಗಿನಂತೆ ವಿಭಾಗಿಸಬಹುದಾಗಿದೆ.

1. ಕತೆಗಳು, 2. ಹಾಡುಗಳು, 3. ಗಾದೆಗಳು, 4. ಒಗಟುಗಳು, 5. ಐತಿಹ್ಯಗಳು, 6. ಸೃಷ್ಟಿ ಪುರಾಣಗಳು, 7. ಮಹಾಕಾವ್ಯಗಳು.

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕೊಡಗಿನ ಬುಡಕಟ್ಟುಗಳಲ್ಲಿ ಈ ಪ್ರಕಾರಗಳಿಗೆ ಸೇರಿದ ಮೌಖಿಕ ಸಾಹಿತ್ಯವನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಎರವರು ದಕ್ಷಿಣ ಭಾರತದಲ್ಲಿಯೇ ಅತ್ಯಂತ ಆದಿಮ ಚಹರೆಗಳನ್ನು ಹೊಂದಿದ ಕೆಲವೇ ಕೆಲವು ಬುಡಕಟ್ಟುಗಳಲ್ಲಿ ಒಂದು. ಹಾಡುಗಳಲ್ಲಿ ಮುಖ್ಯವಾದ ದೇವರ ಹಾಡುಗಳನ್ನು ಇವರು ಗದ್ದಿಗೆಯ ಹಾಡು ಎಂದೂ ಕೂಡ ಕರೆಯುತ್ತಾರೆ. ಬುಡಕಟ್ಟುಗಳು ಕಾಡಿನಿಂದ ಹೊರಬಂದು ಇತರೆ ಸಮುದಯಗಳೊಂದಿಗೆ ಬದುಕುವುದರ ಜೊತೆಗೆ ನಾಡಿನವರ ದೇವರುಗಳನ್ನು ಕೂಡ ತಮ್ಮದಾಗಿಸಿಕೊಂಡರು. ತಮ್ಮ ಸುತ್ತಲಿನ ಇತರೆ ಭಾಷಿಕ ಸಮುದಾಯದವರಿಂದ ಪ್ರಭಾವಿತರಾದ ಬುಡಕಟ್ಟುಗಳು ಅವರ ಸಂಸ್ಕೃತಿಯ ಪರಿಚಯದಿಂದ ಪ್ರೇರೇಪಿತರಾಗಿ ತಾವೂ ಕೂಡ ಅವರ ದೈವಗಳನ್ನು ಪೂಜಿಸಲು ಪ್ರಾರಂಭಿಸಿದರು. ಎರವರಲ್ಲಿ ಬಾಯನ ಎಂಬ ಮೌಖಿಕ ಕಾವ್ಯವಿದೆ. ಎರವರ ಮೌಖಿಕ ಸಾಹಿತ್ಯದಲ್ಲಿ ಹೆಚ್ಚಿನ ಪಾಲು ಹಾಡುಗಳದ್ದು, ಇವು ಬರಿಯ ಹಾಡುಗಳಲ್ಲದೆ ಹಾಡಿನ ರೂಪದ ಕತೆಗಳು. ಅಂದರೆ ಕಥನ ಪ್ರಧಾನ ಹಾಡುಗಳು. ಇವರ ಮೌಖಿಕ ಸಾಹಿತ್ಯವನ್ನು ಮೂರು ಭಾಗಗಳಾಗಿ ವಿಂಗಡಿಸಬಹುದಾಗಿದೆ.

1. **ಒಲೆಪಾಟ್ಟು:** ಈ ಹಾಡನ್ನು ಮದುವೆ, ಇನ್ನಿತರ ಶುಭಕಾರ್ಯದಲ್ಲಿ ಹಾಡಲಾಗುತ್ತದೆ. ಇದು ಎರವರ ಮೂಲ ಪುರುಷರಾದ ಆರ್ಯೆ ಮತ್ತು ಬಾಣ್ಯೆಯರನ್ನು ಕುರಿತಾದದ್ದು.

2. **ಸೋಬಾನೆ ಪಾಟ್ಟು:** ಹೆಣ್ಣು ಋತುಮತಿಯಾದ ಸಂದರ್ಭದಲ್ಲಿ ಓಲೆಪಾಟಿನ ಒಂದು ಕಥಾ ಪ್ರಸಂಗವನ್ನು ಹಾಡಿನ ರೂಪದಲ್ಲಿ ಕಣಲಾಡಿ ಹಾಡುತ್ತಾನೆ. ಸೋಬಾನೆ ಪಾಟ್ಟು ಎಂಬುದು ಅಧ್ಯಯನದ ಅನುಕೂಲಕ್ಕಾಗಿ ಬಳಸಿಕೊಂಡ ಪದವೇ ಹೊರತು ಪ್ರತ್ಯೇಕವಾಗಿ ಸೋಬಾನೆ ಪಾಟ್ಟು ಎಂಬುದು ಇಲ್ಲ.

3. **ಪೇಯಿಪಾಟ್:** ತಿಥಿಯ ದಿನದಂದು ರಾತ್ರಿ ಕಣಲಾಡಿಯು ಈ ಹಾಡನ್ನು ರಾತ್ರಿಯಿಡೀ ಹಾಡುತ್ತಾನೆ. ಹಾಗೆಯೇ ದೆವ್ವ ಭೂತಗಳಿಗೆ ಸಂಬಂಧಿಸಿದ ಆಚರಣೆಯ ಸಂದರ್ಭದಲ್ಲಿ ಕೂಡ ಈ ಹಾಡನ್ನು ಹಾಡಲಾಗುತ್ತದೆ. ಹಾಗೆಯೇ ಗಾದೆ ಮತ್ತು ಒಗಟುಗಳನ್ನು ಉದಾಹರಣೆಯೊಂದಿಗೆ ಇಲ್ಲಿ ನೀಡಲಾಗಿದೆ.

**ಜೇನುಕುರುಬರು**

ಜೇನುಕುರುಬರಿಗೂ ಬೇಟೆಗೂ ನಂಟು ಬಹಳ. ಅದರಲ್ಲೂ ಇವರು ಜೇನು ಬೇಟೆಯಲ್ಲಿ ಬಹಳ ಪರಿಣಿತರು. ಆದ್ದರಿಂದಲೇ ಅವರನ್ನು ಜೇನುಕುರುಬರು ಎಂದು ಕರೆಯಲಾಗಿದೆ. ಈ ಜೇನಿಗೆ ಸಂಬಂದಿಸಿದಂತೆ ಸಾಕಷ್ಟು ಹಾಡುಗಳು ಮತ್ತು ಕತೆಗಳಿವೆ. ಜೇನಿನ ಬೇಟೆಯ ಕುರಿತ ಹಾಡು ಬದಲಿಗೆ ಶತಮಾನಗಳ ಕಾಲ ಈ ಜೇನುಕುರುಬ ಸಮುದಾಯ ಸಾಗಿ ಬಂದ ಬದುಕಿನ ಹಲವು ಮಗ್ಗುಲುಗಳನ್ನು ನಮಗೆ ಪರಿಚಯಿಸುತ್ತದೆ.ಜೇನುಕುರುಬರು ಹಿಂದೆ ವ್ಯವಸಾಯಗಾರರಾಗಿದ್ದವರು ರಾಗಿ, ಕುಂಬಳ, ಹುರುಳಿ ಮೊದಲಾದವುಗಳನ್ನು ಬೆಳೆಯುತ್ತಾ ಸ್ವಾವಲಂಬಿಗಳಾಗಿ ಬದುಕಿದವರು ಎಂಬ ಮಾಹಿತಿಯಿದೆ. ಜೇನುಹುಳುಗಳಂತೆ ಸಮೃದ್ಧವಾದ ದಟ್ಟ ಕಾನನದ ನಡುವೆ ಹೊನ್ನೆ, ಮತ್ತಿ, ತಾರಿ ಮರಗಳ ನಡುವೆ ಸ್ವಚ್ಛಂದವಾಗಿ ಬದುಕಿದವರು ಜೇನುಕುರುಬರು ಎಂಬುದನ್ನು ಹೇಳುತ್ತದೆ. ಇವರ ಮನರಂಜನೆಯ ವಸ್ತು ವಿಷಯ ಕೂಡ ಕಾಡು ಮತ್ತು ಕಾಡಿನ ಪ್ರಾಣಿ ಪಕ್ಷಿಗಳಿಗೆ ಸಂಬಂಧಿಸಿದ್ದು. ಸಿದಗಲಕ್ಕಿ, ಕೂರಾನೆ ಬೇಟೆಯ ಅಣಕು ನೃತ್ಯ ಮನರಂಜನೆಯ ಭಾಗವಾಗಿದೆ ಇಡೀ ಸಮುದಾಐ ಇದರಲ್ಲಿ ಬಾಗವಹಿಸುತ್ತದೆ.

ಅಜ್ಜಯ್ಯನೇ ಜೇನುಕುರುಬ ಸಮುದಾಯವನ್ನು ನಿಯಂತ್ರಿಸುವ ಮುಖ್ಯ ದೈವ ಅನಂತರವೆ ಉಳಿದ ದೇವರುಗಳು ಎಂಬ ಮಾತನ್ನು ಹೇಳುವ ಇವರು ಕಾಡಿನ ದೇವರುಗಳಾದ ಮಾಸ್ತಮ್ಮ, ಬಿಸಿಲೋಡಿ ದೇವು, ಮಾರಮ್ಮನನ್ನು ಅನಂತರದಲ್ಲಿ ವೈದಿಕ ದೇವರುಗಳನ್ನು ಕೂಡ ಪೂಜಿಸುತ್ತಾರೆ.

ಜೇನುಹಕ್ಕಿಯ ಕತೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ಹೇಳಲಾಗಿದೆ.

**ಬೆಟ್ಟಕುರುಬರು**

ಕರ್ನಾಟಕದಲ್ಲಿ ಹನ್ನೆರಡನೇ ಶತಮಾನದಲ್ಲಿ ನಡೆದ ಸಾಮಾಜಿಕ ಕ್ರಾಂತಿಯು ಅರಣ್ಯದೊಳಗಿನ ಈ ಬುಡಕಟ್ಟು ಸಮುದಾಯಗಳ ಮೇಲೂ ಕೂಡ ಪ್ರಭಾವ ಬೀರಿತು. ಬೆಟ್ಟಕುರುಬರು ಪ್ರಭಲರಾಗಿದ್ದಾಗ ಆ ಜನರ ಏಳಿಗೆಗಾಗಿ ಎಂಟು ಮಠಗಳು ಇದ್ದುವೆಂಬುದಕ್ಕೆ ಇವರ ಹಾಡು ಕತೆಗಳು ವಿವರಗಳನ್ನು ಒದಗಿಸುತ್ತವೆ. ಈ ಹಾಡು ಮತ್ತು ಕತೆಗಳಲ್ಲಿ ಈ ಸಮುದಾಯವು ಮಠಗಳಿಗೆ ನಡೆದುಕೊಳ್ಳುತ್ತಿದ್ದ ವಿವರಗಳು ದೊರೆಯುತ್ತವೆ.

**ಸೋಲಿಗರು**

ಈ ಸಮುದಾಯವು ಕಾಡಿನ ನಾಡಿ ಮಿಡಿತವನ್ನು ಅರಿತಿರುವವರು. ಪ್ರಾಣಿ–ಪಕ್ಷಿಗಳ ಚಲನವಲನವನ್ನು ಅದರ ವಾಸನೆಯಿಂದ, ಶಬ್ಧಗಳಿಂದ, ಹಾರಾಡುವ ದಿಕ್ಕಿನಿಂದ, ಬೀಸುವ ಗಾಳಿಯಿಂದ ತಿಳಿಯುವಷ್ಟು ಸೂಕ್ಷ್ಮಮತಿಗಳು. ಕಾಡಿನಲ್ಲಿ ಯಾವ ಸಮಯದಲ್ಲೇ ಆಗಲಿ ತೊಂದರೆ ಎದುರಾಗಬಹುದು ಆದ್ದರಿಂದ ಅದಕ್ಕೆ ಪ್ರತಿಯಾಗಿ ಸದಾ ಜಾಗೃತರಾಗಿರುತ್ತಾರೆ. ಸನ್ನಿವೇಶದ ತೀವ್ರತೆಯನ್ನು ಅರಿತು ರಕ್ಷಣಾ ತಂತ್ರಗಳನ್ನು ಹೆಣೆಯುವಷ್ಟು ಇವರು ತೀಕ್ಷ್ಣಮತಿಗಳು.

ಸೋಲಿಗರ ಮುಖ್ಯ ದೇವರು ದೊಡ್ಡ ಸಂಪಿಗೆಯ ಒಡೆಯ. ಬಿಳಿಗಿರಿರಂಗನ ಬೆಟ್ಟದಲ್ಲಿ ಕಾಡಿನಲ್ಲಿರುವ ಸಾವಿರಾರು ವರ್ಷಗಳಷ್ಟು ಪುರಾತನವಾದ ಸಂಪಿಗೆ ಮರದಲ್ಲಿ ಈ ದೇವರು ನೆಲೆಸಿದ್ದಾನೆ ಎಂದು ಅದಕ್ಕೆ ಪ್ರತಿ ವರ್ಷ ಪೂಜೆ ಸಲ್ಲಿಸುತ್ತಾರೆ. ಗೋರುಖಾನ ಹಾಡಿನಲ್ಲಿ ಈ ಸಾಲುಗಳು ಮೂಡಿ ಬಂದಿವೆ. ಬಿಳಿಗಿರಿರಂಗ, ಮಲೆಮಾದೇಶ್ವರನ ಆರಾಧನೆಗೆ ಸಂಬಂದಿಸಿದ ಮಾಹಿತಿಗಳು ಲಭ್ಯವಿದೆ.

**ಕುಡಿಯರು**

ಆ ಸಮುದಾಯದ ಒಳಗಿನ ಬದುಕು ಬವಣೆ ತಲ್ಲಣಗಳು ಸುಖ, ದುಃಖ ನೋವು, ನಲಿವುಗಳು ಕೂಡ ಬಾಯಿಂದ ಬಾಯಿಗೆ ಈ ಮೂಲಕ ಹರಿದು ಬರುತ್ತವೆ. ರಸಮಯ, ಹಾಸ್ಯಮಯ ಸನ್ನಿವೇಶಗಳನ್ನು ಸೃಷ್ಟಿಸಿ ಸಂಭ್ರಮಿಸುತ್ತಾರೆ. ರೋಚಕ, ರಮ್ಯ ಕಲ್ಪನೆಗಳನ್ನು ತಮ್ಮ ಪಾತ್ರಗಳಲ್ಲಿ ಸೃಷ್ಟಿಸಿ ಆನಂದಿಸುತ್ತಾರೆ. ಆ ಮೂಲಕ ತೃಪ್ತಿಯನ್ನು ಹೊಂದುತ್ತಾರೆ. ಇವರ ಆಡುಭಾಷೆ ಕೊಡವ ಭಾಷೆಯಾಗಿರುವುದರಿಂದ ಇವರ ಮೌಖಿಕ ಸಾಹಿತ್ಯದ ಹೆಚ್ಚಿನ ಭಾಗ ಕೊಡವ ಭಾಷೆಯಲ್ಲಿದೆ. ಈ ಎಲ್ಲಾ ಸಮುದಾಯಗಳ ಮೌಖಿಕ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಉದಾಹರಣೆಯೊಂದಿಗೆ ಮಾಹಿತಿಯನ್ನು ಈ ಭಾಗವು ಒದಗಿಸುತ್ತಾದೆ.

**ಅಡಿಟಿಪ್ಪಣಿಗಳು**

1. ಬೋರಲಿಂಗಯ್ಯ ಹಿ.ಚಿ., ಗಿರಿಜನಕಾವ್ಯ, ಹಲವು ತೊರೆಗಳ ತಪ್ತ ಪ್ರವಾಹ, ಆದಿವಾಸಿ ಆಖ್ಯಾನ, ಪು.295, 2006.
2. ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್., ಕರ್ನಾಟಕ ಬುಡಕಟ್ಟು ಸಚಿತ್ರಕೋಶ, ಪು.35, 2015.
3. Singh K.S, V.K. Tandon, People of India - Kerala - (3-Volums) Vol-3, p.1186, 2002.
4. ಹರೀಶ್ ಪಿ.ಎನ್., ಎರವರ ಸಂಸ್ಕೃತಿ, ಪು.227–228, 1993.
5. ಅದೇ, ಪು.229.
6. ಅದೇ, ಪು.86–87.
7. ಅದೇ, ಪು.283.
8. ಲಲಿತ ಎ.ಸಿ., ಕಾಡುಕುರುಬರ ಮತ್ತು ಜೇನುಕುರುಬರ ಸಂಸ್ಕೃತಿ, ಪುಟ–77–78, 1993.
9. ಅದೇ, ಪು.109–110.
10. ಹರೀಶ್ ಪಿ.ಎನ್., ಎರವರ ಸಂಸ್ಕೃತಿ, ಪು.235, 1993.
11. ಲಲಿತ ಎ.ಸಿ., ಕಾಡುಕುರುಬರ ಮತ್ತು ಜೇನುಕುರುಬರ ಸಂಸ್ಕೃತಿ, ಪು.38–39, 1993.
12. ಚಂದ್ರ ಕಾಳೇನಳ್ಳಿ, ಸೋಲಿಗರ ಸಂಸ್ಕೃತಿ, 228–229, 1993.
13. ಅದೇ, 263, 1993.
14. ಮರಿಸ್ವಾಮಿ ಅರ್., ಸೋಲಿಗ; ಸಮಾಜೋ ಭಾಷಿಕ ಅಧ್ಯಯನ, ಪು.24, 2014.

# ಅಧ್ಯಾಯ: ಐದು

# ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಸಾಮಾಜಿಕತೆ, ಹೆಣ್ಣಿನ ಅನನ್ಯತೆ ಮತ್ತು ಯಜಮಾನಿಕೆ

5.1. ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಸಾಮಾಜಿಕತೆ

5.2. ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಹೆಣ್ಣಿನ ಅನನ್ಯತೆ

5.3. ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಭೂಮಿಯ ಸೃಷ್ಟಿ ಮತ್ತು ಮನುಷ್ಯನ ಸೃಷ್ಟಿ

5.4. ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಯಜಮಾನಿಕೆಯ ಸ್ವರೂಪ

# ಅಧ್ಯಾಯ: ಐದು

# ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಸಾಮಾಜಿಕತೆ, ಹೆಣ್ಣಿನ ಅನನ್ಯತೆ ಮತ್ತು ಯಜಮಾನಿಕೆ

## 5.1. ಕೊಡಗಿನ ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಸಾಮಾಜಿಕತೆ

ಒಂದು ಸಮುದಾಯದ ಆಚರಣೆಗಳು, ಆಹಾರಪದ್ಧತಿ, ಬದುಕುವ ಶೈಲಿ, ನಂಬಿಕೆಗಳನ್ನು ಮತ್ತು ಅವರು ತಲೆಮಾರುಗಳಿಂದ ಕಟ್ಟಿಕೊಂಡು ಬಂದ ಮೌಖಿಕ ಸಾಹಿತ್ಯದ ಮೂಲಕ ಆಯಾ ಸಮುದಾಯದ ಸಾಮಾಜಿಕ ಸ್ಥಿತಿಗತಿಯನ್ನು ಅರ್ಥೈಸಬಹುದಾಗಿದೆ. ಕೊಡಗಿನ ಬುಡಕಟ್ಟುಗಳು ಅರಣ್ಯವಾಸಿ ಬುಡಕಟ್ಟುಗಳಾಗಿದ್ದು, ಎಷ್ಟೋ ವರ್ಷಗಳ ಕಾಲ ನಾಡಿನ ಸಂಪರ್ಕವೇ ಇಲ್ಲದೇ ತಮ್ಮದೇ ಆದ ನಂಬಿಕೆ, ದೈವ, ಭಾಷೆ, ಒಳಾಡಳಿತ ವ್ಯವಸ್ಥೆಯನ್ನು ಹೊಂದಿದ್ದಂತಹವು. ಇವರು ಕಾಡಿನಲ್ಲಿ ನಿರ್ದಿಷ್ಟ ಎಲ್ಲೆಯಲ್ಲಿ ಹಾಡಿಗಳನ್ನು ಕಟ್ಟಿಕೊಂಡು ಹಲವಾರು ಸಮುದಾಯಗಳು ಒಂದೇ ಕಡೆ ಬದುಕುತ್ತಿದ್ದರು. ಆಹಾರ ಸಂಗ್ರಹಣೆ ಮತ್ತು ಕೆತ್ಲು ಬೇಸಾಯವನ್ನು ಮಾಡುತ್ತಾ ಒಂದು ನಿರ್ದಿಷ್ಟ ಎಲ್ಲೆಯೊಳಗೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಂಚರಿಸುತ್ತಾ ಅಲೆಮಾರಿಗಳಂತೆ ಬದುಕುತ್ತಿದ್ದವರು. ಕಾಲಾನಂತರ ಒಂದು ಕಡೆ ಸ್ಥಿರವಾಗಿ ನಿಂತು ನಿರ್ದಿಷ್ಟ ಎಲ್ಲೆಯಲ್ಲಿ ಬದುಕಲು ಪ್ರಾರಂಭಿಸಿದರು. ಆ ಎಲ್ಲೆಯನ್ನು 'ಜಮ್ಮ' ಎಂದು ಕರೆಯಲಾಗುತ್ತದೆ. ಆದರೆ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ರಾಜರಿಂದ ಆ ಪ್ರಾಂತ್ಯಗಳು ಆಳುತ್ತಿದ್ದಾಗಲೂ ತಾವು ಯಾವ ರಾಜನ ಆಡಳಿತದಲ್ಲಿದ್ದೇವೆ ಮತ್ತು ತಮ್ಮನ್ನು ಆಳುತ್ತಿರುವವರು ಯಾರು ಎಂಬುದನ್ನೂ ತಿಳಿಯದೇ ಕಾಡಿನಲ್ಲಿ ಮುಗ್ಧರಾಗಿ ಬದುಕುತ್ತಿದ್ದರು. ಆದರೆ ತಮ್ಮ ಹಾಡಿಗಳ ಮಧ್ಯೆ ಅಗೋಚರವಾಗಿ ಗಡಿಗಳನ್ನು ನಿರ್ಮಿಸಿ ಬೇರಾರೋ ಆಧಿಪತ್ಯ ಸ್ಥಾಪಿಸುತ್ತಿದ್ದಾರೆಂದಾಗಲಿ, ತಮ್ಮನ್ನು ಬೇರಾರೋ ಆಳುತ್ತಿದ್ದಾರೆಂದಾಗಲೀ ಇದಾವುದರ ಅರಿವೇ ಇವರಿಗೆ ಇರುತ್ತಿರಲಿಲ್ಲ. ಒಂದು ಸಮುದಾಯದಲ್ಲಿ ಹಲವು ಕುಲಗಳಿದ್ದರೂ ಇಲ್ಲಿ ಪ್ರತಿಯೊಬ್ಬರಿಗೂ ಸಮಾನ ಹಕ್ಕಿದೆ. ಇವರ ಮಧ್ಯೆ ಮೇಲುಕೀಳಿನ ಅಂತರವಿಲ್ಲ. ಇಡೀ

ಸಮುದಾಯವು ತೀರ್ಮಾನಿಸಿ ಒಬ್ಬ ಸಮರ್ಥ ನಾಯಕನನ್ನು ಆಯ್ಕೆ ಮಾಡುತ್ತಿತ್ತು. ಕೆಲವೊಮ್ಮೆ ಅದು ವಂಶಪಾರಂಪರ್ಯದಿಂದಲೂ ನಾಯಕನು ಆಯ್ಕೆಯಾಗುತ್ತಿದ್ದನಾದರೂ ಆತ ಸಮರ್ಥನಾಗಿದ್ದಾಗ ಮಾತ್ರ ಸಮುದಾಯ ಆತನನ್ನು ಒಪ್ಪುತ್ತಿತ್ತು. ಆ ಗುಂಪಿನ ನಾಯಕ ತಮ್ಮ ಸಹಾಯಕರಾದ ಇತರ ಕೆಳಹಂತದ ನಾಯಕರ, ಹಿರಿಯರ, ದೈವಗಳ ಮಾರ್ಗದರ್ಶನದಂತೆ ಗುಂಪನ್ನು ನಡೆಸಿಕೊಂಡು ಹೋಗುತ್ತಿದ್ದನು. ಎಷ್ಟೋ ವರ್ಷಗಳ ಕಾಲ ಸಮಾಜದ ಇತರೆ ಸಮುದಾಯಗಳ ನಡುವೆ ಬೇರೆಯಾಗಿ ಬದುಕುತ್ತಿದ್ದ ಕಾರಣ ಕಾಡಿನಿಂದ ಹೊರಗೆ ಅತ್ಯಂತ ಹೀನಾಯವಾಗಿ ಕ್ರೂರವಾಗಿ ಆಚರಣೆಯಲ್ಲಿದಂತಹ ಜಾತಿವ್ಯವಸ್ಥೆಯ ಕಂದಕದಿಂದ ಇವರು ಪಾರಾಗಿದ್ದರು. ಅಲ್ಲದೇ ತಾವು ಕಾಡಿನಲ್ಲಿ ತಮ್ಮದೇ ವಿಶಿಷ್ಟ ಆಚರಣೆಗಳನ್ನು ಪಾಲಿಸಿಕೊಂಡು ಬದುಕುತ್ತಿದ್ದವರಿಗೆ ಸಹಜವಾಗಿ ತಮ್ಮದೇ ಶ್ರೇಷ್ಠ ಎಂಬ ಭಾವನೆಯೂ ಬೇರೂರಿತ್ತು. ಅನಂತರದಲ್ಲಿ ಹಲವಾರು ಕಾರಣಗಳಿಂದ ಕಾಡನ್ನು ಬಿಟ್ಟು ನಾಡು ಸೇರಿದಾಗಲೂ ಇವರು ಇತರರೊಂದಿಗೆ ಸುಲಭವಾಗಿ ಬೆರೆಯದಾದರು. ಅದಕ್ಕೆ ಕಾರಣಗಳೂ ಹಲವು. ಬುಡಕಟ್ಟುಗಳದ್ದು ಅತಿಯಾದ ನಾಚಿಕೆ ಸ್ವಭಾವ. ತಮ್ಮದೇ ಪ್ರತ್ಯೇಕ ಭಾಷೆಯನ್ನು ಹೊಂದಿದ್ದ ಈ ಸಮುದಾಯ ಗಳಿಗೆ ಇತರರ ಭಾಷೆಗಳು ಅರ್ಥವಾಗುತ್ತಿರಲಿಲ್ಲ. ಇದರಿಂದ ಬೇರೆಯವರಿಗೆ ಇವರೊಡನೆ ವ್ಯವಹರಿಸುವುದೂ ಕೂಡ ಕಷ್ಟವಾಗುತ್ತಿತ್ತು. ಇವರು ಬೇರೆಯ್ಯವರೊಡನೆ ಮುಕ್ತವಾಗಿ ಬೆರೆಯುತ್ತಿರಲಿಲ್ಲ. ಹೊರಗಿನ ಸಮಾಜದ ಬದುಕು ಇವರಿಗೆ ತಿಳಿಯದ್ದರಿಂದ ಅವರೊಡನೆ ಹೊಂದಾಣಿಕೆ ಮಾಡಿಕೊಳ್ಳುವುದು ಕಷ್ಟವಾಗುತ್ತಿತ್ತು. ಈ ಹತ್ತು ಹಲವು ಕಾರಣಗಳಿಂದ ಇವರು ಈ ಸಮಾಜದಲ್ಲಿ ಮುಕ್ತವಾಗಿ ಬೆರೆಯಲು ಹಲವಾರು ವರ್ಷಗಳೇ ಬೇಕಾದವು. ಅರಣ್ಯವಾಸಿ ಗಳು ತಮ್ಮ ಮನೆಯನ್ನಾಗಲೀ, ಹಾಡಿಯನ್ನಾಗಲೀ ಅತ್ಯಂತ ವ್ಯವಸ್ಥಿತವಾಗಿ ನಿರ್ಮಾಣ ಮಾಡುತ್ತಾರೆ. ತಮ್ಮ ಮನೆಗಳನ್ನು ಸುತ್ತಮುತ್ತಲಿನ ಪರಿಸರವನ್ನು ಅತ್ಯಂತ ಸ್ವಚ್ಛವಾಗಿಟ್ಟುಕೊಳ್ಳುವ ಇವರು ಸಾಮಾಜಿಕವಾಗಿ ಕಾಡಿನಿಂದ ಹೊರಬಂದು ನಾಡು ಸೇರಿರುವ ಸಮುದಾಯಗಳು ಈಗಾಗಲೇ ಗುರುತಿಸಿರುವ ಅಸ್ಪೃಶ್ಯ ಸಮುದಾಯಗಳಿಗಿಂತ ತಾವು ಶ್ರೇಷ್ಠ ಎಂದು ಭಾವಿಸುತ್ತಾರೆ. ಇತರೆ ಸಮುದಾಯಗಳೊಂದಿಗೆ ವಿವಾಹ ಇನ್ನಿತರ ಸಂಬಂಧವನ್ನು ಇವರು ಕಟ್ಟುನಿಟ್ಟಾಗಿ ನಿರ್ಬಂಧಿಸಿದ್ದಾರೆ. ಅರಣ್ಯವಾಸಿ ಬುಡಕಟ್ಟುಗಳ ಸಾಮಾಜಿಕ ಬದುಕಿನ ವಿವರಣೆಯನ್ನು ಈ ಕೆಳಗೆ ನೀಡಲಾಗಿದೆ.

### ಎರವರ ಸಾಮಾಜಿಕ ಜೀವನ

ಎರವರ ಸಾಮಾಜಿಕ ಜೀವನದ ಸ್ಪಷ್ಟ ಚಿತ್ರಣ ನಮಗೆ ಅವರ ಮೌಖಿಕ ಸಾಹಿತ್ಯದಲ್ಲಿ ಹೇರಳವಾಗಿ ದೊರೆಯುತ್ತದೆ. ಇವರ ಜೀವನಾವರ್ತನದ ಆಚರಣೆಗಳಲ್ಲಿ ಈ ಹಾಡುಗಳನ್ನು ಹಾಡುವುದು ಕಡ್ಡಾಯವಾಗಿರುವುದರಿಂದ ಇವರ ಜೀವನ ಮೌಲ್ಯಗಳು ವಿಧಿ–ನಿಷೇಧಗಳು

ಪ್ರತಿಯೊಬ್ಬರಿಗೂ ತಿಳಿದಿರುತ್ತದೆ ಮತ್ತು ಅದನ್ನು ಯಾರೂ ಮೀರುವುದಿಲ್ಲ. ಪಶ್ಚಿಮ ಕರಾವಳಿ, ಕೇರಳ ಭಾಗದಲ್ಲಿ ಒಬ್ಬ ವ್ಯಕ್ತಿಯನ್ನು ಮೇಲ್ಜಾತಿಯವರು ತಮ್ಮ ಮನೆಯಿಂದ ಅಥವಾ ತಮ್ಮಿಂದ ಎಷ್ಟು ದೂರದವರೆಗೂ ಹಂತಹಂತವಾಗಿ ನಿಲ್ಲಿಸುವರೋ ಅದಕ್ಕೆ ತಕ್ಕಂತೆ ಅವರವರ ಸ್ಥಾನಮಾನ ನಿರ್ಧಾರವಾಗುತ್ತದೆ. ಅಂತೆಯೇ ಎರವರ ಸ್ಥಾನಮಾನ ಇತರೆ ಅಸ್ಪೃಶ್ಯರಿಗಿಂತ ಉತ್ತಮವಾಗಿದೆ. ಎಂಬುದಕ್ಕೆ ಮೌಖಿಕ ಸಾಹಿತ್ಯದಲ್ಲಿ ದಾಖಲೆ ಸಿಗುತ್ತದೆ. ತಮ್ಮ ಹಿರಿಯರ ಆತ್ಮಗಳನ್ನು ಪೂಜಿಸುವ ಇವರು ಅವರು ಹಾಕಿಕೊಟ್ಟ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಅನಾದಿಕಾಲದಿಂದಲೂ ಪಾಲಿಸಿಕೊಂಡು ಬಂದಿರುವ ಶಾಸ್ತ್ರ ಸಂಪ್ರದಾಯಗಳನ್ನು ತಾವು ಪಾಲಿಸುವ ಮೂಲಕ ತಮ್ಮ ಕಿರಿಯರಿಗೂ ಅದನ್ನು ಪಾಲಿಸುವಂತೆ ಪ್ರೇರೇಪಿಸುತ್ತಾರೆ.

| | |
|---|---|
| "ಈಚರ ಉದಿಚನೆ – ಪೊರ್ಕನೆ | ಮಹಾದೇವ ಸೂರ್ಯದೇವನೆ–ಚಂದ್ರದೇವನೆ |
| ನಾಟಿಲಿ ಕಾಣೆಮಾರೆ ಕುಂಜಲಿ ಕಾಣೆಮಾಳೆ | ನಾಡಿನಲ್ಲಿ ಸತ್ತವರೆ ಊರಿನಲ್ಲಿ ಸತ್ತವರೆ |
| ಮೂಂಜು ಮಂಜಿಲ ಅಚ್ಚರ ಮಾಮೆರಳೆ | ಮೂರು ತಂದೆಯ ಕುಟುಂಬದ ಅಜ್ಜ ಅಜ್ಜಿ ಮಾವ ಅತ್ತೆಯರೆ |
| ನಾಮ್ ಎಂಜೆನೊ ಅದೆ ಪಲ್ಲೆ ಉಳಾನು | ನಾವು ನೀವುಗಳು ಹೇಗೆ ಬಾಳಿ ಬದುಕಿದರೋ ಅದೇ<br>ಬಗೆಯಲ್ಲಿ ನಾವೂ ಬದುಕುತ್ತಿದ್ದೇವೆ |
| ಈ ಜಾತ್ರಮ್ – ಚೂತ್ರಮ್, ಈ ಕಟ್ಟುಮ್ | ಈ ಶಾಸ್ತ್ರ ಸೂತ್ರಗಳು, ಈ ಕಟ್ಟು ಪಾಡುಗಳು<br>ಬಾಕುಮ್ |
| ಈ ಅದಿಬಿದಿಯೂ ಏನೊಕ್ಕ ಇಂಜಿನಲ್ಲಿ | ಈ ಆಚಾರ ವಿಚಾರಗಳು ಈ ಹೊತ್ತಿನವಲ್ಲಾ ಇವು |
| ಈ ಪುಲ್ಲು ಪೂಮಿ ಕಲ್ಲು ಕವಾದಿ | ಈ ಭೂಮಿ ಹುಲ್ಲು ಕಲ್ಲು ಬೆಟ್ಟಗಳು ಉಂಟಾದಾಗ<br>ಉಂಡಾನ ನಾಳಲಿ |
| ಕಲ್ಪಿತ ಕಲ್ಪನೆಪಾಟು ಏನೆಂದೂ | ಅದಂತ ಕಟ್ಟು ಪಾಡುಗವು ನಾವು ಈ ನಿಯಮಗಳನ್ನು |
| ತಪ್ಪಿಬರುವ ಕಾಣಿ | ಮೀರಿ ನಡೆದುಕೊಂಡಿಲ್ಲ<br>ಈವರೆಗೆ ನಮಗೆ ಏನೊಂದು ತಪ್ಪು ಕಂಡುಬಂದಿಲ್ಲ"[1] |

ಈ ಹಾಡನ್ನು ನಾವು ಗಮನಿಸಿದರೆ ಆದಿಕಾಲದಿಂದಲೂ ಈ ಸಮುದಾಯವು ನಂಬಿಕೊಂಡು ಬಂದಿರುವ ಹಿರಿಯರ ಆತ್ಮಗಳ ಆರಾಧನೆ, ಅದಕ್ಕೆ ನಡೆದುಕೊಳ್ಳುವುದು, ಶಿಸ್ತುಬದ್ಧ ನೀತಿ ನಿಯಮಗಳನ್ನು ಇಂದಿಗೂ ಈ ಸಮುದಾಯವು ನಡೆಸಿಕೊಂಡು ಬರುತ್ತಿದೆ.

ಆತ್ಮಗಳನ್ನೇ ದೈವವೆಂದು ಭಾವಿಸಿ ಪೂಜಿಸುವ ಆ ನಂಬಿಕೆಗಳ ಮೇಲೆ ನಿಂತಿರುವ ಇವರ ಬದುಕುಗಳು ನಿಜಕ್ಕೂ ಅಪರೂಪದ್ದು. ನಮ್ಮ ಬದುಕಿನ ರೀತಿನೀತಿಗಳು ನೆನ್ನೆ ಮೊನ್ನೆ ರೂಪಿಸಿದ್ದಲ್ಲ. ಇದು ತಲೆತಲೆಮಾರುಗಳ ಹಿಂದೆ ರೂಪುಗೊಳ್ಳುತ್ತಾ ಬಂದವುಗಳು. ಅವು ಎಷ್ಟೇ ಪೀಳಿಗೆಯ ನಂತರವೂ ಮೌಖಿಕ ಸಾಹಿತ್ಯದ ಮೂಲಕ ಉಳಿದುಬಂದಿವೆ. ಆಚರಣೆಯಲ್ಲಿಯೂ ಚಾಲ್ತಿಯಲ್ಲಿವೆ. ಸಮುದಾಯದ ಚೈತನ್ಯಶಕ್ತಿಯಾಗಿ ಸಮುದಾಯವನ್ನು ಮುನ್ನಡೆಸುತ್ತಿವೆ.

ಎರವರು ವಿಶಿಷ್ಟವಾದ ಸಂಪ್ರದಾಯ ವಿಧಿನಿಷೇಧಗಳನ್ನು ಹೊಂದಿರುವ ಒಂದು ಬುಡಕಟ್ಟು ಸಮುದಾಯ. ಇವರು ತಮ್ಮ ಕುಲಕ್ಕೆ ಬಹಳ ಪ್ರಾಮುಖ್ಯತೆಯನ್ನು ನೀಡುತ್ತಾರೆ. ಅನ್ಯಜಾತಿ ವಿವಾಹ ಇವರಲ್ಲಿ ನಿಷಿದ್ಧ. ಹಾಗೆಯೇ ಇತರೆ ಬುಡಕಟ್ಟುಗಳೊಂದಿಗೂ ಇವರು ಸಂಬಂಧವನ್ನು ಬೆಳೆಸುವುದಿಲ್ಲ. ತಾವು ಜಾತಿಯಲ್ಲಿ ಇತರರಿಗಿಂತ ಶ್ರೇಷ್ಠರಾದವರು ಎಂಬ ನಂಬಿಕೆಯೇ ಇದಕ್ಕೆ ಕಾರಣ. ಕಾಡಿನಲ್ಲಿ ಸಣ್ಣಪುಟ್ಟ ಪ್ರಾಣಿಗಳನ್ನು ಬೇಟೆಯಾಡಿ ತಿನ್ನುತ್ತಾರಾದರೂ ದನದ ಮಾಂಸವನ್ನು ಇವರು ಸೇವಿಸುವುದಿಲ್ಲ. ದನದ ಮಾಂಸ ಸೇವಿಸುವ ಇತರೆ ಜಾತಿಗಳನ್ನು ತಮಗಿಂತ ಕೀಳು ಎಂದು ಭಾವಿಸುತ್ತಾರೆ. ಇದಕ್ಕೆ ಇವರ ಮೌಖಿಕ ಸಾಹಿತ್ಯದಲ್ಲಿ ಹಲವು ಉದಾಹರಣೆಗಳು ನಮಗೆ ದೊರೆಯುತ್ತವೆ. ಎರವರ 'ಸೋಬಾನೆ ಪಾಟ್' ಎಂಬ ಹಾಡಿನ ರೂಪದ ಕತೆಯಲ್ಲಿ ಇವರ ಸಾಮಾಜಿಕ ಬದುಕಿನ ಚಿತ್ರಣವನ್ನು ಕಟ್ಟಿ ಕೊಟ್ಟಿದ್ದಾರೆ. ಎರವರ ಹೆಣ್ಣುಮಕ್ಕಳು ಪಾಲಿಸಬೇಕಾದ ಕುಲಾಚಾರಗಳನ್ನು ಕುರಿತು ಈ ಹಾಡಿನಲ್ಲಿ ಹೇಳಿದ್ದಾರೆ. 'ಸೋಬಾನೆ ಪಾಟ್'ನಲ್ಲಿನ ಕಥಾನಾಯಕಿಯಾದ 'ಪೆರುಂಗಾಲಿ ಪೂಲಿ'ಯು ಕಾಡಿನಲ್ಲಿ ಭೇಟಿಯಾದ 'ಕಡಲರಕವೆ' ದನ ತಿನ್ನುವ ಹೊಲೆಯನೆಂದು ತಿಳಿದು ಉಪಾಯವಾಗಿ ಅವನಿಂದ ತಪ್ಪಿಸಿಕೊಂಡು ಬರುತ್ತಾಳೆ. ನಂತರ ದಾರಿಯಲ್ಲಿ ಎರವರ 'ಮುತ್ತುಕುಡಿಸಾದವೆ' ಪೆರುಂಗಾಲಿ ಪೊಲಿಯನ್ನು ವಿವಾಹವಾಗಲು ಕೇಳಿಕೊಂಡಾಗ ಪೆರುಂಗಾಲಿ ಪೊಲಿಯು 'ಈಗಾಗಲೇ ನಾನೊಬ್ಬನನ್ನು ಮದುವೆಯಾಗಿ ಗಂಡ ಬಿಟ್ಟವಳಾಗಿದ್ದೇನೆ, ಹೀನಕುಲದ ಹೊಲೆಯನ ಮನೆಯನ್ನು ಹೊಕ್ಕು ಹೊಲತಿಯಾಗಿದ್ದೇನೆ. ನನ್ನನ್ನು ಮುಟ್ಟಬೇಡ'[2] ಎನ್ನುತ್ತಾಳೆ. ಅದಕ್ಕೆ ಮುತ್ತುಕುಡಿಸಾದವೆ ತನ್ನ ಕುಲ ಪುರೋಹಿತ ರನ್ನು ಕರೆಸಿ ಪೆರುಂಗಾಲು ಪೊಲಿಯನ್ನು ಹೊಳೆ ನೀರಿನಲ್ಲಿ ನಿಲ್ಲಿಸಿ ವಿಧಿವತ್ತಾಗಿ ಜಾತಿ ಶುದ್ಧಿ ಮಾಡಿಸಿ ಅವಳನ್ನು ಮದುವೆಯಾಗುತ್ತಾನೆ.

ಈ ಮೇಲಿನ ಕತೆಯನ್ನು ಎರವರಲ್ಲಿ ಹೆಣ್ಣುಮಕ್ಕಳು ಋತುಮತಿಯಾದ ಸಂದರ್ಭದಲ್ಲಿ ಹಾಡಿನ ರೂಪದಲ್ಲಿ ಕಡ್ಡಾಯವಾಗಿ ಹಾಡಿಸುತ್ತಾರೆ. ಈ ಕತೆಯು ಎರವರು ನಾಡಿನ ನಂಟನ್ನು ಬೆಳೆಸಿಕೊಂಡು ನಾಗರೀಕ ಸಮುದಾಯಗಳೊಂದಿಗೆ ಬದುಕಲು ಪ್ರಾರಂಭಿಸಿದ ನಂತರ

ಹುಟ್ಟಿರಬಹುದು. ಸಮಾಜದಲ್ಲಿ ಬೆರೆಯುವ ಸಂದರ್ಭದಲ್ಲಿ ತಾವು ಈಗಾಗಲೇ ಸಮಾಜದಲ್ಲಿ ರೂಢಿಯಲ್ಲಿರುವ ಪದ್ಧತಿಯನ್ನು ರೂಢಿಸಿಕೊಳ್ಳುವುದರ ಮೂಲಕ ಶ್ರೇಷ್ಠತೆಯ ಪರಿಧಿಯೊಳಗೆ ಬರುವುದು ಅನಿವಾರ್ಯವಾದ ಸಂದರ್ಭದಲ್ಲಿ ಈ ರೀತಿಯ ನಿಯಮಗಳು ಜಾರಿಗೆ ಬಂದಿರಲೂಬಹುದು. ದನ ತಿನ್ನುವ ಕಾರಣಕ್ಕೆ ಸಮಾಜದಿಂದ ಅಸ್ಪೃಶ್ಯತೆಗೊಳಗಾದ ಸಮುದಾಯ ವನ್ನು ತಾವೂ ಕೂಡ ದೂರೀಕರಿಸುವುದರ ಮೂಲಕ ತಾವೂ ಶ್ರೇಷ್ಠರೆಂಬುದನ್ನು ಇತರರಿಗೆ ತಿಳಿಸುವುದು ಇದರ ಉದ್ದೇಶವಿರಬಹುದು. ಅದಕ್ಕಾಗಿಯೇ ಇಂತಹ ಕತೆಯು ಹುಟ್ಟಿರುವ ಸಾಧ್ಯತೆಗಳಿವೆ. ಈ ಬಗ್ಗೆ ಹೆಚ್ಚಿನ ಸಂಶೋಧನೆ ಆಗಬೇಕಿದೆ. ಈ ಕತೆಯ ಮೂಲಕ ಎರವರು ಅನುಸರಿಸಬೇಕಾದ ಕುಲಾಚಾರ. ನಿಯಮಗಳನ್ನು ಪ್ರೌಢಾವಸ್ಥೆಗೆ ಬರುವ ಪ್ರತಿ ಹೆಣ್ಣುಮಕ್ಕಳು ಪಾಲಿಸಿಕೊಂಡು ಹೋಗಬೇಕೆಂಬ ಕಾರಣದಿಂದಾಗಿ ಈ ಹಾಡನ್ನು ಕಡ್ಡಾಯವಾಗಿ ಹಾಡಿಸು ತ್ತಾರೆ.

ಎರವರ ಓಲೆಪಾಟ್ಟಿನಲ್ಲಿ ಎರವರ ಮೂಲಪುರುಷರಾದ ಆರ್ಯೆ-ಬಾಣ್ಯೆಯರು ದೇಶ ಪರ್ಯಟನೆ ಮಾಡುತ್ತಾ ಒಂದು ಸಮುದ್ರದ ಬಳಿ ಬರುತ್ತಾರೆ. ಆ ಸಂದರ್ಭದಲ್ಲಿ ಅಲ್ಲಿ ಒಬ್ಬ ಸುಂದರವಾದ ಯುವತಿಯನ್ನು ಭೇಟಿಯಾಗುತ್ತಾರೆ. ಅವಳ ಸೌಂದರ್ಯವನ್ನು ಕಂಡು ಬೆರಗಾಗುತ್ತಾರೆ. ಅವರ ಮೌಖಿಕ ಸಾಹಿತ್ಯದಲ್ಲಿ ಅವಳ ಸೌಂದರ್ಯವನ್ನು ಈ ರೀತಿ ವರ್ಣಿಸಲಾಗಿದೆ. 'ಅವಳ ತಲೆಕೂದಲು ಬೈನೆಮರದ ಬಿಳಲಿನಂತೆ ಉದ್ದವಾಗಿತ್ತು, ಮೂಗು, ಕಣ್ಣು, ಹಲ್ಲುಗಳು ತಿದ್ದಿದಂತಿದ್ದವು. ತುಟಿಗಳು ಕಾಡುಗುಲಾಬಿಯ ಕೆಂಬಣ್ಣದಂತಿದ್ದವು. ಕಾಲುಗಳು ಮಂಚದ ಕಡತದ ಕಾಲಿನಂತಿದ್ದವು. ನೀಳವಾದ ಕೈಗಳು, ತುಂಬಿದ ಎದೆ, ಮೈಮಾಟವನ್ನು ಕಂಡು ಆರ್ಯೆ ಬಾಣ್ಯೆಯರು ಬೆರಗಾಗಿ ಹೋದರು'.[3] ಅವಳ ಸೌಂದರ್ಯಕ್ಕೆ ಮನಸೋತ ಯುವಕರು ಅವಳನ್ನು ಮಾತನಾಡಿಸಿ ಹೆಸರೇನೆಂದು ಕೇಳಿದಾಗ, ಆಕೆ ನಾನು ಪಾಂಡ ಎಂಬುವವನ ಮಗಳೆಂದೂ ತನ್ನ ಹೆಸರು 'ಕಡಲ ಚೀತೆ' ಎಂದೂ ಹೇಳುತ್ತಾಳೆ. ನಂತರ ಅವರಿಬ್ಬರನ್ನೂ ತನ್ನ ಮನೆಗೆ ಕರೆದುಕೊಂಡು ಹೋಗಿ ಉಪಚರಿಸುತ್ತಾಳೆ. ಅವಳಿಂದ ಅತಿಥಿ ಸತ್ಕಾರವನ್ನು ಪಡೆದ ಅವರಿಬ್ಬರೂ ಅಂದು ರಾತ್ರಿ ಅವಳನ್ನು ಕೂಡುತ್ತಾರೆ. ಮರುದಿನ ಬೆಳಗ್ಗೆ ತಾವು ಹೊರಡುವ ಮುನ್ನ ಆಕೆಯ ಕುಲವನ್ನೂ, ಜಾತಿಯನ್ನು ವಿಚಾರಿಸುತ್ತಾರೆ. ಆಗ ಆಕೆ 'ನಾನು ಪಾಂಡ ಎಂಬ ಹೊಲೆಯನ ಮಗಳು, ಎಮ್ಮೆ ತಿನ್ನುವ ನೀಚಕುಲದಲ್ಲಿ ಹುಟ್ಟಿದವಳು'[4] ಎನ್ನುತ್ತಾಳೆ. ಆಗ ಅವರಿಬ್ಬರೂ ತಾವು 'ಎಂಥ ನೀಚ ಕೆಲಸ ಮಾಡಿದೆವು. ಹೀನ ಕುಲದ ಹೆಣ್ಣಿನ ಸಹವಾಸದಿಂದ ನಮ್ಮ ಜಾತಿಗೆ ಮುಟ್ಟು ತಟ್ಟಾಯಿತಲ್ಲಾ'[5] ಎಂದು ಮರುಗುತ್ತಾರೆ. ಆಗ ಆಕೆಯೇ ಅವರಿಗೆ ಸಮಾಧಾನವನ್ನು ಮಾಡಿ ಅದಕ್ಕೆ ಪರಿಹಾರವನ್ನೂ

ಸೂಚಿಸಿ ಕಳಿಸುತ್ತಾಳೆ. ಈ ಕತೆಯ ಮೂಲಕ ಎರವರು ತಮ್ಮ ಸಮುದಾಯಕ್ಕೆ ತಾವು ಪಾಲಿಸಬೇಕಾದ ಜಾತಿ ಅಂತರವನ್ನು ಕುರಿತು ಎಚ್ಚರಿಕೆಯನ್ನು ನೀಡಲು ಬಯಸುತ್ತಾರೆ. ಅದಕ್ಕೆ ಶ್ರೇಣೀಕರಣ ವ್ಯವಸ್ಥೆಯನ್ನು ತಮ್ಮ ದೈವಗಳ ಮೂಲಕ ಪ್ರತಿಪಾದಿಸುತ್ತಾರೆ ಮತ್ತು ಇತರರು ಅದನ್ನು ಪಾಲಿಸುವಂತೆ ಒತ್ತಾಯಿಸಲಾಗುತ್ತದೆ. ಈ ಕತೆಯನ್ನು ಉದಾಹರಿಸುತ್ತಾ ಇದು ಪುರಾತನ ಕಾಲದಿಂದಲೂ ಪಾಲಿಸಿಕೊಂಡು ಬಂದ ನಿಯಮ, ಆದ್ದರಿಂದ ನಾವು ಹೊಲೆಯರಿಗಿಂತ ಸಮಾಜದಲ್ಲಿ ಉತ್ತಮ ಸ್ಥಾನವನ್ನು ಹೊಂದಿದ್ದೇವೆ ಎಂಬ ಭಾವ ಹೊಂದುತ್ತಾರೆ. ಎರವರ ಸಾಮಾಜಿಕ ಸ್ಥಾನಮಾನಗಳನ್ನು ಕುರಿತಂತೆ ಮೋಗ್ಲಿಂಗ್ ಅವರ ಅಭಿಪ್ರಾಯ ಇಂತಿದೆ. Rev. M.A. Sheering 'The yerawas are emigrants from malayalim, and live chiefly in the southern part of coorg as slaves in the coorg families. to whose mode of life and worship they have comformed themselves. Like them they eat no beef; and are therefore to be classed above the Holeyas and Medas. They dressed similarly to the coorgs; and are strong diligent labours.'[6] ಎರವರು ಅಸ್ಪೃಶ್ಯರಲ್ಲ ಎಂಬುದಕ್ಕೆ ಮತ್ತೊಂದು ನಿದರ್ಶನವನ್ನು ಮೋಗ್ಲಿಂಗ್ ಅವರು ನೀಡುತ್ತಾರೆ. ಹಿಂದೆ ಅಸ್ಪೃಶ್ಯರಿಗೆ ಏಲಕ್ಕಿ ತೋಟಗಳಲ್ಲಿ ಪ್ರವೇಶವಿರಲಿಲ್ಲ. ಆದರೆ ಎರವರನ್ನು ಏಲಕ್ಕಿ ತೋಟದಲ್ಲಿ ಕೆಲಸ ಮಾಡಲು ನೇಮಿಸುತ್ತಿದ್ದುದರಿಂದ ಇವರಿಗೆ ಸಮಾಜದಲ್ಲಿ ಅಸ್ಪೃಶ್ಯರಿಗಿಂತ ಉತ್ತಮವಾದ ಸ್ಥಾನಮಾನವಿತ್ತು ಎಂದು ತಿಳಿಯಬಹುದು ಎನ್ನುತ್ತಾರೆ.

ಎರವರು ತಮ್ಮನ್ನು 'ಇರಾವುಳೇರ್' ಎಂದು ಕೂಡ ಕರೆದುಕೊಳ್ಳುತ್ತಾರೆ. ಆದ್ದರಿಂದ 'ಎರವ' ಎಂಬ ಪದವು 'ಇರಾವುಳ' ಎಂಬ ಪದದಿಂದಲೂ ಹುಟ್ಟಿರಬಹುದು ಎಂದು ಊಹಿಸಬಹುದು. ಮಲಯಾಳಂನಲ್ಲಿ 'ಇರ' ಎಂದರೆ 'ಜಗುಲಿ' ಎಂದರ್ಥ, 'ಉಳೇರ್' ಎಂದರೆ 'ಕುಳಿತುಕೊಳ್ಳುವುದು'. ಅಂದರೆ ಮೇಲ್ವರ್ಗದ ಧಣಿಗಳ ಮನೆಯ ಜಗುಲಿಯವರೆಗೂ ಬರಬಹುದಾದಂತಹ ಸ್ಥಾನವನ್ನು ಪಡೆದಿರುವವರೇ 'ಇರಾವುಳರ್', ಅಂದರೆ ಎರವರು ಎಂದು ಹೇಳಲಾಗುತ್ತದೆ. ಕೊಡವರ 'ಜಮ್ಮದಾಳು' ಎಂದು ಕರೆಸಿಕೊಂಡಿರುವ ಇವರು ಕೊಡಗಿನಲ್ಲಿ ಕೊಡವ ಭೂಮಾಲಿಕರುಗಳೊಂದಿಗೆ ಹೆಚ್ಚು ವಿಶ್ವಾಸವನ್ನು ಹೊಂದಿದ್ದಾರೆ. ಅಷ್ಟೇ ಅಲ್ಲದೆ ಕೊಡವರ ಬದುಕಿನ ಭಾಗವಾಗಿರುವ ಎರವರು ಅತ್ಯಂತ ನಿಷ್ಠ ಮತ್ತು ಪ್ರಾಮಾಣಿಕ ಸೇವಕರಾಗಿದ್ದಾರೆ. ಇತ್ತೀಚೆಗೆ ಕೊಡವರು ಪಟ್ಟಣವನ್ನು ಸೇರುತ್ತಿರುವ ಸಂದರ್ಭದಲ್ಲಿ ಮನೆಯನ್ನು ಮನೆಯ ಹಿರಿಯರನ್ನು ನೋಡಿಕೊಳ್ಳುವ ಜವಾಬ್ದಾರಿಯೂ ಇವರದ್ದೇ ಆಗಿರುತ್ತದೆ. ನಡಿಕೇರಿಯಂಡ ಚಿಣ್ಣಪ್ಪನವರ 'ಪಟ್ಟೋಲೆ ಪಳಮೆ' ಕೃತಿಯಲ್ಲಿ 'ಎರವರು, ಕುರುಬರು, ಪಾಲೆಯರು ಮತ್ತು ಆ

ತರಗತಿಯ ಜಾತಿಯವರು ಜಗಲಿಗೆ ಹತ್ತಬಹುದಾದ ಸ್ಥಾನವನ್ನು ಹೊಂದಿದವರು' ಎಂಬ ಉಲ್ಲೇಖವಿದೆ.'[7] ಅಸ್ಪೃಶ್ಯರಿಗಿಂತ ಉತ್ತಮ ಸ್ಥಾನಮಾನ ಇವರಿಗೆ ಸಮಾಜದಲ್ಲಿದೆ.

ಇತ್ತೀಚೆಗೆ ಎರವರಲ್ಲಿ ಅಷ್ಟೊಂದು ಬಿಗಿಯಾದ ಸಾಮಾಜಿಕ ಕಟ್ಟುಪಾಡುಗಳಿಲ್ಲ. ಕಾಡಿನ ಹೊರಗಿನ ಸಮಾಜದಲ್ಲಿ ಎಲ್ಲರೊಂದಿಗೆ ಬೆರೆತು ಬದುಕುವುದು ಇಂದು ಅನಿವಾರ್ಯವಾಗಿದೆ. ಕಾಡು ಬಿಟ್ಟು ಊರು ಸೇರಿರುವ ಇವರು ತಮ್ಮ ಹಾಡಿಗಳಲ್ಲಿ ಸಮುದಾಯದೊಂದಿಗೆ ಪ್ರತ್ಯೇಕವಾಗಿ ಬದುಕುತ್ತಿಲ್ಲ. ಬದಲಿಗೆ ಲೈನ್ ಮನೆಗಳಲ್ಲಿ, ಊರುಗಳಲ್ಲಿ ಇತರ ಸಮುದಾಯಗಳ ಜೊತೆ ಬದುಕುತ್ತಿದ್ದಾರೆ. ಇತರೆ ಸಮುದಾಯಗಳೊಂದಿಗೆ ಅನ್ಯೋನ್ಯವಾಗಿ ಬದುಕಬೇಕಾಗಿರುವುದರಿಂದ ಅಷ್ಟೊಂದು ಬಿಗಿಯಾಗಿ ಹಿಂದಿನ ಕಟ್ಟುಪಾಡುಗಳು ಪಾಲನೆಯಾಗುತ್ತಿಲ್ಲ. ಇತ್ತೀಚೆಗೆ ಹೊಲೆಯರನ್ನು, ಮಾದಿಗರನ್ನು ಎರವರು ಮದುವೆಯಾದ ಉದಾಹರಣೆಗಳು ಸಿಗುತ್ತವೆ, ಅದೂ ಕೂಡ ಬಹಳ ವಿರಳ. ಅಸ್ಪೃಶ್ಯರಿಗಿಂತಲೂ ಉತ್ತಮ ಸ್ಥಾನಮಾನಗಳನ್ನು ಎರವರು ಜಾತಿಯ ಹಿನ್ನೆಲೆಯಿಂದ ಪಡೆದಿದ್ದರೂ ಕೂಡ ಅಸ್ಪೃಶ್ಯರು ಇವರನ್ನು ತಮಗಿಂತ ಮೇಲು ಎಂದು ಭಾವಿಸಿಲ್ಲ. ಆರ್ಥಿಕವಾಗಿ, ಶೈಕ್ಷಣಿಕವಾಗಿ ಈ ಸಮುದಾಯ ತುಂಬಾ ಹಿಂದುಳಿದಿರುವುದೇ ಇದಕ್ಕೆ ಕಾರಣವಿರಬಹುದು. ಜಾತಿಯ ಬಗೆಗೆ ಇವರಲ್ಲಿರುವ ಅತಿಯಾದ ನಿಷ್ಠೆಯಿಂದ ಇವರೂ ಕೂಡ ಇತರರೊಂದಿಗೆ ಸುಲಭವಾಗಿ ಬೆರೆಯಲಾರರು.

ಶೀರಿಂಗ್ರವರ ಪ್ರಕಾರ ಎರವರು ದನದ ಮಾಂಸ ಸೇವಿಸದ ಕಾರಣ ಸಾಮಾಜಿಕವಾಗಿ ಹೊಲೆಯ ಮತ್ತು ಮಾದಿಗರಿಗಿಂತ ಉತ್ತಮ ಸ್ಥಾನಮಾನವನ್ನು ಹೊಂದಿದ್ದಾರೆ. ಎರವ ಸಮುದಾಯದಲ್ಲಿ ತಮಗಿಂತ ಕೀಳುಜಾತಿಯರವನ್ನು ವಿವಾಹವಾದರೆ ಅಂತವರನ್ನು ಜಾತಿಯಿಂದ ಬಹಿಷ್ಕರಿಸಲಾಗುತ್ತದೆ. ಒಂದು ವೇಳೆ ಆತ/ಆಕೆ ತನ್ನ ತಪ್ಪನ್ನು ಒಪ್ಪಿಕೊಂಡು ಮತ್ತೆ ಕುಲಕ್ಕೆ ಸೇರಿಸಿಕೊಳ್ಳಬೇಕೆಂದು ಬೇಡಿಕೊಂಡರೆ ಹಾಡಿಯ ಹಿರಿಯರೆಲ್ಲ ಸೇರಿ ಒಂದು ತೀರ್ಮಾನಕ್ಕೆ ಬರುತ್ತಾರೆ. ಒಂದು ವೇಳೆ ತಮ್ಮ ಜಾತಿಯವರು ಮದುವೆಯಾದ ಅನ್ಯಜಾತಿಯ ಹುಡುಗ ಅಥವಾ ಹುಡುಗಿ ಜಾತಿಯಲ್ಲಿ ತಮಗಿಂತ ಶ್ರೇಷ್ಠ ಎಂದು ಭಾವಿಸಿದರೆ ಮಾತ್ರ ಅಂತವರನ್ನು ಶುದ್ಧೀಕರಿಸಿ ತಮ್ಮ ಜಾತಿಗೆ ಸೇರಿಸಿಕೊಳ್ಳುತ್ತಾರೆ. ಹಾಗೆಯೇ ಸಮುದಾಯದ ನಂಬಿಕೆಗಳನ್ನು ಕಟ್ಟುಪಾಡುಗಳನ್ನು ಯಾರಾದರೂ ಉಲ್ಲಂಘಿಸಿದರೂ ಕೂಡ ಅಂತವರನ್ನು ಶುದ್ಧೀಕರಣದ ಕ್ರಿಯೆಯ ಮೂಲಕ ಮತ್ತೆ ಕುಲಕ್ಕೆ ಸೇರ್ಪಡೆ ಮಾಡಿಕೊಳ್ಳಲಾಗುತ್ತದೆ. ಶುದ್ಧೀಕರಣ ಕ್ರಿಯೆಗೆ ಸಮುದಾಯದ ಹಿರಿಯರ, ಯಜಮಾನರ ಒಪ್ಪಿಗೆ ಬಹಳ ಮುಖ್ಯ.

## ಎರವರಲ್ಲಿ ಶುದ್ಧೀಕರಣ ಕ್ರಿಯೆ

ಪಂಜಿರಿ ಎರವರಲ್ಲಿ ಕಣಿಲಾಡಿ ಈ ಶುದ್ಧೀಕರಣ ಕ್ರಿಯೆಯನ್ನು ನೆರವೇರಿಸಿದರೆ. ಫಣಿ ಎರವರಲ್ಲಿ ತಮ್ಮಡಿ ನೆರವೇರಿಸುತ್ತಾರೆ. ಅದಕ್ಕೆ ಊರಿನ ಮುಖ್ಯಸ್ಥರು ಹಿರಿಯರೆಲ್ಲಾ ಸೇರಿ ಒಪ್ಪಿಕೊಂಡು ಒಂದು ದಿನವನ್ನು ನಿಶ್ಚಯಿಸುತ್ತಾರೆ. ಆ ದಿನ ಶುದ್ಧೀಕರಣ ಕ್ರಿಯೆ ಶಾಸ್ತ್ರೋಕ್ತವಾಗಿ ನೆರವೇರುತ್ತದೆ.

**ಪೂಜೆಗೆ ಬೇಕಾದ ವಸ್ತುಗಳು**

ಒಂದು ಕೋಳಿ, ನಾಲ್ಕು ಸೇರು ಅಕ್ಕಿ, ಏಳು ತೆಂಗಿನಕಾಯಿ, ಏಳು ಕೊಟ್ಟೆ ಮುಳ್ಳು ಮತ್ತು ಅದರ ಎಲೆ(ಒಂದು ಜಾತಿಯ ಮುಳ್ಳು), ಏಳು ವೀಳ್ಯದ ಎಲೆ, ಹಸುವಿನ ಗಂಜಲ, ಮೂರು ಬಿಂದಿಗೆ ನೀರು ಅದರಲ್ಲಿ ಒಂದು ಬಿಂದಿಗೆ ಕಪ್ಪು ನೀರು(ಇದ್ದಿಲನ್ನು ಪುಡಿ ಮಾಡಿ ಕಲೆಸಿದ ನೀರು), ಒಂದು ಬಿಂದಿಗೆ ಅರಿಶಿನ ನೀರು, ಒಂದು ಬಿಂದಿಗೆ ಶುದ್ಧ ನೀರು, ಎಲೆ ಅಡಿಕೆ, ಹಣ್ಣು ಕಾಯಿ, ಕರ್ಪೂರ, ಊದು ಕಡ್ಡಿ, ಹೂ ಇತ್ಯಾದಿ.

**ಶುದ್ಧೀಕರಣ ವಿಧಾನ:** ಒಂದು ನಿರ್ದಿಷ್ಟ ದಿನದಂದು ಕಣಿಲಾಡಿಯೊಂದಿಗೆ ಊರಿನ ಹಿರಿಯರು ಹಾಗು ಶುದ್ಧೀಕರಣ ಕ್ರಿಯೆಗೆ ಒಳಗಾಗುವ ವ್ಯಕ್ತಿ ಮತ್ತು ಇತರರು ಸೇರಿ ನೀರು ಹರಿಯುವ ಹೊಳೆ, ತೋಡು ಅಥವ ಝರಿಯ ಬಳಿ ತೆರಳುತ್ತಾರೆ. ಇದು ಶುದ್ಧೀಕರಣ ನಡೆಯುವ ಸ್ಥಳ. ಅಲ್ಲಿ ನೀರು ಹರಿಯುವ ದಿಕ್ಕಿಗೆ ಏಳು ಸಣ್ಣ ಸಣ್ಣ ಕಟ್ಟೆಗಳನ್ನು ಕಟ್ಟಿ ಅದರಲ್ಲಿ ನೀರು ತುಂಬುತ್ತಾರೆ. ಕಣಿಲಾಡಿ ತಾನು ತಂದಿದ್ದ ಅಚ್ಚೇರಂಡ ಬಡಿಯನ್ನು ನೀರಿನಲ್ಲಿ ತೊಳೆಯುತ್ತಾನೆ. ಅಚ್ಚೇರಂಡ ಬಡಿ ಎಂದರೆ ಅಜ್ಜನ ಕೋಲು ಎಂದರ್ಥ. ಇದು ಎರವರಿಗೆ ಬಹಳ ಪವಿತ್ರ ವಸ್ತುವಾಗಿದ್ದು ಕಣಿಲಾಡಿಯ ಮನೆಯಲ್ಲಿ ಮತ್ತು ದೇವಸ್ಥಾನದಲ್ಲಿ ಮಾತ್ರ ಇದನ್ನು ಕಾಣಬಹುದು. ಅನಂತರ ಆ ಅಚ್ಚೇರಂಡ ಬಡಿಯ ಮುಂದೆ ಒಂದು ಬಾಳೆ ಎಲೆ ಹಾಸಿ ಅದರ ಮೇಲೆ ಅಕ್ಕಿ ಹಾಕಿ ಅದರ ಮೇಲೆ ಕಳಸವನ್ನು ಇಡುತ್ತಾರೆ. ಅದಕ್ಕೆ ಅರಿಶಿನ, ಕುಂಕುಮ, ಹೂ ಇಟ್ಟು ಕರ್ಪೂರ ಊದು ಬತ್ತಿ ಹಚ್ಚಿ ಪೂಜೆ ಸಲ್ಲಿಸುತ್ತಾರೆ. ಕೋಳಿಯನ್ನು ಬಲಿ ಕೊಡುತ್ತಾರೆ. ನಂತರ ಶುದ್ಧೀಕರಣಕ್ಕೆ ಒಳಗಾದ ವ್ಯಕ್ತಿಯ ತಲೆ ಬೋಳಿಸಿ ನೀರಿನಲ್ಲಿ ಆತನನ್ನು ಮುಳುಗಿಸುತ್ತಾರೆ. ನಂತರ ಆತನನ್ನು ಹರಿಯುವ ನೀರಿಗೆ ಬೆನ್ನು ಹಾಕಿ ನಿಲ್ಲಿಸಿ ಅವನ ತಲೆಯ ಮೇಲೆ ಗಂಜಲ ಸುರಿಯುತ್ತಾರೆ. ಆಗ ಆತ ಹಿಮ್ಮುಖವಾಗಿ ನಡೆದು ಒಂದೊಂದೆ ಕಟ್ಟೆಯ ಒಳಗೆ ನಿಲ್ಲಬೇಕು 'ಮೊದಲನೇ ಕಟ್ಟೆಯಲ್ಲಿ ನೆತ್ತಿಯನ್ನೂ, ಎರಡನೆಯದರಲ್ಲಿ ಹಣೆಯನ್ನೂ, ಮೂರನೆಯದರಲ್ಲಿ ನಾಲಿಗೆಯನ್ನೂ, ನಾಲ್ಕನೆಯದರಲ್ಲಿ ಅಂಗೈಯನ್ನೂ, ಐದನೆಯದರಲ್ಲಿ ಮುಂಗೈಯನ್ನೂ, ಆರನೆಯದರಲ್ಲಿ ಮುಂಗಾಲುಗಳನ್ನೂ, ಏಳನೆಯದರಲ್ಲಿ ಹಿಂಗಾಲುಗಳನ್ನೂ,

ಕೊಟ್ಟೆ ಮುಳ್ಳುಗಳಿಂದ ಚುಚ್ಚಿ ರಕ್ತ ಬರಿಸುತ್ತಾರೆ. ಹೀಗೆ ಮಾಡುವಾಗ ಒಂದೊಂದು ವೀಳ್ಯದೆಲೆ ಮತ್ತು ಕೊಟ್ಟೆಮುಳ್ಳಿನ ಎಲೆಯನ್ನು ನಿವಾಳಿಸಿ ಹರಿಯುವ ನೀರಿನಲ್ಲಿ ತೇಲಿಬಿಡುವನು. ಏಳು ಕಟ್ಟೆಗಳನ್ನು ಒಂದೊಂದರಂತೆ ದಾಟಿದಾಗಲೂ ಒಡೆಸಿ ಕೊನೆಯ ಕಟ್ಟೆಯೊಳಗೆ ಕೂರಿಸುತ್ತಾನೆ. ಮೊದಲು ಅವನ ಮೇಲೆ ಕಪ್ಪುಮಿಶ್ರಿತ ನೀರನ್ನೂ, ನಂತರ ಅರಿಶಿನ ಮತ್ತು ಮಡಿ ನೀರನ್ನೂ ಹಾಕಿ ಕೊನೆಯ ಕಟ್ಟೆಯನ್ನು ಸಂಪೂರ್ಣವಾಗಿ ಒಡೆಸಿ ಹಾಕಿ, ಅವನನ್ನು ಶುದ್ಧೀಕರಿಸಲು ಬಳಸಿದ ನೀರನ್ನು ನದಿಯ ನೀರಿಗೆ ಹರಿಬಿಡುತ್ತಾನೆ."[8] ಅಲ್ಲಿಗೆ ಆತ ಶುದ್ಧಿಯಾದಂತೆ ಲೆಕ್ಕ. ಕೊನೆಗೆ ಆತನ ತಲೆಯ ಮೇಲೆ ಕಳಸವನ್ನು ಹೊರೆಸಿ, ಪೂಜೆಗೆ ಬಳಸಿದ ಅಕ್ಕಿಯನ್ನು ಅವನ ಮಡಿಲಿಗೆ ಕಟ್ಟಿ ಆತನನ್ನು ಮನೆಗೆ ಕರೆದುಕೊಂಡು ಬರಲಾಗುತ್ತದೆ. ಹೆಂಗಸಾದರೆ ಕೇಶಮುಂಡನ ಮಾಡುವುದಿಲ್ಲ ತಲೆಯ ಐದು ಕಡೆ ಸ್ವಲ್ಪ ಕೂದಲು ತೆಗೆಯುತ್ತಾರೆ. ಆದರೆ ಬಾಕಿ ಎಲ್ಲಾ ಕ್ರಿಯೆಯೂ ಹೀಗೆ ಜರುಗುತ್ತದೆ. ಇಲ್ಲಿ ಗಂಜಲದ ಕಲ್ಪನೆ ಬ್ರಾಹ್ಮಣರ ಅನುಕರಣೆಯಿರಬಹುದು, ಆದರೆ ಕೆಳಜಾತಿಯವರನ್ನು ಮದುವೆಯಾದರೆ ಮತ್ತೆ ಅವರಿಬ್ಬರನ್ನೂ ಹಾಡಿಗೆ ಮತ್ತು ಜಾತಿಗೆ ಸೇರಿಸುವುದಿಲ್ಲ. ಅವರು ಜಾತಿಭ್ರಷ್ಟರಾದರೆಂದೇ ಲೆಕ್ಕ.

### ಜೇನುಕುರುಬರ ಸಾಮಾಜಿಕ ಜೀವನ

ಜೇನುಕುರುಬರು ಕೂಡ ತಾವು ಇತರೆ ಬುಡಕಟ್ಟುಗಳಿಗಿಂತ ಶ್ರೇಷ್ಠ ಎಂದು ಭಾವಿಸುತ್ತಾರೆ. ಇತರೆ ಮೇಲ್ವರ್ಗದರು ಇವರನ್ನು ಅಸ್ಪೃಶ್ಯರಂತೆ ಕಾಣುವುದಿಲ್ಲ. ಅವರ ಮನೆ ಜಗಲಿಯವರೆಗೆ ಇವರು ಹೋಗಬಹುದು. ಲಿಂಗಾಯತರು ಜೇನುಕುರುಬರನ್ನು ಮನೆಯ ಒಳಗೆ ಸೇರಿಸುವುದಿಲ್ಲ. ಅವರ ದೇವಸ್ಥಾನಕ್ಕೆ ಸೇರಿಸುವುದಿಲ್ಲ. ಅವರ ಮದುವೆ ಚಪ್ಪರದ ಒಳಗೆ ಇವರು ಹೋಗುವಂತಿರಲಿಲ್ಲ. ಆದರೆ ಜೇನುಕುರುಬರು ಹೊಲೆಯರನ್ನು ಮಾದಿಗರನ್ನು ತಮಗಿಂತ ಕೀಳು ಎಂದು ಭಾವಿಸುತ್ತಾರೆ. ಜೇನುಕುರುಬರು ಹಿಂದೆ ತಮ್ಮ ಹಾಡಿಯ ಒಳಗೆ ಇತರೆ ಸಮುದಾಯದ ಯಾರನ್ನೂ ಸೇರಿಸುತ್ತಿರಲಿಲ್ಲ ಮತ್ತು ಒಂದು ವೇಳೆ ಯಾರಾದರೂ ಬಂದರೆ ಮೈಲಿಗೆ ಆಗುತ್ತದೆ ಎಂದು ಭಾವಿಸುತ್ತಿದ್ದರು. ಹಾಡಿಯ ಒಳಗೆ ಯಾರೂ ಚಪ್ಪಲಿ ಹಾಕಿಕೊಂಡು ಬರುವಂತಿಲ್ಲ. ಅಷ್ಟು ಕಟ್ಟುನಿಟ್ಟಾದ ನಿಯಮಗಳನ್ನು ಪಾಲಿಸುತ್ತಿದ್ದರು. ಜೇನು ಕುರುಬರು ಇತರೆ ಸಮುದಾಯದವರನ್ನು ಮದುವೆಯಾದರೆ ಅವರನ್ನು ಜಾತಿಭ್ರಷ್ಟರೆಂದು ಪರಿಗಣಿಸಿ ಜಾತಿಯಿಂದ ಹೊರಗೆ ಹಾಕುತ್ತಾರೆ. ನಂತರ ಹಾಡಿಯವರೆಲ್ಲ ಸೇರಿ ಯಜಮಾನರ ಸಮ್ಮುಖದಲ್ಲಿ ಪಂಚಾಯಿತಿ ಕರೆಸುತ್ತಾರೆ. ತಪ್ಪು ಮಾಡಿದವರನ್ನು ಕರೆದು ವಿಚಾರಿಸುತ್ತಾರೆ. ಆಗ ಆತನಿಗೆ ತಪ್ಪೊಪ್ಪಿಕೊಳ್ಳಲು ಅವಕಾಶವಿರುತ್ತದೆ. ಒಂದು ವೇಳೆ ಜೇನುಕುರುಬರ ಹುಡುಗ ಕೆಳಜಾತಿಯ ಹುಡುಗಿಯನ್ನು ಮದುವೆಯಾಗಿ ತಮ್ಮನ್ನು ಕುಲಕ್ಕೆ ಸೇರಿಸಿಕೊಳ್ಳಿ ಎಂದು

ಕೇಳಿಕೊಂಡರೂ ಕೂಡ 'ನಾಯಿ ನೆಕ್ಕಿದ ಮಡಕೆ ನಾಯಿನಾಗೆ ಇದ್ಕೊ ಬಿಡ್ಲಿ' ಎಂದು ಸೇರಿಸಿಕೊಳ್ಳುವುದಿಲ್ಲ. ತಮಗಿಂತ ದೊಡ್ಡಜಾತಿಯವರನ್ನು ಮದುವೆಯಾದರೆ ಯಜಮಾನ ಮತ್ತು ಊರಿನ ಎಲ್ಲ ಹಿರಿಯರು ಒಪ್ಪಿಕೊಂಡು ಅವರನ್ನು ಶುದ್ಧೀಕರಿಸಿ ಮತ್ತೆ ಜಾತಿಗೆ ಸೇರಿಸಿಕೊಳ್ಳುತ್ತಾರೆ.

## ಜೇನುಕುರುಬರಲ್ಲಿ ಶುದ್ಧೀಕರಣ ಕ್ರಿಯೆ

ಒಂದು ನಿರ್ದಿಷ್ಟ ದಿನದಂದು ಶುದ್ಧೀಕರಣಕ್ಕೆ ಒಳಗಾಗುವ ವ್ಯಕ್ತಿಯನ್ನು ಊರಿನ ಯಜಮಾನ ಮತ್ತು ಹಿರಿಯರೆಲ್ಲ ಸೇರಿ ಹಾಡಿ ಸಮೀಪದ ಹೊಳೆಯ ಹತ್ತಿರ ಕರೆತಂದು ಹಜಾಮರನ್ನು ಕರೆಸಿ ತಲೆ ಕೂದಲನ್ನು ಪೂರ್ತಿ ಬೋಳಿಸುತ್ತಾರೆ. ಹುಡುಗಿಯಾದರೆ ಅಲ್ಲಲ್ಲಿ ಸ್ವಲ್ಪ ಕೂದಲು ತೆಗೆಸುತ್ತಾರೆ. ಈ ಕ್ರಿಯೆ ಮಾಡುವ ಮೊದಲು ಆ ನಿರ್ದಿಷ್ಟ ಜಮ್ಮಕ್ಕೆ ಸೇರಿದ ಎಲ್ಲಾ ಹಾಡಿಗಳ ಯಜಮಾನರಿಗೂ ಮತ್ತು ಇತರೆ ಜಮ್ಮದ ಹಾಡಿಯ ಯಜಮಾನರಿಗೆಲ್ಲಾ ವಿಷಯ ತಿಳಿಸುತ್ತಾರೆ. ಈ ರೀತಿ ಅಂತರ್ಜಾತಿ ವಿವಾಹವಾದರೆ ಅದು ಎಲ್ಲ ಜಮ್ಮಗಳಿಗೂ ವಿಷಯ ಹರಡುತ್ತದೆ. ಅಂತವರನ್ನು ಹಾಡಿಯಲ್ಲಿ ಇಟ್ಟುಕೊಂಡರೆ ಹಾಡಿಯೇ ಮೈಲಿಗೆಯಾಗಿದೆ ಎಂದು ಭಾವಿಸಿ ಆ ಹಾಡಿಗೆ ಬೇರೆ ಹಾಡಿಯವರು ಯಾರೂ ಬರುವುದಿಲ್ಲ. ಅವರ ಕಷ್ಟ ಸುಖಗಳಿಗೆ ಭಾಗಿಯಾಗುವುದಿಲ್ಲ. ಅವರೊಂದಿಗೆ ಯಾವುದೇ ರೀತಿಯ ಸಂಬಂದವನ್ನು ಇಟ್ಟುಕೊಳ್ಳುವುದಿಲ್ಲ. ಆದ ಕಾರಣ ಶುದ್ಧೀಕರಣ ಕ್ರಿಯೆಯನ್ನು ಎಲ್ಲರಿಗೂ ತಿಳಿಸುವುದರ ಮೂಲಕ ಹಾಡಿ ಪವಿತ್ರವಾಗಿದೆ ಎಂಬ ಸಂದೇಶವನ್ನು ಇತರೆ ಜಮ್ಮದವರಿಗೂ ತಲುಪಿಸುತ್ತಾರೆ.

## ಬೆಟ್ಟಕುರುಬರ ಸಾಮಾಜಿಕ ಜೀವನ

ಇತರೆ ಎಲ್ಲ ಬುಡಕಟ್ಟುಗಳಿಗಿಂತ ತಾವು ಮೇಲು ಎಂಬ ಶ್ರೇಷ್ಠತೆಯ ಭಾವ ಬೆಟ್ಟ ಕುರುಬರಲ್ಲೂ ಇದೆ. ತಾವು ಇತರೆ ಬುಡಕಟ್ಟುಗಳಾದ ಎರವ, ಸೋಲಿಗ, ಇರುಳಿಗ ಮೊದಲಾದವರಿಗಿಂತ ಮೇಲು ಎಂದೂ ಇವರೆಲ್ಲರಿಗಿಂತ ತಾವೇ ಶ್ರೇಷ್ಠರಾದವರು ಎಂದು ಇವರೂ ಕೂಡ ನಂಬುತ್ತಾರೆ. ಎಲ್ಲ ಬುಡಕಟ್ಟುಗಳಂತೆ ಬೆಟ್ಟಕುರುಬರೂ ಕೂಡ ತಮ್ಮ ಸಂಪ್ರದಾಯದ ಪ್ರಕಾರ ಇತರೆ ಬುಡಕಟ್ಟುಗಳೊಂದಿಗೆ ಪರಸ್ಪರ ವಿವಾಹ ಸಂಬಂಧವನ್ನು ಬೆಳೆಸುವುದಿಲ್ಲ. ಆ ರೀತಿ ಬೇರೆ ಜಾತಿಯ ಹುಡುಗಿಯನ್ನು ಮದುವೆಯಾದರೆ ಅವನನ್ನು ಬಹಿಷ್ಕರಿಸಿ ಕುಲದಿಂದ ಹೊರಹಾಕಲಾಗುತ್ತದೆ. ಅನಂತರ ಅವನೊಂದಿಗೆ ಅವನ ಕುಟುಂಬ ದವರು ಮಾತನಾಡುವುದಾಗಲೀ, ಆಹಾರ ಪದಾರ್ಥ ಕೊಡುವುದಾಗಲೀ, ತೆಗೆದುಕೊಳ್ಳುವುದಾಗಲೀ ಮಾಡುವಂತಿಲ್ಲ. ಬೇರೆ ಜಾತಿಯ ಹೆಣ್ಣಿನೊಂದಿಗೆ ಮದುವೆಯಾದ ಬೆಟ್ಟಕುರುಬರ ಗಂಡಿಗೆ ಆ

ಹೆಣ್ಣಿನೊಂದಿಗೆ ವಿವಾಹ ವಿಚ್ಛೇದನವನ್ನು ಮಾಡಿಕೊಳ್ಳಲು ಅವಕಾಶವಿಲ್ಲ. ಹಾಗೆಯೇ ಒಂದು ವೇಳೆ ಬಹಿಷ್ಕಾರವಾದರೂ ಕೂಡ ಆ ಹುಡುಗ ಪ್ರಾಯಶ್ಚಿತ್ತ ಮಾಡಿಕೊಂಡು ಯಜಮಾನನಿಗೆ ಬೇಡಿಕೆಯನ್ನು ಇಟ್ಟರೆ ಮತ್ತೆ ಕುಲದ ಒಳಗೆ ಸೇರಿಸಿಕೊಳ್ಳಬಹುದು. ಆದರೆ ಆ ಯುವಕನ ಕುಟುಂಬದವರು, ಕುಲದವರು, ಮನೆದೇವರ ಹೆಸರಿನ ಪಂಗಡದವರು ಎಲ್ಲರನ್ನು ಸೇರಿಸಿ ಯಜಮಾನ ನೀಡುವ ಪ್ರಾಯಶ್ಚಿತ್ತ ಶಿಕ್ಷೆಯನ್ನು ಆ ಹುಡುಗ ಪಡೆದುಕೊಳ್ಳಬೇಕಾಗುತ್ತದೆ. ಅನಂತರ ಯಜಮಾನ, ಮುಖಂಡರು, ಹಿರಿಯರೆಲ್ಲ ಸೇರಿ ಆತನನ್ನು ಶುದ್ಧೀಕರಿಸಿ ಮತ್ತೆ ತಮ್ಮ ಜಾತಿಗೆ ಸೇರಿಸಿಕೊಳ್ಳುತ್ತಾರೆ.

### ಬೆಟ್ಟಕುರುಬರಲ್ಲಿ ಪ್ರಾಯಶ್ಚಿತ್ತ

ಬೆಟ್ಟಕುರುಬರ ಕುಲದ ಪದ್ಧತಿಯಂತೆ ಯಾರಾದರು ತಪ್ಪು ಮಾಡಿದರೆ ಅಂತಹ ವ್ಯಕ್ತಿಗೆ ಶಿಕ್ಷೆ ನೀಡುವುದಿಲ್ಲ ಬದಲಿಗೆ ಆತನನ್ನು ತಪ್ಪಿಗೆ ಪ್ರಾಯಶ್ಚಿತ ಮಾಡಿಕೊಳ್ಳಲು ಪ್ರೇರೇಪಿಸಲಾಗುತ್ತದೆ. ಹಾಡಿಯ ಮುಖಂಡ ಒಂದು ನಿರ್ದಿಷ್ಟ ದಿನವನ್ನು ನಿಶ್ಚಯಿಸಿ ಸಭೆ ಕರೆಯುತ್ತಾರೆ. ಈ ಸಮುದಾಯಕ್ಕೆ ಸೇರಿದ ಎಲ್ಲ ಸಾಮೂಹಿಕ ಆಚರಣೆಗಳು ಅಂಬಾಲದಲ್ಲಿ ಜರುಗುತ್ತದೆ. ಅಂಬಾಲ ಒಂದು ರೀತಿಯಲ್ಲಿ ದೇವಾಲಯವಿದ್ದಂತೆ. ಅದಕ್ಕೆ ಬಹಳ ಪವಿತ್ರವಾದ ಸ್ಥಾನಮಾನವನ್ನು ಬೆಟ್ಟಕುರುಬರು ನೀಡುತ್ತಾರೆ. ಅಂದು ತಪ್ಪು ಮಾಡಿದ ವ್ಯಕ್ತಿ ಹಾಗೂ ಅವನ ಸಂಬಂಧಿಕರು, ಊರಿನ ಸರ್ವರು ಅಲ್ಲಿ ಸೇರುತ್ತಾರೆ. ಆಗ ತಪ್ಪು ಮಾಡಿದ ವ್ಯಕ್ತಿಯ ಬದಲಿಗೆ ಆತನ ಕುಟುಂಬವನ್ನು ವಿಚಾರಿಸುತ್ತಾರೆ. ಅವರನ್ನು ಪ್ರಶ್ನಿಸುತ್ತಾರೆ. ಹಾಗೆ ತಪ್ಪಿತಸ್ಥನ ಕುಟುಂಬಕ್ಕೆ ಸೇರಿದ ಹಿರಿಯರ ಆತ್ಮಗಳನ್ನು ಪ್ರಶ್ನಿಸುತ್ತಾರೆ ಮತ್ತು ಆತ ಈ ರೀತಿ ತಪ್ಪು ಮಾಡಲು ನೀವೇ ಕಾರಣ, ನೀವು ಸರಿಯಾದ ಹಾದಿಯನ್ನು ಆತನಿಗೆ ತೋರಿಸಲಿಲ್ಲ ಎಂದು ಆರೋಪಿಸುತ್ತಾರೆ. ಇದು ಒಂದು ವಿಶೇಷವಾದ ಆಚರಣೆಯಾಗಿದೆ. ವ್ಯಕ್ತಿಗೆ ಶಿಕ್ಷೆ ನೀಡುವ ಪದ್ಧತಿಯಿಲ್ಲ ಆದರೆ ತನ್ನ ಮನೆಯವರನ್ನು ತನ್ನ ಎದುರಿಗೆ ಅಂಬಾಲದಲ್ಲಿ ನಿಲ್ಲಿಸಿ ತನ್ನ ಕುಟುಂಬದವರನ್ನು, ಹಿರಿಯರನ್ನು ಪ್ರಶ್ನಿಸುವುದನ್ನು ಆತ ಅವಮಾನಕರ ಎಂದು ಭಾವಿಸುತ್ತಾರೆ. ಆದ್ದರಿಂದ ಮಾನಸಿಕವಾಗಿ ಪ್ರಾಯಶ್ಚಿತ್ತ ಅನುಭವಿಸಲು ಈ ಕ್ರಿಯೆ ಸಹಕಾರಿ ಯಾಗಿದೆ. ಸತ್ತ ಹಿರಿಯರ ಆತ್ಮಗಳನ್ನು ಕರೆಸಿ ಆತನ ಪರವಾಗಿ ಪ್ರಶ್ನಿಸುವುದು ಬಹಳ ವಿಭಿನ್ನವಾದ ಆಚರಣೆಯಾಗಿ ಕಂಡುಬರುತ್ತದೆ.

ಬೆಟ್ಟಕುರುಬರು ಬಹಳ ಸಂಪ್ರದಾಯಸ್ಥರು ಹಾಗೂ ನೇಮನಿಷ್ಠರು. ಈಗಲೂ ಹಲವಾರು ಕೊಡಗಿನ ದೇವಾಲಯಗಳಲ್ಲಿ ಇವರೇ ಪೂಜಾರಿಗಳು. ಹಾಗೆಯೇ ತಿತಿಮತಿಯ ದೇವರ ಪುರದಲ್ಲಿ ವರ್ಷಕ್ಕೊಮ್ಮೆ ಭದ್ರಕಾಳಿ ದೇವಿಯ ಹೆಸರಲ್ಲಿ ನಡೆಯುವ ಕುಂಡೆಹಬ್ಬದ ಪ್ರಮುಖ

ರೂವಾರಿಗಳೂ ಇವರೇ. ಹಬ್ಬದಂದು ದೇವಾಲಯದ ಸ್ವಚ್ಛತಾಕಾರ್ಯ ಇವರ ಜವಾಬ್ದಾರಿ. ಕುಂಡೆಹಬ್ಬದ ಮತ್ತೊಂದು ಹೆಸರು ಬೇಡುಹಬ್ಬ. ಬೆಟ್ಟಕುರುಬರು ಬಿದಿರಲ್ಲಿ ಕಟ್ಟಿದ ಕುದುರೆಯನ್ನು ಹಾಡಿಯ ತಮ್ಮ ಅಂಬಾಲದಲ್ಲಿ ಸಂರಕ್ಷಿಸಿಟ್ಟಿರುತ್ತಾರೆ. ಹಬ್ಬದಂದು ಅದನ್ನು ಹೊರತೆಗೆದು ಸ್ವಚ್ಛಗೊಳಿಸಿ ದೇವಾಲಯದ ಬಳಿಗೆ ತರುತ್ತಾರೆ. ಅದಕ್ಕೆ ಅಲಂಕಾರ ಮಾಡಿದ ನಂತರ ಕೊಡವರು ಕುದುರೆಯ ಮೇಲೆ ಕುಳಿತು ನೃತ್ಯ ಮಾಡುತ್ತಾರೆ. ಈ ಎಲ್ಲಾ ವಿಧಿ ವಿಧಾನಗಳಲ್ಲಿ ಬೆಟ್ಟಕುರುಬರಿಗೆ ವಿಶೇಷ ಸ್ಥಾನಮಾನವಿದೆ. ಹಾಗೆಯೇ ಇವರಿಗೂ ಕೂಡ ಅಸ್ಪೃಶ್ಯತೆಯ ನೆರಳಿಲ್ಲ. ಇವರು ಬಹಳ ಕಟ್ಟುನಿಟ್ಟಿನ ಸಂಸ್ಕಾರಗಳನ್ನು ಇಂದಿಗೂ ನೆರವೇರಿಸಿ ಕೊಂಡು ಬಂದಿದ್ದು ಇತರೆ ಬುಡಕಟ್ಟುಗಳಿಗಿಂತ ತಾವು ಶ್ರೇಷ್ಠ ಎಂದು ಭಾವಿಸುತ್ತಾರೆ. ನಡಿಕೇರಿಯಂಡ ಚಿಣ್ಣಪ್ಪನವರು 'ಪಟ್ಟೋಲೆ ಪಳಮೆ'ಯಲ್ಲಿ ಕುರುಬರು ಕೊಡವರ ಮನೆಯ ಜಗಲಿಯವರೆಗೂ ಬರಬಹುದಾದ ಸ್ಥಾನಮಾನವನ್ನು ಹೊಂದಿದ್ದಾರೆ ಎಂದು ಉಲ್ಲೇಖಿಸಿದ್ದಾರೆ.

ಬೆಟ್ಟಕುರುಬರು ಕೊಡವರ ಜೀತದಾಳುಗಳಾಗಿರುವುದು ಬಹಳ ಕಡಿಮೆ. ಅವರು ಸ್ವಾವಲಂಬಿಗಳಾಗಿ ತಮ್ಮ ಅಲ್ಪ ಸ್ವಲ್ಪ ಜಮೀನಿನಲ್ಲಿ ಕಾಫಿ, ಮೆಣಸು ಬೆಳೆಯುತ್ತಾ, ಇಲ್ಲವೇ ಕೂಲಿ ಕೆಲಸ ಮಾಡಿಕೊಂಡು ಸ್ವತಂತ್ರರಾಗಿ ತಮ್ಮ ಸಮುದಾಯದೊಂದಿಗೆ ಬದುಕಲು ಬಯಸುತ್ತಾರೆ. 12ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಸಾಮಾಜಿಕ ಕ್ರಾಂತಿ ನಡೆದ ಸಂದರ್ಭ ದಲ್ಲಿ ಅದರ ಪ್ರಭಾವಕ್ಕೆ ಒಳಗಾದ ಬೆಟ್ಟಕುರುಬರೂ ಕೂಡ ತಮ್ಮದೇ ಮಠಗಳನ್ನು ಹೊಂದಿದ್ದರು ಎಂಬುದಕ್ಕೆ ಇವರ ಮೌಖಿಕ ಸಾಹಿತ್ಯದಲ್ಲಿ ನಮಗೆ ಪುರಾವೆ ದೊರೆಯುತ್ತದೆ. ಆ ಸಂದರ್ಭದಲ್ಲಿ ಬೆಟ್ಟಕುರುಬರ ಹನ್ನೆರಡು ಮಠಗಳು ಇದ್ದು ಅದರಲ್ಲಿ ಒಂದು ಕುಟ್ಟದ ಬಳಿಯ ನಾಣಚ್ಚಿಯಲ್ಲಿದೆ ಎನ್ನುತ್ತಾರೆ. ಆದರೆ ಕಾಡಿನಲ್ಲಿ ವಾಸಿಸುತ್ತಿದ್ದವರು ಮಾಂಸ, ಮದ್ಯಗಳನ್ನು ವರ್ಜಿಸಲಾಗದೆ, ಮಠದ ನಿಯಮಗಳನ್ನು, ಬಿಗಿಯಾದ ಕಟ್ಟುಪಾಡುಗಳನ್ನು ಪಾಲಿಸಲಾಗದೆ ಮತ್ತೆ ತಮ್ಮ ಮೂಲ ಬದುಕಿಗೆ ವಾಪಸು ಬಂದಿರಬಹುದು ಎಂಬ ಅಭಿಪ್ರಾಯವನ್ನು ಬೆಟ್ಟಕುರುಬರ ವಿಠಲ್ ನಾಣ್ಚಿ ಅಭಿಪ್ರಾಯ ಪಡುತ್ತಾರೆ. ಈ ಕುರಿತು ಆಳವಾದ ಅಧ್ಯಯನ ನಡೆಯಬೇಕಿದೆ.

## ಸೋಲಿಗರ ಸಾಮಾಜಿಕ ಜೀವನ

ಸೋಲಿಗರು ಮೂಲತಃ ಪ್ರಕೃತಿಯ ಆರಾಧಕರು. ಮೂಲದಲ್ಲಿ ಜಡೇಸ್ವಾಮಿ, ಕ್ಯಾತೇ ದೇವರು, ಹುಲೀರಪ್ಪ, ಎಲ್ಲಮ್ಮ, ಚಿಕ್ಕಮ್ಮರನ್ನು ಪೂಜಿಸುತ್ತಿದ್ದವರು. ಅನಂತರದಲ್ಲಿ ಶೈವಾರಾಧಕ ರಾಗಿಯೂ ನಂತರ ಬಿಳಿಗಿರಿರಂಗನನ್ನು ಭಾವ ಎಂದು ಕರೆಯುವುದರ ಮೂಲಕ ವೈಷ್ಣವಾರಾಧಕರಾಗಿ ಬದಲಾದದ್ದು ಇತಿಹಾಸ. ಸಮಾಜದಲ್ಲಿ ಈಗಾಗಲೇ ಪ್ರಬಲವಾಗಿದ್ದ ಶೈವ

ಮತ್ತು ವೈದಿಕಗಳ ಧಾರ್ಮಿಕತೆಯ ನಂಟಿನಿಂದಾಗಿ ಇತರೆ ಬುಡಕಟ್ಟುಗಳಿಗಿಂತ ಉನ್ನತ ಸ್ಥಾನಮಾನಗಳನ್ನು ಹೊಂದುವ ಅವ್ಯಕ್ತ ಆಶಯವು ಈ ಅನ್ಯ ದೈವಗಳ ಆರಾಧನೆಗೆ ಸೋಲಿಗರನ್ನು ಪ್ರೇರೇಪಿಸಿರಬಹುದು.

ಸೋಲಿಗರು ಮಲೆಮಹದೇಶ್ವರನ ಕಾವ್ಯದಲ್ಲಿ ಬರುವ ಸಂಕಮ್ಮನ ಸಾಲನ್ನು ಆಧಾರವಾಗಿಟ್ಟುಕೊಂಡು ಶೈವಮತದೊಂದಿಗೆ ತಮ್ಮ ಸಂಬಂಧವನ್ನು ಜೋಡಿಸುತ್ತಾರೆ. ಮಲೆ ಸೋಲಿಗರ ನೀಲಯ್ಯನ ಹೆಂಡತಿಯಾದ ಸಂಕಮ್ಮನಿಗೆ ಮಹದೇಶ್ವರನ ವರಪ್ರಸಾದದಿಂದ ಹುಟ್ಟಿದ ಕಾರಯ್ಯ ಮತ್ತು ಬಿಲ್ಲಯ್ಯರು ತಮ್ಮ ಮೂಲಪುರುಷರು ಎಂದು ಹೇಳುವ ಮೂಲಕ ತಾವು ಮಲೆಮಾದೇಶ್ವರನ ಒಕ್ಕಲು ಎಂದು ಕರೆದುಕೊಳ್ಳುತ್ತಾರೆ. ಹಾಗೆಯೇ ಅದರ ಪ್ರತೀಕವಾಗಿ ವರ್ಷಕ್ಕೊಮ್ಮೆ ಸಂಕಮ್ಮನ ಹಬ್ಬವನ್ನು ಆಚರಿಸುತ್ತಾರೆ.

ಹಾಗೆಯೇ ಮತ್ತೊಂದು ಪ್ರಬಲ ಮತಧರ್ಮವಾದ ವೈಷ್ಣವಧರ್ಮದೊಡನೆ ತಮ್ಮ ನಂಟನ್ನು ಪ್ರತಿಪಾದಿಸಲು ಅವರ ಮೌಖಿಕ ಸಾಹಿತ್ಯದಲ್ಲಿ ಕುಸುಮಾಲೆಯನ್ನು ಬಿಳಿಗಿರಿರಂಗ ಮದುವೆಯಾದ ಕತೆಯನ್ನು ಉದಾಹರಿಸುತ್ತಾರೆ. ಕಾಡುಸೋಲಿಗರ ಬೊಮ್ಮೇಗೌಡನ ಮಗಳಾದ ಕುಸುಮಾಲೆಯನ್ನು ಕಂಡು ಮೋಹಿತನಾದ ಬಿಳಿಗಿರಿರಂಗಯ್ಯ ಕುಸುಮಾಲೆಯನ್ನು ಮದುವೆಯಾಗಲು ಬಯಸುತ್ತಾನೆ. ಆದರೆ ಮೊದಲೇ ಮದುವೆಯಾಗಿ ಇಬ್ಬರು ಹೆಂಡಿರಿರುವ ಬಿಳಿಗಿರಿರಂಗನಿಗೆ ತನ್ನ ಮಗಳನ್ನು ಮದುವೆ ಮಾಡಲು ಬೊಮ್ಮೇಗೌಡ ಒಪ್ಪುವುದಿಲ್ಲ. ಕೊನೆಗೆ ಉಪಾಯವಾಗಿ ಬಿಳಿಗಿರಿರಂಗ ಕುಸುಮಾಲೆಯನ್ನು ಒಲಿಸಿಕೊಂಡು ಅವಳನ್ನು ಅಪಹರಿಸಿ ಮದುವೆಯಾಗುತ್ತಾನೆ. ಹೀಗೆ ಬಿಳಿಗಿರಿರಂಗನನ್ನು ಭಾವ ಎಂದು ಕರೆಯುವುದರ ಮೂಲಕ ಸೋಲಿಗರು ವೈದಿಕದ ನಂಟನ್ನು ಹೊಂದುತ್ತಾರೆ. ವೈದಿಕ ಪರಂಪರೆಯು ಉತ್ತುಂಗದಲ್ಲಿದ್ದ ಕಾಲದಲ್ಲಿ ಶೈವದಿಂದ ವೈದಿಕಕ್ಕೆ ಆಕರ್ಷಿತರಾಗುತ್ತಿದ್ದ ಸಂಕ್ರಮಣ ಕಾಲದಲ್ಲಿ ಈ ಕತೆಯು ಸೃಷ್ಟಿಯಾಗಿರಬಹುದು. ಈ ರೀತಿ ಶೈವ ಮತ್ತು ವೈದಿಕ ಆರಾಧನೆಯ ಮೂಲಕ ಸೋಲಿಗರು ಸಾಂಸ್ಕೃತಿಕ ಭ್ರಮಾತ್ಮೀಕರಣಕ್ಕೆ ಒಳಗಾಗಿರುವುದನ್ನು ಈ ಮೇಲಿನ ಅಂಶಗಳ ಮೂಲಕ ಕಾಣಬಹುದು.

ಸೋಲಿಗರಿಗೆ ಅಸ್ಪೃಶ್ಯತೆಯ ಸಂಕೋಲೆಯಿಲ್ಲ. ಇವರು ಧಾರ್ಮಿಕ ಆಚರಣೆಗಳಲ್ಲಿ ಅಪಾರವಾದ ಕಟ್ಟುನಿಟ್ಟನ್ನು ಅನುಸರಿಸುತ್ತಾರೆ. ಸೋಲಿಗರು ದನದ ಮಾಂಸ ಸೇವಿಸುವುದಿಲ್ಲ. ಕುಲ, ಜಾತಿಯ ಬಗ್ಗೆ ಅತ್ಯಂತ ನಿಷ್ಠೆ ಹೊಂದಿರುವ ಇವರು ಅಂತರ್‌ಜಾತಿ ವಿವಾಹವನ್ನು ಮಾನ್ಯ ಮಾಡುವುದಿಲ್ಲ. ಅಲ್ಲದೆ ನಿಷಿದ್ಧ ಕುಲಗಳೊಡನೆ ವಿವಾಹ ಸಂಬಂಧವನ್ನು ಕೂಡ ಏರ್ಪಡಿಸುವುದಿಲ್ಲ. ಇವರಲ್ಲಿ ಸಾಮಾಜಿಕವಾಗಿ ಕೀಳರಿಮೆಯ ಭಾವ ಕಾಣುವುದಿಲ್ಲ ಬದಲಾಗಿ ತಮ್ಮ ಸಮುದಾಯದ ಸಾಂಸ್ಕೃತಿಕ ಶ್ರೀಮಂತ ಪರಂಪರೆಯನ್ನು ಮುಂದುವರಿಸುತ್ತಾ

ತಮ್ಮ ಆಚರಣೆಗಳಲ್ಲಿ ಅದನ್ನು ಅನುಸರಿಸುವುದರ ಮೂಲಕ ಸ್ವಾಭಿಮಾನದಿಂದ ಬದುಕುತ್ತಿದ್ದಾರೆ. ಮಾಟ ಮಂತ್ರದಲ್ಲಿ ಸೋಲಿಗರು ಸಿದ್ಧಹಸ್ತರು ಆದ್ದರಿಂದ ಇತರೆ ಸಮುದಾಯದವರು ಸೋಲಿಗರಿಗೆ ಒಂದು ರೀತಿಯ ಭಯಮಿಶ್ರಿತ ಗೌರವ ಸ್ಥಾನಮಾನಗಳನ್ನು ನೀಡುತ್ತಾರೆ.

ಸೋಲಿಗರು ಕೊಡಗಿನ ಇತರೆ ಬುಡಕಟ್ಟುಗಳಂತೆ ತಮ್ಮದೆಲ್ಲವನ್ನು ಕಳೆದುಕೊಂಡು ಅನಾಥಪ್ರಜ್ಞೆಯನ್ನು ಅನುಭವಿಸುತ್ತಿದ್ದರೂ ಕೂಡ ಸಮುದಾಯದಲ್ಲಿ ಸಾಮೂಹಿಕ ಸಹಭಾಗಿತ್ವವನ್ನು ಇನ್ನೂ ತಮ್ಮಲ್ಲಿ ಉಳಿಸಿಕೊಂಡು ಬಂದಿದ್ದಾರೆ. ಸಾಂಸ್ಕೃತಿಕವಾಗಿ ಸಮಾಜದಲ್ಲಿ ಈ ಸಮುದಾಯವು ಹೊಂದಿರುವ ಸ್ಥಾನಮಾನಗಳನ್ನು ಸೋಲಿಗರ ಮೌಖಿಕ ಸಾಹಿತ್ಯವು ತಿಳಿಸಿ ಕೊಡುತ್ತದೆ. ಬುಡಕಟ್ಟುಗಳ ಆದಿಮ ಸಂಸ್ಕೃತಿಯ ಒಳಗೆ ಇತರೆ ಸಂಸ್ಕೃತಿಯ ಸ್ವೀಕಾರ ಅಷ್ಟು ಸುಲಭವಲ್ಲ. ಆದರೆ ಸೋಲಿಗರು ಇದಕ್ಕೆ ವ್ಯತಿರಿಕ್ತವಾಗಿ ನಮಗೆ ಕಂಡುಬರುತ್ತಾರೆ. ಈ ಬುಡಕಟ್ಟು ಬದುಕನ್ನು ಹಂತ ಹಂತವಾಗಿ ಶೈವ ಮತ್ತು ವೈಷ್ಣವ ಮತಗಳು ಪ್ರಭಾವಿಸಿದ್ದು ಮತ್ತು ಅಲ್ಲಿನ ಐತಿಹಾಸಿಕ ವ್ಯಕ್ತಿಗಳನ್ನು, ದೇವರುಗಳನ್ನು ಸೋಲಿಗರು ತಮ್ಮದಾಗಿಸಿಕೊಂಡಿರುವ ಪರಿ ನಿಜಕ್ಕೂ ಆಶ್ಚರ್ಯಕರವಾದದ್ದು. ಧಾರ್ಮಿಕತೆ, ದೈವದ ಹೆಸರಿನಲ್ಲಿ ಮತ್ತೊಂದು ಮತಧರ್ಮದ ಸಂಸ್ಕೃತಿಯನ್ನು ತಮ್ಮದಾಗಿಸಿಕೊಳ್ಳುವ ಮೂಲಕ ಒಳಗೊಳ್ಳುವ ಹಾಗೂ ಒಳಗೊಳ್ಳಿಸಿಕೊಳ್ಳುವ ಪ್ರಕ್ರಿಯೆಗೆ ತಮ್ಮನ್ನು ಒಡ್ಡಿಸಿಕೊಂಡಿದ್ದಾರೆ. ಈ ವೈಶಿಷ್ಟ್ಯವನ್ನು ಸೋಲಿಗರಲ್ಲಿ ನಾವು ಸ್ಪಷ್ಟವಾಗಿ ಕಾಣಬಹುದು. ಸೋಲಿಗರ ಸಮುದಾಯದಲ್ಲಿ ಗಂಡು ಹೆಣ್ಣಿಗೆ ಆಯ್ಕೆಯ ವಿಚಾರದಲ್ಲಿ ಮುಕ್ತ ಸ್ವಾತಂತ್ರ್ಯವಿದೆ. ಆದರೆ ಅವರು ವ್ಯಭಿಚಾರವನ್ನು ಸಹಿಸುವುದಿಲ್ಲ. ಒಂದು ವೇಳೆ ಯಾರಾದರೂ ವ್ಯಭಿಚಾರದಲ್ಲಿ ತೊಡಗಿಕೊಂಡಿದ್ದು ಕಂಡುಬಂದರೆ ಅಂತವರಿಗೆ ಕಠಿಣ ಶಿಕ್ಷೆ ವಿಧಿಸುವ ಹಾಗೆಯೇ ಅಂತಹವರನ್ನು ಕುಲದಿಂದ ಬಹಿಷ್ಕಾರ ಹಾಕುವ ಅಧಿಕಾರ ಯಜಮಾನರಿಗಿದೆ.

### ಸೋಲಿಗರಲ್ಲಿ ಶುದ್ಧೀಕರಣ ಕ್ರಿಯೆ

ಸೋಲಿಗ ಸಮದಾಯದಲ್ಲಿ ಯಾವುದಾದರು ವ್ಯಕ್ತಿ ಬಹಿಷ್ಕಾರಕ್ಕೆ ಒಳಗಾದರೆ ಅಂತಹ ವ್ಯಕ್ತಿ ತನ್ನ ತಪ್ಪನ್ನು ಮನ್ನಿಸಿ ಕುಲಕ್ಕೆ ಮತ್ತೆ ಸೇರಿಸಿಕೊಳ್ಳಬೇಕೆಂದು ಮುಖ್ಯಸ್ಥನಲ್ಲಿ ಬೇಡಿಕೆಯನ್ನು ಇಡಬಹುದು. ಅದಕ್ಕೆ ಯಜಮಾನ ಮತ್ತು ಊರಿನ ಹಿರಿಯರೆಲ್ಲ ಒಪ್ಪಿಕೊಂಡರೆ ಒಂದು ನಿರ್ದಿಷ್ಟ ದಿನವನ್ನು ನಿಶ್ಚಯಿಸುತ್ತಾರೆ. ಅಂದು ಎಲ್ಲರೂ ಸೇರಿ ಊರಿನ ಹೊರಗಡೆ ಏಳು ತೆರೆಯನ್ನು ಕಟ್ಟುತ್ತಾರೆ. ಪ್ರಾಯಶ್ಚಿತ್ತಕ್ಕೆ ಒಳಗಾಗಿರುವ ವ್ಯಕ್ತಿಯ ತಲೆಯನ್ನು ಬೋಳಿಸುತ್ತಾರೆ. ಆತ ಸ್ನಾನ ಮಾಡಿ ಏಳು ಪರದೆ ದಾಟಿ ಬರಬೇಕು. ಒಂದೊಂದು ಪರದೆ ದಾಟಿದಾಗಲೂ ಗೋಮೂತ್ರವನ್ನು ಕುಡಿಯಬೇಕು. ಹೀಗೆ ಏಳು ಬಾರಿ ಮಾಡಬೇಕು. ನಂತರ ಊರಿನ

ದೇವಾಲಯಕ್ಕೆ ಕರೆದುಕೊಂಡು ಬಂದು ಪೂಜೆ ಮಾಡಿ ಆತನ ಕೊರಳಿಗೆ ತುಳಸಿ ಹಾರ ಹಾಕುತ್ತಾರೆ. ನಂತರ ಆತನ ಮನೆಗೆ ಕರೆದುಕೊಂಡು ಹೋಗುತ್ತಾರೆ. ಆ ದಿನ ಆತ ಊರಿನ ಹಿರಿಯರಿಗೆ, ಮುಖ್ಯಸ್ಥರಿಗೆಲ್ಲ ವಿಶೇಷ ಭೋಜನವನ್ನು ಏರ್ಪಡಿಸಬೇಕಾಗುತ್ತದೆ. ಅಲ್ಲಿಗೆ ಶುದ್ಧೀಕರಣ ಕ್ರಿಯೆ ಮುಗಿದಂತೆ.

ಉರಾಳಿ ಸೋಲಿಗರಲ್ಲಿ ಕೌಟುಂಬಿಕ ಬದುಕು ಬಹಳ ಕಟ್ಟುಪಾಡುಗಳಿಂದ ಕೂಡಿದ್ದು ಇವರಲ್ಲಿ ಹೆಣ್ಣುಮಕ್ಕಳು ಮದುವೆಯಾದ ನಂತರ ಯಾವುದಾದರೂ ಕಾರಣದಿಂದ ತನ್ನ ಗಂಡನಿಂದ ಬಿಡುಗಡೆ ಬೇಕು ಎಂದು ಬಯಸಿದರೆ ಅಷ್ಟು ಸುಲಭವಾಗಿ ಬೇರೆಯಾಗಲು ಆಗುತ್ತಿರಲಿಲ್ಲ. ಅಂತಹ ಸಂದರ್ಭದಲ್ಲಿ ಆಕೆಯನ್ನು ಪಂಚಾಯಿತಿಗೆ ಕರೆಸಿ ಶಿಕ್ಷೆ ವಿಧಿಸಲಾಗುತಿತ್ತು, ಈ ಶಿಕ್ಷೆಯನ್ನ ಕೋಲುಕಾರ ಜಾರಿಗೊಳಿಸಬೇಕಿತ್ತು. ಪಂಚಾಯಿತಿ ನಿಶ್ಚಯಸಿದ ದಿನದಂದು ಕೋಲುಕಾರ ಆ ಹೆಣ್ಣನ್ನು ಒಂದು ಮರಕ್ಕೆ ಕಟ್ಟಿಹಾಕಿ ಅವಳ ಕಾಲಿನ ಬುಡದಲ್ಲಿ ಇರುವೆ ಅಥವಾ ಕಡಜದ ಗೂಡನ್ನು ಇಡುತ್ತಿದ್ದರಂತೆ. ಅವುಗಳಿಂದ ಕಚ್ಚಿಸಿಕೊಂಡು ಆಕೆ ಯಾತನೆ ಅನುಭವಿಸುತ್ತಿರಬೇಕಾದರೆ ಅವಳನ್ನು ವಿಚಾರಿಸಲಾಗುತ್ತಿತಂತೆ. ಅಷ್ಟೆಲ್ಲ ನೋವು ಅನುಭವಿಸಿದ ಆಕೆ ಮತ್ತೆ ಗಂಡನೊಂದಿಗೆ ಬಾಳುತ್ತೇನೆ ಎಂದು ಅನಿವಾರ್ಯವಾಗಿ ಹೇಳಬೇಕಾಗುತ್ತಿತ್ತು ಎನ್ನುತ್ತಾರೆ. ಒಂದು ವೇಳೆ ಅಷ್ಟೆಲ್ಲ ಕಷ್ಟ ಅನುಭವಿಸಿಯೂ ಆಕೆ ಗಂಡನ ಜೊತೆ ಬಾಳಲು ಒಪ್ಪದಿದ್ದರೆ ಆಕೆಗೆ ವಿಚ್ಛೇದನವನ್ನು ಪಡೆಯಲು ಅವಕಾಶ ನೀಡಲಾಗುತ್ತಿತ್ತು.

**ಕುಡಿಯರ ಸಾಮಾಜಿಕ ಜೀವನ**

ಕೊಡಗಿನಲ್ಲಿ ಕುಡಿಯರಿಗೆ ಸಾಮಾಜಿಕವಾಗಿ ಉತ್ತಮವಾದ ಗೌರವ ಸ್ಥಾನಮಾನಗಳಿವೆ. ಕೊಡವರು ಮತ್ತು ಇತರೆ ಮೇಲ್ಜಾತಿಯವರು ಮತ್ತು ಮೇಲ್ವರ್ಗದವರು ಇವರನ್ನು ಬಹಳ ಗೌರವದಿಂದ ಕಾಣುತ್ತಾರೆ. ಹಿಂದೆ ಕೊಡವರು ತಮ್ಮ ಮನೆಯಿಂದ ಅಕ್ಕಿ, ಬೇಳೆ, ಉಪ್ಪು ಇತ್ಯಾದಿಗಳನ್ನು ತಂದು ಕುಡಿಯರ ಮನೆಗಳಿಗೆ ಬಂದು ಕೊಟ್ಟು, ಇವರ ಬಳಿಯಿಂದ ಬೈನೆ ಮರದ ಹೆಂಡವನ್ನು ಪಡೆದುಕೊಂಡು ಹೋಗುತ್ತಿದ್ದರಂತೆ. ಕೊಡಗಿನ ಪ್ರಬಲ ಜಾತಿ ಮತ್ತು ವರ್ಗವಾದ ಕೊಡವರ ಭಾಷೆಯನ್ನಾಡುವ, ಅವರಂತೆ ಸೀರೆ ಉಡುವ, ಕೊಡವರಂತೆಯೇ ಸಂಪ್ರದಾಯ, ಸಂಸ್ಕೃತಿಯನ್ನು ಆಚರಿಸುವ ಮೂಲಕ ಇವರು ಸಮಾಜದಲ್ಲಿ ಕೊಡವರಿಂದಲೂ ಇತರೆ ಜಾತಿಗಳಿಂದಲೂ ಗೌರವವನ್ನು ಪಡೆಯುತ್ತಾರೆ. ಅಸ್ಪೃಶ್ಯರು ಏಲಕ್ಕಿ ತೋಟಗಳಿಗೆ ಹೋಗುವುದು ಮತ್ತು ಏಲಕ್ಕಿಯನ್ನು ಕೀಳುವುದು ನಿಷಿದ್ಧ. ಆದರೆ ಈ ನಿಷಿದ್ಧತೆ ಕುಡಿಯರಿಗಿಲ್ಲ. ಕುಡಿಯರು ಹೆಚ್ಚಾಗಿ ಏಲಕ್ಕಿ ಬೆಳೆಯುವ ಪ್ರದೇಶದಲ್ಲಿ ವಾಸಿಸುತ್ತಾರೆ ಮತ್ತು ಕುಡಿಯರ

ಮೌಖಿಕ ಸಾಹಿತ್ಯದ ಪ್ರಕಾರ ಏಲಕ್ಕಿ ಭೂಮಿಗೆ ಬಂದಿದ್ದೇ ಕುಡಿಯರಿಂದ ಎನ್ನುತ್ತಾರೆ. ಅದಕ್ಕೆ ಸಂಬಂಧಿಸಿದಂತೆ ಒಂದು ಪೌರಾಣಿಕ ಕತೆಯ ಮೂಲಕ ಸಾಕ್ಷಿಯನ್ನು ಒದಗಿಸುತ್ತಾರೆ.

ಕುಡಿಯರು ಸಾಹಸಿಗಳು ಮತ್ತು ಧೈರ್ಯಶಾಲಿಗಳು. ಕಾಡಿನಲ್ಲಿ ಬೆಟ್ಟಗಳ ಮೇಲೆ ಮನೆಯನ್ನು ಕಟ್ಟಿಕೊಂಡು ತೋಟವನ್ನು ಮಾಡಿಕೊಂಡು ಇವರು ವಾಸಿಸುತ್ತಾರೆ. ಇವರು ಗುಂಪುಗಳಲ್ಲಿ ವಾಸಿಸುವುದಿಲ್ಲ. ಚದುರಿದಂತೆ ಮನೆಯನ್ನು ಕಟ್ಟಿಕೊಂಡು ವಾಸಿಸುವವರು. ಕಾಡುಪ್ರಾಣಿಗಳಾದ ಆನೆ ಹುಲಿ ಚಿರತೆಗಳ ದಾಳಿ ಸಾಮಾನ್ಯವಾಗಿದ್ದ ಸಮಯದಲ್ಲೂ ಅದ್ಯಾವುದಕ್ಕೆ ಅಂಜದೆ ನೆಲೆಸಿದವರು. ಕುಡಿಯರ ಹೆಣ್ಣುಮಕ್ಕಳೂ ಕೂಡ ಅತ್ಯಂತ ಧೈರ್ಯಶಾಲಿಗಳು. ಇಡೀ ಕುಟುಂಬವನ್ನು ಗಂಡಸರಿಗೆ ಹೆಗಲುಕೊಟ್ಟು ನಿಭಾಯಿಸುವಷ್ಟು ಸಮರ್ಥರು. ಹಿಂದೆ ಕೊಡಗನ್ನು ಆಳಿದ ಹಾಲೇರಿ ಅರಸ ಚಿಕ್ಕವೀರ ರಾಜೇಂದ್ರನ ಅಂಗರಕ್ಷಕ ರಾಗಿ 'ಚಿಟ್ಟಕುಡಿಯ' ಮತ್ತು 'ಕುರ್ತುಕುಡಿಯ' ಎಂಬುವರರನ್ನು ನೇಮಿಸಲಾಗಿತ್ತಂತೆ. ಇದು ಅವರ ಸಾಹಸಿ ಗುಣಕ್ಕೆ ಸಾಕ್ಷಿಯಾಗಿದೆ.

## 5.2. ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಹೆಣ್ಣಿನ ಅನನ್ಯತೆ

ಬುಡಕಟ್ಟು ಮಹಿಳೆ ವಿಶೇಷವಾದ ತನ್ನ ಸಮುದಾಯದಲ್ಲಿ ವಿಶೇಷವಾದ ಮನ್ನಣೆ, ಗೌರವವನ್ನು ಹೊಂದಿದ್ದಾಳೆ. ಗಂಡಿಗೆ ಸರಿಸಮಾನವಾದ ಆದ್ಯತೆಯನ್ನು ಆಕೆ ಪಡೆದಿದ್ದಾಳೆ. ಮಾತೃಮೂಲೀಯವಾದ ಬುಡಕಟ್ಟು ಸಮುದಾಯಗಳಲ್ಲಿ ಹೆಣ್ಣು ಸಮಾಜದಲ್ಲಿ ಮತ್ತು ಕುಟುಂಬದ ಒಳಗೆ ನಿರ್ಣಾಯಕ ಪಾತ್ರವನ್ನು ವಹಿಸುತ್ತಿದ್ದಳು. ಸ್ವಾತಂತ್ರ್ಯ, ಸಮಾನತೆಗೆ ಸಂಬಂಧಪಟ್ಟಂತೆ ವಿಶೇಷವಾದ ಅಧಿಕಾರನ್ನು ಆಕೆ ಹೊಂದಿದ್ದಾಳೆ.

**ಎರವರು:** ಎರವರು ವಿಭಕ್ತ ಕುಟುಂಬವ್ಯವಸ್ಥೆಯನ್ನು ಪಾಲಿಸುತ್ತಾರೆ. ಮನೆಯಲ್ಲಿ ಮಗನಿಗೆ ಮದುವೆಯಾದ ತಕ್ಷಣ ಆತ ತನ್ನ ಮಡದಿಯೊಡನೆ ಬೇರೊಂದು ಗುಡಿಸಲನ್ನು ನಿರ್ಮಿಸಿ ಕೊಂಡು ಸ್ವತಂತ್ರವಾಗಿ ವಾಸಿಸಬೇಕಾಗುತ್ತದೆ. ಆತ ಕೂಲಿ ಮಾಡಿ ಅಥವಾ ಕಾಡಿನಿಂದ ಆಹಾರವನ್ನು ಸಂಗ್ರಹಿಸಿಕೊಂಡು ಬರುತ್ತಾನೆ. ಹೆಂಡತಿಯೂ ಕೂಡ ಅಡುಗೆಗೆ ಬೇಕಾದ ಸೊಪ್ಪು, ಸೌದೆ, ಗೆಣಸು ಇತ್ಯಾದಿಗಳನ್ನು ತಂದು ಕುಟುಂಬವನ್ನು ನಿರ್ವಹಿಸುತ್ತಾಳೆ. ಇವರಲ್ಲಿ ಗಂಡ ಮತ್ತು ಹೆಂಡತಿಯರು ಪರಸ್ಪರ ಗೌರವದಿಂದ ಕುಟುಂಬವನ್ನು ನಡೆಸುತ್ತಾರೆ. ಇಲ್ಲಿ ಹೆಣ್ಣಿಗೆ ವಿಶೇಷವಾದ ಗೌರವ ಸ್ಥಾನಮಾನಗಳಿವೆ. ಎರವರ ಕುಟುಂಬದಲ್ಲಿ ಗಂಡು ಹೆಣ್ಣು ಸಮಾನರು. ಇಲ್ಲಿ ಯಾರು ಯಾರಿಗೂ ಗುಲಾಮರಲ್ಲ. ಎರವರು ನಾಳೆಗಾಗಿ ಕೂಡಿಡುವವರಲ್ಲ ಅಂದಂದಿನ ಜೀವನಕ್ಕೆ ಬೇಕಾದ ಅವಶ್ಯಕವಾದ ವಸ್ತುಗಳನ್ನು ಅಗತ್ಯಕ್ಕೆ ಅನುಗುಣವಾಗಿ ತಂದು

ತಮ್ಮ ಅವಶ್ಯಕತೆಗಳನ್ನು ಪೂರೈಸುತ್ತಾರೆ. ತಾವು ತಂದದ್ದನ್ನು ಇತರರಿಗೂ ಹಂಚಿಕೊಳ್ಳುತ್ತಾರೆ. ಹಂಚಿ ತಿನ್ನುವ ಗುಣ, ಸಾಮುದಾಯಿಕ ಪ್ರಜ್ಞೆಯನ್ನು ನಾವು ಈ ಬುಡಕಟ್ಟುಗಳಲ್ಲಿ ಗುರುತಿಸ ಬಹುದು.

ಎರವರ ಹೆಂಡತಿಯ ಮನೆಯಲ್ಲಿ ನಡೆಯುವ ಪೂಜೆ ಇತ್ಯಾದಿ ಸಮಾರಂಭಗಳಿಗೆ ಹೆಣ್ಣು ತನ್ನ ತವರುಮನೆಗೆ ಸಲ್ಲಿಸಬೇಕಾದ ತನ್ನ ಪಾಲಿನ ಹಣವನ್ನು ಅವಳ ಪರವಾಗಿ ಗಂಡನೇ ಕೊಡಬೇಕಾಗುತ್ತದೆ. ಇಲ್ಲವಾದರೆ ಆತ ಆರೋಪಕ್ಕೆ ಗುರಿಯಾಗುತ್ತಾನೆ. ಜೊತೆಗೆ ದಂಡವನ್ನೂ ಕಟ್ಟಬೇಕಾಗಬಹುದು ಇದು ಹೆಂಡತಿಯ ಸಮಸ್ತ ಜವಾಬ್ದಾರಿಗಳನ್ನು ಗೌರವ ದಿಂದ ಪಾಲಿಸಬೇಕಾದ ಗಂಡಿನ ಕರ್ತವ್ಯವನ್ನು ಜ್ಞಾಪಿಸುತ್ತದೆ. ಪಂಜರಿ ಎರವರದು ಮಾತೃ ಪ್ರಧಾನ ಕುಟುಂಬವ್ಯವಸ್ಥೆ. ಇವರಲ್ಲಿ ಹೆಣ್ಣಿಗೆ ಹೆಚ್ಚಿನ ಸ್ಥಾನಮಾನಗಳಿವೆ. ಅಳಿಯ ಕಟ್ಟು ಪದ್ಧತಿಯನ್ನು ಇವರು ಪಾಲಿಸುತ್ತಾರೆ. ಹಿಂದೆ ಎರವರ ಹೆಣ್ಣುಮಕ್ಕಳು ಆಡಳಿತವನ್ನು ನಡೆಸುತ್ತಿದ್ದರು ಎಂಬುದಕ್ಕೆ ನಮಗೆ 'ಕೊಟ್ಟತ್ತೇರಿ ಅಕ್ಕವ್ವೆ' ಮತ್ತು 'ಕುಂಡಾಬೆತೇರಿಬಾವು ಪೆಂಗವ್ವೆ'ಯರ ಕತೆಯಲ್ಲಿ ಮಾಹಿತಿ ದೊರೆಯುತ್ತದೆ. ಈ ಅಕ್ಕತಂಗಿಯರು ಸಮಸ್ತ ಊರಿನ ಒಡೆಯರಾಗಿದ್ದು ಆಡಳಿತವನ್ನು ನಡೆಸುತ್ತಿದ್ದವರು. ಇವರು ವ್ಯವಸಾಯಗಾರರಾಗಿದ್ದವರು. ಆರ್ಯೆ ಬಾಣ್ಯೆ ಕತೆಯಲ್ಲಿ ಬರುವ ಕಂಡಪಳ್ಳಿ ಕೋಟೆಯನ್ನು ಕಟ್ಟಿಸಿದ 'ಕಾರು ಮಚುಣಿ' ಮತ್ತು 'ಬೆಳ್ಳಿ ಮಚುಣಿ' ಎಂಬ ಸಹೋದರಿಯರೂ ಕೂಡ ಎರವರನ್ನು ಆಳಿದವರು. ಎರವರಲ್ಲಿ ಹೆಣ್ಣಿನ ಸ್ಥಾನಮಾನಗಳು ಉನ್ನತವಾಗಿತ್ತು ಎಂಬುದಕ್ಕೆ ಈ ಕತೆಗಳು ಉದಾಹರಣೆ ಗಳಾಗಿವೆ.

ಬುಡಕಟ್ಟುಗಳು ಹೆಣ್ಣಿಗೆ ವಿಶೇಷವಾದ ಗೌರವ, ಸ್ಥಾನಮಾನಗಳನ್ನು ನೀಡಿವೆ. ಅದು ಮನೆಯ ಒಳಗಿರಲಿ ಅಥವಾ ಬುಡಕಟ್ಟು ಸಮಾಜದಲ್ಲಾಗಲಿ ಹೆಣ್ಣಿಗೆ ಪ್ರತ್ಯೇಕವಾದ ಅಸ್ತಿತ್ವವಿದೆ. ಬುಡಕಟ್ಟುಗಳು ಮಾತೃಮೂಲೀಯವಾಗಿದ್ದು, ಕುಟುಂಬದಲ್ಲಿ ಇಂದಿಗೂ ಹೆಣ್ಣಿಗಿರುವ ಪ್ರಾಮುಖ್ಯತೆಯನ್ನು ಉಳಿಸಿಕೊಂಡು ಬಂದಿದ್ದಾರೆ. ತಮ್ಮ ಸಂಗಾತಿಯ ಆಯ್ಕೆಯಲ್ಲೂ ಕೂಡ ಇಲ್ಲಿ ಅವಳಿಗೆ ಮುಕ್ತ ಸ್ವಾತಂತ್ರ್ಯವಿದೆ. ಒಂದು ವೇಳೆ ತನಗೆ ತನ್ನ ಗಂಡನೊಡನೆ ಬಾಳಲು ಇಷ್ಟವಿಲ್ಲದೆ ಹೋದರೆ ಅವನನ್ನು ಬಿಡಲು ಕೂಡ ಆಕೆ ಸ್ವತಂತ್ರಳು. ಅನಂತರ ಆಕೆಯ ಮಕ್ಕಳೊಡನೆ ಆಕೆ ಬೇರೆಯವರನ್ನು ಮದುವೆಯಾಗಿ ಸಂಸಾರ ಮಾಡಬಹುದು. ಎರಡನೆಯ ಪತಿ ಕೂಡ ಅವಳೊಂದಿಗೆ ಅವಳ ಮಕ್ಕಳನ್ನೂ ಕೂಡ ಸ್ವೀಕರಿಸುತ್ತಾನೆ. ಅವರ ಮೌಖಿಕ ಸಾಹಿತ್ಯದಲ್ಲಿ ಹೆಣ್ಣಿಗಿದ್ದ ವಿಶೇಷ ಪ್ರಾತಿನಿಧ್ಯತೆಯ ಉಲ್ಲೇಖವಿದೆ. ನಂತರದಲ್ಲಿ ಪುರುಷಪ್ರಧಾನ ಸಮಾಜದೆಡೆಗೆ ಬದುಕು ಚಲಿಸುತ್ತಿದ್ದಂತೆ ಅದು ಶಿಥಿಲವಾಗುವುದನ್ನು ನಾವು ಗಮನಿಸಬಹುದು.

## ಎರವರ ಮೌಖಿಕ ಸಾಹಿತ್ಯದಲ್ಲಿ ಹೆಣ್ಣಿನ ಅನನ್ಯತೆ

ಎರವರು ವಿಭಕ್ತ ಕುಟುಂಬ ವ್ಯವಸ್ಥೆಯನ್ನು ಪಾಲಿಸುತ್ತಾರೆ. ಮಗನಿಗೆ ಮದುವೆಯಾದ ತಕ್ಷಣ ಆತ ತನ್ನ ಮಡದಿಯೊಡನೆ ಬೇರೊಂದು ಗುಡಿಸಲನ್ನು ನಿರ್ಮಿಸಿಕೊಂಡು ಸ್ವತಂತ್ರವಾಗಿ ವಾಸಿಸಬೇಕಾಗುತ್ತದೆ. ಆತ ಕೂಲಿ ಮಾಡಿ ಅಥವಾ ಕಾಡಿನಿಂದ ಆಹಾರವನ್ನು ಸಂಗ್ರಹಿಸಿಕೊಂಡು ಬಂದರೆ ಹೆಂಡತಿಯೂ ಕೂಡ ಅಡುಗೆಗೆ ಬೇಕಾದ ಸೊಪ್ಪು, ಸೌದೆ, ಗೆಣಸು ಇತ್ಯಾದಿಗಳನ್ನು ತಂದು ಕುಟುಂಬವನ್ನು ನಿರ್ವಹಿಸುತ್ತಾಳೆ. ಇವರಲ್ಲಿ ಗಂಡ ಮತ್ತು ಹೆಂಡತಿಯರು ಪರಸ್ಪರ ಗೌರವದಿಂದ ಕುಟುಂಬವನ್ನು ನಡೆಸುತ್ತಾರೆ. ಇಲ್ಲಿ ಹೆಣ್ಣಿಗೆ ವಿಶೇಷವಾದ ಗೌರವ ಸ್ಥಾನಮಾನ ಗಳಿವೆ. ಎರವರ ಕುಟುಂಬದಲ್ಲಿ ಗಂಡು ಹೆಣ್ಣು ಸಮಾನರು. ಇಲ್ಲಿ ಯಾರು ಯಾರಿಗೂ ಗುಲಾಮರಲ್ಲ. ಎರವರು ನಾಳೆಗಾಗಿ ಕೂಡಿಡುವವರಲ್ಲ. ಅದಂದಿನ ಜೀವನಕ್ಕೆ ಬೇಕಾದ ಅವಶ್ಯಕವಾದ ವಸ್ತುಗಳನ್ನು ಅಗತ್ಯಕ್ಕೆ ಅನುಗುಣವಾಗಿ ತಂದು ತಮ್ಮ ಅವಶ್ಯಕತೆಗಳನ್ನು ಪೂರೈಸುತ್ತಾರೆ. ತಾವು ತಂದದ್ದನ್ನು ಇತರರಿಗೂ ಹಂಚಿಕೊಳ್ಳುತ್ತಾರೆ. ಹಂಚಿ ತಿನ್ನುವ ಗುಣ, ಸಾಮುದಾಯಿಕ ಪ್ರಜ್ಞೆಯನ್ನು ನಾವು ಈ ಬುಡಕಟ್ಟುಗಳಲ್ಲಿ ಗುರುತಿಸಬಹುದು.

ಎರವರ ಹೆಂಡತಿಯ ಮನೆಯಲ್ಲಿ ನಡೆಯುವ ಪೂಜೆ ಇತ್ಯಾದಿ ಸಮಾರಂಭಗಳಿಗೆ ಹೆಣ್ಣು ತನ್ನ ತವರುಮನೆಗೆ ಸಲ್ಲಿಸಬೇಕಾದ ತನ್ನ ಪಾಲಿನ ಹಣವನ್ನು ಅವಳ ಪರವಾಗಿ ಗಂಡನೇ ಕೊಡಬೇಕಾಗುತ್ತದೆ. ಇಲ್ಲವಾದರೆ ಆತ ಆರೋಪಕ್ಕೆ ಗುರಿಯಾಗುತ್ತಾನೆ. ಜೊತೆಗೆ ದಂಡವನ್ನೂ ಕಟ್ಟಬೇಕಾಗಬಹುದು. ಇದು ಹೆಂಡತಿಯ ಜವಾಬ್ದಾರಿಗಳನ್ನು ಗಂಡನೂ ಕೂಡ ನಿಭಾಯಿಸಬೇಕೆಂದು ಆತನ ಕರ್ತವ್ಯವನ್ನು ಜ್ಞಾಪಿಸುವಂತಿದೆ. ಪಂಜರಿ ಎರವರದು ಮಾತೃ ಪ್ರಧಾನ ಕುಟುಂಬವ್ಯವಸ್ಥೆ. ಕುಟುಂಬದಲ್ಲಿ ಹೆಣ್ಣಿಗೆ ಹೆಚ್ಚಿನ ಸ್ಥಾನಮಾನಗಳಿವೆ. ಅಳಿಯ ಕಟ್ಟು ಪದ್ಧತಿಯನ್ನು ಇವರು ಪಾಲಿಸುತ್ತಾರೆ. ಹಿಂದೆ ಹೆಣ್ಣುಮಕ್ಕಳು ಆಡಳಿತವನ್ನು ನಡೆಸುತ್ತಿದ್ದವರು ಎಂಬುದಕ್ಕೆ ನಮಗೆ 'ಕೊಟ್ಟತ್ತೇರಿ ಅಕ್ಕವ್ವೆ' ಮತ್ತು 'ಕುಂಡಾಬೆತೇರಿಬಾವು ಪೆಂಗವ್ವೆ' ಎಂಬ ಕತೆಯಲ್ಲಿ ಮಾಹಿತಿ ದೊರೆಯುತ್ತದೆ. ಈ ಅಕ್ಕತಂಗಿಯರು ಸಮಸ್ತ ಊರಿನ ಒಡೆಯರಾಗಿದ್ದು ಆಡಳಿತವನ್ನು ನಡೆಸುತ್ತಿದ್ದವರು. ವ್ಯವಸಾಯಗಾರರಾಗಿದ್ದವರು. ಜೊತೆಗೆ ಆರ್ಯೆ ಬಾಣ್ಯೆ ಕತೆಯಲ್ಲಿ ಬರುವ ಕಂಡಪಳ್ಳಿ ಕೋಟೆಯನ್ನು ಕಟ್ಟಿಸಿದ ಕಾರು ಮಚುಣಿ ಮತ್ತು ಬೆಳ್ಳಿ ಮಚುಣಿ ಎಂಬ ಸಹೋದರಿಯರೂ ಕೂಡ ಎರವರನ್ನು ಆಳಿದವರು. ಎರವರಲ್ಲಿ ಹೆಣ್ಣಿನ ಸ್ಥಾನಮಾನ ಗಳು ಉನ್ನತವಾಗಿತ್ತು ಎಂಬುದಕ್ಕೆ ಈ ಕತೆಗಳು ಉದಾಹರಣೆಗಳಾಗಿವೆ.

ಪಂಜರಿ ಎರವರು ತಾಯಿಕಟ್ಟನ್ನು ಪಾಲಿಸುತ್ತಾರೆ. ಪಂಜರಿ ಎರವರ ಪೂಜಾರಿಗಳ ಮೈಮೇಲೆ ಬರುವ ದೈವಗಳಲ್ಲಿ ಹೆಣ್ಣುದೇವತೆಯರು ಪ್ರಮುಖರು. ಪಂಜರಿ ಎರವ

ಸಮುದಾಯವು ತಮ್ಮ ಸಮುದಾಯವನ್ನು ಮೂರು ಮುಖ್ಯ ಕುಲಗಳನ್ನಾಗಿ ವಿಭಾಗಿಸಿದೆ. ಅದರಲ್ಲಿ ಒಂದಾದ 'ಪೊದರ್ ಮಂಜು'ವಿನ ಕುಲದೇವತೆ 'ಕರಿಚಾತೆ ಮಾಳಿಯಮ್ಮೆ' ಎಂಬ ಹೆಣ್ಣುದೈವ. ಉಳಿದ ಎರಡು ಮಂಜಿನ ಕುಲದೇವತೆಗಳು ಗಂಡುದೈವಗಳು. ಇವರಲ್ಲಿ ಗಂಡು ದೇವರಿಗೆ ದೈವದ ಸ್ಥಾನವಿದ್ದರೆ, ಹೆಣ್ಣುದೇವರಾದ ಕರಿಚಾತೆ ಮಾಳಿಯಮ್ಮಗೆ ಭೂತದ ಸ್ಥಾನವನ್ನು ನೀಡಲಾಗಿದೆ. ಶುಭಸಮಾರಂಭಗಳಲ್ಲಿ ಈಕೆಯನ್ನು ಪೂಜಿಸುವುದಾಗಲಿ, ತೆರೆ ಕಟ್ಟುವುದಾಗಲೀ ಮಾಡುವುದಿಲ್ಲ. ಆದರೆ ಕಷ್ಟ ಬಂದಾಗ, ಕಾಯಿಲೆ ತೊಂದರೆಗಳು ಎದುರಾ ದಾಗ, ಯಾರ ಮೈಮೇಲಾದರೂ ಗಾಳಿ ಸೇರಿಕೊಂಡಾಗ ಅದನ್ನು ಪರಿಹರಿಸುವಂತಹ ಸಂದರ್ಭದಲ್ಲಿ ಈ ಮಾತೃದೇವತೆಗಳಿಗೆ ಪೂಜೆಯನ್ನು ಸಲ್ಲಿಸಿ ತೆರೆ ಕಟ್ಟುತ್ತಾರೆ. ಇದು ಮಾತೃಮೂಲೀಯ ಬುಡಕಟ್ಟಿನ ಮುಖ್ಯ ಲಕ್ಷಣವಾಗಿದೆ. ಮಾತೃದೇವತೆಯ ಆರಾಧಕರಲ್ಲಿ ಹೆಣ್ಣುದೈವಗಳು ಕೇವಲ ಹಬ್ಬಗಳಿಗೆ ಪೂಜೆಗಳಿಗಷ್ಟೇ ಸೀಮಿತವಾಗದೆ ಕಷ್ಟಗಳನ್ನು ಪರಿಹರಿಸುವ ದೇವತೆಗಳಾಗಿದ್ದಾರೆ. ಈಕೆಯನ್ನು ಪೂಜಿಸಿದರೆ ಕಷ್ಟಕಾರ್ಪಣ್ಯಗಳು ಬೇಗ ದೂರಾಗುತ್ತವೆ ಎಂದು ನಂಬುತ್ತಾರೆ. ಈ ದೈವಗಳನ್ನು ಜನರು ಬಹಳ ಭಯ ಭಕ್ತಿಯಿಂದ ಆರಾಧಿಸುತ್ತಾರೆ. ಹಾಗೆಯೇ ಈ ಸಮುದಾಯವು ಆರಾಧಿಸುವ ಮತ್ತೊಬ್ಬ ಪ್ರಸಿದ್ಧ ದೇವತೆಗಳೆಂದರೆ ಕುಟ್ಟದ ಕರುಂಗಾಳಿ. ಪಿರಿಯಾಪಟ್ಟಣದಮ್ಮ, ಕನ್ನಂಬಾಡಿಯಮ್ಮ, ಚಿಲುಕುಂದದ ಚಿಕ್ಕಮ್ಮ, ಮಾವತ್ತೂರಮ್ಮ ಮೊದಲಾದವರು. ಯಾವುದೇ ರೀತಿಯ ಕಷ್ಟಗಳು ಎದುರಾದಾಗಲೂ ಈ ಹೆಣ್ಣುದೈವಗಳನ್ನು ಪೂಜಿಸುತ್ತಾರೆ. ಮಾತೃದೇವತಾರಾಧನೆಯ ಸಂಕೇತವಾಗಿ ಇಂದಿಗೂ ಈ ಸಂಪ್ರದಾಯ ಮುಂದುವರಿದಿದೆ.

ಎರವರ ಹೆಣ್ಣು ಸ್ವತಂತ್ರವಾಗಿ ತನ್ನ ಗುಂಪನ್ನು ನಿಯಂತ್ರಿಸುತ್ತಿದಳು ಎಂಬುದಕ್ಕೆ ಹಲವಾರು ಹಾಡುಗಳು, ಕತೆಗಳು ಸಾಕ್ಷಿ ಒದಗಿಸುತ್ತದೆ. ಇವರಲ್ಲಿ ಹೆಣ್ಣು ಮನೆಯ ಒಡತಿ ಮಾತ್ರವಲ್ಲ, ಆಕೆ ಒಂದು ಸಮುದಾಯದ ಒಡತಿ ಕೂಡ. ಇಡೀ ಸಮುದಾಯವನ್ನು ಕಾಪಾಡುವ ಜವಾಬ್ದಾರಿ ಆಕೆಯದ್ದಾಗಿತ್ತು ಮತ್ತು ಇವರದ್ದು ವ್ಯವಸ್ಥಿತವಾದ ಅಧಿಕಾರ ವಿಕೇಂದ್ರೀಕರಣ ವ್ಯವಸ್ಥೆಯಾಗಿದ್ದು ಅಧಿಕಾರವನ್ನು ಜವಾಬ್ದಾರಿಯೆಂದು ಪರಿಗಣಿಸುತ್ತಿದ್ದವರು. ಹಲವು ಹಂತದ ನಾಯಕತ್ವವು ಇದ್ದು, ಉತ್ತಮವಾದ ಒಳಾಡಳಿತ ವ್ಯವಸ್ಥೆಯಿದ್ದು, ತನ್ನ ಒಡತಿಯರಿಗೆ ನಿಷ್ಠೆಯನ್ನು ಹೊಂದಿದ್ದರು. ಆಕೆಯ ಆಳ್ವಿಕೆಯನ್ನು ಸುಗಮಗೊಳಿಸುತ್ತಿದ್ದರು ಎಂಬುದಕ್ಕೆ ಈ ಕಥೆಯನ್ನು ನಾವು ಗಮನಿಸಬಹುದು.

'ತೊಂಡನಾಟು ತೋಣಿಪರುವಳತಿ ಕೊಟ್ಟತೇರಿ ಅಕ್ಕವ್ವೆ,
ಕುಡಾಂಬೆತೇರಿ ಬಾವು ಪೆಂಗವ್ವೆ, ಬರ್ಚಲು ಬಾವು ಅಕ್ಕವ್ವೆ

ಬರ್ಚಲು ಬಾವು ಪೆಂಗವ್ವೆ ತೇವಾಳತಿ ಅಮ್ಮೆ-ಮೂವಾಳತಿ ಅಮ್ಮೆರ

ಪಾಂಬಿಲಿ ಪರುವಾಳತಿ ಅಮ್ಮೆರ ರ ತೊಂಡನಾಟಿ ತೋಣಿಪರುವಳತಿ..."

ಎಂದು ಸಾಗುವ ಈ ಹಾಡಿನಲ್ಲಿ ತೊಂಡನಾಡನ್ನು 'ಕೊಟ್ಟತ್ತೇರಿ ಅಕ್ಕವ್ವೆ' ಮತ್ತು 'ಕುಡಾಂಬೆತೇರಿ ಬಾವು ಪೆಂಗವ್ವೆ' ಎಂಬ ಅಕ್ಕತಂಗಿಯರು ಆಳುತ್ತಿದ್ದರು. ಒಮ್ಮೆ ಅವರಿಗೆ ಹೂತೋಟವನ್ನು ಬೆಳೆಸಬೇಕೆಂಬ ಆಸೆಯಾಗುತ್ತದೆ. ಅದಕ್ಕಾಗಿ ತಮ್ಮ ಮೂರು ಗ್ರಾಮದ ಮುಖಂಡನಾದ ಮೂಪಮಾರರನ್ನು, ನಾಲ್ಕು ಗ್ರಾಮದ ಮುಖಂಡ 'ಥೆಯ್ಯತ್ತಡಿ'ಯನನ್ನು ಕರೆಸಿ ಅವರಿಗೆ ತಮ್ಮ ಮನದಿಂಗಿತವನ್ನು ತಿಳಿಸುತ್ತಾರೆ. ಒಡತಿಯರ ಆಜ್ಞೆಯಂತೆ ಅವರು ಕಾಡು ಕಡಿದು, ಭೂಮಿ ಹಸನು ಮಾಡಿ ಬೀಜ ಬಿತ್ತುತ್ತಾರೆ. ಅವು ಮುಂಗಾರು ಮಳೆಗೆ ಮುತ್ತಿನಂತೆ ಮೊಳೆತು ಚಿನ್ನದಂತೆ ಚಿಗುರಿದವು. ಹೂ ಬಿಟ್ಟ ನಂತರ ತೋಟಕ್ಕೆ ಬಂದ ಅಕ್ಕತಂಗಿಯರು ಮೊಗ್ಗಾಗಿ ಆಗಷ್ಟೇ ಅರಳಿದ ಹೂವನ್ನು ಕೀಳುತ್ತಾರೆ.

ಈ ಕತೆಯು ಆದಿಮ ಮಾತೃಮೂಲೀಯ ಸಾಮಾಜಿಕ ವ್ಯವಸ್ಥೆಯ ಕುರುಹಾಗಿದೆ. ಎರವ ಬುಡಕಟ್ಟು ಅದರಲ್ಲೂ ಮುಖ್ಯವಾಗಿ ಪಂಜರಿ ಎರವರ ಸಮುದಾಯವು ತಾಯಿಕಟ್ಟನ್ನು ಹೊಂದಿದ್ದು, ಹೆಣ್ಣಿಗೆ ಯಜಮಾನಿಕೆಯ ಸ್ಥಾನಮಾನವಿತ್ತು. ಇಲ್ಲಿ ಮಹಿಳೆಯೇ ಕೇಂದ್ರಬಿಂದು ಮತ್ತು ಅವಳ ಸುತ್ತಲೂ ಆ ಸಮುದಾಯದ ಆಗುಹೋಗುಗಳು ಜರುಗುತ್ತಿದ್ದಿರಬೇಕು. ಇಲ್ಲಿ ಆ ಇಬ್ಬರೂ ಒಡತಿಯರ ಗಂಡಂದಿರ ಬಗ್ಗೆ ಪ್ರಸ್ತಾಪವಿಲ್ಲ. ಅವರು ಗಂಡಿನ ಸಹಾಯವಿಲ್ಲದೆ ಸ್ವತಂತ್ರವಾಗಿ ತಮ್ಮ ಭೂಮಿಯನ್ನು ಸಮುದಾಯವನ್ನು ಆಳುತ್ತಿದ್ದರು ಎಂಬುದು ಇದರಿಂದ ತಿಳಿಯುತ್ತದೆ. ಪರುಷಪ್ರಧಾನ ವ್ಯವಸ್ಥೆಯನ್ನು ಈ ಸಮುದಾಯಗಳ ನಂಬಿಕೆಗಳು ಮೆಟ್ಟಿ ನಿಲ್ಲುತ್ತವೆ. ಈ ಕಥೆಯು ಅವರ ಮೌಖಿಕ ಸಾಹಿತ್ಯದಲ್ಲಿ ಯಾವುದೇ ಬದಲಾವಣೆಗೆ ಒಳಗಾಗದೆ ಹಾಗೆಯೇ ಉಳಿದುಬಂದಿದೆ. ಆದರೆ ಈ ಪರಿಸ್ಥಿತಿ ಇಂದು ಇದಕ್ಕೆ ತದ್ವಿರುದ್ಧವಾಗಿದದೆ. ಮಹಿಳೆಯ ಸ್ಥಾನವೇನಿದ್ದರೂ ಮನೆಯ ಒಳಗಡೆ ಎಂಬ ನಾಗರಿಕ ಸಮಾಜದ ವಾಸ್ತವದ ಸಾಂಪ್ರದಾಯಿಕ ಮನಸ್ಥಿತಿಯನ್ನು ಈ ಸಮುದಾಯಗಳು ನಿಧಾನವಾಗಿ ಅಳವಡಿಸಿಕೊಳ್ಳುತ್ತಿವೆ. ಸಾಮಾಜಿಕ ಮತ್ತು ಕೌಟುಂಬಿಕ ಪರಿಸರದಲ್ಲಿ ಹೆಣ್ಣು ತನ್ನದೇ ಆದ ವಿಶಿಷ್ಟ ಸ್ಥಾನಮಾನ ಹೊಂದಿದ್ದಳು ಎಂಬುದಕ್ಕೆ ಈ ಕಥೆ ಉತ್ತಮ ನಿದರ್ಶನವಾಗಿದೆ.

ನಾಗರಿಕ ಸಮಾಜದ ಪ್ರಭಾವದಿಂದ ಬುಡಕಟ್ಟು ಮಹಿಳೆಯ ಬದುಕು ಹಿಂದಿನ ಸ್ಥಾನಮಾನವನ್ನು ಉಳಿಸಿಕೊಂಡಿಲ್ಲದ್ದಿದ್ದರೂ ಸಮುದಾಯದ ಆಳದಲ್ಲಿ ಆ ಪ್ರಜ್ಞೆ ಜಾಗೃತವಾಗಿರುವುದನ್ನು ಇಂದಿಗೂ ನಾವು ಗಮನಿಸಬಹುದು. ಹೆಣ್ಣಿನ ಆಳ್ವಿಕೆಗೆ ಸಂಬಂಧಿಸಿದ ಮತ್ತೊಂದು ಉದಾಹರಣೆಯೆಂದರೆ 'ಓಲೆಪಾಟ್' ಎಂಬ ಎರವರ ಮಹಾಕಾವ್ಯ. 'ಬಡಾಕು' ದೇಶದಲ್ಲಿ

'ಇಲಾಚಿ ತೇವರು ಅಮ್ಮೆ' 'ಪಲಾಚುತೇವರು ಅಮ್ಮೆ' ಎಂಬ ಇಬ್ಬರು ಸಹೋದರಿಯರಿಗೆ 'ಕಾರುಮಚುಣಿ' ಮತ್ತು 'ಬೆಳ್ಳಿಮಚುಣಿ' ಎಂಬ ಇಬ್ಬರು ಹೆಣ್ಣುಮಕ್ಕಳಿದ್ದರು. ಅವರು ಅವಿವಾಹಿತರಾಗಿದ್ದುಕೊಂಡು ಗಂಡಸಿನ ಸಹಾಯವಿಲ್ಲದೆ ತಮ್ಮ ಕೋಟೆಯನ್ನು ಆಳುತಿದ್ದವರು. ಆದರೆ ಇಲ್ಲಿ ಇವರಿಗೆ ಲೈಂಗಿಕ ಸ್ವಾತಂತ್ರ್ಯವಿತ್ತು. ಮಕ್ಕಳಿಲ್ಲದ ಇವರು ಇಬ್ಬರು ಗಂಡು ಮಕ್ಕಳನ್ನು ಕದ್ದು ತಂದು ಸಾಕುತ್ತಾರೆ. ಇವರೇ ಎರವರ ಮೂಲಪುರುಷರಾದ ಆರ್ಯೆ-ಬಾಣ್ಯೆಯರು. ಸ್ತ್ರೀಯರಿಬ್ಬರನ್ನು ಇಲ್ಲಿ ಅಬಲೆಯರನ್ನಾಗಿ ಎಲ್ಲೂ ಚಿತ್ರಿಸಿಲ್ಲ. ಇವರು ಕಂಡಪಳ್ಳಿ ಕೋಟೆಯಲ್ಲಿ ಯಾರ ಹಂಗಿಗೂ ಒಳಪಡದೆ ಜೀವನ ನಡೆಸಿದವರು. ತಾವು ಕದ್ದು ತಂದ ಮಕ್ಕಳಿಗೆ ಕುಡಿಸಲು ಹಾಲು ಬೇಕಾದಾಗ 'ಕೋದಮಚೆಟ್ಟಿ' ಎಂಬವನ ಮನೆಗೆ ಹೋಗಿ ರಾತ್ರಿ ಅವನೊಂದಿಗೆ ಕಳೆದು ಅದಕ್ಕೆ ಪ್ರತಿಯಾಗಿ ಅವನ ಬಳಿಯಿದ್ದ ಹಾಲುಕರೆಯವ ಹಸುವನ್ನು ಕೇಳುತ್ತಾರೆ. ಅವನು ಅದನ್ನು ಕೊಡಲು ಒಪ್ಪದಿದ್ದಾಗ ಕೋಪಗೊಂಡ ಸಹೋದರಿಯರು 'ನೀನು ಕೊಡದಿದ್ದರೆ ನಿನ್ನ ಏಳು ಜನ ಮಡದಿಯರು ಕಲ್ಲು ಮರಗಳಾಗುವಂತೆ ಶಾಪ ಕೊಟ್ಟು ಬಿಡುತ್ತೇವೆ ಎಂದು ಹೆದರಿಸುತ್ತಾರೆ.'[10] ಇದಕ್ಕೆ ಹೆದರಿದ ಅವನ ಹೆಂಡತಿಯರು 'ಕೋದಮ ಚಟ್ಟಿಯೇ ಈ ಮಾಟಗಿತ್ತಿಯರು, ಸಾಮಾನ್ಯರಲ್ಲ. ಹುಟ್ಟು ಬಂಜೆಯರು, ಗಂಡನಿಲ್ಲದ ಗಂಡುಗಾಳಿಯರು, ಮಾಯಾಮುಂಡೆಯರು, ಇಂತಹವರು ಏನು ಬೇಕಾದರೂ ಮಾಡಿಯಾರು. ಅವರು ಏನು ಕೇಳುವರೊ ಅದನ್ನು ಕೊಟ್ಟು ಕಳುಹಿಸಿಬಿಡು'[11] ಎನ್ನುತ್ತಾರೆ. ಈ ಕಾವ್ಯವು ಹೆಣ್ಣಿಗೆ ಮದುವೆ ಅನಿವಾರ್ಯವಲ್ಲ ಮತ್ತು ಹಾಗೆಯೇ ಹೆಣ್ಣಿಗೆ ಶೀಲ ಸಂಕೋಲೆಯಾಗಬೇಕಿಲ್ಲ ಎಂಬ ಅಂಶವನ್ನು ಸ್ಪಷ್ಟಪಡಿಸುತ್ತದೆ. ಇಲಾಚಿದೇವರು ಅಮ್ಮೆ, ಪಲಾಚುದೇವರು ಅಮ್ಮೆ ಸಹೋದರಿಯರು ಗಂಡನಿಲ್ಲದೆ ಮಕ್ಕಳನ್ನು ಪಡೆಯುವುದು; ಕಾರುಮಚಣಿ, ಬೆಳ್ಳಿಮಚುಣಿ ಸಹೋದರಿಯರು ಹಸುವಿಗಾಗಿ ಕೋದಮಚಟ್ಟೆಯ ಬಳಿ ರಾತ್ರಿ ಕಳೆಯುವುದು. ಇವು ಹೆಣ್ಣಿಗೆ ಅಂದು ಸಮುದಾಯ ನೀಡಿದ್ದ ಆಯ್ಕೆಯ ಸ್ವಾತಂತ್ರ್ಯ. ಹೆಣ್ಣನ್ನು ಗಂಡಿನ ಅಧೀನಳು ಎಂದು ಈ ಸಮುದಾಯವು ಎಲ್ಲೂ ಪರಿಗಣಿಸಿರಲಿಲ್ಲ. ಹೆಣ್ಣು ಗಂಡಿಗಿಂತ ಎಲ್ಲಾ ರೀತಿಯಲ್ಲೂ ಸಮರ್ಥಳು ಎಂಬಂತೆ ಈ ಭಾಗದಲ್ಲಿ ನಿರೂಪಿಸಿದ್ದಾರೆ. ಅದನ್ನು ಅಂದಿನ ಸಮಾಜ ಕೂಡ ಸಹಜ ಎಂಬಂತೆ ಸ್ವೀಕರಿಸಿತ್ತು.

ಎರವ ಸಮುದಾಯವು ಜಾತಿಯಲ್ಲಿ, ಕುಲದಲ್ಲಿ ಶ್ರೇಷ್ಠಳಾದ ಹೆಣ್ಣಿಗೆ ನೀಡಿರುವ ಈ ಸ್ಥಾನಮಾನಗಳನ್ನು ತಮಗಿಂತ ಹೀನಕುಲದ ಹೆಣ್ಣಿನ ವಿಷಯದಲ್ಲಿ ಸಂಪೂರ್ಣವಾಗಿ ಕುರುಡಾಗಿದೆ ಎಂದೇ ಹೇಳಬೇಕು. ಅದಕ್ಕೆ ಉದಾಹರಣೆಯೆಂದರೆ 'ಹೊಲೆಯರ ಕಡಲಚೀತೆ'. ಒಮ್ಮೆ ಆರ್ಯೆ-ಬಾಣ್ಯೆಯರು ಪ್ರಪಂಚ ಪರ್ಯಟನೆ ಮಾಡುತ್ತಿರುವ ಸಂದರ್ಭದಲ್ಲಿ 'ಕಡಲ

ಚೀತೆ' ಎಂಬ ಹೆಣ್ಣನ್ನು ಭೇಟಿಯಾಗುತ್ತಾರೆ. ಅವಳ ಸೌಂದರ್ಯಕ್ಕೆ ಮರುಳಾದ ಅವರು ಅವಳ ಮನೆಗೆ ತೆರಳಿ ಅವಳ ಆತಿಥ್ಯವನ್ನು ಸ್ವೀಕರಿಸುತ್ತಾರೆ. ಆ ರಾತ್ರಿ ಅವಳೊಂದಿಗೆ ಕಳೆಯುತ್ತಾರೆ. ಮರುದಿನ ಬೆಳಿಗ್ಗೆ ಹೊರಡುವ ಸಮಯದಲ್ಲಿ ಅವಳ ಜಾತಿಯನ್ನು ಕುರಿತು ವಿಚಾರಿಸಿದಾಗ ಆಕೆ 'ನನ್ನ ಜಾತಿ ಕುಲವನ್ನು ನೀವು ತಿಳಿದರೆ ನನ್ನನ್ನು ಕೊಂದುಬಿಡುವಿರಿ'[12] ಎನ್ನುತ್ತಾಳೆ. ನಂತರ ಅವರ ಆಶ್ವಾಸನೆಯಿಂದ ಧೈರ್ಯಗೊಂಡು 'ನಾನು ಪಾಂಡ ಎಂಬ ಹೊಲೆಯನ ಮಗಳು ಎಮ್ಮೆ ತಿನ್ನುವ ನೀಚ ಕುಲದಲ್ಲಿ ಹುಟ್ಟಿದವಳು'[13] ಎನ್ನುತ್ತಾಳೆ. ಅದನ್ನು ಕೇಳಿದ ಸಹೋದರರು ಎಂಥ ನೀಚ ಕೆಲಸ ಮಾಡಿದೆವು. ಹೀನಕುಲದ ಹೆಣ್ಣಿನ ಸಹವಾಸದಿಂದ ನಮ್ಮ ಜಾತಿಗೆ ತಟ್ಟು ಮುಟ್ಟಾಯಿತಲ್ಲ ಎಂದು ಮರುಗುತ್ತಾರೆ.

ಕಾಮಕ್ಕೆ ಕಣ್ಣಿಲ್ಲ ಎಂಬ ನಾಣ್ಣುಡಿಯಂತೆ ಹೆಣ್ಣನ್ನು ಕೂಡುವಾಗ ದೈಹಿಕ ಕಾಮನೆಗಳಷ್ಟೇ ಮುಖ್ಯ ಎಂದು ಪರಿಗಣಿಸುವ ಪುರುಷಾಧಿಕಾರ ಮತ್ತು ಜಾತಿಯ ಅಹಂ ನಂತರ ಅವಳ ಜಾತಿ ತಿಳಿದ ತಕ್ಷಣ ಬದಲಾಗುತ್ತದೆ. ಹೆಣ್ಣನ್ನು ಭೋಗದ ವಸ್ತುವಾಗಿ ಭಾವಿಸುವ ಪುರುಷನ ಅಟ್ಟಹಾಸ ಜಾತಿಯ ಹೆಸರಲ್ಲಿ ಅವಳನ್ನು ಅವಮಾನಿಸುವಂತೆ ಮಾಡುತ್ತದೆ, ಹೆಣ್ಣನ್ನು ಹೀನಾಯವಾಗಿಸುತ್ತದೆ. ನಾಗರಿಕ ಸಮಾಜದಲ್ಲಿ ತೀವ್ರತರವಾದ ತಿರಸ್ಕಾರಕ್ಕೆ ಅವಜ್ಞೆಗೆ ಗುರಿಯಾದ ಈ ಬುಡಕಟ್ಟುಗಳು ಪುರೋಹಿತಶಾಹಿಯ ಪ್ರಭಾವಕ್ಕೆ ಒಳಗಾಗಿ ತಮ್ಮ ನೀತಿ, ನಿಯಮ, ಆಹಾರಪದ್ಧತಿಯನ್ನು ಅಳವಡಿಸಿಕೊಂಡಿರಬಹುದು. ದನ ತಿನ್ನುವವರು ಕೀಳು ಎಂಬ ಪರಿಕಲ್ಪನೆ ನಾಗರಿಕ ಸಮುದಾಯದೊಂದಿಗಿನ ಒಡನಾಟದಿಂದ ಬಂದಿರಬಹುದು. ಕಠಿಣವಾದ ನಿಯಮ ನಿಷೇಧಗಳನ್ನು ಪಾಲಿಸುವ ಈ ಬುಡಕಟ್ಟುಗಳಲ್ಲಿ ದನದ ಮಾಂಸ ಅವರ ಆಹಾರದ ಭಾಗವಾಗಿರಲಿಲ್ಲ. ಸತ್ತ ದನದ ಮಾಂಸ ಸೇವಿಸುತ್ತಾರೆ ಎಂಬ ಕಾರಣಕ್ಕೆ ಒಂದು ಸಮುದಾಯವನ್ನು ತಿರಸ್ಕಾರಕ್ಕೆ ಗುರಿಯಾಗಿಸುವ ಹಾಗೂ ಜಾತಿಯ ಹಿನ್ನೆಲೆಯ ಕಾರಣದಿಂದ ಹೆಣ್ಣನ್ನು ತುಚ್ಛೀಕರಿಸಿರುವುದನ್ನು ನಾವು ಇಲ್ಲಿ ಗಮನಿಸಬಹುದು.

ಇವರ ಮಾತನ್ನು ಕೇಳಿದ ಕಡಲು ಚೀತೆ 'ಗಂಡಸು, ಯಾವುದೇ ಜಾತಿಯ ಹೆಂಗಸನ್ನು ಕಂಡರೂ ಅವಳನ್ನು ಒಲಿಸಿಕೊಳ್ಳಲು ಪ್ರಯತ್ನಿಸಬೇಕು, ಅವಳನ್ನು ದಕ್ಕಿಸಿಕೊಳ್ಳಲು ಕೀಟಲೆ–ತಮಾಷೆ ಮಾಡಬೇಕು. ದಕ್ಕಿದರೆ ಅನುಭವಿಸಬೇಕು. ಸುಣ್ಣಕ್ಕು, ಸೂಳೆಗೂ ಕಟ್ಟಿಲ್ಲ. ಗಂಡಸು ಹೊಲತಿಯನ್ನು ಕೂಡಿದ್ದರೆ ಅವನು ಸೊಂಟದುದ್ದ ನೀರಿನಲ್ಲಿ ಹಾದು ಹೋದರೆ ಮೈಲಿಗೆ ಪರಿಹಾರವಾಗುವುದು'[14] ಎನ್ನುತ್ತಾಳೆ. ಗಂಡು ಏನೇ ಮಾಡಿದರೂ ತಪ್ಪಿಲ್ಲ ಮತ್ತು ಅದಕ್ಕೆ ಪರಿಹಾರದ ಮಾರ್ಗವೂ ಸುಲಭ ಎಂಬುದನ್ನು ಹೆಣ್ಣಿನ ಬಾಯಲ್ಲಿಯೇ ಹೇಳಿಸುತ್ತಾರೆ. ಆ ಮೂಲಕ ಅವಳ ಪಾತ್ರವನ್ನು ಅಧಃಪತನಗೊಳಿಸುತ್ತಾರೆ. ಕೇವಲ ಹೀನಕುಲದವಳನ್ನು ಕೂಡಿದ

ಕಾರಣಕ್ಕೆ ಗಂಡು ತನ್ನನ್ನು ಪ್ರಾಯಶ್ಚಿತ್ತಗೊಳಿಸುವ ಸಲುವಾಗಿ ಸೊಂಟದುದ್ದ ನೀರನ್ನು ಹಾದು ಹೋಗುವುದು ಎಂದರೆ ಅವನ ಮರ್ಮಾಂಗವನ್ನು ಸ್ವಚ್ಛಗೊಳಿಸಿದರೆ ಅಲ್ಲಿಗೆ ಮೈಲಿಗೆ ಕಳೆದಂತೆ ಎಂಬ ಹೀನಾಯವಾದ ಆಲೋಚನೆಯನ್ನು ಹೆಣ್ಣಿನಿಂದಲೇ ಸಮರ್ಥಿಸಿಕೊಳ್ಳುವ ನಡೆ ಅವರಲ್ಲಿ ನೆಲೆ ಮಾಡಿರುವ ಪುರುಷಾಧಿಕಾರ ಮತ್ತು ಜಾತಿಪ್ರಜ್ಞೆ ಏಕಕಾಲದಲ್ಲಿ ಹೊರಹೊಮ್ಮುತ್ತದೆ. ಎರವರ ಶುದ್ಧೀಕರಣ ಕ್ರಿಯೆ ಎಂದರೆ ನೀರಲ್ಲಿ ನಿಂತು ಕ್ರಿಯಾವಿಧಾನಗಳನ್ನು ಅನುಸರಿಸುವುದೇ ಆಗಿದೆ. ನಂತರ ಅವರು 'ನೀನು ನಮಗೆ ಮಾಡಿದ ಅಪರಾಧಕ್ಕೆ ಬಣ್ಣಬಣ್ಣದ ಚಾಪೆ ಹೆಣೆದು ಜೀವನೋಪಾಯ ಮಾಡಿಕೊ'[15] ಎಂದು ಎಂದು ಶಾಪ ನೀಡುತ್ತಾರೆ. ಎರವರ ಕಾವ್ಯಗಳಲ್ಲಿ ಶಾಪ ಪದವು ಹಲವು ಬಾರಿ ಪ್ರಸ್ತಾಪವಾಗುತ್ತದೆ. ಇಲ್ಲಿ ಶಾಪ ಎಂದರೆ ವರ ಎಂದರ್ಥ. ತಮಗೆ ಆತಿಥ್ಯವನ್ನು ನೀಡಿದ್ದಕ್ಕಾಗಿ ಅವರು ಆಕೆಗೆ ಈ ವರವನ್ನು ನೀಡಿ ಅಲ್ಲಿಂದ ಹೊರಡುತ್ತಾರೆ ಎಂದು ಅರ್ಥೈಸಬಹುದು.

ಬುಡಕಟ್ಟುಗಳಲ್ಲಿ ಮಗು ಹುಟ್ಟಿದ ತಕ್ಷಣ ಮಗುವಿನ ಲಿಂಗವನ್ನು ಹೇಳುವುದಿಲ್ಲ. ಅದು ಸೂಲಗಿತ್ತಿ ಮತ್ತು ಸ್ಥಳದಲ್ಲಿರುವ ವ್ಯಕ್ತಿಗಳಿಗಳಿಗೆ ಮಾತ್ರ ತಿಳಿದಿರುತ್ತದೆ. ಆ ಸಂದರ್ಭದಲ್ಲಿ ಸಾಂಕೇತಿಕವಾಗಿ ಮಗುವಿನ ಲಿಂಗವನ್ನು ಸೂಚಿಸುತ್ತಾರೆ. ಪಂಜರಿ ಎರವರಲ್ಲಿ ಗಂಡುಮಗು ಹುಟ್ಟಿದರೆ ಗಂಗಾಳವನ್ನು ಬಾರಿಸುತ್ತಾರೆ. ಹೆಣ್ಣುಮಗು ಹುಟ್ಟಿದರೆ ಕೇರುವ ಬಿದಿರಿನ ಮೊರವನ್ನು ಬಡಿಯುತ್ತಾರೆ. ಇಲ್ಲಿ ಹೆಣ್ಣುಮಗು ಎಂಬುದನ್ನು ತಿಳಿಸಲು ಕೇರುವ ಮೊರವನ್ನು ಬಡಿಯುತ್ತಾರೆ. ಗಂಗಾಳ ಕಂಚಿನದ್ದಾಗಿದ್ದು ಬಲಿಷ್ಠತೆಯ ಸಂಕೇತವಾಗಿರುತ್ತದೆ. ಹಾಗೆಯೇ ಅದು ಗಂಡಿನ ಸಂಸಾರದ ಪೋಷಣೆಯ ಗುರುತೂ ಕೂಡ ಆಗಿದೆ. ಹಾಗೆಯೇ ಮೊರ ಹೆಣ್ಣಿನ ಮನೆಗೆಲಸದಲ್ಲಿ ಉಪಯೋಗಕ್ಕೆ ಬರುವ ಬಹುಮುಖ್ಯ ವಸ್ತುವಾಗಿದ್ದು ಶ್ರಮವಿಭಜನೆಯ ಸಂಕೇತವಾಗಿದೆ. ಇದು ಗಂಡಿನ ಬಲಿಷ್ಠತೆಯ ಹಾಗೆಯೇ ಹೆಣ್ಣಿನ ಸಂಸಾರ ನಿರ್ವಹಣೆಯ ಸಂಕೇತವಾಗಿದ್ದು ಮನೆಯ ಹೊರಗಿನ ಹಾಗೂ ಒಳಗಿನ ದುಡಿಮೆಯ ಪ್ರತೀಕವಾಗಿ ನಾವು ಇದನ್ನು ಅರ್ಥೈಸಬಹುದು.

ಪಂಜರಿ ಎರವರಲ್ಲಿ ಹೆಣ್ಣು ಮೈನೆರೆಯುವುದಕ್ಕೆ ವಿಶೇಷವಾದ ಮಹತ್ವವಿದೆ. ಫಲವಂತಿಕೆಯ ಸಂಕೇತವಾದ ಈ ಸಮಾರಂಭವನ್ನು ಅತ್ಯಂತ ಸಂಭ್ರಮದಿಂದ ಎಲ್ಲರೂ ಸೇರಿ ವಿಶಿಷ್ಟವಾಗಿ ಆಚರಿಸುತ್ತಾರೆ. ಈ ಸಂದರ್ಭದಲ್ಲಿ ಹೆಣ್ಣು ಮೈನೆರೆದ ಹದಿನಾರು ದಿನಗಳನ್ನು ಸೂತಕದ ದಿನವಾಗಿ ಪರಿಗಣಿಸುತ್ತಾರೆ. ಆ ಸಮಯದಲ್ಲಿ ಮನೆಯ ಹೊರಗೆ ಗುಡಿಸಲು ಹಾಕಿ ಅಲ್ಲಿ ಅವಳನ್ನು ಇರಿಸುತ್ತಾರೆ. ಅವಳೊಂದಿಗೆ ಇಬ್ಬರು ಮೂವರು ಗೆಳತಿಯರನ್ನು ಕೂಡ ಇರಿಸುತ್ತಾರೆ. ಅನಂತರ ಹದಿನಾರನೆಯ ದಿನದಂದು ಸೂತಕ ಕಳೆಯುವ ಸಮಾರಂಭವನ್ನು

ಆಚರಿಸುತ್ತಾರೆ. ಈ ಸಂದರ್ಭದಲ್ಲಿ ಶಾಸ್ತ್ರವನ್ನು ಮಾಡಿಸುವುದು, ಸೋಬಾನೆ ಪದ ಹೇಳುವುದು ಕಣಿಲಾಡಿಯ ಕೆಲಸ. ಆತನಿಲ್ಲದೆ ಈ ಕಾರ್ಯಕ್ರಮ ಜರುಗುವುದಿಲ್ಲ. ಆ ಹಾಡಿಯಲ್ಲಿ ಕಣಿಲಾಡಿಯಿಲ್ಲವಾದರೆ ಬೇರೆ ಹಾಡಿಯಿಂದಲಾದರೂ ಕಣಿಲಾಡಿಯನ್ನು ಕರೆಸಬೇಕಾಗುತ್ತದೆ. ಹದಿನಾರನೇ ದಿನ ಅವಳ ತಲೆ ಮೇಲೆ ಒಂದು ಚೊಂಬು ಬಿಸಿನೀರನ್ನು ಸುರಿಯುತ್ತಾ ಕಣಿಲಾಡಿಯು 'ಅವಳು ಬಾಗಿಲು ದಾಟುವಾಗ ಬಾಗಿಲುವಾಡ ನೆತ್ತಿಗೆ ಬಡಿಯದಿರಲಿ, ನಡೆಯುವಾಗ ಎಡವಿ ಬೀಳದಿರಲಿ ಎಂಬ ಮಾತನ್ನು ಹೇಳುತ್ತಾನೆ. ಈ ಮಾತುಗಳು ಹೆಣ್ಣು ಸದಾ ತನ್ನ ಶೀಲದ ಬಗ್ಗೆ ಜಾಗೃತಳಾಗಿರಬೇಕೆಂದು, ಗುರು ಹಿರಿಯರಿಗೆ ತಗ್ಗಿ-ಬಗ್ಗಿ ವಿಧೇಯತೆಯಿಂದ ನಡೆದುಕೊಳ್ಳಬೇಕೆಂದು, ಹಾಗೆಯೇ ವಯಸ್ಸಿನ ಸಹಜವಾದ ವಾಂಛೆಗೆ ಬಲಿಯಾಗದೆ ತನ್ನ ಶೀಲದ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳಬೇಕು ಎಂಬುದನ್ನು ಹೆಣ್ಣಿಗೆ ಮನದಟ್ಟು ಮಾಡುತ್ತದೆ. ಹೆಣ್ಣು ಸದಾ ಗುರುಹಿರಿಯರಲ್ಲಿ ಭಯಭಕ್ತಿ ಹೊಂದಿರಬೇಕು. ಅಕೆ ತನ್ನ ತಂದೆ, ಗಂಡ, ಗುರುಗಳು ಸಮುದಾಯದ ಹಿರಿಯರು ಇಲ್ಲವೇ ಸಹೋದರರ ಆಣತಿಯಂತೆಯೇ ಬದುಕಬೇಕು ಎಂಬುದು ಇದರ ಸಾರ. ಪುರುಷ ಸಮಾಜ ಸದಾ ಹೆಣ್ಣಿನಿಂದ ಅವಳ ವಿಧೇಯತೆಯನ್ನು ಅಪೇಕ್ಷಿಸುತ್ತಿರುತ್ತದೆ. ಅವಳ ನಡೆ, ನುಡಿ ಪ್ರತಿಯೊಂದು ಸಮಾಜದ, ಸಮುದಾಯದ, ಪ್ರಧಾನ ಪಾತ್ರವಾಗಿರುವ ಗಂಡಿನ ಕಣ್ಗಾವಲಿನಲ್ಲಿಯೇ ಇರಬೇಕಾಗುತ್ತದೆ ಎಂಬುದನ್ನು ಸೂಚ್ಯವಾಗಿ ತಿಳಿಸುವುದಲ್ಲದೇ, ಅಮೂರ್ತವಾದ ರೂಪದಲ್ಲಿ ಈ ಎಲ್ಲ ನಿಯಮಗಳನ್ನು ಪಾಲಿಸುವಂತೆ ಹೆಣ್ಣಿಗೆ ದಿಗ್ಬಂಧನವನ್ನು ಹಾಕುತ್ತದೆ. ಗಂಡಿನ ಆಜ್ಞೆಗೆ ಮೌನವಾಗಿ ಸಮ್ಮತಿಸುವುದಷ್ಟೇ ಇಲ್ಲಿ ಹೆಣ್ಣಿನ ಕೆಲಸ. ಇದೇ ಈ ಆಚರಣೆಯ ಅರ್ಥವೂ ಕೂಡ. ಮುಂದುವರಿಯುತ್ತಾ 'ಅನ್ನ ಸೀಯದಿರಲಿ, ಸಾರಿನ ರುಚಿ ಕೆಡದಿರಲಿ' ಎಂಬ ಮಾತನ್ನು ಕೂಡ ಹೇಳುತ್ತಾರೆ. ಸಾಂಕೇತಿಕವಾಗಿ ಹೆಣ್ಣಿನ ಶೀಲದ ಪಾವಿತ್ರ್ಯತೆಯ ಕಲ್ಪನೆಯನ್ನು ಅವಳಲ್ಲಿ ಇವು ಮೂಡಿಸುವಂತಿರುತ್ತವೆ.

ಈ ಸಮಯದಲ್ಲಿ ಕಣಿಲಾಡಿ 'ಸೋಬಾನೆ ಪಾಟ್' ಹಾಡುತ್ತಾನೆ. ಪೆರುಂಗಾಲಿ ಪೊಲಿಯ ಕತೆಯಲ್ಲಿ ಗಂಡನ ಅಧಿಕಾರ ಮತ್ತು ಅಂತಸ್ತಿನ ಎದುರು ಅಸಹಾಯಕರಾದ ಆಕೆಯ ಹೆತ್ತವರು ತಮ್ಮ ಮಗಳನ್ನು ಮದುವೆಗೆ ಒಪ್ಪಿಸುವ ರೀತಿ ಅವಳ ವೈಯಕ್ತಿಕ ಭಾವನೆಗಳಿಗೆ ಯಾವುದೇ ಮನ್ನಣೆ ಕೊಡದೆ ಅವಳ ಭಾವನೆಗಳನ್ನು ಹತ್ತಿಕ್ಕುವಂತಿದೆ. ಈ ಹಾಡನ್ನು ಪ್ರತಿ ಬಾರಿ ಹಾಡಿದಾಗಲೂ ಮೈನೆರೆದ ಹೆಣ್ಣುಮಗಳಿಗೂ ಹಾಗೆಯೇ ಅಲ್ಲಿ ನೆರೆದ ಇತರೆ ಹೆಣ್ಣುಮಕ್ಕಳಿಗೂ ಸಲಹೆಯನ್ನು ಎಚ್ಚರಿಕೆಯನ್ನು ಇದು ನೀಡುವಂತಿರುತ್ತದೆ. ಇಲ್ಲಿ ಮದುವೆಯಾಗಿ ಏಳು ಜನ ಹೆಂಡತಿಯರನ್ನು ಹೊಂದಿರುವ ವ್ಯಕ್ತಿ ಇನ್ನೂ ಋತುಮತಿಯಾಗದೆ

ಇರುವ ಹೆಣ್ಣನ್ನು ಬಯಸುವುದು ಅವರ ವಯಸ್ಸಿನ ಅಂತರವನ್ನು ಸೂಚಿಸುತ್ತದೆ. ಹಾಗೆಯೆ ಇದು ಅವರ ಭಾವನೆಗಳ ನಡುವಿನ ಅಸಹಜ ಹೊಂದಾಣಿಕೆಯಾಗಿ ನಮ್ಮ ಕಣ್ಮುಂದೆ ನಿಲ್ಲುತ್ತದೆ.

ಮದುವೆಯಾದ ನಂತರ ಸವತಿಯರು ಮತ್ಸರದಿಂದ ಪೆರುಂಗಾಲಿ ಪೂಲಿಯ ಸೀರೆ ಮೇಲೆ ತಾಂಬೂಲದ ರಸ ಉಗಿದು ಸೀರೆಯನ್ನು ಕೆಡಿಸುವುದು. ಮಾವುಂಡನಿಗೆ ನಿನ್ನ ಚೆಂದುಳ್ಳಿ ಚೆಲುವೆ ಕೆಟ್ಟು ನಿಂತಿದ್ದಾಳೆ ಹೋಗಿ ನೋಡು ಎಂದು ಚಾಡಿ ಹೇಳುವುದು ಹೆಣ್ಣಿನ ಕುರಿತಂತೆ ಗಂಡಿಗಿರುವ ಪೂರ್ವಗ್ರಹಗಳಾಗಿವೆ. ಆ ಮಾತುಗಳನ್ನು ಕೇಳಿದ ಅವಳ ಗಂಡ ಮಾವುಂಡ ಅವಳ ಶೀಲವನ್ನು ಶಂಕಿಸಿ ಅವಳನ್ನು ಹೊಡೆದು ಕುತ್ತಿಗೆ ಹಿಡಿದು ಹೊರದಬ್ಬು ತ್ತಾನೆ. ಗಂಡು ಎಷ್ಟು ಬೇಕಾದರೂ ಮದುವೆಯಾಗಬಹುದು. ಅದೂ ಅವನು ರಾಜನಾಗಿಯೋ ಇನ್ನಾವುದೇ ಪ್ರಭಾವಿ ವ್ಯಕ್ತಿಯಾಗಿದ್ದಾಗ ಅವನ ಅಧಿಕಾರ ಮತ್ತು ಅಂತಸ್ಥಿಗೆ ತಕ್ಕಂತೆ ಹೆಣ್ಣುಗಳ ಸಂಖ್ಯೆ ಹೆಚ್ಚಾಗಬಹುದು. ಇಲ್ಲಿ ಸವತಿ ಮತ್ಸರದಿಂದ ಅವಳ ಸೀರೆಯ ಮೇಲೆ ತಾಂಬೂಲದ ರಸ ಹಾಕುವುದು ಅದನ್ನು ಕಂಡ ಅವಳ ಗಂಡ ಹೆಣ್ಣಿನ ಶೀಲದ, ಪಾವಿತ್ರ್ಯತೆಯ ಸಂಕೇತ ಎಂದು ಭಾವಿಸಿರುವ ಕನ್ಯಾಪೊರೆಯ ಭೇದನವೆಂದೇ ಪರಿಗಣಿಸಿ ಅವಳನ್ನು ಮನೆಯಿಂದ ಹೊರದಬ್ಬು ತ್ತಾನೆ. ನಂತರ ಪೆರುಂಗಾಲಿ ಪೊಲಿಯು ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎಂಬಂತೆ ತನ್ನ ತವರು ಮನೆಗೆ ಹೋಗದೆ ಅನಾಥೆಯಂತೆ ಕಾಡಿನಲ್ಲಿ ಬರುತ್ತಿರುವಾಗ ಅಲ್ಲಿಂದ ಹಲವು ಯುವಕರು ಅವಳನ್ನು ಮದುವೆಯಾಗಲು ಬಯಸಿದರೂ ಒಪ್ಪದೆ 'ಕಡಲಕರವೆ' ಎಂಬ ಅಸ್ಪೃಶ್ಯನನ್ನು ಅವನ ಜಾತಿಯ ಅರಿವಿಲ್ಲದೆ, ಭಯದಿಂದ ಇಲ್ಲವೆ ಆಕರ್ಷಣೆಯಿಂದ ಅವನೊಡನೆ ಬಾಳಲು ಅವನ ಮನೆಗೆ ಬರುತ್ತಾಳೆ. ಅವನು ದನ ತಿನ್ನುವವನು ಎಂದು ತಿಳಿದ ಕೂಡಲೇ ಚಾಲಾಕಿತನದಿಂದ ತಪ್ಪಿಸಿಕೊಂಡು ಬರುತ್ತಾಳೆ. ಇಡೀ ಸಮುದಾಯವು ಅಪಾರವಾಗಿ ಗೌರವಿಸುವ ಕುಲದ, ಹಾಗೆಯೇ ಜಾತಿಯ ಪರಿಕಲ್ಪನೆಯು ಇಲ್ಲಿ ವ್ಯಕ್ತಗೊಳ್ಳುತ್ತದೆ. ಇವರು ಯಾವುದೇ ಕಾರಣಕ್ಕೂ ಹೀನಕುಲದವರನ್ನು ಹಾಗೂ ಅನ್ಯಜಾತಿಯವರನ್ನು ಮದುವೆ ಯಾಗುವಂತಿಲ್ಲ ಎಂಬ ಎಚ್ಚರಿಕೆಯನ್ನು ಈ ಕತೆ ನೀಡುತ್ತದೆ. ಒಟ್ಟಿನಲ್ಲಿ ಕುಲದ ಸಾಮುದಾಯಿಕ ಪ್ರಜ್ಞೆ ಜಾಗೃತಗೊಳಿಸು ವಲ್ಲಿ ಈ ರೀತಿಯ ಕತೆಯು ಪರಿಣಾಮಕಾರಿಯಾಗಿದೆ. ನಂತರ ವಿಧಿವತ್ತಾಗಿ ಕುಲ ಪುರೋಹಿತ ರಿಂದ ಶುದ್ಧೀಕರಣ ಕ್ರಿಯೆಗೆ ಒಳಪಟ್ಟು ತನ್ನದೇ ಕುಲದ 'ಮುತ್ತುಕುಡಿ ಸಾದವೆ'ಯನ್ನು ಮದುವೆಯಾಗುತ್ತಾಳೆ.

ಈ ಕತೆಯು ಸಮುದಾಯದಲ್ಲಿ ಬಹಳ ಪರಿಣಾಮಕಾರಿಯಾಗಿ ಹೆಣ್ಣಿನ ಶೀಲ, ಪಾವಿತ್ರ್ಯತೆ, ಜಾತಿವ್ಯವಸ್ಥೆ, ಕುಲದ ಶ್ರೇಷ್ಠತೆಯನ್ನು ಸಾರುವಲ್ಲಿ ಕೆಲಸ ಮಾಡುತ್ತದೆ. ಹಾಗೆಯೇ

ಪಂಜರಿ ಎರವರಲ್ಲಿ ಮದುವೆ ಹೆಣ್ಣಿಗೆ ಬಂಧನವೆಂದು ತಿಳಿಯದೆ. ಆಕೆಗೆ ಗಂಡ ಬಿಟ್ಟ ಕ್ಷಣದಿಂದಲೇ ತನ್ನ ಬದುಕು ಕೊನೆಯಾಯಿತು ಎಂದು ತಿಳಿಯದೆ ಮರುಮದುವೆಯಾಗಲು ಸ್ವಾತಂತ್ರ್ಯವಿದೆ. ಸಮುದಾಯ ಅದನ್ನು ಅಂಗೀಕರಿಸಿದೆ ಕೂಡ. ಆದ್ದರಿಂದ ಈ ಹಾಡಿನ ಮೂಲಕ ಹೆಣ್ಣಿಗೆ ಜವಾಬ್ದಾರಿಗಳನ್ನು, ನಿಯಮ, ನಿಷೇಧಗಳನ್ನು ಹೇಳುವುದರೊಂದಿಗೆ ಸಮಸ್ಯೆಗೆ ಪರಿಹಾರವಿದೆ(ಶುದ್ಧೀಕರಣ) ಎಂಬ ಮನೋಧೈರ್ಯವನ್ನು ಕೂಡ ತುಂಬುತ್ತದೆ.

## ಸೋಲಿಗರ ಮೌಖಿಕ ಸಾಹಿತ್ಯದಲ್ಲಿ ಹೆಣ್ಣಿನ ಅನನ್ಯತೆ

ಸೋಲಿಗರ ಸಮುದಾಯ ಹಾಗೂ ಅವರ ಮೌಖಿಕ ಸಾಹಿತ್ಯವು ಹೆಣ್ಣಿಗೆ ವಿಶೇಷವಾದ ಸ್ಥಾನಮಾನಗಳನ್ನು ನೀಡಿದೆ. ಆದರೆ ಇದು ಪ್ರಜ್ಞಾಪೂರ್ವಕವಾಗಿ ಬಂದದ್ದಲ್ಲ. ಬದಲಿಗೆ ಸಮುದಾಯಗಳ ಆಂತರ್ಯದಲ್ಲಿ ಅಂತರ್ಗತವಾಗಿರುವಂತದ್ದು._ಮಲೆಮಾದೇಶ್ವರ ಕಾವ್ಯದಲ್ಲಿ ಬರುವ ಪ್ರಸಿದ್ಧವಾದ ಭಾಗ ಸಂಕಮ್ಮನ ಸಾಲು. ಕೇಶವನ್ ಪ್ರಸಾದ್ ಅವರು ಮತ್ತು ಪಿ.ಕೆ. ರಾಜಶೇಖರ್ ಅವರು ಸಂಗ್ರಹಿಸಿದ ಸಂಗ್ರಹಿಸಿದ ಮಲೆಮಾದೇಶ್ವರನ ಕಾವ್ಯದಿಂದ ಈ ಸಾಲುಗಳನ್ನು ತೆಗೆದುಕೊಳ್ಳಲಾಗಿದೆ. ಸೋಲಿಗರ ಸಂಕಮ್ಮ ಮಲೆಮಾದೇಶ್ವರನ ವರಪ್ರಸಾದದಿಂದ ಸೋಲಿಗರ ಮೂಲಪುರುಷರಾದ ಕಾರಯ್ಯ ಮತ್ತು ಬಿಲ್ಲಯ್ಯರನ್ನು ಪಡೆದದ್ದು ಈ ಕತೆಯ ಸಾರ. 'ಸೋಲಿಗರ ಸಂಕಮ್ಮ ಸುಂದರಿ ಮತ್ತು ಸಾಧ್ವಿ ಸಂಕಮ್ಮನಿಗೆ ತನ್ನ ಗಂಡ ನೀಲಯ್ಯನಿಂದ ಮಕ್ಕಳಾಗದಿರುವಂತಹ ಸಂದರ್ಭದಲ್ಲಿ ಕುಲದ ಪದ್ಧತಿಯಂತೆ ಸಾಮೂಹಿಕ ಬೇಟೆಗೆ ಹೋಗಬೇಕಾದ ಜರೂರು ನೀಲಯ್ಯನಿಗೆ ಎದುರಾಗುತ್ತದೆ. ಆದರೆ ಚಂದುಳ್ಳಿ ಚೆಲುವೆ ಸಂಕಮ್ಮಳನ್ನು ಒಂಬತ್ತು ತಿಂಗಳು ಒಂಟಿಯಾಗಿ ಕಾಡಿನಲ್ಲಿ ಬಿಟ್ಟು ಹೋಗಲು ನೀಲಯ್ಯನಿಗೆ ಮನಸ್ಸಿಲ್ಲ. ಕಾರಣ ಅವಳ ಬಂಜೆತನಕ್ಕೆ ನಾನೇ ಕಾರಣವಿರಬಹುದು ಎಂಬ ಅಳುಕು, ಜೊತೆಗೆ ನಾನಿಲ್ಲದ ಸಂದರ್ಭದಲ್ಲಿ ಸಂಕವ್ವ ಬೇರೆಯಾರಿಗಾದರೂ ಒಲಿದುಬಿಡುವಳೇನೋ ಎಂಬ ಅನುಮಾನ. ಆದ್ದರಿಂದ ಸಂಕಮ್ಮಳ ಬಳಿ ಹೋಗಿ 'ನಾನು ಬೇಟೆಗೆ ಹೋಗಿ ಹಿಂತಿರುಗಿ ಬರುವವರೆಗೂ ನೀನು ಬೇರಾರಿಗೂ ಒಲಿಯಬಾರದೆಂದು ಭಾಷೆ ಕೊಡು' ಎಂದು ಕೇಳುತ್ತಾನೆ. ಇದರಿಂದ ಅಪಮಾನಿತಳಾದ ಸ್ವಾಭಿಮಾನಿ ಸಂಕಮ್ಮ ಅನುಮಾನವಿರುವ ಗಂಡಿನೊಂದಿಗೆ ನಾನು ಬಾಳಲಾರೆನೆಂದು ನಿಶ್ಚಯಿಸಿ ತೆರವನ್ನು ಹಿಂದಕ್ಕೆ ಪಡೆದು ನನ್ನನ್ನು ಬಿಟ್ಟು ಬಿಡು ಎನ್ನುತ್ತಾಳೆಯೇ ಹೊರತು ಭಾಷೆ ನೀಡುವುದಿಲ್ಲ.

ಹೆಣ್ಣು ತನ್ನ ಅಧೀನಳು, ಆಕೆ ಸದಾ ತನ್ನ ಹಿಡಿತದಲ್ಲಿರಬೇಕು ಎಂಬ ಪುರುಷನ ಅಹಂಕಾರಕ್ಕೆ ತಕ್ಕ ಪ್ರತ್ಯುತ್ತರವನ್ನು ಇಲ್ಲಿ ಸೋಲಿಗರ ಸಂಕಮ್ಮ ನೀಡಿದ್ದಾಳೆ. ಪಾತಿವ್ರತ್ಯದ ಅಮಲಿನಲ್ಲಿ ಕೊಚ್ಚಿ ಹೋಗುವ ನಾರಿಯರ ಎದುರಿಗೆ ಸಂಕಮ್ಮ ಸೆಡ್ಡು ಹೊಡೆದು ನಿಲ್ಲುತ್ತಾಳೆ.

ಶೀಲ ಮತ್ತು ಪಾವಿತ್ರ್ಯತೆಯ ಸಂಕೋಲೆಯಲ್ಲಿ ಬಂಧಿಯಾಗಲು ಇಚ್ಛಿಸದ ಸಂಕಮ್ಮ ತನ್ನನ್ನು ಅನುಮಾನಿಸಿದ, ಅವಮಾನಿಸಿದ ತನ್ನ ಗಂಡ ನೀಲಯ್ಯನನ್ನು ತೊರೆಯಲು ಸಿದ್ಧಳಾಗುತ್ತಾಳೆ. ಆದರೆ ಮಹಾಸ್ವಾಭಿಮಾನಿಯಾದ ಸಂಕವ್ವ ಸುಮ್ಮನೆ ಹೋಗಲು ಇಚ್ಛಿಸುವುದಿಲ್ಲ. ಬದಲಿಗೆ ಗಂಡ ತನ್ನ ಮದುವೆಯ ಸಂದರ್ಭದಲ್ಲಿ ಕಟ್ಟಿದ ತೆರ(ಕನ್ಯಾಶುಲ್ಕವನ್ನು) ವಾಪಸು ತೆಗೆದು ಕೊಳ್ಳುವಂತೆ ಹೇಳಿ ಅವನ ಹಂಗಿನ ಋಣವನ್ನು ತೀರಿಸಲು ಮುಂದಾಗುತ್ತಾಳೆ.

ಹೆಣ್ಣನ್ನು ತನ್ನ ಭೋಗದ ವಸ್ತು ಹಾಗೂ ಆಕೆ ತನ್ನ ಸೊತ್ತು ಎಂದುಕೊಳ್ಳುವ ಪುರುಷರ ಪ್ರತಿನಿಧಿಯಾಗಿ ಇಲ್ಲಿ ನೀಲಯ್ಯ ಕಂಡುಬರುತ್ತಾನೆ. ಸಂಕಮ್ಮನ ಮನಸ್ಸು ಹಾಗೂ ನಡವಳಿಕೆ ಯನ್ನು ನಿಯಂತ್ರಿಸುವ ಸಲುವಾಗಿ ಅವಳನ್ನು ಭಾಷೆ ಕೇಳುವ ಅವನ ನಡವಳಿಕೆಯಲ್ಲಿ ಅವನ ಮಾನಸಿಕ ಅಭದ್ರತೆ ಮತ್ತು ತೊಳಲಾಟದ ಚಿತ್ರಣವಿದ್ದರೆ ಅದನ್ನು ತಿರಸ್ಕರಿಸುವ ಸಂಕವ್ವ ದಿಟ್ಟ ಮಹಿಳೆಯಾಗಿ ಚಿತ್ರಿತಳಾಗಿದ್ದಾಳೆ. ತನ್ನ ಮಾತಿಗೆ ಒಪ್ಪಿ ಭಾಷೆ ಕೊಡಲು ನಿರಾಕರಿಸುವ ಸಂಕಮ್ಮಳನ್ನು ಮಾಟಗಾರ ನೀಲಯ್ಯ ಮಂತ್ರ ತಂತ್ರಗಳಿಂದ ಬಂಧಿಸಿ, ನಗ್ನಗೊಳಿಸಿ, ಹಾವು, ಚೇಳುಗಳನ್ನು ಕಾವಲಿಟ್ಟು ಬೇಟೆಗೆ ಹೋಗುತ್ತಾನೆ. ಸಂಕಮ್ಮಳ ಸಂಕಟದ ಅರ್ತನಾದ ಕೇಳಿ ಅಲ್ಲಿಗೆ ಬರುವ ಮಲೆಯ ಮಾದೇಶ್ವರ ಅವಳನ್ನು ಈ ಎಲ್ಲಾ ಬಂಧನಗಳಿಂದ ಮುಕ್ತ ಗೊಳಿಸು ತ್ತಾನೆ. ಹೆಣ್ಣು ಫಲವಂತಿಕೆಯ ಸಂಕೇತ ಅದ್ದರಿಂದಲೇ ಹೆಣ್ಣನ್ನು ಭೂಮಿಗೆ ಹೋಲಿಸಿದ್ದಾರೆ. ಗಂಡನ ನಪುಂಸಕತನದಿಂದ ತಾನು ಬಂಜೆ ಎಂಬ ಪಟ್ಟ ಹೊರಲು ಇಷ್ಟವಿಲ್ಲದ ಸಂಕವ್ವ ತನ್ನನ್ನು ಅವಮಾನಿಸಿದ ಗಂಡನನ್ನು ತ್ಯಜಿಸಲು ಮುಂದಾಗುತ್ತಾಳೆ. ತನ್ನ ಮಾನವನ್ನು ಕಾಪಾಡಿದ, ಬಂಧನದಿಂದ ವಿಮುಕ್ತಿಗೊಳಿಸಿದ ಮಾದೇಶ್ವರನನ್ನು ತನಗೆ ಅಂಟಿರುವ ಬಂಜೆ ಎಂಬ ಆರೋಪದಿಂದಲೂ ವಿಮುಕ್ತಿಗೊಳಿಸವಂತೆ ಪ್ರಾರ್ಥಿಸುತ್ತಾಳೆ. ಅವಳ ಇಚ್ಛೆಗೆ ಒಪ್ಪಿದ ಮಾದೇಶ್ವರ ಅವಳನ್ನು ಮಂಡಿಕಾಲೂರಿ ಕೂರಿಸಿ ಬೆನ್ನಿನ ಮೂಲಕ ಕಾಡುಬೆಂಡೆಕಾಯಿಯ ಪಿಂಡ ಪ್ರಸಾದ ನೀಡುತ್ತಾನೆ. ಮಾದೇಶ್ವರನಿಂದ ಅವಳು ಗರ್ಭ ಧರಿಸುತ್ತಾಳೆ. ಆ ಮೂಲಕ ಅವಳಿಗೆ ಹುಟ್ಟಿದ ಕಾರಯ್ಯ ಮತ್ತು ಬಿಲ್ಲಯ್ಯರ ಮೂಲಕ ಸೋಲಿಗರ ಸಂತತಿ ಮುಂದು ವರಿಯಲು ಕಾರಣಳಾಗುತ್ತಾಳೆ.

ಡಾ.ಕೇಶವನ್ ಪ್ರಸಾದ್ ಅವರು ಸಂಪಾದಿಸಿದ ಮಲೆಮಾದೇಶ್ವರ ಕಾವ್ಯದಲ್ಲಿ ಬರುವ ಸಂಕಮ್ಮನ ಸಾಲಿನಲ್ಲಿ ಈ ಕತೆಯ ವಿಸ್ತೃತ ರೂಪವಿದೆ. ಅದನ್ನು ಸಂಕ್ಷಿಪ್ತವಾಗಿ ಇಲ್ಲಿ ಬಳಸಿಕೊಳ್ಳಲಾಗಿದೆ.

ಮಲೆಮಾದೇಶ್ವರ ಕಾವ್ಯದಲ್ಲಿ ಬರುವ ಸಂಕಮ್ಮನ ಸಾಲಿನಲ್ಲಿ ಹೆಣ್ಣಿನ ಪಾತಿವ್ರತ್ಯದ ಪರೀಕ್ಷೆಗಾಗಿ ಹೆಣ್ಣನ್ನು ಪರಿಪರಿಯಾಗಿ ದೂಷಿಸುವ, ಅವಮಾನಿಸುವ ಸಂದರ್ಭದಲ್ಲಿ ಸಂಕಮ್ಮ

ಅವೆಲ್ಲವನ್ನೂ ದಿಟ್ಟತನದಿಂದ ಪ್ರತಿಭಟಿಸುವ ಸಾಲುಗಳಾಗಿ ಮೂಡಿಬಂದಿದೆ. ಇಲ್ಲಿ ಮಾದೇಶ್ವರನ ಪರಮ ಭಕ್ತೆ, ಶಿವಶರಣೆಯಾಗಿ ಸೋಲಿಗರ ಸಂಕಮ್ಮ ಅಥವಾ ಶಂಕಮ್ಮನ ಪಾತ್ರವಿದೆ. ಇದು ಸೋಲಿಗರ ದೈವಪುರುಷರಾದ ಕಾರಯ್ಯ ಮತ್ತು ಬಿಲ್ಲಯ್ಯರ ಜನನದ ಭಾಗವಾಗಿ ಮೂಡಿಬಂದಿದೆ. ಸೋಲಿಗರ ಬೊಪ್ಪೇಗೌಡನ ಆರು ಜನ ಗಂಡುಮಕ್ಕಳಲ್ಲಿ ಕಿರಿಯವನೇ ನೀಲೇಗೌಡ. ಕಟ್ಟುಮಸ್ತಾದ ಮುಂಗೋಪಿ, ಮೋಡಿಗಾರ. 'ಕಾಡು ಕಟ್ಟೋನು ಮೇಘ ಕಟ್ಟೋನು'[16] ತನಗೆ ಅನುರೂಪಳಾದ, ಸುಂದರಿಯಾದ ಹೆಣ್ಣು ತನ್ನ ಬಳಗದಲ್ಲೂ, ಏಳೇಳು ಹದಿನಾಲ್ಕು ದೊಡ್ಡಿಯಲ್ಲೂ ಹುಡುಕಿದರೂ ಸಿಗದಿರಲು ತಂದೆ ತಾಯಿಯರ ಅನುಮತಿಯ ಮೇಲೆ ಬಡಗಲ ರಾಜ್ಯ, ತೆಂಕಲ ರಾಜ್ಯ, ಮೂಡಲ ರಾಜ್ಯ, ಪಡುವಲ ರಾಜ್ಯದಲ್ಲೆಲ್ಲಾ ಹುಡುಕುತ್ತಾನೆ. ಆದರೆ ತನಗೊಪ್ಪುವ ಹೆಣ್ಣು ಸಿಗದಿದ್ದಾಗಿ ನಿರಾಶನಾಗುತ್ತಾನೆ. ಒಮ್ಮೆ ನೀಲೇಗೌಡ ಕುರಿ ಮೇಯಿಸಿಕೊಂಡು ಕಾಡಿಗೆ ಹೋದ ಸಂದರ್ಭದಲ್ಲಿ ಬಾಯಾರಿಕೆ ಯಾಗುತ್ತದೆ. ಆಗ ನೀರಿಗಾಗಿ ಹತ್ತಿರವೇ ಇದ್ದ ಮೂಡಲ್ದೊಡ್ಡಿಗೆ ಬರುತ್ತಾನೆ. ದಾರಿಯಲ್ಲಿ ನೀರಿಗಾಗಿ ಬಾವಿಯ ಬಳಿ ಬರುತ್ತಿದ್ದ ಹುಡುಗಿಯರ ಗುಂಪಿನಲ್ಲಿ ದುಂಡೇಗೌಡನ ಮಗಳು ಸಂಕಮ್ಮಳನ್ನು ನೊಡುತ್ತಾನೆ. ಆಗ 'ಹೆಬ್ಬಳ್ಳಾದ ಕೆರೆಗೆ ಬರ್‍ತಾ ಇದ್ರೆ ಸಂಕಮ್ಮ ಮ್ಯಾಲಕೆ ಅಂತು ನೋಡಲಿಲ್ಲ, ಅಕ್ಕಾ ಪಕ್ಕದವರ ದೃಷ್ಟಿ ಇಟ್ಟು ನೋಡಲಿಲ್ಲ, ಭೂಮಿ ತಾಯಿಗೆ ಬೊಕ್ಕೊಂಡು, ನಿಧಾನವಾಗಿ ಪುಟ್ಟೆಜ್ಜೆ ಹಾಕ್ಕೊಂಡು ಬರ್‍ತಾ ಇದ್ದಳು.'[17] ಅವಳ ಗುಣ, ನಡತೆ, ರೂಪಕ್ಕೆ ಬೆರಗಾದ ನೀಲೇಗೌಡ 'ನಿನ್ನ ಹೆಸರೇನು'? ಎಂದು ಸಂಕಮ್ಮಳನ್ನು ಕೇಳುತ್ತಾನೆ. ಅದಕ್ಕೆ ಸಂಕಮ್ಮ ನಾನು ದುಂಡೇ ಗೌಡರ ಮಗಳು, ಮಕರ ಸಂಕ್ರಾಂತಿಯೆಂದು ಹುಟ್ಟಿದವಳು. ಆದ್ದರಿಂದ ಸಂಕಮ್ಮ ಎಂಬುದು ನನ್ನ ಹೆಸರು ಎನ್ನುತ್ತಾಳೆ. ಅವಳ ಅಂದ, ಚೆಂದ, ರೂಪು, ಗುಣ ಎಲ್ಲದ್ದರಿಂದ ಮನಸೋತ ನೀಲಯ್ಯ ಅವಳನ್ನು ಮದುವೆಯಾಗಲೇಬೇಕೆಂದು ನಿಶ್ಚಯಿಸುತ್ತಾನೆ. ಕೂಡಲೆ ತನ್ನ ಮನೆಗೆ ತೆರಳಿ, ತನ್ನ ತಂದೆ ತಾಯಿಯರ ಬಳಿ ಬಂದು ತಾನು ಸಂಕಮ್ಮನನ್ನು ಇಷ್ಟಪಟ್ಟಿದ್ದುದ್ದಾಗಿಯೂ ಮದುವೆ ಅಂತಾದರೆ ಸಂಕಮ್ಮನನ್ನೇ ಆಗುತ್ತೇನೆ ಎನ್ನುತ್ತಾನೆ. ತನ್ನ ತಂದೆ, ತಾಯಿ, ಅಣ್ಣ, ಅತ್ತಿಗೇರು, ಭಾವಮೈದುನರು ಜಾತಿಯವರನ್ನೆಲ್ಲಾ ಕರೆದುಕೊಂಡು ದುಂಡೇಗೌಡರ ಮಗಳು ಸಂಕಮ್ಮನನ್ನು ನೋಡಲು ಮೂಡಲ್ದೊಡ್ಡಿ ದುಂಡೇಗೌಡನ ಮನೆಗೆ ಬರುತ್ತಾರೆ. ಒಂದು ಒಳ್ಳೆಯ ದಿನ ಲಗ್ನ ನಿಶ್ಚಯಿಸಿ ಏಳೇಳು ಹದಿನಾಲ್ಕು ದೊಡ್ಡಿಗೆಲ್ಲಾ ಆಮಂತ್ರಣ ಕಳಿಸಿದ ಬೊಮ್ಮೇಗೌಡ, ಅದ್ದೂರಿಯಾಗಿ ತನ್ನ ಕಿರಿಮಗನಾದ ನೀಲಯ್ಯನ ಲಗ್ನ ಮಾಡುತ್ತಾನೆ. ಮದುವೆಯಾದ ನಂತರ ಪತಿವ್ರತೆಯಾದ ನೀಲಮ್ಮ ತನ್ನ ಪತಿ ಸೇವೆಯಿಂದಲೇ ತನಗೆ ಸ್ವರ್ಗ, ಪತಿಯಿಂದಲೇ ತನಗೆ ಮೋಕ್ಷ ಎಂಬಂತೆ ಆತನ ಸೇವೆ ಮಾಡತೊಡಗಿದಳು.

'ಯಾವ ರೀತಿಯಾಗೆಂದರೆ

ಬಲದ ಮೊಗ್ಗಲಾಗಿ ಮಲಗಿ ಎದ್ದ ತಕ್ಷಣ
ಗಂಡನ ಪಾದ್ಕೆ ನಮಸ್ಕಾರವನ್ನು ಮಾಡಿ
ತನ್ನ ಮನೇ ಕೆಲಸ ಬದುಕ್ಮಾಡ್ತಾಳೆ
ಗಂಡನಾದ ನೀಲೇಗೌಡ ಹೊರಗಡೆ ಹೋಗೋವಾಗ
ಪಾದಕ್ಕೆ ನಮಸ್ಕಾರವನ್ನು ಮಾಡಿ ಹೊರಗಡೆ ಕಳಿಸ್ತಾ ಇದ್ದಳು
ಸಾಯಂಕಾಲ ಬರೂದೇ ತಡವಾಗಿ
ಚೆಂಬನಲ್ಲಿ ನೀರ ಮಡೀಕೊಂಡು ಬಾಗ್ಲಲ್ಲಿ ಕಾಯ್ತಾ ಇದ್ದಳು
ಬಂದ ತಕ್ಷಣವೇ ಪತಿ ಪಾದವ ತೊಳ್ದು
ಪತಿ ಪಾದಕ್ಕೆ ನಮಸ್ಕಾರವನ್ನು ಮಾಡಿ ಒಳಗಡೆ ಕರೀತಾ ಇದ್ದಳು
ದಿನಕ್ಕೆ ಮೂರು ಸಾರಿ ನಮಸ್ಕಾರವನ್ನು ಮಾಡಿ
ತನ್ನ ಪತೀವ್ರತಾ ಧರ್ಮ ಕಾಪಾಡ್ಕೊಂಡು ಬರ್ತಾ ಇದ್ದಳು'[18]

ಹೀಗಿರುವಾಗ ಒಂದು ಸಲ ತನ್ನ ವಾರಗಿತ್ತಿಯರೊಡನೆ ಬಾವಿಗೆ ನೀರಿಗೋಗುವಾಗ ಅವಳ ವಾರಗಿತ್ತೀರು ಸಂಕಮ್ಮಳನ್ನು ಮಕ್ಕಳಾಗದ ಬಂಜೆ ಎಂದು ಹೀಯಾಳಿಸುತ್ತಾರೆ. ಇದರಿಂದ ನೊಂದುಕೊಂಡ ಸಂಕಮ್ಮ ತನ್ನ ಗಂಡನ ಬಳಿ ತನ್ನ ಅಳಲನ್ನು ತೋಡಿಕೊಳ್ಳುತ್ತಾಳೆ. ಇದರಿಂದ ಕೋಪಗೊಂಡ ನೀಲೇಗೌಡ ತನ್ನ ಹೆಂಡತಿಗೆ ಆದ ಅವಮಾನ ತನಗೂ ಆದ ಅವಮಾನವೆಂದು ಭಾವಿಸಿ ಕೋಪಗೊಂಡು ತನ್ನ ಪಾಲಿನ ಭಾಗ ತಕ್ಕೊಂಡು ಬೇರೆ ಮನೆ ಮಾಡುತ್ತಾನೆ. ಹೀಗಿರಲು ಒಂದು ದಿನ ಪದ್ಧತಿಯಂತೆ ಏಳೇಳು ಹದಿನಾಲ್ಕು ದೊಡ್ಡಿಯ ಜನರೆಲ್ಲಾ ಸೇರಿ ಹೆಜ್ಜೇನು ಮಲೆಗೆ ಬೇಟೆಗೆ ಹೋಗಬೇಕೆಂದು ನಿಶ್ಚಯಿಸುತ್ತಾರೆ. ನಿಯಮದಂತೆ ಪ್ರತಿ ಮನೆಯಿಂದ ಒಬ್ಬರು ಈ ಬೇಟೆಗೆ ಕಡ್ಡಾಯವಾಗಿ ಹೋಗಲೇಬೇಕು. ಒಂದು ವೇಳೆ ಯಾರಾದರು ಅದನ್ನು ಮೀರಿದರೆ ಅವರನ್ನು ಕುಲದಿಂದಲೇ ಬಹಿಷ್ಕಾರ ಹಾಕಲಾಗುವುದು. ಬೇಟೆಯ ವಿಷಯ ತಿಳಿದ ನೀಲೇಗೌಡ ಚಿಂತಾಕ್ರಾಂತನಾಗುತ್ತಾನೆ. ಏಕೆಂದರೆ ತನ್ನ ಮಡದಿ ಸಂಕಮ್ಮಳನ್ನು ಒಬ್ಬಳನ್ನೇ ಬಿಟ್ಟು ಹೋಗುವುದಾದರೂ ಹೇಗೆ? ಸಂಕಮ್ಮ ರೂಪವತಿ, ಅಲ್ಲದೆ ಮದುವೆಯಾಗಿ ಇನ್ನೂ ಒಂದು ವರ್ಷವೂ ಆಗಿಲ್ಲ. ಈಗಲೇ ಸಂಕಯ್ಯ ತನ್ನ ಹೆಂಡತಿಯಿಂದ ವಿಯೋಗ ಅನುಭವಿಸಲು ಸಿದ್ಧನಿಲ್ಲ. ಅದೂ ಅಲ್ಲದೆ ಇನ್ನೂ ತನಗೆ ಮಕ್ಕಳಾಗಿಲ್ಲ, ನಾನಿಲ್ಲದ ಸಂದರ್ಭದಲ್ಲಿ ಬೇರಾರಾದರೂ ಸಂಕಮ್ಮನನ್ನು ಒಲಿಸಿಕೊಂಡುಬಿಟ್ಟರೆ ಎಂಬ ಭಯ. ತನ್ನಿಂದ ಮಕ್ಕಳಾಗದ ಕಾರಣಕ್ಕೆ ಸಂಕಮ್ಮ ಬೇರಾರ ಮೇಲಾದರೂ ಮನಸ್ಸು ಮಾಡಿದರೆ ಎಂಬ ಆತಂಕ. ಇತ್ತ ನೀಲೇಗೌಡ ಕುಲದ ನಿಯಮವನ್ನು ಮೀರಲಾದೆ ತನ್ನ ಮಡದಿಯನ್ನು ಬಿಟ್ಟು ಹೋಗ

ಲಾರದೆ ತಳಮಳವನ್ನು ಅನುಭವಿಸುತ್ತಾನೆ. ಕೊನೆಗೆ ಮನೆಗೆ ಬಂದ ನೀಲಯ್ಯ, ಸಂಕಮ್ಮನ ಬಳಿ ಕುಲದವರೆಲ್ಲಾ ಹೆಜ್ಜೇನು ಮಲೆಗೆ ಹೋಗಲು ಸಿದ್ಧರಾಗುತ್ತಿದ್ದಾರೆ ಎಂಬ ವಿಷಯ ತಿಳಿಸುತ್ತಾನೆ.

'ಮಡದೀ ಹೆಜ್ಜೇನು ಮಲೆಗೆ ಹೋಯ್ತವರೆ
ಹೆಜ್ಜೇನು ತುಪ್ಪ ತರುವುದಕೆ
ಕಿರು ಜೇನು ಮಲೆಗೆ ಹೋಯ್ತವರೆ
ಕಿರು ಜೇನು ತುಪ್ಪ ತರುವುದಕೆ
ಕಾಡು ಬಾಳಣ್ಣ ತರುವುದಕೆ
ಕಟ್ಟೆಯ ನೀರ ತರುವುದಕೆ
ಬಿದ್ಗೂರಕ್ಕಿ ತರುವುದಕೆ
ಬೆಲ್ಲೂದ ಗೆಣ್ಸ ತರುವುದಕೆ
ಅಲಸುಂಡೆ ಹಣ್ಣ ತರುವುದಕೆ
ಮಾಗಾಳಿ ಬೇರ ತರುವುದಕೆ
ಗೊನೆ ಬಾಳಿ ಹಣ್ಣ ತರುವುದಕೆ
ಹೋಗಾದೆ ಮೂರು ತಿಂಗಳು
ಬರುವಾದೆ ಮೂರು ತಿಂಗಳು
ಇರುವಾದೆ ಮೂರು ತಿಂಗಳು
ಮಡದಿ ಆರು ಮೂರು ಒಂಬತ್ತು ತಿಂಗಳು
ತುಂಬೋಯ್ತದೆ ಸಂಕಣ್ಣಿ'[19]

ಎಂದಾಗ ಸಂಕಮ್ಮ 'ಪ್ರಪಂಚದಲ್ಲೇ ಕುಲಾ ಮೀರಿದ ಹೆಣ್ಣು, ಹೊಲಾ ಮೀರಿದ ಪಕ್ಷಿ ಬಾಳುವುದಕ್ಕೆ ಸಾಧ್ಯವಿಲ್ಲ ಯಜಮಾನ ಕುಲವನ್ನು ಮೀರಬಾರದು.'[20] ಆದ್ದರಿಂದ ನೀವು ಬೇಟೆಗೆ ಹೋಗಿ ಬನ್ನಿ ಎನ್ನುತ್ತಾಳೆ. ಅದಕ್ಕೆ ನೀಲೇಗೌಡ ನಾನು ಹೆಜ್ಜೇನು ಮಲೆಗೆ ಹೋಗುವುದಾದರೆ ನೀನು ನನಗೆ ಭಾಷೆ ಕೊಡಬೇಕು ಹಾಗಾದರೆ ಮಾತ್ರ ನಾನು ಹೋಗುತ್ತೀನಿ ಇಲ್ಲವಾದರೆ ಇಲ್ಲ ಎನ್ನುತ್ತಾನೆ.

"ನನಗೆ ಬಲಗೈ ಭಾಷೆ ಮಾಡೆಣ್ಣೆ
ನನ್ನ ಹೆಜ್ಜೇನು ಮಲೆಗೆ ಕಳುಗೆಣ್ಣೆ'[21]

ಎಂದಾಗ ಸಂಕಮ್ಮ ತಬ್ಬಿಬ್ಬಾಗುತ್ತಾಳೆ.

'ಎಂಥ ಮಾತ ಹೇಳ್ತಾ ಇದ್ದೀರ ಯಜಮಾನ
ಏಕಾಂತವಾಗಿ ನನ್ನ ಭಾಷೆ ಕೇಳ್ತಾ ಇದ್ದೀರಲ್ಲಾ
ಕಳನಿಲ್ಲ ಕಳವರಿಗೆ ಒಳಗಾಗನಿಲ್ಲ
ಪರ ಪುರುಷರ ಕಣ್ಣೆತ್ತು ನೋಡ್ನಿಲ್ಲ
ಯಜಮಾನರೇ ನಾನು ಭಾಷೆ ಕೊಡಬೇಕಾ ನಿಮಗೆ?
ಅಯ್ಯ ನನ್ನಲ್ಲಿ ತಪ್ಪಾ ತೋರಯ್ಯ
ನೀನು ಆಮೇಲೆ ಭಾಷೆ ಕೇಳಯ್ಯ...[22]

ಏಳೇಳು ಹದಿನಾಲ್ಕು ಲೋಕ ತಿರುಗಿ ನಿನ್ನಂಥ ಸುಂದರಿಯಾದ ಹೆಣ್ಣನ್ನು ಮದುವೆಯಾಗಿದ್ದೀನಿ. ನಿನ್ನನ್ನು ಒಬ್ಬಳನ್ನೇ ಬಿಟ್ಟು ಹೋದರೆ...

ಅತ್ತೆಯ ಮಕ್ಕಳು ಬರುವಾರು
ಮಾವನ ಮಕ್ಕಳು ಬರುವಾರು
ಭಾವ – ಮೈದ ಬರುವಾರು
ಬೆಂಕಿ ಎಣೆಯಲ್ಲಿ ಬತ್ತವರೆ
ಬಿಸ್ನೀರ ಎಣೆಯಲ್ಲಿ ಒತ್ತವರೆ
ಗೇಲೀನ ಮಾತ ಆಡುವರು
ಗಂಧದ ಮಾತ ಆಡುವರು
ರೂಪು ರೇಖೆ ನೋಡುವರು
ಅಂದ – ಚೆಂದ ನೋಡುವರು
ನಿನ್ನ ಮೇಲೆ ಕಣ್ಣ ಇಡುವರು
ಮಡದಿ ಒಲುಮೆಯ ಮದ್ದ ಕೊಡುವಾರು
ನಿನ್ನ ವಾಲೀಸಿಕೊಂಡು ಹೋಗುವರು[23]

ಎಂದಾಗ ಸಂಕಮ್ಮ ಭಾವ ನನಗೆ ತಂದೆ ಸಮಾನ, ಮೈದುನಂದಿರು ಮಕ್ಕಳ ಸಮಾನ. ನಾನೇನಾದರೂ ನಿಮಗೆ ಭಾಷೆ ಕೊಟ್ಟರೆ ನನ್ನ ಪತಿವ್ರತಾ ಧರ್ಮ ಉಳಿಯೋದಿಲ್ಲ. ಆದ್ದರಿಂದ ನಾನು ಏನಾದರೂ ಸರಿ ನಿಮಗೆ ಭಾಷೆ ಕೊಡುವುದಿಲ್ಲ ಎಂದು ಹಟ ಹಿಡಿಯುತ್ತಾಳೆ. ಕೊನೆಗೆ ಭಾಷೆ ಕೊಡಲೊಪ್ಪದ ಪತ್ನಿಯ ಮೇಲೆ ಕೋಪಗೊಂಡ ನೀಲಯ್ಯ ದಟ್ಟ ಕಾಡಿನ ನಡುವೆ

ಇರುವ 'ಕೊಕ್ಕರ ಕೊನಬೋಳಿ' ಬೆಟ್ಟದ ಮಾಳದಲ್ಲಿ ಒಂದು ಸೊಪ್ಪಿನ ಗುಡಿಸಲು ಕಟ್ಟಿ ಅಲ್ಲಿ ಸಂಕಮ್ಮನನ್ನು ತಂದು ಇರಿಸುತ್ತಾನೆ. ಮತ್ತೊಮ್ಮೆ ಭಾಷೆ ಕೊಡುವಂತೆ ಕೇಳುತ್ತಾನೆ. ಆಗ ಸಂಕಮ್ಮ

'ಈ ಅಡವಿ ಅರಣ್ಯದಲ್ಲಿ ಕಾ ಅನ್ನಾಕೆ ಕಾಗಿಲ್ಲ ಗೂ ಅನ್ನಕೆ ಗೂಗಿಲ್ಲ
ಹಕ್ಕೀ ಗಲುಗಿಲ್ಲ ಪಕ್ಷಿ ಗಲುಗಿಲ್ಲ,
ನರ ಮನುಸರ ಸದ್ದು ಮೊದಲಿಲ್ಲ,

ಇಲ್ಲಿ ಯಾತಕೆ ಭಾಷೆ ಕೇಳ್ತೀರಿ ಯಜಮಾನ ಅಂದಳು.'[24] ಆಗ ನೀನು ಬಿದಿರಕ್ಕಿ ತಂದು ಗಂಜಿ ಕಾಯಿಸುವಾಗ ಅದರ ಹೊಗೆ ಬೆಟ್ಟದಲ್ಲಿ ಕವಿದು. ಆ ದಾರಿಯಲ್ಲಿ ಬರುವ ವ್ಯಾಪಾರಗಾರರು ಇಲ್ಲಿ ಯಾವುದೋ ದೊಡ್ಡಿಯಿದೆ, ಯಾವುದೋ ಪೋಡಿದೆ, ಊರಿದೆ ಎಂದು ವ್ಯಾಪಾರಕ್ಕಾಗಿ ಬಂದರೆ? ಬಡಗಾರ ನಾಡಿನಿಂದೊಬ್ಬ ಬಳಗಾರ ಸೆಟ್ಟಿ ಬಂದು ಬಳೆ ಬಳೆ ಎಂದು ಸಾರುವಾಗ ಹೆಣ್ತನದ ಸಹಜ ಆಸೆಯಿಂದ ನೀನು ಅವನನ್ನು ಕರೆಯುತ್ತೀಯ. ಅವನು ಬಂದು ನಿನಗೆ ಬಳೆಯನ್ನು ಹಾಕುತ್ತಾನೆ. ನೀನು ಮನೆಯಲ್ಲಿ ದುಡ್ಡು, ಕಾಸು, ದವಸ, ಧಾನ್ಯ ಇದ್ದರೆ ಕೊಡುತ್ತಿದ್ದೆ. ಆದರೆ ನಿನ್ನ ಹತ್ತಿರ ಏನೂ ಇಲ್ಲ. ಆ ಸಂದರ್ಭದಲ್ಲಿ ಬಳೆಗಾರ ಶೆಟ್ಟಿ,

'ಮಡದಿ ರೂಪು ರೇಖೆ ನೋಡುವನು
ಅಂದ ಚೆಂದ ನೋಡುವನು
ಸುದ್ದಾ ಸುಳಿಯ ನೋಡುವನು
ನಡಿಗೆ ನುಡಿಗೆ ನೋಡುವನು
ಮಡದಿ ಒಲುಮೆಯ ಮದ್ದ ಕೊಡುವಾನೂ
ನಿನ್ನ ವಾಲೀಸೀಕೊಂಡು ಹೋಗುವನು...'[25]

ಎನ್ನುತ್ತಾನೆ. ಇಷ್ಟು ಹೇಳಿ ಮತ್ತೊಮ್ಮೆ ಬಲಗೈ ಭಾಷೆ ಕೇಳುತ್ತಾನೆ. ಆಗಲೂ ಸಂಕಮ್ಮ ಭಾಷೆ ಕೊಡಲು ನಿರಾಕರಿಸುತ್ತಾಳೆ.

ಆಗ ನೀಲೇಗೌಡ

"ಪ್ರಪಂಚದಲ್ಲಿ ಮೇಘವನ್ನೇ ಕಟ್ಟಿ ಮೋಡದಲ್ಲಿ ಆಡುವಂಥ
ಬಿಳಿ ಕಾಗೆ ನೋಡಬಹುದು
ಹನ್ನೆರಡಾಳು ಮಟ ಜಲವನ್ನಿಳಿದು

ಹೆಣ್ಣು ಮೀನು ಗಂಡು ಮೀನು ಅಂತ್ಹೇಳಿ
ಮೀನಿನ ಮಚ್ಚೆ ಪತ್ತೆ ಮಾಡಬಹುದು
ಇದೂ ಅಲ್ಲದೆ ಧರೆವೊಳುಗೆ
ಕೊತ್ತೀ ಸತ್ತೆಯನ್ನು ನೋಡಬಹುದು
ಅತ್ತೀ ಮರದಲ್ಲಿ ಅತ್ತಿ ಹೂ ಕಾಣಬಹುದು
ಪ್ರಪಂಚದಲ್ಲಿ ಸಂಕಣ್ಣೆ
ನಿನ್ನ ಈ ಹೆಣ್ಣೆಂಬ ಏಳು ಜಾತೀಯ ನಂಬಲಾರೆ ಸಂಕೆಣ್ಣೇ...[26]

ಎಂದು, ಈ ಭೂಮಿಯಲ್ಲಿ ನಾನೇ ಮೋಡಿಗಾರ ಎಂದರೆ ನನಗಿಂತ ಹೆಚ್ಚಿನ ಸೋಲಿಗರಿದ್ದಾರೆ. ಅವರೇನಾದರೂ ನಿನ್ನನ್ನು ಮೋಸ ಮಾಡಿ ಕರೆದೊಯ್ದರೆ ಎನ್ನುವ ಆತಂಕದಲ್ಲಿ ಕೊನೆಗೊಂದು ತೀರ್ಮಾನಕ್ಕೆ ಬಂದ ನೀಲೇಗೌಡ

ಮಡದೀ ಉಟ್ಟಿದ ಸೀರೆ ಅಳಿಯಣ್ಣೆ
ತೊಟ್ಟಿದ ಕುಪ್ಪಸ ಅಳಿಯೆಣ್ಣೆ
ಬಣ್ಣ ಬಂಗಾರ ಕಳಿಯೆಣ್ಣೆ
ನಡುವಿನ ಒಡ್ಯಾಣ ಕಳಿಯೆಣ್ಣೆ
ಕಾಲಿನ ಕಡಗ ಕಳಿಯೆಣ್ಣೆ
ಕೈಯಿನ ಪದಕ ಕಳಿಯೆಣ್ಣೆ
ನೆತ್ತಿಯ ಮಲಕು ಕಳಿಯೆಣ್ಣೆ
ಉಟ್ಟಿದ ಸೀರೆ ಅಳಿಯೆಣ್ಣೆ
ಮಡದೀ ಬದಲಿಗೆ ಸೀರೆಯ ಕೊಡುವೆನು
ಉಟ್ಟಿದ ಸೀರೆ ಅಳಿಯೆಣ್ಣೆ...'[27]

ಎಂದಾಗ ಸಂಕಮ್ಮ ತಾನು ತೊಟ್ಟ ಸೀರೆ ಕುಪ್ಪಸ, ಒಡ್ಯಾಣ, ಕಾಲಿನ ಕಡಗ, ಕೈಯಿನ ಪದಕ, ನೆತ್ತಿಯ ಮಲಕು, ನಡುವಿನ ಒಡ್ಯಾಣ, ಬಣ್ಣ ಬಂಗಾರವನ್ನು ಎಲ್ಲವನ್ನೂ ಕಳಚಿಕೊಟ್ಟು ಬಿಡುತ್ತಾಳೆ. ಅದನ್ನೆಲ್ಲಾ ಪಡೆದ ನೀಲೇಗೌಡ ಹಳ್ಳದ ಕಡೆಗೆ ಹೋಗಿ ಉಗುನಿಯ ಸೊಪ್ಪು, ಎಕ್ಕದ ಎಲೆ, ಕಬ್ಬಳಿಯಂಬು ಕೊಯ್ದು ತಂದು ತನ್ನ ಮಡದಿಗೆ ಕೊಟ್ಟು ಅದನ್ನು ತೊಡಲು ಹೇಳುತ್ತಾನೆ.

"ಅಮ್ಮ ಉಗುನಿಯ ಸೊಪ್ಪ ತಗುದವಳೇ
ದುಂಡು ಉಡುಗೆ ಉಟ್ಟವಳೆ

ಎಕ್ಕದ ಎಲೆಯ  ತಗದವಳೆ
ಎದೆ ಕಟ್ಟನ್ನಾದರೆ ಕಟ್ಟವಳೆ
ಕಬ್ಬಾಳಿಯಂಬ ತಗದವಳೆ
ನಡು ಕಟ್ಟನ್ನಾದರೆ ಕಟ್ಟವಳೆ
ಒಂದ ತೇಗದ್ದೆಲೆಯ ತಗದವಳೆ
ಮೇಲೆ ಮುಸುಕ ಹಾಕವಳೇ'[28]

ಇದಕ್ಕೂ ಸಮಾಧಾನವಾಗದ ನೀಲೇಗೌಡ ವೇಷ ಕಳಚಿದರೆ ಸಾಲದು

ಕಣ್ಣನ್ನು ಬಿಟ್ಟು ಹೋದರೆ ಕಣ್ಣೆತ್ತು ನೋಡ್ತಾಳೆ
ಬಾಯನ್ನ ಬಿಟ್ಟು ಹೋದರೆ ಮಾತ್ನಾಡ್ತಾಳೆ
ಕೈಯನ್ನ ಬಿಟ್ಟು ಹೋದರೆ ಕೈ ಸನ್ನೆ ಮಾಡ್ತಾಳೆ'[29]

ಎಂದುಕೊಂಡು

'ಅಯ್ಯ ಕಣ್ಣಿಗೆ ಸೂಜಿ ಹಾಕವನೆ
ಕರ್ಣಕೆ ದಬ್ಬಳ ಬಡದವನೆ
ಬಾಯಿಗೆ ಬೀಗ ಹಾಕವನೆ
ಹಿಂಕೈ ಮುರಿಯ ಕಟ್ಟವನೆ
ಮುಂಕೈ ಮುರಿಯ ಕಟ್ಟವನೆ
ಕಾಲಿಗೆ ಸಂಕೋಲೆ ಹಾಕವನೆ
ಮಲೆಯ ಸ್ವಾಲುಗ ನೀಲಯ್ಯ
ಅಯ್ಯ ಮುದುರಿ ಮೂಟೆ ಕಟ್ಟವ್ನೆ
ಮೊಕ್ಕಣ್ಣಾಗಿ ಕಡುಗವನೆ'[30]

ಇಷ್ಟೇ ಅಲ್ಲದೆ ಮೊಕ್ಕಣ್ಣಾಗಿ ಮಲಗಿದ ಸಂಕಮ್ಮ ಅಲುಗಾಡಬಾರದೆಂದು ಬೆನ್ನಮೇಲೆ ಎತ್ತಲಾರದ ಗುಂಡನ್ನು ಇಡುತ್ತಾನೆ

ಅಯ್ಯ ನಗ್ಗಾಲು ಮುಳ್ಳಾ ತಂದವನೆ
ಮಗ್ಗಾಲು ಹಾಸಿಗೆ ಮಾಡವನೆ
ಬೆಲ್ಲದ ಹಾಸಿಗೆ ಮಾಡವನೆ

ಮೈಮೇಲಾದರೆ ಚೆಲ್ಲವನೆ[31]

ಬೆಲ್ಲದ ಹಾಸಿಗೆ ಮೇಲೆ ಮಲಗಿದ ಸಂಕಮ್ಮಳ ಮೇಲೆ ಇರುವೆಗಳು ಹರಿದಾಡಿ ಇವಳನ್ನು ಕಚ್ಚಿ ಹಿಂಸಿಸುವಾಗ ಅವಳು ನರಳುವ ಶಬ್ದವೇನಾದರೂ ಕೇಳಿ ಯಾರಾದರೂ ಬಂದರೆ ಎಂಬ ಆತಂಕದಲ್ಲಿ ಬಾಗೇಯ ಮರದಿಂದ ವೀರಣ್ಣ ಬೊಮ್ಮಣ್ಣರನ್ನು ಮಾಡಿ ಬಾಗಿಲ ಎಡಬಲದಲ್ಲಿ ನಿಲ್ಲಿಸುತ್ತಾನೆ. ಹೆಜ್ಜೇನು ಕತ್ತಿಯನ್ನು ಗೊಂಬೆ ಕೈಲಿಡುತ್ತಾನೆ. ತಾನು ತಂದ ಮರಳನ್ನು ಗುಡಿಸಲ ಸುತ್ತ ಚೆಲ್ಲಿ ಉಳುಕುಮಂಡಲ, ಕೊಳಕುಮಂಡಲ, ಗೆಜ್ಜುಮಂಡಲ, ಗಿಲುಕುಮಂಡಲ ಮೊದಲಾದ ಎಪ್ಪತ್ತೇಳು ಮಂಡಲವನ್ನು ಬರೆದು ಎಳೆನಾಗರವನ್ನು ಹಿಂದೆ ಕಾವಲಿಗೆ ಬಿಟ್ಟು. ಈ ಮಂಡಲ ದಾಟಿ ಯಾರಾದರೂ ಒಳ ಹೋದರೆ

"ಒಂದು ಮಂಡಾಲ ದಾಟಿದರೆ
ಕಾಲೇ ಸೇದಿ ಹೋಗಾಲಿ
ಎರಡು ಮಂಡಾಲ ದಾಟಿದರೆ
ಕೈಯೇ ಬರದೇ ಹೋಗಾಲಿ
ಮೂರು ಮಂಡಲ ದಾಟಿದರೆ
ಕಣ್ಣೇ ಹಿಂಗಿ ಹೋಗಾಲಿ...[32]

ಎಂದು ಶಾಪವಿಟ್ಟು ವಜ್ರಗಿರಿ ಮಲೆಗೆ ಹೆಜ್ಜೇನು ಬೇಟೆಗೆ ಹೋಗುತ್ತಾನೆ. "ಈ ಕಡೆ ಸಂಕಮ್ಮ ಕೋಳಿಯಾಕ್ಹೂಗಿ ನಾಯಿಯಾಗಿ ನರಳ್ತಾ ಇದ್ದಾಳೆ.'[33] ತಿರುಪತಿ ವೆಂಕಟರಮಣ, ಕನ್ನಂಬಾಡಿ ಚೆನ್ನಗೋಪಾಲರಾಯ, ಮೇಲ್ಕೋಟೆ ಚೆಲುವರಾಯ, ಅಕ್ಕಮ್ಮ ಚಿಕ್ಕಮ್ಮ, ಬದ್ದರ ಬನ್ನಂಕಾಳಿ, ಬನ್ನೂರು ಯೇಮಾದ್ರಿ, ಮೂಗೂರು ತಿಬ್ಬಾದೇವಿ, ಮೊದಲಾದವರನ್ನೆಲ್ಲಾ ಬೇಡಿಕೊಂಡರೂ ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ತನ್ನ ತವರುಮನೆ ದೇವರು ಮಾದಪ್ಪನನ್ನು ನೆನೆಯುತ್ತಾಳೆ. ಅವಳ ಗೋಳನ್ನು ಕೇಳಿದ ಮಾಯಕಾರ ಮಾದಪ್ಪ ಕೂಡಲೆ ಗಂಡುಲಿ ವಾಹನ ಏರಿಕೊಂಡು ಭಿಕ್ಷುಕನ ರೂಪದಲ್ಲಿ ಕೊಕ್ಕರೆಕೊನಬೋಳಿ ಬೆಟ್ಟಕ್ಕೆ ಬಂದು ಸಂಕಮ್ಮಳನ್ನು ನರಕ ಕೂಪದಿಂದ ಬಿಡುಗಡೆ ಮಾಡುತ್ತಾನೆ. ಹೇಗೆಂದರೆ

ಅವಳ ಕಣ್ಣಿನ ಸೂಜಿ ಕಳದೋಯ್ತು
ಕರ್ಣದ ದಬ್ಬ ಬಿದ್ದೋಯ್ತು
ಬಾಯಿನ ಬೀಗ ಕಳೆದೋಯ್ತು
ಇಂಕೈ ಮುರಿಯು ಬಿದ್ದೋಯ್ತು
ಮುಂಕೈ ಮುರಿಯು ಸಿಡಿದೋಯ್ತು

ಕಾಲಿನ ಸಂಕೋಲೆ ಕಳೆದೋಯ್ತು
ಬೆನ್ನಿನ ಗುಂಡು ಉರುಳೋಯ್ತು
ಬೆದ್ರಿ ಬೆಟ್ಟ ಸೇರೋಯ್ತು
ಅಮ್ಮ ಉಸ್ಸಂತ ಮೇಲಕ್ಕೆ ಎದ್ದವ್ಳೆ
ಸತ್ಯ ಭಾಮನ ಸಂಕಮ್ಮ...'[34]

ನಂತರ ಮಾದೇಶ್ವರನು ಗುಡಿಸಲನ್ನು ಅರಮನೆ ಮಾಡಿ, ದವಸ ಧಾನ್ಯ ಪಟ್ಟೆ ಪೀತಾಂಬರ, ಬೆಳ್ಳಿ, ಬಂಗಾರವನ್ನು ಕರುಣಿಸುತ್ತಾನೆ. ಮಾದೇಶ್ವರ ಹೊರಡಲು ಅನುವಾಗುವಾಗ ಸಂಕಮ್ಮ ಭಿಕ್ಷೆ ಹಾಕಲು ಹೊರಗಡೆ ಬರುತ್ತಾಳೆ. ಆಗ ಮಾದಪ್ಪ ತಾಯಿ ನಿನ್ನ ಮಕ್ಕಳ ಕೈಯಿಂದ ಭಿಕ್ಷೆ ಹಾಕಿಸವ್ವ ಎನ್ನುತ್ತಾನೆ. ಆಗ ಸಂಕಮ್ಮ ನೋವಿನಿಂದ ತನಗೆ ಮಕ್ಕಳಿಲ್ಲದ ಸಂಗತಿಯನ್ನು ಹೇಳುತ್ತಾಳೆ. ಅದನ್ನು ಕೇಳಿದ ಮಾದೇಶ್ವರ ಬಂಜೆಯಿಂದ ತಾನು ಭಿಕ್ಷೆ ಪಡೆಯುವುದಿಲ್ಲ ಎಂದು ಭಿಕ್ಷೆ ಪಡೆಯಲು ನಿರಾಕರಿಸುತ್ತಾನೆ. ಇದರಿಂದ ನೊಂದುಕೊಂಡ ಸಂಕಮ್ಮ ನನ್ನನ್ನು ಈ ನರಕದಿಂದ ಪಾರು ಮಾಡಿದ ನೀನೇ ನನ್ನನ್ನು ಈ ಬಂಜೆತನದಿಂದ ಪಾರುಮಾಡು ಎಂದು ತನಗೆ ಮಕ್ಕಳ ಭಿಕ್ಷೆ ನೀಡುವಂತೆ ಮಾದೇಶ್ವರನನ್ನು ಪರಿಪರಿಯಾಗಿ ಬೇಡಿಕೊಳ್ಳುತ್ತಾಳೆ. ಮೊದಲಿಗೆ ಅವಳ ಬೇಡಿಕೆಯನ್ನು ನಿರಾಕರಿಸಿದ ಮಾದಪ್ಪ ಕೊನೆಗೆ ಒಪ್ಪಿಕೊಂಡು ಮರುದಿನ ಬೆಳಿಗ್ಗೆ ಸೂರ್ಯೋದಯದ ಸಮಯದಲ್ಲಿ ಅಲೆ ಸ್ತ್ರೀ ಕೊಳದ ಬಳಿಯ ಹೊನ್ನರಳಿ ಮರದಡಿಯಲ್ಲಿ ಬರಲು ಹೇಳುತ್ತಾನೆ. ಅದರಂತೆ ಸಂಕಮ್ಮ ಬೆಳಗೆದ್ದು ಸ್ನಾನ ಮಾಡಿ ಅರಿಶಿನ ಕುಂಕುಮ ಧರಿಸಿ ಮಾದಪ್ಪ ಹೇಳಿದ ಸ್ಥಳಕ್ಕೆ ಬರುತ್ತಾಳೆ.

'ಮುತ್ತಿನ ಜೋಳಿಗೇಲಿ ಹಸ್ತ ಮಡ್ಗಿದ್ರು ಮಾದಪ್ಪ
ಆ ಕಾಡು ಬಾಳೆಹಣ್ಣಿಗಾಕಿ
ಆವಾಗಲೀಗ ಏಳು ಮಲೆ ಭಸ್ಮ ತಗದು
ಆ ಕಾಡು ಬಾಳೆ ಹಣ್ಣಿಗಾಕಿ
ಆರು ಮಂತ್ರ ಹದಿನೆಂಟು ಪುರಾಣ ಮಾಡುದ್ರು'[35]

ಈ ರೀತಿ ಮಾದಪ್ಪನವರು ಬಾಳೆಹಣ್ಣಿನ ಮೂಲಕ ಪಿಂಡ ಪ್ರಸಾದ ನೀಡಿದರು. ಅದನ್ನು ಮಹಾಪ್ರಸಾದವೆಂದು ಸ್ವೀಕರಿಸಿದ ಸಂಕಮ್ಮ ಆ ಬಾಳೆಹಣ್ಣನ್ನು ಒಂದೊಂದಾಗಿ ನುಂಗಿಬಿಟ್ಟಳು. ತಿರುಗಿ ಬಂದ ನೀಲೇಗೌಡ ಗುಡಿಸಲು ಇದ್ದ ಜಾಗದಲ್ಲಿ ಅರಮನೆ ನೋಡುತ್ತಾನೆ. ಮೈತುಂಬಿ ಕೊಂಡಿರುವ ತನ್ನ ಹೆಂಡತಿಯನ್ನು ಕಂಡು ಕ್ರೋಧಗೊಂಡು ಅವಳ ಶೀಲವನ್ನು ಶಂಕಿಸಿ ಅವಳ ಶೀಲ ಪರೀಕ್ಷಿಸಲು ಪರಿಪರಿಯಾಗಿ ಹಿಂಸೆ ನೀಡಿ ಹಲವು ವಿಧದ ಪರೀಕ್ಷೆಗಳನ್ನು ಒಡ್ಡುತ್ತಾನೆ.

ಆ ಪರೀಕ್ಷೆಗಳಿಂದ ಮಾದಪ್ಪನೇ ಅವಳನ್ನು ಕಾಪಾಡುತ್ತಾನೆ. ಒಂದು ಸುಮುಹೂರ್ತದಲ್ಲಿ ಸಂಕಮ್ಮ ಕಾರಯ್ಯ ಮತ್ತು ಬಿಲ್ಲಯ್ಯ ಎಂಬ ಅವಳಿ ಮಕ್ಕಳಿಗೆ ಜನ್ಮ ನೀಡುತ್ತಾಳೆ. ಮಲೆಮಾದೇಶ್ವರ ಕಾವ್ಯದಲ್ಲಿ ಸ್ತ್ರೀ ಸಂವೇದನೆಗೆಂದೇ ಮೀಸಲಾಗಿರುವ ಬಹುಮುಖ್ಯವಾದ ಭಾಗವೆಂದರೆ ಸಂಕಮ್ಮನ ಸಾಲು. ಇದು ಕೇವಲ ಮಾದೇಶ್ವರನ ಒಕ್ಕಲದವರಾದ ಹೊಲೆ-ಮಾದಿಗರಿಗೆ ಮಾತ್ರವಲ್ಲದೆ ಸೋಲಿಗರ ಧಾರ್ಮಿಕ ನಂಬಿಕೆಯಲ್ಲೂ ಅತಿ ಪ್ರಧಾನವಾದ ಸ್ಥಾನ ಪಡೆದಿದೆ. ಸೋಲಿಗರ ಸಾಂಸ್ಕೃತಿಕ ವೀರರಾದ ಕಾರಯ್ಯ, ಬಿಲ್ಲಯ್ಯ, ಹಾಗೂ ಸಂಕಮ್ಮನ ಪಾತ್ರಗಳು ಈ ಕಾವ್ಯದಲ್ಲಿ ತಳಕು ಹಾಕಿಕೊಂಡಿವೆ. ಈ ಭಾಗದಲ್ಲಿ ಸ್ತ್ರೀ ಅನನ್ಯತೆ, ಸ್ವಾಭಿಮಾನ, ಛಲ, ಭಕ್ತಿ, ನಿಷ್ಠೆ ಎಲ್ಲವೂ ಸಂಕಮ್ಮನ ಪಾತ್ರದ ಮೂಲಕ ಹೊರಹೊಮ್ಮಿದೆ. ನೀಲೇಗೌಡ ತಾನು ಅತ್ಯಂತ ರೂಪಸಿಯಾದ, ಪತಿವ್ರತೆಯಾದ, ಸಂಕಮ್ಮನನ್ನು ಅತಿಯಾಗಿ ಪ್ರೀತಿಸುವ ಗಂಡನಾಗಿದ್ದರೂ ಕೂಡ ಹೆಣ್ಣಿಗೆ ಅವಳ ಸೌಂದರ್ಯವೇ ಶತ್ರು ಎಂಬ ಮಾತಿನಂತೆ ಆಕೆಯ ರೂಪ ಅವನಲ್ಲಿ ಅನುಮಾನದ ಹುತ್ತ ಬೆಳೆಯುವಂತೆ ಮಾಡುತ್ತದೆ.

ನೀಲೇಗೌಡ ಮೊದಲ ಬಾರಿಗೆ ಸಂಕಮ್ಮನನ್ನು ನೋಡಿದಾಗ ಅವಳ ಅಂದ ಚಂದಕ್ಕೆ ಮಾತ್ರ ಒಲಿಯಲಿಲ್ಲ, ಬದಲಿಗೆ ಅವಳು ತನ್ನ ಗೆಳತಿಯರ ಗುಂಪಿನಲ್ಲಿದ್ದರೂ ಯಾರನ್ನೂ ಕಣ್ಣೆತ್ತಿ ನೋಡದ ಅವಳ ಗುಣಕ್ಕೆ ಮರುಳಾಗುತ್ತಾನೆ. ಸಂಕಮ್ಮಳ ನಡೆ, ನುಡಿ, ಗುಣವನ್ನು ಮೆಚ್ಚುವ ನೀಲಯ್ಯ ಪುರುಷ ಮನಸ್ಥಿತಿಯ ಪ್ರತಿನಿಧಿಯಾಗಿ ಕಾಣಿಸುತ್ತಾನೆ. ಅವಳ ಗುಣ ರೂಪಕ್ಕೆ ಮೆಚ್ಚಿ ಸಂಕಮ್ಮಳಿಗೆ ಮನಸೋತು ಮದುವೆಯಾಗುತ್ತಾನೆ. ಮದುವೆಯಾದಂದಿನಿಂದ ಪತಿವ್ರತಾ ಧರ್ಮವನ್ನು ಪಾಲಿಸಿಕೊಂಡು ಬರುವ ಮಡದಿಯ ಗುಣವನ್ನು ಬಲ್ಲ ನೀಲೇಗೌಡ, ಒಂಬತ್ತು ತಿಂಗಳುಗಳ ಕಾಲ ಕುಲದ ಬೇಟೆಗೆ ಹೊರಡುವ ಸಮಯದಲ್ಲಿ ನೀನು ಬೇರಾರಿಗು ಒಲಿಯು ವುದಿಲ್ಲವೆಂದು ಭಾಷೆ ಕೊಡು ಎಂದು ಕೇಳುವ ಆತನ ಮನಸ್ಥಿತಿಗೆ ಕಾರಣ ತನ್ನ ಹೆಂಡತಿಯ ಸೌಂದರ್ಯ. ಸಂಕಮ್ಮಳ ರೂಪದ ಬಗ್ಗೆ ಅಭಿಮಾನದೊಂದಿಗೆ ಇರುವ ಅನುಮಾನ. ತನ್ನನ್ನು ಮೀರಿದ ಗಂಡು ಬಂದು ಅವಳ ಮನಸ್ಸನ್ನು ಕದ್ದುಬಿಡುವನೆಂಬ ಭಯ ಆತನನ್ನು ಭಾಷೆ ಕೇಳುವಂತೆ ಪ್ರೇರೇಪಿಸುತ್ತದೆ. ನೀಲಯ್ಯ ಮದುವೆಯಾಗಿ ವರ್ಷವಾಗುತ್ತಾ ಬಂದರೂ ಮಕ್ಕಳಾಗದಿದ್ದರಿಂದ ತನ್ನ ಪುರುಷತ್ವದ ಬಗೆ ತನಗೇ ಸಂಶಯ ಕಾಡಲು ಪ್ರಾರಂಭಿಸುತ್ತದೆ. ನನಗೆ ಮಕ್ಕಳನ್ನು ಹುಟ್ಟಿಸುವ ಸಾಮರ್ಥ್ಯವಿದೆಯೋ ಇಲ್ಲವೋ ಎಂಬ ಶಂಕೆ ಅವನಲ್ಲಿ ಈಗಾಗಲೇ ಮೊಳೆತಿರುವುದರ ಜೊತೆಗೆ ಈ ಕಾರಣದಿಂದ ಸಂಕಮ್ಮ ಬೇರೆ ಯಾರಿಗಾದರೂ ಒಲಿದು ಬಿಡುವಳೋ ಎನ್ನುವ ಆತಂಕದಿಂದ ಚಡಪಡಿಸುತ್ತಾನೆ. ಕೊನೆಗೆ ನೀಲಯ್ಯ ಏನಾದರೂ ಆಗಲಿ ಸಂಕಮ್ಮನಿಂದ ಪ್ರಮಾಣ ಮಾಡಿಸಲೇಬೇಕೆಂಬ ಹಟಕ್ಕೆ ಬೀಳುತ್ತಾನೆ. ಆದರೆ

ಪತಿವ್ರತಾ ಶಿರೋಮಣಿಯಾಗಿ ಪತಿಯೇ ಪರದೈವ ಎಂದು ನಂಬಿಕೊಂಡು ಬಂದಿರುವ ಸಂಕಮ್ಮ ಭಾಷೆ ಹೇಗೆ ಕೊಟ್ಟಾಳು? ನಾನೇದರೂ ಭಾಷೆ ಕೊಟ್ಟರೆ ನಾನು ನಿಜವಾಗಿಯೂ ನಡತೆಗೆಟ್ಟವಳು, ಕಳಂಕಿತಳು ಎಂಬುದನ್ನು ತಾನೇ ಒಪ್ಪಿಕೊಂಡಂತಾಗುತ್ತದೆ. ಆದ್ದರಿಂದ ಏನಾದರೂ ಸರಿ ಭಾಷೆ ಕೊಡುವುದಿಲ್ಲ ಎಂದು ತೀರ್ಮಾನಿಸುತ್ತಾಳೆ. ಬದಲಿಗೆ ಗಂಡನನ್ನು ಪರಿಪರಿಯಾಗಿ ಸಮಾಧಾನಿಸುತ್ತಾಳೆ. ಕುಲವನ್ನು ಮೀರಬಾರದೆಂದು ಹೇಳಿ ಬೇಟೆಗೆ ನಿಶ್ಚಿಂತೆಯಾಗಿ ಹೋಗಿ ಬನ್ನಿ ಎಂದರೂ ಒಪ್ಪದ ನೀಲೇಗೌಡ ಭಾಷೆ ಕೊಡಲೇಬೇಕೆಂದು ಹಟ ಹಿಡಿಯುತ್ತಾನೆ. ಸಂಕಮ್ಮ ಒಪ್ಪದಿರಲು ಅವಳನ್ನು ಪರಿಪರಿಯಾಗಿ ಹಿಂಸಿಸಲು ತೊಡಗುತ್ತಾನೆ.

ಶಿಷ್ಟ ಸಾಹಿತ್ಯದಲ್ಲಾದರೆ ಇಂತಹ ಸಂದರ್ಭದಲ್ಲಿ ಹೆಣ್ಣನ್ನು ಚಂಚಲೆ, ನಂಬಿಕೆಗೆ ಅನರ್ಹಳು, ಸ್ವಯಂ ನಿಯಂತ್ರಣವಿಲ್ಲದವಳು, ಕಾಮಿ ಎಂದೆಲ್ಲಾ ಚಿತ್ರಿಸಲು ಸಾಧ್ಯತೆಯಿದೆ. ಆದರೆ ಜನಪದವಾಗಲೀ, ಬುಡಕಟ್ಟು ಸಾಹಿತ್ಯವಾಗಲೀ ಶಿಷ್ಟಕ್ಕಿಂತ ಭಿನ್ನವಾಗಿ ಹೆಣ್ಣಿನ, ಸ್ವಾತಂತ್ರ್ಯ ಆತ್ಮಾಭಿಮಾನವನ್ನು ಎತ್ತಿ ಹಿಡಿಯುತ್ತದೆ. ಸಂಕಮ್ಮಳನ್ನು ವಿಧ ವಿಧವಾಗಿ ಹಿಂಸಿಸುವ ಮೂಲಕ ಹೆಣ್ಣನ್ನು ಗಂಡಿನ ಅಧೀನಳು ಹಾಗೂ ಅವಳು ದೈಹಿಕವಾಗಿ ಅಬಲೆಯೆಂದು ಪರಿಗಣಿಸುವ ಹಾಗೂ ತಾನು ಗಂಡನೆಂಬ ಅಧಿಕಾರದ ಅಹಮ್ಮಿಕೆಯ ನಿರ್ಲಜ್ಜತನದ ಪ್ರತೀಕವಾಗಿ ನೀಲೇಗೌಡ ಕಂಡುಬರುತ್ತಾನೆ.

ನೀಲೇಗೌಡ ಸಂಕಮ್ಮಳನ್ನು ಬೆತ್ತಲೆಗೊಳಿಸಿ ಹಲವು ಜಾತಿಯ ಸೊಪ್ಪನು ಕೊಟ್ಟು ಮೈಗೆ ಧರಿಸುವಂತೆ ಹೇಳುತ್ತಾನೆ. ಇದು ಬುಡಕಟ್ಟುಗಳ ಸಹಜ ನೈಸರ್ಗಿಕ ಬದುಕನ್ನು ಬಿಂಬಿಸುತ್ತವೆ. ಅಂದರೆ ಸೋಲಿಗರು ಕಾಡುಸೊಪ್ಪುಗಳನ್ನು ಬಿಟ್ಟು ಬಟ್ಟೆ ಧರಿಸುವ ಸಂಕ್ರಮಣಾವಸ್ಥೆಯಲ್ಲಿ ಈ ಘಟನೆ ನಡೆದಿರಬಹುದು ಎಂಬುದನ್ನು ನಾವು ಊಹಿಸಬಹುದು. ಸೋಲಿಗರ ಸಾಂಪ್ರದಾಯಿಕ ಕಾಡಿನ ಮಕ್ಕಳಂತೆ ಸಂಕಮ್ಮ ಆ ಎಲೆಗಳನ್ನು ಯಾವ ಗೊಂದಲವೂ ಇಲ್ಲದೆ ಸಹಜವಾಗಿ ಧರಿಸುತ್ತಾಳೆ. ಅದನ್ನು 'ಉಗುನಿಯ ಸೊಪ್ಪು ತಗದವಳೇ, ದುಂಡು ಉಡುಗೆ ಉಟ್ಟವಳೇ, ಎಕ್ಕದ ಎಲೆಯ ತಗದವಳೆ ಎದೆ ಕಟ್ಟನಾದರೆ ಕಟ್ಟವಳೆ...'[36] ಎಂದು ಈ ಸಾಲಿನಲ್ಲಿ ವರ್ಣಿಸಲಾಗಿದೆ.

ಸೋಲಿಗರ ಹೆಣ್ಣು ಗಂಡುಗಳು ಅಲಂಕಾರಪ್ರಿಯರು ಎನ್ನುವುದಕ್ಕೆ ಉದಾಹರಣೆಯಾಗಿ ಸಂಕಮ್ಮ ತೊಟ್ಟಿದ್ದ ಆಭರಣಗಳನ್ನು ಇಲ್ಲಿ ಹೆಸರಿಸಲಾಗಿದೆ. ನಡುವಿನ ಒಡ್ಯಾಣ, ಕಾಲಿನ ಕಡಗ, ಕೈಯಿನ ಪದಕೆ, ನೆತ್ತಿಯ ಮಲಕ್ಕೆ ಇವು ಸಂಕಮ್ಮ ಸ್ಥಿತಿವಂತಳಾಗಿದ್ದಳು ಎಂಬುದಕ್ಕೆ ಸಾಕ್ಷಿಯಂತೆ ಕಂಡುಬರುತ್ತದೆ. ಅವಳ ಕಷ್ಟ ಕಾರ್ಪಣ್ಯವನ್ನು ಕಂಡು ಮಾದೇಶ್ವರ ಬಂದು ಅವಳನ್ನು ಬಂಧನದಿಂದ ಮುಕ್ತಿಗೊಳಿಸುತ್ತಾನೆ. ಅವಳಿಂದ ಭಿಕ್ಷೆ ಕೇಳುತ್ತಾನೆ. ಆದರೆ ಅವಳು ಮಕ್ಕಳಿಲ್ಲದ

ವಳು ಎಂಬುದನ್ನು ತಿಳಿದು ತಾನೇ ಸಂಕಮ್ಮಳನ್ನು ಬಂಜೆ ಎಂದು ಕರೆಯುತ್ತಾನೆ. ಅಷ್ಟೇ ಅಲ್ಲದೆ, ನಿನ್ನಿಂದ ಭಿಕ್ಷೆ ತೆಗೆದುಕೊಂಡರೆ ಬೆಟ್ಟ, ಬಿದಿರು, ಹುಲಿ, ಕರಡಿ, ನನ್ನ ನೂರೊಂದು ಒಕ್ಕಲು, ಜೊತೆಗೆ ನನ್ನ ಜೋಳಿಗೆಯು ಬಂಜೆಯಾಗುತ್ತದೆ ಎನ್ನುತ್ತಾನೆ. ಇದನ್ನು ಕೇಳಿದ ಸಂಕಮ್ಮ ಅಪಾರವಾಗಿ ನೊಂದುಕೊಳ್ಳುತ್ತಾಳೆ. ನನಗೆ ಮಕ್ಕಳ ಭಾಗ್ಯ ದಯಪಾಲಿಸಿ ಬಂಜೆತನ ವನ್ನು ನಿವಾರಿಸು ಎಂದು ಅಂಗಲಾಚುತ್ತಾಳೆ. ಹೆಣ್ಣು ಫಲವಂತಿಕೆಯ ಸಂಕೇತ, ಆಕೆ ಭೂಮಿತಾಯಿಯಂತೆ ಎಂದೂ ಬರಡಲ್ಲ. ಮಕ್ಕಳನ್ನು ಹೆತ್ತಾಗ ಮಾತ್ರ ಹೆಣ್ತನ ಪರಿಪೂರ್ಣ ವಾಗಲು ಸಾಧ್ಯ. ಅದಕ್ಕಾಗಿ ತನ್ನ ಆರಾದ್ಯ ದೈವ ಮಾದೇಶ್ವರನಿಂದಲೇ ಮಕ್ಕಳನ್ನು ಪಡೆಯಬೇಕೆಂದು ನಿರ್ಧರಿಸಿ ಅವನನ್ನು ಬೇಡಿಕೊಳ್ಳುತ್ತಾಳೆ. ನನಗೆ ಮಕ್ಕಳನ್ನು ದಯಪಾಲಿಸು ಎಂದು ದೈನ್ಯಳಾಗಿ ಬೇಡಿಕೊಂಡಾಗ ಎರಡು ಕಾಡುಬಾಳೆ ಹಣ್ಣನ್ನು ಮಾದೇಶ್ವರ ಪ್ರಸಾದ ಸಂಕಮ್ಮಳಿಗೆ ನೀಡುತ್ತಾನೆ. ಆ ಹಣ್ಣನ್ನು ಪ್ರಸಾದವೆಂಬಂತೆ ಆಕೆ ಸ್ವೀಕರಿಸುತ್ತಾಳೆ. ಮಹದೇಶ್ವರ ನಿಂದ ಆಕೆ ಮಕ್ಕಳನ್ನು ಪಡೆಯುವ ಪ್ರಕ್ರಿಯೆಯನ್ನು ರೂಪಕದ ಮೂಲಕ ಹೇಳಲಾಗಿದೆ.

ಬುಡಕಟ್ಟು ಸಮಾಜದಲ್ಲಿ ಮಕ್ಕಳನ್ನು ಪಡೆಯಲು ಸ್ತ್ರೀಗೆ ಎಲ್ಲಾ ರೀತಿಯ ಸ್ವಾತಂತ್ರ್ಯವಿದೆ ಮತ್ತು ಏಕಾಂಗಿಯಾಗಿ ತೀರ್ಮಾನವನ್ನು ತೆಗೆದುಕೊಳ್ಳಲು ಆಕೆ ಶಕ್ತಳಾಗಿದ್ದಾಳೆ. ಇದು ವ್ಯಭಿಚಾರವಲ್ಲ ಬದಲಿಗೆ ವಂಶವನ್ನು ಬೆಳಗಲು ಮತ್ತು ತಾನು ಬಂಜೆ ಎಂಬ ಕಳಂಕದಿಂದ ಮುಕ್ತಳಾಗಲು ಆಕೆ ತೆಗೆದುಕೊಂಡ ನಿರ್ಧಾರ. ಸಾಮಾಜಿಕ ಸಂದರ್ಭದಲ್ಲಿ ಹೆಣ್ಣು ಗಂಡಿನ ಅಜ್ಞಾನುವರ್ತಿ. ಗಂಡನ ಅಂಕೆಯಲ್ಲಿ, ಸಮಾಜ ರೂಪಿಸಿರುವ ಕಟ್ಟುಪಾಡಿನ ಒಳಗೆ ಬದುಕಬೇಕಾದುದು ಹೆಣ್ಣಿನ ಕರ್ತವ್ಯ. ಇಂತಹ ಸಂದರ್ಭದಲ್ಲಿ ಈ ಎಲ್ಲ ಕಟ್ಟುಪಾಡುಗಳನ್ನು ಮೀರಿ ಹೆಣ್ಣು ಪರಪುರುಷನಿಂದ ಮಕ್ಕಳನ್ನು ಪಡೆಯಬೇಕೆಂದು ಆಲೋಚಿಸುವುದೆಂದರೆ ಆಕೆ ಪಾತಿವ್ರತ್ಯ ಹೀನಳು, ವ್ಯಭಿಚಾರಿ ಎಂಬೆಲ್ಲ ಹಣೆಪಟ್ಟಿಗೆ ಭಾಜನಳಾಗಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಸಂಕಮ್ಮ ದಿಟ್ಟತನದಿಂದ ತನ್ನ ಮನದಿಂಗಿತವನ್ನು ಈಡೇರಿಸಿಕೊಳ್ಳುವಲ್ಲಿ ಸಫಲಳಾಗುತ್ತಾಳೆ. ಇಲ್ಲಿ ಸಂಕಮ್ಮ, ಸಮಾಜವು ಬಯಸುವ ಸಿದ್ಧಮಾದರಿಯ ಹೆಣ್ಣಿನಂತೆ ಸಾಮಾಜಿಕ ಚೌಕಟ್ಟಿನೊಳಗೆ ಬಂಧಿಯಾಗದೆ ಆ ಸಂಕೋಲೆಗಳನ್ನು ಮೀರುತ್ತಾಳೆ. ಸಾಮಾಜಿಕ ಚೌಕಟ್ಟಿನೊಳಗೆ ತನ್ನೆಲ್ಲ ಕನಸುಗಳನ್ನು ಹತ್ತಿಕ್ಕಿಕೊಂಡು ಬದುಕುವ ಹೆಣ್ಣು ಪತಿವ್ರತೆಯಾಗಿ, ದೇವತೆಯಾಗಿ, ಪ್ರಶಂಸೆಗೆ ಪಾತ್ರವಾಗುತಾಳೆ. ಈ ರೀತಿಯ ಸಂಕೋಲೆಯನ್ನು ದಿಕ್ಕರಿಸುವ ಹೆಣ್ಣನ್ನು ವ್ಯಭಿಚಾರಿಯೆಂದು ರಾಕ್ಷಸಿಯೆಂದು ಬಿಂಬಿಸಲಾಗುತ್ತದೆ. ಬುಡಕಟ್ಟುಗಳು ಸಂಕಮ್ಮನನ್ನು ದೇವತೆಯೆಂದು ಪೂಜಿಸುವುದರ ಮೂಲಕ ಮೇಲ್‌ಸ್ತರ ಎಂದು ಕರೆಸಿಕೊಳ್ಳುವ ಸಿದ್ಧಮಾದರಿಯ

ಸಾಮಾಜಿಕ ವ್ಯವಸ್ಥೆಗೆ ವಿರುದ್ಧವಾಗಿ, ಮಾದರಿಯಾಗಿ ನಮಗೆ ಕಂಡುಬರುತ್ತದೆ.

ಬಹುಶಃ ಈ ಬಗೆಯಲ್ಲಿ ಹೆಣ್ಣಿಗೆ ಸಿಗಬೇಕಾದ ಮನ್ನಣೆ, ಸ್ಥಾನಮಾನಗಳನ್ನು ಬುಡಕಟ್ಟುಗಳು ನೀಡಿವೆ. ಇದು ಸ್ತ್ರೀಪರ ಹಾಗೂ ಮನುಷ್ಯಪರವಾದ ನಿಲುವುಗಳಾಗಿವೆ. ಇಲ್ಲಿ ಹೆಣ್ಣಿಗೆ ತನ್ನ ದೇಹ ಮತ್ತು ಮನಸ್ಸಿನ ಮೇಲೆ ಸಂಪೂರ್ಣ ಸ್ವಾತಂತ್ರ್ಯವಿರುವುದನ್ನು ನಾವು ಕಾಣಬಹುದು. ಈ ಕಾವ್ಯದಲ್ಲಿ ಸಂಕಮ್ಮ ಮಾದೇಶ್ವರನನ್ನು ಬೇಡಿಕೊಳ್ಳುವುದು ಬಂಜೆತನದ ಕಳಂಕವನ್ನು ನಿವಾರಿಸಿಕೊಳ್ಳುವುದಕ್ಕಷ್ಟೆ ತನ್ನ ಬಂಜೆತನಕ್ಕೆ ಕಾರಣ ತಾನಲ್ಲ ಹಾಗೂ ತನ್ನ ಗಂಡನಿಂದ ಮಕ್ಕಳಾಗುವುದಿಲ್ಲ ಎಂಬ ಅರಿವಿದ್ದರೂ ಅದನ್ನು ಆಕೆ ಅದನ್ನು ಎಲ್ಲಿಯೂ ಪ್ರಸ್ತಾಪಿಸುವುದಿಲ್ಲ. ತನ್ನ ಒಡಲುರಿಯನ್ನು ಎಂದೂ ವ್ಯಕ್ತಪಡಿಸುವುದಿಲ್ಲ. ಆದರೆ ತನ್ನ ಪಾತಿವ್ರತ್ಯಕ್ಕಿಂತಲೂ ಬಂಜೆತನದ ಕಳಂಕದಿಂದ ಹೊರಬಂದು ತಾಯ್ತನವನ್ನು ಒಮ್ಮೆಯಾದರೂ ಅನುಭವಿಸಲೇಬೇಕೆಂಬ ಅವಳ ಇಚ್ಛೆ ಹೆಣ್ಣಿನ ಸಹಜ ಅಭಿಲಾಷೆ, ಅದಕ್ಕಾಗಿ ಆಕೆ ಎಂತಹ ವಿಷಮ ಸನ್ನಿವೇಶಗಳು ಎದುರಾದರೂ ಅನುಭವಿಸಲು ಸಿದ್ಧಳಾಗುತ್ತಾಳೆ. ತಾಯ್ತತನದ ಹಂಬಲವೇ ಅವಳನ್ನು ಮಾದೇಶ್ವರನನ್ನು ಕೂಡುವಂತೆ ಪ್ರೇರೇಪಿಸುತ್ತದೆ.

ಸಮಾಜವು ತಾಯ್ತನವನ್ನು ಶ್ರೇಷ್ಠವೆಂತಲೂ, ಬಂಜೆತನವನ್ನು ಕನಿಷ್ಠ ಎಂತಲೂ ನಡೆಸಿಕೊಂಡು ಬಂದಿದೆ. ಒಂದು ಹೆಣ್ಣಿನ ಜೀವನ ಪರಿಪೂರ್ಣವಾಗುವುಧೆ ಅಕೆ ತಾಯಿಯಾಗುವುದರಿಂದ ಎಂದು ಪರಿಗಣಿಸಿರುವ ಸಂದರ್ಭದಲ್ಲಿ ಸಹಜವಾಗಿಯೇ ಬಂಜೆ ಎಂಬ ಆರೋಪಕ್ಕೆ ಆಕೆ ತತ್ತರಿಸುತ್ತಾಳೆ. ಸಮಾಜದಲ್ಲಿ ತನಗೆ ಎಲ್ಲ ಹೆಣ್ಣಿನಂತೆ ಸಮಾನ ಸ್ಥಾನಮಾನಗಳು ಸಿಗಬೇಕು ಎಂದು ಹಂಬಲಿಸುತ್ತಾಳೆ. ಸಂಕಮ್ಮನ ಬಂಜೆತನಕ್ಕೆ ತಾನೇ ಕಾರಣ ಎಂಬ ಅಳುಕು ನೀಲೇಗೌಡನಿಗೆ ಇದ್ದದ್ದರಿಂದಲೇ ಆತ ಅವಳನ್ನು ಭಾಷೆ ಕೊಡುವಂತೆ ಬಲವಂತ ಮಾಡುತ್ತಾನೆ. ತಾನಿಲ್ಲದ ಸಂದರ್ಭದಲ್ಲಿ ತನ್ನ ಹೆಂಡತಿ ಪರಪುರುಷನಿಂದ ಮಕ್ಕಳನ್ನು ಹಡೆದರೆ ತಾನು ಮಕ್ಕಳನ್ನು ಹುಟ್ಟಿಸಲಾರದ, ಪುರುಷತ್ವವಿಲ್ಲದ ಗಂಡಸು ಎಂಬ ಹಣೆಪಟ್ಟಿ ಹೊರಬೇಕಾಗುತ್ತದೆ ಎಂಬ ಭಯದಿಂದಲೇ ಭಾಷೆ ಕೊಡುವಂತೆ ಹಟ ಹಿಡಿಯು ವನೇನೋ ಎಂಬ ಭಾವನೆಯನ್ನು ನೀಲಯ್ಯನ ಪಾತ್ರವು ಮೂಡಿಸುತ್ತದೆ.

ತನ್ನ ಅತ್ತಿಗೆಯರು, ತಂಗಿಯರು, ನಾದಿನಿಯರು ತನ್ನ ಹೆಂಡತಿಯನ್ನು ಬಂಜೆ ಎಂದು ಕರೆದದ್ದಕ್ಕಾಗಿ ತಕ್ಷಣವೇ ನೀಲೇಗೌಡ ಬೇರೆ ಮನೆ ಮಾಡುತ್ತಾನೆ. ತನ್ನ ಹೆಂಡತಿಗೆ ಹೇಳಿದ ಮಾತು ನಾಳೆ ತನಗೂ ಬರಬಹುದೆಂಬ ಕಾರಣದಿಂದ ಆ ಪರಿಸರದಿಂದಲೇ ದೂರಾಗುವುದು ಪಲಾಯನದಂತಿದೆಯೇ ಹೊರತು ತನ್ನ ಹೆಂಡತಿಯ ಮೇಲಿನ ಪ್ರೀತಿಯಿಂದ ಎಂದೆನಿಸುವುದಿಲ್ಲ.

ತನಗೆ ಮಕ್ಕಳಾಗುವುದಿಲ್ಲ ಎಂಬ ಅರಿವು ಆತನಿಗೆ ಮೊದಲೇ ನೀಲೇಗೌಡನಿಗೆ ತಿಳಿದಿರಬಹುದು. ವಿವಾಹಪೂರ್ವ ಲೈಂಗಿಕತೆ ಸಮಾಜದಲ್ಲಿ ಗಂಡಿಗೆ ಹೊಸತೇನೂ ಅಲ್ಲ ಮತ್ತು ಸಮಾಜವು ಅದನ್ನು ಅಪರಾಧವೆಂದೂ ಪರಿಗಣಿಸಿಲ್ಲ. ಅದು ಗಂಡಸುತನದ ಸಂಕೇತ ಎಂದೇ ಭಾವಿಸಲಾಗಿದೆ. ಇಂತಹ ಸಂದರ್ಭದಲ್ಲಿ ಸಂಕಮ್ಮನನ್ನು ವಿವಾಹವಾಗುವ ಮೊದಲೇ ತನ್ನ ದೈಹಿಕ ಕೊರತೆಯು ನೀಲೇಗೌಡನಿಗೆ ಅರಿವಾಗಿರಲಿಕ್ಕೂ ಸಾಕು. ಮದುವೆಯ ನಂತರ ಸಂಕಮ್ಮಳು ತಾಯಿಯಾಗುವ ಯಾವ ಸೂಚನೆಯೂ ಕಾಣದಿದ್ದಾಗ ತನ್ನ ಅನುಮಾನ ನಿಜವಾಗುತ್ತದೆ. ಪುರುಷಕೇಂದ್ರಿತ ಸಮಾಜದಲ್ಲಿ ಪುರುಷಾಧಿಕಾರದ ಅಹಂ ಮತ್ತು ದೈಹಿಕವಾಗಿ ದುರ್ಬಲಳಾದ ಹೆಣ್ಣನ್ನು ಎಲ್ಲ ಕೊರತೆಗಳಿಗೆ ಗುರಿಯಾಗಿಸುವ ಗಂಡಿನ ದಬ್ಬಾಳಿಕೆಯ ಪ್ರತೀಕವಾಗಿ ನೀಲೇಗೌಡ ಕಂಡುಬರುತ್ತಾನೆ. ಬೋರಲಿಂಗಯ್ಯನವರು ಈ ಕಾವ್ಯವನ್ನು ಕುರಿತು 'ಇಲ್ಲಿ ಹೆಣ್ಣು ಮುಕ್ತತೆಗೆ ಹಾತೊರೆದರೆ ಗಂಡು ಕಟ್ಟುಪಾಡಿನ ಬೇಲಿಯನ್ನು ಭದ್ರಪಡಿಸತೊಡಗುತ್ತಾನೆ. ಸಮಾಜವೊಂದರ ಬೇಡು ಬೇಡುಗ ಸಂಘರ್ಷ, ಆಸೆ ಅಹಮಿಕೆಗಳ ಸಂಘರ್ಷ, ಇಡೀ ಸಂದರ್ಭ ಪುರುಷಪ್ರಧಾನ ಸಮಾಜದ ಒಪ್ಪಿತ ಮೌಲ್ಯವಾದ ಶೀಲವನ್ನು ನಿರ್ಲಕ್ಷಿಸುವ ಮೂಲಕ ಪಾತಿವ್ರತ್ಯವನ್ನು ಮೀರುವ ಒಂದು ಕ್ರಿಯೆಯಾಗಿ ಮುಖ್ಯವಾಗುತ್ತದೆ' ಎಂಬ ಮಾತನ್ನು ಹೇಳುತ್ತಾರೆ.

ಹೆಜ್ಜೇನು ಮಲೆಯ ಬೇಟೆಯಿಂದ ಬಂದ ನೀಲೇಗೌಡನು ನೀಲಮ್ಮನನ್ನು ಕಂಡು ಆಶ್ಚರ್ಯಚಕಿತನಾಗುತ್ತಾನೆ. ಬದಲಾದ ತನ್ನ ಮನೆಯ ಜೊತೆಗೆ ಹೆಂಡತಿಯು ಬಸುರಾಗಿರುವುದನ್ನು ತಿಳಿದು ಕೋಪದಿಂದ ಅವಳನ್ನು ಹಿಂಸಿಸಲು ಪರೀಕ್ಷಿಸಲು ತೊಡಗುತ್ತಾನೆ. ಆದರೆ ಸಂಕಮ್ಮಳಿಗೆ ಅವಳಿ ಗಂಡುಮಕ್ಕಳಾದಾಗ ಅವನ ಪಿತೃವಾತ್ಸಲ್ಯ ಜಾಗೃತವಾಗುತ್ತದೆ. ಒಬ್ಬ ತಂದೆಯಾಗಿ ಆ ಮಕ್ಕಳನ್ನು ಸ್ವೀಕರಿಸುತ್ತಾನೆ. ಅಲ್ಲಿಯವರೆಗೂ ಇದ್ದ ಕೋಪ ಮಾಯವಾಗಿ ಅಂತಃಕರಣ ಮಿಡಿಯುತ್ತದೆ. ಮಕ್ಕಳನ್ನು ಮಾದಪ್ಪನಿಗೆ ತಿರುಗಿ ನೀಡಲು ಒಪ್ಪುವುದಿಲ್ಲ. ಸಾಹಿತ್ಯವೆಂಬುದು ಬದುಕಿನ ಮತ್ತೊಂದು ಮಗ್ಗುಲು. ಸಾಹಿತ್ಯ ಎನ್ನುವುದು ಸಮಾಜದ ಕುಟುಂಬಕ್ಕೆ ಹಿಡಿದ ಕನ್ನಡಿಯಂತೆ. ಪ್ರತಿರೂಪದ ಸಮಾಜದಲ್ಲೇ ಆಗಲೀ ಸಾಹಿತ್ಯದಲ್ಲೇ ಆಗಲಿ ಹೆಣ್ಣಿನ ಅಸ್ತಿತ್ವವನ್ನು ಹುಡುಕಬೇಕಾದರೆ ಬಹಳ ವಿರಳ. ಪುರುಷಕೇಂದ್ರಿತ ಊರ್ಧ್ವಮುಖ ಚಲನೆಯಲ್ಲಿ ಹೆಣ್ಣಿಗೆ ನಿಜವಾಗಿಯೂ ಸಿಗಬೇಕಾದ ಮನ್ನಣೆ, ಸ್ಥಾನಮಾನಗಳು ದೊರೆತಿವೆಯೇ ಎಂದರೆ ಉತ್ತರ ಶೂನ್ಯ. ಶಿಷ್ಟ ಸಾಹಿತ್ಯವು ಸಮಾಜದಲ್ಲಿ ಘೋಷಿತ ಗಂಡು ಹೆಣ್ಣಿನ ನಡುವಿನ ಭಾವನಾತ್ಮಕ ಮತ್ತು ದೈಹಿಕ ತಾರತಮ್ಯಗಳನ್ನು ಹಾಗೂ ಅವುಗಳ ಅಘೋಷಿತ ಪಳೆಯುಳಿಕೆಗಳನ್ನು ಜೀವಂತವಾಗಿಡುವುದರಲ್ಲಿ ಸದಾ ಮಗ್ನವಾಗಿರುತ್ತದೆ. ಇಲ್ಲಿ ಸ್ತ್ರೀ ಸಂವೇದನೆಗಳು

ಮುಸುಕ್ಕಾಗಿ ಇಲ್ಲವೇ ಭಾಗಶಃ ಕಣ್ಮರೆಯಾಗಿರುವುದನ್ನು ನಾವು ಸ್ಪಷ್ಟವಾಗಿ ಗಮನಿಸಬಹುದಾದ ಸಂದರ್ಭದಲ್ಲಿ ಸ್ತ್ರೀಯ ಭಾವಾಭಿವ್ಯಕ್ತಿಗೆ ತೀವ್ರವಾಗಿ ಸ್ಪಂದಿಸಿದ್ದು ಹಾಗೂ ಅದನ್ನು ಹೊತ್ತು ಸಾಗಿಸಿದ ಗೌರವ ಸಲ್ಲಬೇಕಾದದ್ದು ನಮ್ಮ ಜನಪದರ ಅಂತರಾಳಕ್ಕೆ ಹಾಗೂ ಬುಡಕಟ್ಟು ಸಮಾಜದ ಮಾನವತೆಗೆ.

ಗಂಡಿನ ಮೂಲಕ ಹೆಣ್ಣಿನ ಆಶಯಗಳನ್ನು ಹೊರಗಿಡಬೇಕಾದ ಸಂದಿಗ್ಧತೆಯ ಸಮಯದಲ್ಲಿ ಹೆಣ್ಣು ಸ್ವತಂತ್ರವಾಗಿ ಮಾತಾಡಿದ್ದು ಮತ್ತು ಅವಳನ್ನು ಮಾತಾಡಿಸಿದ್ದು ನಮ್ಮ ಜನಪದರ ಭಾಷೆ ಹಾಗೂ ಸಾಹಿತ್ಯ, ಹೆಣ್ಣಿನ ಭಾವಾಭಿವ್ಯಕ್ತಿಯ ಮಾಧ್ಯಮವಾಗಿ ಅವಳ ಬದುಕು ಧೋರಣೆಗಳಿಗೆ ಪ್ರಾತಿನಿಧ್ಯವನ್ನು ನೀಡಿದ್ದು ಈ ಸಾಹಿತ್ಯಗಳು. ಒಪ್ಪಿತ ಭಾರತೀಯ ಮಾದರಿ ಸ್ತ್ರೀಯ ಮುಸುಕನ್ನು ಸರಿಸಿ ಸಂಕೋಲೆಯನ್ನು ಒಡೆದು ಅದರಾಚೆಗೆ ತನ್ನ ಅಸ್ಮಿತೆಯನ್ನು ಕಾಪಾಡಿಕೊಂಡು ಬಂದವಳು ನಮ್ಮ ಬುಡಕಟ್ಟು ಹೆಣ್ಣು. ಅದನ್ನು ನಾವು ಮಲೆ ಮಾದೇಶ್ವರ ಕಾವ್ಯದಲ್ಲಿ ಬರುವ ನಾಯಕಿ ಸಂಕಮ್ಮಳಲ್ಲಿ ಕಾಣಬಹುದು.

### ಜೇನುಕುರುಬರ ಮೌಖಿಕ ಸಾಹಿತ್ಯದಲ್ಲಿ ಹೆಣ್ಣಿನ ಅನನ್ಯತೆ

ಜೇನುಕುರುಬ ಸಮುದಾಯದಲ್ಲಿ ಗಂಡ ಹೆಂಡತಿಯ ನಡುವಿನ ವೈವಾಹಿಕಬಂಧ ಊಳಿಗಮಾನ್ಯ ಸ್ವರೂಪದಲ್ಲಿಲ್ಲ. ಬದಲಿಗೆ ಅದು ಸಮಾನತೆಯ ಆಶಯಗಳನ್ನು ಗೌರವಿಸುವ ಒಂದು ವ್ಯವಸ್ಥೆಯಾಗಿದೆ. ಅದಕ್ಕೆ ಸಾಕ್ಷಿಯಾಗಿ ಜೇನುಕುರುಬರ ಮೌಖಿಕ ಸಾಹಿತ್ಯವು ಕಂಡುಬರುತ್ತದೆ. ಇಲ್ಲಿ ನೀಡಲಾಗಿರುವ ಹಾಡು ಜೇನುಕರುಬರ ಸಮೂಹಗೀತೆಯಾಗಿದೆ. ಇದು ಇಡೀ ಸಮುದಾಯದ ಮನರಂಜನೆಯ ಗೀತೆಯಾಗಿದೆ. ಸಮುದಾಯದವರು ಒಟ್ಟಾಗಿ ಸೇರಿದಾಗ ಈ ಹಾಡನ್ನು ಕಟ್ಟುತ್ತಾ ಹಾಡುತ್ತಾರೆ. ಇತರರು ಸೊಲ್ಲು ಹಾಕುತ್ತಾರೆ.

'ಸೊಪ್ಪುಗೋದವ ಬಂದಿಲ್ಲ ಕಣೆ
ಲೇ ಲಮ್ಮಾ ಲೇಲ—
ಸೌದಿಗೋದವ ಬಂದಿಲ್ಲ ಕಣೆ
ಲೇ ಲಮ್ಮಾ ಲೇಲ
ಬಿಕ್ಕಿಗೋದವ ಬಂದಿಲ್ಲ ಕಣೆ
ಲೇ ಲಮ್ಮಾ ಲೇಲ
ಜೇನಿಗೋದವ ಬಂದಿಲ್ಲ ಕಣೆ
ಲೇ ಲಮ್ಮಾ ಲೇಲ

ಗಾಸಿಗೋದವ ಬಂದಿಲ್ಲ ಕಣೆ
ಲೇ ಲಮ್ಮಾ ಲೇಲಾ
ಸಂತೆಗೋದವ ಬಂದಿಲ್ಲ ಕಣೇ
ಲೇ ಲಮ್ಮಾ ಲೇಲ
ನೀರಿಗೋದವ ಬಂದಿಲ್ಲ ಕಣೇ
ಲೇ ಲಮ್ಮಾ ಲೇಲ'

ಗಂಡು ಅಥವಾ ಹೆಣ್ಣಿಗೆ ತಾನು ಇಷ್ಟ ಪಟ್ಟವರನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವಿತ್ತು. ಅದಕ್ಕೆ ಮದುವೆಯೆಂಬುದು ಸಂಕೋಲೆ ಎಂದು ಭಾವಿಸಬೇಕಿಲ್ಲ. ಇದೊಂದು ಮನುಷ್ಯ ಸಹಜ ಕ್ರಿಯೆ ಎಂದು ಸಮುದಾಯವು ಭಾವಿಸಿತ್ತು. ಈ ಹಾಡಿನಲ್ಲಿ ಗಂಡನಾದವನು ನೀರಿಗೋದ ತನ್ನ ಹೆಂಡತಿ ಇನ್ನೂ ಬಂದಿಲ್ಲ, ಸೊಪ್ಪಿಗೆ ಹೋದವಳು ಇನ್ನೂ ಬಂದಿಲ್ಲ ಎಂದು ಅಕ್ಕಪಕ್ಕದವರನ್ನು ಕೇಳುತ್ತಾನೆ. ಅಂದರೆ ಈ ರೀತಿ ಸೊಪ್ಪಿಗೆ, ನೀರಿಗೆ ಹೋದವಳು ಇನ್ನೂ ತಿರುಗಿ ಬಂದಿಲ್ಲ ಎಂದರೆ ಯಾರೊಡನೆಯೋ ಓಡಿ ಹೋಗಿದ್ದಾಳೆ ಎಂಬ ಅರ್ಥ. ಅದೇ ರೀತಿ ಸಂತೆಗೆ ಹೋದ ತನ್ನ ಗಂಡ, ಜೇನಿಗೆ ಹೋದ ತನ್ನ ಗಂಡ ಇನ್ನು ಮನೆಗೆ ಬಂದಿಲ್ಲ ಎಂದು ವಿಚಾರಿಸುವ ಹೆಂಡತಿಯ ಅನುಮಾನವೂ ಕೂಡ ಅದೇ. ಈ ಹಾಡನ್ನು ಸಮುದಾಯವು ಹಾಡುತ್ತಾ ಸಂತೋಷ ಪಡುತ್ತಾರೆ. ಜೇನುಕುರುಬ ಸಮಾಜ ಈ ರೀತಿಯ ಸಂಬಂಧಗಳನ್ನು ಗೌರವಿಸುತ್ತಿತ್ತು ಮತ್ತು ಮಾನ್ಯ ಮಾಡಿತ್ತು ಎಂಬುದನ್ನು ನಾವು ಅರ್ಥೈಸಿಕೊಳ್ಳಬಹುದು.

## ಕುಡಿಯರ ಮೌಖಿಕ ಸಾಹಿತ್ಯದಲ್ಲಿ ಹೆಣ್ಣಿನ ಅನನ್ಯತೆ

ಕುಡಿಯ ಸಮುದಾಯವು ಉಳಿದ ಎಲ್ಲ ಸಮುದಾಯಗಳಿಗಿಂತಲೂ ವಿಶೇಷವಾದ ಸ್ಥಾನವನ್ನು ಹೆಣ್ಣಿಗೆ ನೀಡಿದೆ. ಹೆಚ್.ವಿ.ನಂಜುಂಡಯ್ಯ ಮತ್ತು ಅನಂತಕೃಷ್ಣ ಅಯ್ಯರ್ ಅವರು ಬರೆದಿರುವ The Mysore Tribes and Castes(1961) ಎಂಬ ಗ್ರಂಥದಲ್ಲಿ 'ಮಲೆಕುಡಿಯರು ಹೊಸ ಜೀವನಕ್ಕೆ ಕಾಲಿಟ್ಟಾಗ ಸಹಾಯ ಮಾಡಲೆಂದು ಸೂಕ್ತ ಧನರಾಶಿಯನ್ನು ಕೊಡುತ್ತಿದ್ದರು. ಇದನ್ನು ಮುಂದೆ ಕಡ್ಡಾಯವಾಗಿ ನೀಡಬೇಕೆಂದುಕೊಂಡಿದ್ದರು. ಇವರು ವಿಚ್ಛೇದನ ಪಡೆಯುವ ಹಕ್ಕನ್ನು ಜಾರಿಗೆ ತಂದರು. ಗಂಡ ಹೆಂಡತಿಯರಲ್ಲಿ ಪರಸ್ಪರ ಹೊಂದಾಣಿಕೆ ಇಲ್ಲದ ಸಂದರ್ಭದಲ್ಲಿ ವಿಚ್ಛೇದನ ಪಡೆಯಬಹುದಿತ್ತು. ಹಾಗೆಯೇ ಗಂಡ ಸತ್ತು ಸತಿ ಹಾಗೇ ಉಳಿಯುವುದನ್ನು ಬಿಟ್ಟು ಮರುವಿವಾಹವಾಗಬಹುದೆಂಬ ನೀತಿಯನ್ನು ಕೊಡಗಿನ ಮಲೆಕುಡಿಯ

ಸಮುದಾಯದವರು ಜಾರಿಗೆ ತಂದರು. ಗಂಡ ಸತ್ತ ಮೇಲೆ ಗಂಡನ ತಮ್ಮನ ಜೊತೆಯಲ್ಲಿ ವಿವಾಹವಾಗುವ ಪದ್ಧತಿಯಿತ್ತು."[37]

ಕುಡಿಯರ ಹೆಣ್ಣು ತನಗೆ ಇಷ್ಟವಾದ ಗಂಡನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ಹೊಂದಿದ್ದಳು ಎಂಬುದಕ್ಕೆ ಸಾಕ್ಷಿಯಾಗಿ ಹಲವು ಕತೆಗಳನ್ನು ನಾವು ಉದಾಹರಿಸಬಹುದು. ಇಲ್ಲಿ ನೀಡಲಾಗಿರುವ ಮೌಖಿಕ ಸಾಹಿತ್ಯವು ಹಾಡಿನ ರೂಪದ ಕತೆ. ಇದನ್ನು ಹಾಡಲೂ ಬಹುದು, ಕತೆಯಂತೆ ಹೇಳಲೂಬಹುದು. ಮದುವೆಯ ವಯಸ್ಸಿಗೆ ಬಂದಿರುವ ಹೆಣ್ಣು ವರನ ಮನೆಯ ಸ್ಥಿತಿಗತಿಯನ್ನು ಕುರಿತು ಈ ಮಾತನ್ನು ಹೇಳುತ್ತಾಳೆ "ಹಿಂದಿನ ಕಾಲದಲ್ಲಿ ಕುಚ್ಚಲಕ್ಕಿ ಅನ್ನಕ್ಕೆ ಕೆಸ ಸೊಪ್ಪಿನ ಸಾರು ಮಾಡುತ್ತಿದ್ದರು. ಅಂತಹ ಮನೆಯ ಹುಡುಗನನ್ನು ನಾನು ಮದುವೆಯಾಗುವುದಿಲ್ಲ ಏಕೆಂದರೆ ಆ ಸಾರು ಚೆನ್ನಾಗಿರುವುದಿಲ್ಲ. ಅಂದರೆ ತವರುಮನೆಯ ಬಡತನದಿಂದ ಬೇಸತ್ತ ಹೆಣ್ಣು ಶ್ರೀಮಂತನನ್ನು ಮದುವೆಯಾಗಿ ಸುಖವಾಗಿ ಬಾಳಲು ಬಯಸುತ್ತಾಳೆ ಹೊರತು ಮತ್ತೆ ಬಡತನ ಬೇಡವೆಂದು ನಿರಾಕರಿಸುತ್ತಾಳೆ. ಮತ್ತು ತನ್ನ ಮನದಿಂಗಿತವನ್ನು ನೇರವಾಗಿ ವ್ಯಕ್ತಪಡಿಸುವಷ್ಟು ಸಮರ್ಥಳಾಗಿದ್ದಾಳೆ.

ಕೇತಂಡ ಚಟ್ಟಿ ಎಂಬುವವನಿಗೆ 300 ಮಾನಿ ಗದ್ದೆಯಿದೆ,
700 ಕಾಲುವೆಯಿಂದ ನೀರನ್ನು ಗದ್ದೆಗೆ ಹಾಯಿಸುತ್ತಾರೆ.
ಅವನನ್ನು ನಾನು ಮದುವೆಯಾಗುತ್ತೇನೆ.
ಆದರೆ ಗದ್ದೆಯೇನೋ ಇದೆ.
ಗದ್ದೆಯಲ್ಲಿ ಹಾವು ಅಡಗಲು ಹುಲ್ಲಿಲ್ಲ,
ಪಕ್ಷಿಗಳು ತಿನ್ನಲು ಭತ್ತವಿಲ್ಲ. ಫಸಲೇ ಇಲ್ಲ
ಆದ್ದರಿಂದ ಅವನನ್ನು ನಾನು ಮದುವೆ ಆಗಲಾರೆ.

ವರನ ಆಯ್ಕೆಯ ಸಂದರ್ಭದಲ್ಲಿ ಹೆಣ್ಣಿನ ಜಾಣತನವು ಆಕೆಯ ಮಾತುಗಳಲ್ಲಿ ವ್ಯಕ್ತವಾಗುತ್ತದೆ. ತಾನು ಮದುವೆಯಾಗ ಬಯಸುವ ಹುಡುಗ ಸ್ಥಿತಿವಂತನಾಗಿರಬೇಕು, ಆದರೆ ಸ್ಥಿತಿವಂತನಾದರೆ ಮಾತ್ರ ಸಾಲದು, ಆತ ಕಷ್ಟಪಟ್ಟು ಕೆಲಸ ಮಾಡುವವನಾಗಿರಬೇಕು. ತನ್ನ ಸಂಸಾರದ ಜವಾಬ್ದಾರಿಯನ್ನು ಸಮರ್ಥವಾಗಿ ನಿಭಾಯಿಸುವವನೂ ಆಗಿರಬೇಕು ಎಂಬುದು ಆಕೆಯ ಆಶಯ. ಅದನ್ನು ಇಲ್ಲಿ ವ್ಯಕ್ತಪಡಿಸುತ್ತಾಳೆ. ಕುಡಿಯ ಹೆಣ್ಣುಮಕ್ಕಳು ಜಾಣೆಯರು. ಹಾಗೆಯೇ ಗಂಡಿನ ಆಯ್ಕೆಯಲ್ಲಿ ಬಹಳ ಎಚ್ಚರಿಕೆಯಿಂದ ವರ್ತಿಸುತ್ತಿದ್ದರು ಎಂಬುದಕ್ಕೆ ನಿದರ್ಶನ ಈ ಹಾಡಿನ ರೂಪದ ಕತೆ.

**ಒಲ್ಲದ ಗಂಡನೊಂದಿಗೆ ಜೀವನ ಸಾಗಿಸಲಾರದ ಹೆಣ್ಣುಮಗಳ ಹಾಡು**

ಗದ್ದೆಯ ಏರಿಯ ಬಳಿ ಹೋಗುತ್ತಿರುವುದು ಯಾರು?
ಅದು ಅಕ್ಕನ ಗಂಡ ಭಾವ.
ಕೆಳಗಿನ ದಾರಿಯಲ್ಲಿ ಹೋಗುತ್ತಿರುವುದು ಯಾರು?
ಅದು ತಂಗಿಯ ಗಂಡ ಮೈದುನ
ಭಾವ ಗಟ್ಟಿಮುಟ್ಟಾಗಿಲ್ಲ ಮೈಕ್ಕೆ ಬಲಿಷ್ಠವಾಗಿಲ್ಲ.
ಮೇಲಿನ ಗದ್ದೆಯಲ್ಲಿ ಹೋಗುವವರಾರು?

ಅದು ತಂಗಿಯ ಗಂಡ ವಿದ್ಯಾವಂತ ಆದುದರಿಂದ ಅವರೊಡನೆ ಮಾತಾಡಬಹುದು. ತಂಗಿಯ ಗಂಡನೊಡನೆ ಕೂಡಿ ಮಾತಾಡುವ.

ಕೊಲು ಕೊಡೆಯನ್ನು ಇಟ್ಟು ತಾಂಬೂಲದ ಚೀಲದಿಂದ ತಾಂಬೂಲ ತಿಂದು ಒಳ್ಳೆ ಮಾತಾಡುವ ಎನ್ನುತಾಳೆ.

ತಾಂಬೂಲ ತಿಂದು ಮಾತುಕತೆ ಆದ ನಂತರ ಇಬ್ಬರೂ ಕೂಡಿ

ಸುಖವಾಗಿ ಬದುಕೋಣ ಎನ್ನುತ್ತಾಳೆ.

ಈ ಹಾಡು ಕುಡಿಯರ ಹೆಣ್ಣಿನ ಲೈಂಗಿಕ ಸ್ವಾತಂತ್ರ್ಯವನ್ನು ಕುರಿತದ್ದಾಗಿದೆ. ತಾನು ಮದುವೆಯಾದ ಗಂಡನಿಂದ ತನಗೆ ಸಂತೃಪ್ತಿಯಿಲ್ಲ ಎಂದ ಸಂದರ್ಭದಲ್ಲಿ ಹೆಣ್ಣು ಬೇರೆ ಗಂಡಿನಲ್ಲಿ ಅನುರಕ್ತಳಾಗುವ ಆತನನ್ನು ಒಲಿಸಿಕೊಳ್ಳಲು ಕಾತರಿಸುವ ಸಾಲುಗಳಿಂದ ಬುಡಕಟ್ಟು ಸಮಾಜವು ಮಹಿಳೆಯರನ್ನು ಎಂದೂ ಕಟ್ಟುಪಾಡಿನ ಬಂದನದಲ್ಲಿ ಬಂದಿಸಿರಲಿಲ್ಲ ಎಂಬುದು ತಿಳಿದುಬರುತ್ತದೆ. ಆಕೆಗೆ ಆಯ್ಕೆಯ ಸ್ವಾತಂತ್ರ್ಯವನ್ನು ನೀಡಿತ್ತು ಮತ್ತು ಅದನ್ನು ಗೌರವಿಸುತ್ತಿತ್ತು. ಆದ್ದರಿಂದಲೇ ಆಕೆ ಅಷ್ಟು ಮುಕ್ತವಾಗಿ ತನ್ನ ಬಯಕೆಯನ್ನು ಹಂಚಿಕೊಳ್ಳಲು ಸಾಧ್ಯವಾಯಿತು ಎಂಬುದು ವಿಶೇಷವಾಗಿದೆ. ಹಿಂದೆ ಕುಡಿಯರಲ್ಲಿ ಅಣ್ಣ ತೀರಿ ಹೋದರೆ ಆತನ ಹೆಂಡತಿಯನ್ನು ತಮ್ಮನಿಗೆ ವಿವಾಹ ಮಾಡಿಕೊಡುವ ಪದ್ಧತಿ ಚಾಲ್ತಿಯಲ್ಲಿತ್ತು. ವಿಧವಾವಿವಾಹವನ್ನು ಸಮಾಜ ಪುರಸ್ಕರಿಸಿತ್ತು ಮತ್ತು ತಾನೇ ಮುಂದೆ ನಿಂತು ಅದನ್ನು ನೆರವೇರಿಸುತ್ತಿತ್ತು. ಕುಡಿಯ ಸಮುದಾಯವು ಮನುಷ್ಯಪರ ಮತ್ತು ಜೀವಪರವಾದ ಆಚರಣೆಗಳನ್ನು ಹೊಂದಿತ್ತು ಮತ್ತು ಅದನ್ನು ಪಾಲಿಸುತ್ತಿತ್ತು.

ಉಳಿದ ಬುಡಕಟ್ಟು ಸಮುದಾಯದಲ್ಲಿ ಹೆಚ್ಚಿನ ಪಾಲು ಮೌಖಿಕ ಸಾಹಿತ್ಯವು ಗಂಡಿನದ್ದಾಗಿದ್ದರೆ. ಕುಡಿಯರಲ್ಲಿ ಹೆಚ್ಚಿನಂಶ ಮೌಖಿಕ ಸಾಹಿತ್ಯವು ಮಹಿಳೆಯರದ್ದಾಗಿದೆ. ಇಲ್ಲಿ

ಹಾಡುವವರು, ನರ್ತಿಸುವವರು, ದುಡಿ ಬಾರಿಸುವವರೂ ಎಲ್ಲರೂ ಹೆಣ್ಣುಮಕ್ಕಳೇ ಹಾಗೆಯೇ ಗಂಡಸರದೂ ಕೂಡ ಇಲ್ಲಿ ಸಮಾನ ಸಹಭಾಗಿತ್ವವಿದೆ. ಕುಡಿಯರ ಮದುವೆಯ ಆಚರಣೆಯಲ್ಲಿ ಹೆಣ್ಣನ್ನು ಒಪ್ಪಿಸುವಾಗ ಹೆಣ್ಣಿನ ಕಡೆಯ ಗುರಿಕಾರ ನಮ್ಮ ಹೆಣ್ಣುಮಗು ಸಣ್ಣ ಪ್ರಾಯದವಳು ಬುದ್ಧಿ ತಿಳಿಯದ ಸಣ್ಣ ಪ್ರಾಯದವಳು, ಅವಳನ್ನು ನಿಮ್ಮ ಮಗಳಾಗಿ ನೋಡಿಕೊಳ್ಳಿ ಎಂದು ಮದುಮಗಳನ್ನು ಗಂಡಿನ ಮನೆಯವರಿಗೆ ಒಪ್ಪಿಸುತ್ತಾನೆ. ಇಲ್ಲಿ ಹೆಣ್ಣು ಗಂಡಿಗಿಂತ ಕೆಳದರ್ಜೆಯವಳೆಂಬ ಭಾವನೆಯಿಲ್ಲ. ಕುಡಿಯರಲ್ಲಿ ಇಂದಿಗೂ ಮಹಿಳೆಯೇ ಕುಟುಂಬದ ಮುಖ್ಯಸ್ಥೆ. ಇಲ್ಲಿ ಹೆಣ್ಣು ಕೂಡ ಗಂಡಿನಂತೆಯೇ ಮನೆಯ ಸಮಸ್ತ ವ್ಯವಹಾರಗಳಿಗೆ ಬಾಧ್ಯಸ್ಥಳು. ಕುಟುಂಬ ನಿರ್ವಹಣೆಗೆ ಗಂಡು ಹೆಣ್ಣು ಸಮಾನವಾಗಿ ದುಡಿಯುತ್ತಾರೆ. ಕುಡಿಯರ ಆರಾಧ್ಯ ದೈವಗಳಲ್ಲಿ ಪನ್ನಂಗಾಲ ತಮ್ಮೆಯು ಒಬ್ಬಳು. ಮಾತೃದೇವಾರಾಧನೆಯ ಪ್ರತೀಕವಾಗಿ ಪನ್ನಂಗಾಲ ತಮ್ಮೆಯನ್ನು ಪೂಜಿಸುತ್ತಾರೆ. ಕಥೆ ಹೀಗಿದೆ, 'ಕಾಇರಾಟಪ್ಪ, ತಿರ್‌ಚಂಬರತಪ್ಪ, ಬೆಂದ್ರುಕೋಲಪ್ಪ, ಇಗ್ಗುತಪ್ಪ, ಪಾಲೂರಪ್ಪ, ತಿರುನೆಲ್ಲಿ ಪೆಮ್ಮಯ್ಯರೆಂಬ ಸೋದರರಿಗೆ ಪನ್ನಂಗಾಲ ತಮ್ಮೆ ಏಕೈಕ ಸೋದರಿ. ಈಕೆ ಅಪಾರ ಬುದ್ಧಿವಂತೆ. ತನ್ನ ಆರೂ ಜನ ಅಣ್ಣಂದಿರೊಡನೆ ಪನ್ನಂಗಾಲ ತಮ್ಮೆಯು ಕೇರಳದಿಂದ ಕೊಡಗಿನೆಡೆಗೆ ಬರುತ್ತಿರುವಾಗ ಕಾಡಿನ ಮದ್ಯೆ ಅವರಿಗೆ ಬಾಯಾರಿಕೆ ಯಾಗುತ್ತದೆ. ಆಗ ಅಲ್ಲಿದ್ದ ಮಲೆಕುಡಿಯರು ಅವರನ್ನು ಉಪಚರಿಸಿ ಬೈನೆ ಮರದ ಸೇಂದಿಯನ್ನು ಕುಡಿಯಲು ಕೊಡುತ್ತಾರೆ. ಆದರೆ ಆ ಆರೂ ಜನ ಅಣ್ಣಂದಿರು ಅದನ್ನು ಕುಡಿಯದೆ, ಕುಡಿದಂತೆ ನಟಿಸುತ್ತಾರೆ. ಆದರೆ ಪನ್ನಂಗಾಲ ತಮ್ಮೆ ಅದನ್ನು ಇಷ್ಟಪಟ್ಟು ಕುಡಿಯುತ್ತಾಳೆ. ನಂತರ ಅವರಲ್ಲಿ ನಾಲ್ಕನೆಯವನಾದ ಇಗ್ಗುತಪ್ಪನು 'ನಾವು ದೇವಮಾನವರು, ಆದರೆ ನೀನು ಈ ಸೇಂದಿ ಕುಡಿದು ಮೈಲಿಗೆ ಮಾಡಿಕೊಂಡಿರುವೆ. ಆದ್ದರಿಂದ ನೀನು ದೈವತ್ವಕ್ಕೆ ಏರಲು ಅನರ್ಹಳು' ಎಂದು ಹೇಳಿ ನೀನು ಮೈಲಿಗೆಯಾಗಿದ್ದೀಯ ಇನ್ನು ಮುಂದೆ ನಿನಗೆ ಬ್ರಾಹ್ಮಣರ ದೇವತೆಯಾಗಿರಲು ಅರ್ಹತೆಯಿಲ್ಲ. ನೀನು ಕೆಳಜಾತಿಯ ದೇವರಾಗು ಎಂದು ಬಹಿಷ್ಕರಿಸುತ್ತಾರೆ. ಅಂತೆಯೇ ಇಂದಿಗೂ ಪನ್ನಂಗಾಲ ತಮ್ಮೆಯನ್ನು ಪೂಜಿಸುವವರು ಕುಡಿಯ, ಫಣಿಯ, ಕೆಂಬಟ್ಟಿ ಮೊದಲಾದ ಕೆಳವರ್ಗಗಳು. ಪನ್ನಂಗಾಲ ತಮ್ಮೆ ಕೊಡಗಿನ ಶ್ರೇಣೀಕರಣ ವ್ಯವಸ್ಥೆಯಲ್ಲಿ ಬುಡಕಟ್ಟುಗಳ, ದಲಿತರ ದೈವವಾದರೆ ಉಳಿದ ಸಹೋದರರು ಪ್ರಬಲ ವರ್ಗಗಳ, ಭೂಹಿಡುವಳಿದಾರರ ದೇವತೆಗಳಾಗಿದ್ದಾರೆ. ಒಬ್ಬ ಹೆಣ್ಣು ತನಗಿಂತ ಬುದ್ಧಿವಂತಳಾಗಿರುವುದನ್ನು ಸಹಿಸದ ಪುರುಷ ಸಮಾಜಕ್ಕೆ ಹಿಡಿದ ಕನ್ನಡಿಯಂತಿದೆ ಈ ಕತೆ. ಕ್ಷುಲ್ಲಕ ನೆಪವನ್ನು ಒಡ್ಡಿ ಪನ್ನಂಗಾಲ ತಮ್ಮೆಯನ್ನು ಜಾತಿಭ್ರಷ್ಟಳನ್ನಾಗಿಸುವುದು ಮತ್ತು

ಅವಳ ಸ್ಥಾನವನ್ನು ಕಡೆಗಣಿಸುವ ಮೂಲಕ ಕೆಳಜಾತಿಗಳ ದೇವತೆಯಾಗಿ ಬಿಂಬಿಸುವುದು ಪುರುಷವ್ಯವಸ್ಥೆಗೆ ಸಾಕ್ಷಿಯಾಗಿದೆ. ಹೆಣ್ಣು ಎಂಬ ಕಾರಣಕ್ಕೆ ಕೆಳಜಾತಿ ಮತ್ತು ಕೆಳವರ್ಗದ ದೇವತೆಯಾಗಿಯೂ ಗಂಡೆಂಬ ಕಾರಣಕ್ಕೆ ಮೇಲ್ಜಾತಿ ಮೇಲ್ವರ್ಗದ ದೇವರುಗಳಾಗಿ ಪೂಜಿಸಲ್ಪಡುವುದು, ಹೆಣ್ಣು ಎಷ್ಟೇ ಬುದ್ಧಿವಂತಳಾದರೂ ಕೂಡ ಗಂಡಿನ ಸರಿಸಮಾನಳಾಗಿ ಸ್ಥಾನಮಾನಗಳನ್ನು ಪಡೆಯಲು ಅರ್ಹಳಲ್ಲ ಎಂಬ ಸಮಾಜದ ಸುಪ್ತ ಆಲೋಚನೆಗಳು ಪನ್ನಂಗಾಲ ತಮ್ಮೆಯ ಕತೆಯಲ್ಲಿ ವ್ಯಕ್ತವಾಗಿದೆ. ಅಂತೆಯೇ ಬುಡಕಟ್ಟು ದೈವಾರಾಧನೆಯಲ್ಲಿ ಪನ್ನಂಗಾಲ ತಮ್ಮೆ ಕೆಳವರ್ಗದ ದೇವತೆಯಾಗಿ ಉಳಿದು ಬಂದಿದ್ದಾಳೆ.

## 5.3. ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಭೂಮಿಯ ಸೃಷ್ಟಿ ಮತ್ತು ಮನುಷ್ಯನ ಸೃಷ್ಟಿ

ಒಮ್ಮೆ ಎರವರ ದೇವರುಗಳಾದ ಆರ್ಯೆ ಮತ್ತು ಬಾಣ್ಯೆಯರು ಓಲೆಮರಗಳನ್ನು ಬೆಳೆಸಿ ಸಕಲ ಮಾನವ ಜನಾಂಗಕ್ಕೆ ವಿದ್ಯೆಯನ್ನು ಹಂಚಬೇಕೆಂಬ ಸಂದೇಶವಿದ್ದ ಕನಸನ್ನು ಕಂಡರು. ಅದಕ್ಕಾಗಿ ಓಲೆಮರಗಳನ್ನು ಬೆಳೆಸಲು ಇಚ್ಛಿಸಿದರು. ಆದರೆ ಆ ಸಂದರ್ಭದಲ್ಲಿ ಇಡೀ ಭೂಮಿ ಕೆಸರಿನಿಂದ ಕೂಡಿತ್ತು. ಹೀಗೆ ಕೆಸರಿನಿಂದ ಕೂಡಿದ ಭೂಮಿಯನ್ನು ಗಟ್ಟಿ ಮಾಡಲು ಈ ಸಹೋದರರು ಎರವರ ದೈವಗಳಾದ ಭೂಮಿತಾಯಿಯಾದ ಪೂಮಿ–ಮಚುಣಿ, ತಿರ್ನೆಲ್ಲಿ ಪೆರುಮಾಳ, ಪೂಕರಿಮಗೆ ಕರಿಯಪ್ಪ ಮೊದಲಾದ ದೇವರುಗಳನ್ನು ಪ್ರಾರ್ಥಿಸಿ ಓಲೆಮರ ಬೆಳೆಸಲು ಭೂಮಿಯನ್ನು ಗಟ್ಟಿ ಮಾಡಿ ಕೊಡಿ ಎಂದು ಬೇಡಿಕೊಂಡರು. ಆದರೆ ಅವರೆಲ್ಲರೂ ಈ ಕೆಲಸ ತಮ್ಮಿಂದಾಗದು ಎಂದು ಕೈಚೆಲ್ಲುತ್ತಾರೆ. ಕೊನೆಗೆ ಭೂಮಿತಾಯಿಯಾದ ಪೂಮಿ ಮಚುಣಿಯ ಬಳಿಗೆ ತೆರಳಿ ಏನಾದರೂ ಪರಿಹಾರ ಮಾಡು ಎಂದು ಕೇಳಿಕೊಂಡಾಗ ಆಕೆ ಕೆಸರಿನಲ್ಲಿ ಸೇರಿಕೊಂಡಿರುವ ನೀರನ್ನು ತೋಡಿ ತೆಗೆದರೂ ಕೂಡ ಭೂಮಿ ಗಟ್ಟಿಯಾಗಲಿಲ್ಲ. ನಂತರ ಅವರು 'ಕರಿಬತ್ತಯ್ಯ'ನ ಕೋಟೆಗೆ ಹೋಗಿ ಭೂಮಿಯೆಲ್ಲ ಕೆಸರಿನಿಂದ ಕೂಡಿದೆ ಅದನ್ನು ಗಟ್ಟಿ ಮಾಡಲು ಏನಾದರೂ ಪರಿಹಾರ ಸೂಚಿಸು ಎಂದು ಕೇಳಿಕೊಳ್ಳುತ್ತಾರೆ. ಆಗ ಕರಿಬತ್ತಯ್ಯನು ತನ್ನ ಬಳಿಯಿದ್ದ ಮಣ್ಣು ಬೀಜ, ಹುಲ್ಲು ಬೀಜ, ಬಿದಿರು ಬೀಜ, ಮಾನಿಹುಲ್ಲಿನ ಬೀಜ ಮೊದಲಾದ ಬಗೆ ವಿವಿಧ ಬಗೆಯ ಬೀಜಗಳನ್ನು ಕೊಟ್ಟು ಕಳಿಸುತ್ತಾನೆ. ಅಂತೆಯೇ ಅದನ್ನು ತಂದು ಕೆಸರಿನ ಮಣ್ಣಿನಲ್ಲಿ ಬಿತ್ತುತ್ತಾರೆ. ಆ ಬೀಜಗಳಿಂದ ಗಿಡಗಳು, ಹುಲ್ಲು, ಬಿದಿರು ಹುಟ್ಟಿ ಬೆಳೆದವು. ಭೂಮಿಯು ಗಟ್ಟಿಯಾಯಿತು. ಅನಂತರ ಈ ಭೂಮಿಯ ಕಾವಲಿಗೆ ಏನಾದರೂ ಇರಬೇಕೆಂದು ಇರುವೆ, ನಲ್ಲಿ, ಮೀನು, ಹಾವು, ಚೇಳು, ಚಿಟ್ಟೆ, ಪಶು, ಪಕ್ಷಿ ಸಕಲ ಜೀವರಾಶಿಗಳನ್ನು ಸೃಷ್ಟಿಸಿ ಭೂಮಿಗೆ ನೀವು ಸದಾ ಕಾವಲಿರಿ ಎಂದು ನಿಯಮಿಸುತ್ತಾರೆ.

ಅಂತೆಯೇ ಭೂಮಿ ಮೇಲೆ ಹುಲ್ಲು, ಗಿಡ, ಬಿದಿರು ಮೊದಲಾದ ಸಸ್ಯಸಂಕುಲವೂ ಹಾವು ಚೇಳು, ಪಶು ಪಕ್ಷಿ ಮೀನು ಮೊದಲಾದ ಪ್ರಾಣಿಸಂಕುಲವು ಹುಟ್ಟಿತೆಂದು ಎರವರ ಪುರಾಣವು ಹೇಳುತ್ತದೆ.

## ಎರವರ ಮೌಖಿಕ ಸಾಹಿತ್ಯದಲ್ಲಿ ಭೂಮಿ ಮತ್ತು ಮನುಷ್ಯನ ಸೃಷ್ಟಿ

ಈ ಪ್ರಪಂಚದಲ್ಲಿರುವ ಪ್ರತಿಯೊಂದು ಬುಡಕಟ್ಟುಗಳೂ ಸಹ ಈ ಭೂಮಿಯ ಮೇಲೆ ಮನುಷ್ಯನ ಸೃಷ್ಟಿ ತಮ್ಮಿಂದಲೇ ಆಯಿತು ಮತ್ತು ಈ ಭೂಮಿಗೆ ನಾವೇ ಮೊದಲಿಗರು ಎಂದು ಪ್ರತಿಪಾದಿಸುತ್ತಾರೆ. ಅದಕ್ಕೆ ಪೂರಕವಾಗಿ ತಮ್ಮ ಸಮುದಾಯಕ್ಕೆ ಸಂಬಂಧಿಸಿದ ಕತೆಗಳು, ಐತಿಹ್ಯಗಳು, ಪುರಾಣಗಳ ನಿದರ್ಶನವನ್ನು ಒದಗಿಸುತ್ತಾರೆ. ಅಂತೆಯೇ ಎರವರೂ ಕೂಡ ತಮ್ಮ ಸಮುದಾಯದ ಉಗಮವನ್ನು ಕುರಿತು ಹೇಳುವ ಇವರ ಸೃಷ್ಟಿಪುರಾಣದಲ್ಲಿ ಇದನ್ನು ಅತ್ಯಂತ ಸ್ವಾರಸ್ಯಕರವಾಗಿ ಪ್ರತಿಪಾದಿಸುತ್ತಾರೆ. ಎರವರ ಮೌಖಿಕ ಸಾಹಿತ್ಯದ ಪ್ರಕಾರ ಕೇರಳದ ವೈನಾಡಿಯಲ್ಲಿರುವ 'ತಿರುನೆಲ್ಲಿ' ಎಂಬ ಪುಣ್ಯಕ್ಷೇತ್ರವು ಎರವರ ಉಗಮ ಸ್ಥಾನ. ಅಲ್ಲಿರುವ ಕಂಡಪಳ್ಳಿ ಕೋಟೆಯನ್ನು ಕಟ್ಟಿಸಿದ 'ಕಾರು ಮಚುಣಿ ಮತ್ತು ಬೆಳ್ಳಿ ಮಚುಣಿ' ಸೋದರಿಯರು ತಮಗೆ ಮಕ್ಕಳಿಲ್ಲದ ಕಾರಣ. ಆರ್ಯ–ಬಾಣ್ಯೆಯರನ್ನು ಕದ್ದು ತಂದು ಪೋಷಿಸುತ್ತಾರೆ. ಆ ಮಕ್ಕಳು ಬೆಳೆದು ದೊಡ್ಡವರಾಗಿ ಆ ಪ್ರದೇಶವನ್ನು ಆಳುತ್ತಿದ್ದಾಗ ಈ ಭೂಮಿ ಮೇಲೆ ಮನುಷ್ಯರನ್ನು ಸೃಷ್ಟಿಸಬೇಕು ಎಂಬ ಬಯಕೆಯಿಂದ ಭೂಮಿಯ ಮೇಲೆ ಮಾನವರನ್ನು ಸೃಷ್ಟಿಸುವ ವರವನ್ನು ದೇವರಿಂದ ಪಡೆಯುತ್ತಾರೆ. ಅದಕ್ಕಾಗಿ ಜೇಡಿಮಣ್ಣಿನಿಂದ ಮಾನವರ ಗೊಂಬೆಗಳನ್ನು ಮಾಡುತ್ತಾರೆ. ಅದಕ್ಕೆ ಎಲ್ಲ ದೇವರುಗಳು ಒಂದೊಂದು ಅಂಗಗಳನ್ನು ಸೃಷ್ಟಿಸುತ್ತಾರೆ. ಆದರೆ ಬೊಂಬೆಗಳ ಬಾಯಿ ನೆತ್ತಿಯ ಮೇಲಿದ್ದು ಚಲನೆಯೇ ಇಲ್ಲದಿದ್ದಾಗ ಉಗ್ರುಥೆಯ್ಯನೆಂಬ ದೇವರನ್ನು ಪ್ರಾರ್ಥಿಸುತ್ತಾರೆ. ಉಗ್ರುಥೈಯ್ಯನು ಅವಕ್ಕೆ ಜೀವ ಕೊಡುತ್ತಾನೆ. ಅದರಂತೆ ಅವರು ಕಂಡಪಳ್ಳಿ ಕೋಟೆಯಿಂದ ಸುಮಾರು 5–6 ಮೈಲಿ ದೂರದಲ್ಲಿರುವ ಕುದ್ರಕೋಟೆಯಲ್ಲಿ ಆ ಗೊಂಬೆಗಳನ್ನು ಮಾಡಿಸುತ್ತಾರೆ. ಗೊಂಬೆಗಳಾದ ಮೇಲೆ ಅವು ಜೀವವಿದ್ದರು ಚಲಿಸದೆ ಇರುತ್ತವೆ. ಕೊಡಗಿನ ಮಾಳಿ(ಮಹಾಕಾಳಿ) ಎಂಬ ದೇವತೆ ಆ ಗೊಂಬೆಗಳ ನಡುವೆ ಕೆನ್ನಾಲಿಗೆ ಚಾಚಿಕೊಂಡು ಬಿರುಗಾಳಿಯಂತೆ ನುಗ್ಗುತ್ತಾಳೆ. ಆಗ ಆ ಗೊಂಬೆಗಳು ಹೆದರಿ ಚೆಲ್ಲಾಪಿಲ್ಲಿಯಾಗಿ ಕಾಪಾಡಿಕೊಂಡು ಓಡಿಹೋಗುತ್ತವೆ. ಆಗ ಆರ್ಯ ಬಾಣ್ಯೆಯರು ಆ ಮಹಾಕಾಳಿಯನ್ನು ಸಮಾಧಾನಪಡಿಸುತ್ತಾರೆ. ಆ ಗೊಂಬೆಗಳ ಚಲನವಲನಗಳಿಗೆ ಅನುಗುಣವಾಗಿ ಅವುಗಳಿಗೆ ಜಾತಿಸೂಚಕ ಹೆಸರುಗಳನ್ನು ಕೊಡುತ್ತಾರೆ. ಆ ಜಾಗದಲ್ಲಿ ಎರವರು ಜನ್ಮ ತಾಳಿದವರೆಂದು ಇವರ ನಂಬಿಕೆ ಈ ಸ್ಥಳವನ್ನು ಇವರು 'ಪಗಮಾರು ತಿಲೆ ಮುತ್ತತಿ'

ಎಂದು ಕರೆಯುತ್ತಾರೆ. 'ಪಗಮಾರು ತಿಲೆ ಮುತ್ತಿ' ಅಥವಾ ಕುದ್ರಕೋಟೆಯಲ್ಲಿ ಹುಟ್ಟಿದ ಎರವರ 'ಮೇಲರಚ್ಚೆ'(ಗಂಡು) 'ಕಿಯೊರಿತ್ತಿ'(ಹೆಣ್ಣು) ಹುಟ್ಟುವಾಗ ಅಣ್ಣತಂಗಿಯಾಗಿ ಬೆಳೆದು ಯೌವ್ವನ ಪ್ರಾಪ್ತವಾದಾಗ ಸತಿಪತಿಗಳಾದರು. ಅವರೇ ಎರವರ ಮೂಲ ಗಂಡು ಹೆಣ್ಣುಗಳು. ಎರವರ ಆದಿದಂಪತಿಗಳೂ ಹೌದು.

ಮತ್ತೊಂದು ಕತೆಯ ಪ್ರಕಾರ ಬಲನಾಡಿನಲ್ಲಿ ಆಕಾಶ ಮತ್ತು ಭೂಮಿಗಳು ಒಂದರ ಮೇಲೊಂದು ಅಪ್ಪಿಕೊಂಡಿದ್ದವು ಅದನ್ನು ಬೇರ್ಪಡಿಸುವ ಸಲುವಾಗಿ ಬೈನಾಡಪ್ಪ ಮತ್ತು ನೂರನಾಲ್ಕು ದಯ್ಯಗಳು ಒಂದು ಚಿನ್ನದ ಹಾರೆಯಿಂದ ಒಂದು ಏಟು ಹೊಡೆಯುತ್ತಾರೆ. ಆಗ ಭೂಮಿ ಮತ್ತು ಆಕಾಶಗಳು ಬೇರ್ಪಟ್ಟು ಆಕಾಶವು ಅರ್ಧಗಾವುದ ಮೇಲೆ ಹೋಯಿತು. ಭೂಮಿ ನಿಂತಲ್ಲೇ ಇತ್ತು. ಮತ್ತೊಮ್ಮೆ ಎರಡನೆಯ ಏಟು ಹಾಕಿದಾಗ ಆಕಾಶ ಮೇಲಕ್ಕೆ ಹಾರಿಹೋಗತೊಡಗಿತು ಭೂಮಿ ತತ್ತರಿಸತೊಡಗಿತು. ಅದನ್ನು ನೋಡಿ ಇದನ್ನು ತಡೆಯುವ ಸಲುವಾಗಿ ಕಲ್ಲಿನಲ್ಲಿ ಒಂಬತ್ತು ಶಾಸನಗಳನ್ನು ಕೆತ್ತಿಸಿದರು. ಆದರೂ ಭೂಮಿ ಕಂಪಿಸುತ್ತಲೇ ಇತ್ತು. ಆಕಾಶ ಇನ್ನೂ ಮೇಲೆ ಮೇಲೆ ಹೋಗತೊಡಗಿತು. ಆಗ ಚಿಂತಿತರಾದ ಬೈನಾಡಪ್ಪ ಮತ್ತು ನೂರನಾಲ್ಕು ದಯ್ಯಗಳು ಹೇಗಾದರೂ ಇದನ್ನು ತಡೆಯಬೇಕೆಂದು ಯೋಚಿಸಿ, ಚಾತಂಗೋಟ್ಟು ಕೋಟೆಯಲ್ಲಿ ವಾಸವಿದ್ದ ಮಾಟಗಾತಿಯ ಬಳಿಗೆ ಹೋಗುತ್ತಾರೆ. ಆಕೆಯ ಹೆಸರು 'ಚಾತ್ತಂಗೋಟ್ಟು ಮುತ್ತಿ'. ಆಕೆ ಪಕ್ಷಿಯ ರೂಪದಲ್ಲಿದ್ದಳು. ಬೈನಾಡಪ್ಪ ಮತ್ತು ಇತರರು ಅವಳ ಬಳಿ ಹೋಗಿ ನಡೆದ ವಿಚಾರವನ್ನೆಲ್ಲ ತಿಳಿಸಿ ಹೇಗಾದರೂ ಮಾಡಿ ಆಕಾಶ ಹಾರುವುದನ್ನು ಭೂಮಿ ಕಂಪಿಸುವುದನ್ನು ನಿಲ್ಲಿಸು ಎನ್ನುತ್ತಾರೆ. ಆ ಸಮಯದಲ್ಲಿ ಆಕೆ ಮೂರು ಕಡ್ಡಿಗಳನ್ನು ತ್ರಿಕೋನಾಕಾರದಲ್ಲಿ ಆನಿಸಿ ನಿಲ್ಲಿಸಿ ಅದರ ಮೇಲೆ ಮೂರು ಮೊಟ್ಟೆಯನ್ನು ಇಟ್ಟಿರುತ್ತಾಳೆ. ಅವಳ ತಲೆ ಅಡಿಕೆ ಕಾಯಿಯಂತೆಯೂ ಕೈ ಕಾಲು ಏಡಿಯ ಕಾಲುಗಳಂತೆಯೂ ಬಾಗಿ ಸೊಟ್ಟಗಾಗಿದ್ದವು. ಅವಳ ಮಾತಿನಂತೆ ಬೈನಾಡಪ್ಪ ಮತ್ತು ನೂರನಾಲ್ಕು ದಯ್ಯಗಳು ಕತ್ತಿಯಿಂದ ಒಂದು ಮೊಟ್ಟೆ ಹೊಡೆದಾಗ ಹುಲ್ಲುಗಾವಲು, ಗಿಡಮರಗಳು ಸೃಷ್ಟಿಯಾದವು. ಎರಡನೇ ಮೊಟ್ಟೆ ಹೊಡೆದಾಗ ಅದರಿಂದ ಹಲವು ಜಾತಿಗಳು, ನಲವತ್ತೆಂಟು ಕುಲಗಳು, ತೆವಳುವ ಹಾವು, ಹಾರುವ ಹಕ್ಕಿ, ಎಲ್ಲವೂ ಸೃಷ್ಟಿಯಾದವು. ಮೂರನೆಯ ಮೊಟ್ಟೆ ಹೊಡೆದಾಗ ಚಾತ್ತಂಗೊಟ್ಟು, ಮುತ್ತಿಯು ಉರಿಯುವ ಸೂರ್ಯನಂತೆ ಮೇಲೆದ್ದು ಹಾರಿ ಕೋಲಪ್ಪ ನಾಡಿನ ಕಮ್ಮಾರನ ಕುಲುಮೆಯ ಮಸಿ ತೆಗೆದುಕೊಂಡು ಕೆಳಭಾಗವನ್ನು ಕುಕ್ಕಿ ಮೇಲುಭಾಗವನ್ನು ಹಿಡಿದು ಚಾತ್ತಂಗೊಟ್ಟು ಕೋಟೆಯ ಮೇಲಿನ ಕಲ್ಲಿನ ಮೇಲೆ ಹಾರಿ ಕುಳಿತು, ನಾಲ್ಕು ದಿಕ್ಕಿಗೂ ನಾಲ್ಕು ಬಾರಿ ಕುಕ್ಕಿ ನಾಲ್ಕು ಸುತ್ತು ಹಾರಿ ಬಂದಾಗ ಆಕಾಶ ಹಾರುವುದು ನಿಲ್ಲಿಸಿತು. ಭೂಮಿ

ಅದುರುವುದು ನಿಲ್ಲಿಸಿತು.

## ಜೇನುಕುರುಬರ ಮೌಖಿಕ ಸಾಹಿತ್ಯದಲ್ಲಿ ಭೂಮಿ ಮತ್ತು ಮನುಷ್ಯನ ಸೃಷ್ಟಿ

ಈ ಪ್ರಪಂಚವು ಸಂಪೂರ್ಣವಾಗಿ ಜಲಾವೃತವಾಗಿದ್ದ ಸಂದರ್ಭದಲ್ಲಿ ಒಂದು ಕಹಿ ಸೋರೆ ಬುರುಡೆಯು ನೀರಿನಲ್ಲಿ ತೇಲುತ್ತಾ ಬಂದಿತು. ಹಾಗೆ ಅದು ಅಂಗೈ ಅಗಲದ ಭೂಮಿಯ ಮೇಲೆ ಕುಳಿತಿತು. ಆ ಸೋರೆ ಬುರುಡೆಯಿಂದ ಅಣ್ಣ-ತಂಗಿಯರು ಹೊರ ಬಂದರು. ಅವರಿಬ್ಬರೂ ಅಂಗೈಯಲ್ಲಿ ಮಣ್ಣನ್ನು ತೆಗೆದುಕೊಂಡು ಬಂದು ಅದರಿಂದ ಸಕಲ ಜೀವರಾಶಿಗಳನ್ನು ಸೃಷ್ಟಿಸಿದರು. ಅವರಿಂದಲೇ ಜೇನುಕುರುಬ ಜನಾಂಗ ಹುಟ್ಟಿ ಬೆಳೆಯಿತು ಎನ್ನುವುದು ಜೇನುಕುರುಬರ ಸೃಷ್ಟಿಪುರಾಣ.

## ಬೆಟ್ಟಕುರುಬರ ಮೌಖಿಕ ಸಾಹಿತ್ಯದಲ್ಲಿ ಭೂಮಿ ಮತ್ತು ಮನುಷ್ಯನ ಸೃಷ್ಟಿ

ಬೆಟ್ಟಕುರುಬರ ಬಿಂಜೆ ಪದ್ಯ (ದೇವರನ್ನು ಕರೆಯುವ ಪದ್ಯ)ದಲ್ಲಿ ಈ ಭೂಮಿಯ ಸೃಷ್ಟಿಯ ಕುರಿತು ಹೇಳುತ್ತಾರೆ. ಬಹಳ ಹಿಂದೆ ಈ ಭೂಮಿಯ ಮೇಲೆ ಯಾವುದೇ ಜೀವರಾಶಿಗಳೂ ಇಲ್ಲದಿದ್ದಾಗ ಜಲಪ್ರಳಯವಾಗುತ್ತದೆ. ಆಗ ಆ ನೀರಿನಲ್ಲಿ ಒಂದು ಸೋರೆಕಾಯಿ ತೇಲಿಕೊಂಡು ಬಂದು ಸ್ವಲ್ಪ ಮಣ್ಣು ಇರುವ ಜಾಗದಲ್ಲಿ ನಿಲ್ಲುತ್ತದೆ. ಅದರಲ್ಲಿ ಕ್ರಿಮಿಕೀಟಗಳಂತೆ ಉತ್ಪತ್ತಿಯಾದ ಗಂಡು ಹೆಣ್ಣುಗಳು ಈ ಮನುಷ್ಯ ಸೃಷ್ಟಿಗೆ ಮೂಲ ಕಾರಣಕರ್ತರು. ಅವರಿಂದ ಹುಟ್ಟಿದವರು ಈ ಬುಡಕಟ್ಟುಗಳು. ಮೊದಲ ದಂಪತಿಗಳಿಗೆ ಇಬ್ಬರು ಗಂಡುಮಕ್ಕಳು ಹುಟ್ಟುತ್ತಾರೆ. ಅವರಲ್ಲಿ ಹಿರಿಯವನು ಜೇನುಕುರುಬರ ಅಜ್ಜಯ್ಯ ಅವನ ಸಂತಾನವನ್ನು ಜೇನುಕುರುಬರು ಎಂದು ಕರೆಯುತ್ತಾರೆ. ಅವನ ತಮ್ಮನಿಗೆ ಹುಟ್ಟಿದವರು ಬೆಟ್ಟಕುರುಬರು. ಅನಂತರ ಹುಟ್ಟಿದವರು ಫಣಿ ಎರವರು ಎಂಬುದಾಗಿ ಈ ಬಿಂಜೆ ಪದ್ಯ ಹೇಳುತ್ತದೆ. ಈ ಎಲ್ಲ ಸಮುದಾಯಕ್ಕೆ ಮೂಲ ಒಂದೇ ಮತ್ತು ಇವರೆಲ್ಲ ಸೋದರ ಸಂಬಂದದವರು ಎಂಬುದು ಇವರ ಅಭಿಪ್ರಾಯ.

ಮತ್ತೊಂದು ಕತೆಯ ಪ್ರಕಾರ ಈ ಭೂಮಿಯು ಬರೀ ನೀರಿನಿಂದಲೇ ತುಂಬಿದ್ದು ಒಮ್ಮೆ ನೀರು ಕಡಿಮೆಯಾದಾಗ ಅಣ್ಣ-ತಂಗಿ ಹುಟ್ಟಿದರು. ಆಗ ಶಿವ ಬಂದು ಅವರನ್ನು ವಿರುದ್ಧ ದಿಕ್ಕಿನಲ್ಲಿ ನಿಲ್ಲಿಸಿದನಂತೆ. ಮತ್ತೆ ಅವರು ಪರಸ್ಪರ ನೋಡಿದಾಗ ಅವರು ಗಂಡ ಹೆಂಡತಿಯರಾದರು ಎನ್ನುತ್ತಾರೆ. ಅವರ ಮಕ್ಕಳಿಗೆ ಹುಟ್ಟಿದ ಮಕ್ಕಳಲ್ಲಿ ಅಣ್ಣನ ಮಕ್ಕಳು ಜೇನುಕುರುಬರಾದರು, ತಮ್ಮನ ಮಕ್ಕಳು ಬೆಟ್ಟಕುರುಬರಾದರು ಎಂದು ವಿಭಾಗಿಸಿದ್ದಾರೆ.

ಬೆಟ್ಟಕುರುಬ ಮತ್ತು ಜೇನುಕುರುಬರ ಸೃಷ್ಟಿಪುರಾಣವು ವೈಜ್ಞಾನಿಕ ಹಿನ್ನೆಲೆಯಿಂದ ರೂಪುಗೊಂಡವು. ಈ ಭೂಮಿಯಲ್ಲಿ ಜೀವರಾಶಿಗಳು ಸೃಷ್ಟಿಯಾದದ್ದೇ ನೀರಿನಿಂದ ಎಂದು ವಿಜ್ಞಾನವು ಸಾಬೀತುಪಡಿಸುತ್ತದೆ. ಈ ಎರಡು ಸಮುದಾಯಗಳ ಸೃಷ್ಟಿಪುರಾಣಗಳು ಕೂಡ ಈ ಹಿನ್ನೆಲೆಯನ್ನೇ ಹೊಂದಿವೆ. ನೀರಿನಿಂದ ಸಕಲ ಜೀವರಾಶಿಗಳು ಹಂತ ಹಂತವಾಗಿ ಸ್ಥಿತ್ಯಂತರ ಹೊಂದಿವೆ. ಅಲ್ಲದೆ ಆಡಂ ಮತ್ತು ಈವರ ಕಲ್ಪನೆಗೂ ಇವರ ಸೃಷ್ಟಿಪುರಾಣಕ್ಕೂ ಬಹಳ ಸಾಮ್ಯತೆಯಿದೆ. ಇಬ್ಬರು ಗಂಡು ಹೆಣ್ಣುಗಳು ಈ ಭೂಮಿ ಮೇಲೆ ಸೃಷ್ಟಿಯಾಗಿ ಅವರಿಂದಲೇ ಈ ಭೂಮಿ ಮೇಲೆ ಮನುಷ್ಯ ಸಂತತಿ ಮುಂದುವರಿಯಿತು ಎಂಬ ಕಲ್ಪನೆಗೆ ಇದು ಹತ್ತಿರವಾಗಿದೆ. ಈ ಸಮುದಾಯಗಳ ಪ್ರಕಾರ ಇವರ ಮೂಲಪುರುಷರು ಕೂಡ ಗಂಡು ಹೆಣ್ಣುಗಳಾಗಿ ಉದ್ಭವವಾದವರು. ಅವರಿಂದಲೇ ಜೇನುಕುರುಬ ಮತ್ತು ಬೆಟ್ಟಕುರುಬರು ಹುಟ್ಟಿದವರು. ಮೂಲದಲ್ಲಿ ಈ ಎರಡೂ ಸಮುದಾಯಗಳು ಒಂದೇ ಆಗಿದ್ದು ಕಾಲಾನಂತರಲ್ಲಿ ಬೇರೆ ಬೇರೆ ಗುಂಪುಗಳಾಗಿ ಇವರು ಒಡೆದಿರಬಹುದು.

### ಸೋಲಿಗರ ಮೌಖಿಕ ಸಾಹಿತ್ಯದಲ್ಲಿ ಭೂಮಿ ಮತ್ತು ಮನುಷ್ಯನ ಸೃಷ್ಟಿ

ಸೋಲಿಗ ಎಂಬ ಪದವು ಸೋಲೈ ಎಂಬ ಪದದಿಂದ ಉದ್ಭವವಾಗಿರಬಹುದು. ಸೋಲೈ ಎಂದರೆ ತಮಿಳಿನಲ್ಲಿ 'ಬಿದಿರಿನ ಕಾಡು' ಅಥವಾ 'ದಟ್ಟವಾದ ಬಿದಿರು ಮೆಳೆ' ಎಂದರ್ಥ. ಸೋಲಿಗರಿಗೂ ಬಿದಿರಿಗೂ ಅವಿನಾಭಾವ ಸಂಬಂಧವಿದೆ. ಅವರ ಸೃಷ್ಟಿ ಪುರಾಣವೂ ಕೂಡ ಈ ಬಿದಿರು ಮೆಳೆಯೊಂದಿಗೆ ಮೇಳೈಸಿದೆ. ತಾವು ಶಿವನಿಂದ ಸೃಷ್ಟಿಯಾದವರೆಂದೂ ಅದಕ್ಕೆ ಸಂಬಂಧಿಸಿದಂತೆ ಅವರು ಒಂದು ಕತೆಯನ್ನು ಕೂಡ ಹೇಳುತ್ತಾರೆ. 'ಶಿವನು ಭೂಮಿ ಮೇಲೆ ಒಂದು ಮಗುವನ್ನು ಸೃಷ್ಟಿಸಿ ಅದನ್ನು ಒಂದು ಬಿದಿರಿನ ಸೋಗೆಯಲ್ಲಿ ಇಟ್ಟಿದ್ದನಂತೆ. ಸೋಗೆ ಎಂದರೆ ಬಿದಿರು ಸಣ್ಣದ್ದರಿಂದ ಬೆಳೆದು ದೊಡ್ಡದಾಗುವಾಗ ಪದರ ಪದರದಂತೆ ಬಿಟ್ಟುಕೊಳ್ಳುತ್ತದೆ ಈ ಪದರವನ್ನು ಸೋಗೆ ಎಂದು ಸೋಲಿಗರು ಕರೆಯುತ್ತಾರೆ. ಒಮ್ಮೆ ಗೌಡ ಶೆಟ್ಟಿ ಎಂಬಾತ ಮನೆ ಕಟ್ಟಲು ಬೇಕಾದ ಬಿದಿರಿನ ಗಳವನ್ನು ಕೊಯ್ಯಲು ಕಾಡಿಗೆ ಬರುತ್ತಾನಂತೆ. ಆತ ಬಿದಿರಿನ ಮೆಳೆಯ ಬಳಿಗೆ ಬಂದವನು ಬಿದಿರನ್ನು ಕತ್ತರಿಸಿ ಒಟ್ಟು ಮಾಡುತ್ತಿದ್ದಾಗ ಬಿದಿರಿನ ಸೋಗೆಯಿಂದ ಒಂದು ಮಗು ಹೊರಗೆ ಬಿದ್ದು ಹೊರಳಾಡುತ್ತಿದ್ದುದ್ದನ್ನು ಕಂಡನಂತೆ. ಆಶ್ಚರ್ಯದಿಂದ ಆತ ಆ ಮಗುವನ್ನು ತೆಗೆದುಕೊಂಡು ಮನೆಗೆ ಹೋಗಿ ಸಾಕುತ್ತಾನೆ. ಮಗು ದೊಡ್ಡದಾದ ಮೇಲೆ ನೀನ್ಯಾರು ಎಂದು ಮಗುವನ್ನು ಕೇಳಿದಾಗ. ಆ ಮಗು "ನಾನು ಕಾಡುಸೋಲಿಗ ನನ್ನನ್ನು ಶಿವನೇ ಸೃಷ್ಟಿ ಮಾಡಿ ಬಿದಿರಿನ ಸೋಗೆಯಲ್ಲಿ ಇಟ್ಟಿದ್ದ ಎಂದಿತಂತೆ. ಮಗು ದೊಡ್ಡವನಾದ ನಂತರ ಆತ ಆ ಮಗುವನ್ನು ಮತ್ತೆ

ಕಾಡಿನಲ್ಲಿ ಹೋಗಿ ಬಿಟ್ಟು ಬಂದನಂತೆ. ಅನಂತರ ಆ ಮಗು ಆ ಕಾಡಿನಲ್ಲಿ ಬೆಳೆಯಿತು. ಬಿದಿರ ಸೋಗೆಯಲ್ಲಿ ಹುಟ್ಟಿದುದರಿಂದ ಆತನನ್ನು ಸೋಲಿಗ ಎಂದು ಕರೆಯಲಾಯಿತಂತೆ. ಹೀಗೆ ಸೋಲಿಗ ಸಮುದಾಯ ಹುಟ್ಟಿತು', ಎಂದು ಕತೆಯನ್ನು ಹೇಳುತ್ತಾರೆ.

ಮತ್ತೊಂದು ಐತಿಹ್ಯದ ಪ್ರಕಾರ 'ಒಮ್ಮೆ ಪಾರ್ವತಿ ಪರಮೇಶ್ವರರು ತಮ್ಮ ಬೆವರ ಕೊಳೆಯಿಂದ ಎರಡು ಬೊಂಬೆಗಳನ್ನು ಮಾಡಿ ಅವಕ್ಕೆ ಜೀವ ನೀಡಿದರು. ಅವಕ್ಕೆ ನೀಲಯ್ಯ ಸಂಕಮ್ಮ ಎಂದು ನಾಮಕರಣ ಮಾಡಿದರು. ಮುಂದೆ ಇವರಿಗೆ ಮಹದೇಶ್ವರರ ದಯೆಯಿಂದ ಮಕ್ಕಳಾಗಿ ಕಾರಯ್ಯ ಬಿಲ್ಲಯ್ಯ ಎಂಬ ಹೆಸರಿನಿಂದ ಪ್ರಸಿದ್ಧರಾದರು." ಇವರಿಂದ ಹುಟ್ಟಿದವರೇ ಸೋಲಿಗರು. ಇವರನ್ನು ಸೋಲಿಗರ ಮೂಲಪುರುಷರೆಂದು ತಿಳಿಯಲಾಗಿದೆ'[38]

ಮತ್ತೊಂದು ಕತೆಯ ಪ್ರಕಾರ 'ಶರಣೆ ಸಂಕಮ್ಮನಿಗೆ ಮಕ್ಕಳು ಇಲ್ಲದಿದ್ದಾಗ ಮಹದೇಶ್ವರನ ದಯೆಯಿಂದ ಆಕೆಯು ಕಾರಯ್ಯ ಮತ್ತು ಬಿಲ್ಲಯ್ಯ ಎಂಬ ಪುತ್ರರನ್ನು ಪಡೆಯುತ್ತಾಳೆ. ನಂತರ ಮಹದೇಶ್ವರರಿಗೆ ದಾನ ನೀಡುತ್ತಾಳೆ. ಮಹದೇಶ್ವರರು ಅವರನ್ನು ಸಲಹುತ್ತಿರುವಾಗ ಒಮ್ಮೆ ಮಹದೇಶ್ವರರು ಕಾಡಿಗೆ ಹೋಗುತ್ತಿರುವಾಗ ಕಾರಯ್ಯ ಮತ್ತು ಬಿಲ್ಲಯ್ಯ ಒಂದು ಪ್ರಾಣಿಯನ್ನು ನೋಡುತ್ತಾರೆ. ಬಿಲ್ಲಯ್ಯ ಸಾಧು ಸ್ವಭಾವದವನಾಗಿದ್ದು ಅದನ್ನು ಸುಮ್ಮನೆ ನೋಡಿ ಮುಂದೆ ಹೋಗುತ್ತಾನೆ. ಆದರೆ ಕಾರಯ್ಯನು ಆ ಪ್ರಾಣಿಯನ್ನು ಬೇಟೆ ಆಡಿ ಕೊಂದು ಆಹಾರಕ್ಕೆ ಬಳಸುತ್ತಾನೆ. ಇದನ್ನು ಕಂಡ ಮಹದೇಶ್ವರರು ಬಿಲ್ಲಯ್ಯನ ಮೃದು ಸ್ವಭಾವವನ್ನು ಕಂಡು ನಾಡಿನಲ್ಲಿ ವಾಸವಿರುವಂತೆ ಆರ್ಶಿವಾದ ಮಾಡಿ ಅವರನ್ನು ಲಿಂಗಾಯಿತರನ್ನಾಗಿಸಿದರು. ಪ್ರಾಣಿ ಬೇಟೆ ಮಾಡಿ ಆಹಾರವನ್ನಾಗಿ ತಿಂದ ಕಾರಯ್ಯನನ್ನು ಕಾಡಿನಲ್ಲಿ ವಾಸವಿರುವಂತೆ ಮಾಡಿದರು. ಕಾರಯ್ಯನ ವಂಶಸ್ಥರೇ ಸೋಲಿಗರು. ಕಾರಯ್ಯ ತಮ್ಮ ಮೂಲಪುರುಷ ಎನ್ನುತ್ತಾರೆ.'[39] ಸೋಲಿಗರು ಮತ್ತು ಲಿಂಗಾಯಿತರು ಒಂದೇ ಕುಟುಂಬಕ್ಕೆ ಸೇರಿದವರು ಎಂಬ ಮಾಹಿತಿ ಈ ಕತೆಯಿಂದ ಸಿಗುತ್ತದೆ.

## ಕುಡಿಯರ ಮೌಖಿಕ ಸಾಹಿತ್ಯದಲ್ಲಿ ಭೂಮಿ ಮತ್ತು ಮನುಷ್ಯನ ಸೃಷ್ಟಿ

'ಕುಡಿಯ' ಎಂಬ ಹೆಸರಿಗೂ ಅವರ ಮೂಲವೃತ್ತಿಗೂ ಬಹಳ ಅನ್ಯೋನ್ಯವಾದ ನಂಟಿದೆ ಎಂಬುದು ಕುಡಿಯರ ಅಭಿಪ್ರಾಯ. 'ಕುಡಿಯ' ಎಂದು ಹೆಸರನ್ನು ನಮಗೆ ನಮ್ಮ ಸೃಷ್ಟಿ ಕರ್ತೃರಾದ ಶಿವ-ಪಾರ್ವತಿಯರು ಇಟ್ಟಿದ್ದಾರೆ. ಪಾರ್ವತಿಯ ಮಕ್ಕಳಾದ ನಮಗೆ ಬದುಕುವ ಕಲೆಯನ್ನು ಅವರೇ ಹೇಳಿಕೊಟ್ಟಿದ್ದಾರೆ. ಅವರ ಸೂಚನೆಯಂತೆ ನಾವು ಬದುಕುತ್ತಿದ್ದೇವೆ ಎನ್ನುವ ಇವರು ಅದಕ್ಕೆ ಸಂಬಂಧಿಸಿದಂತೆ ಪೌರಾಣಿಕ ಕತೆಯೊಂದನ್ನು ಉದಾಹರಿಸುತ್ತಾರೆ.

'ಒಮ್ಮೆ ವಿಹಾರಕ್ಕೆಂದು ಪಾರ್ವತಿ ಮತ್ತು ಪರಮೇಶ್ವರರು ಭೂಮಿಗೆ ಬರುತ್ತಾರೆ. ಆ ಸಮಯದಲ್ಲಿ ಪಾರ್ವತಿಗೆ ದಾಹವಾಗುತ್ತದೆಯಂತೆ. ಆಗ ಶಿವ ತನ್ನ ತೊಡೆಯ ಕೊಳೆಯಿಂದ ಮನುಷ್ಯನ ಬೊಂಬೆಯನ್ನು ಸೃಷ್ಟಿಸಿ, ಅದಕ್ಕೆ ಜೀವ ಕೊಟ್ಟು 'ಬಗಿನಿ' ಮರದಿಂದ ಕಳ್ಳು ತರಿಸಿ ಅದರಿಂದ ಪಾರ್ವತಿಯ ದಾಹ ಹಿಂಗಿಸುತ್ತಾನೆ. 'ಬಗಿನಿ' ಮರದ ಹೆಂಡ ಕುಡಿಸಿದ್ದಕ್ಕಾಗಿ ಅವನಿಗೆ ಕುಡಿಯ ಎಂದು ಹೆಸರಿಟ್ಟರಂತೆ. ಈ ರೀತಿ ಶಿವ ಪಾರ್ವತಿಯರಿಗೆ 'ಬಗಿನಿ' ಮರದ ಹೆಂಡದಿಂದ ದಾಹ ತೀರಿಸಿದುದಕ್ಕಾಗಿ ನೀನು ಇನ್ನು ಮುಂದೆ ಇದೇ ಕಾಯಕ ಮಾಡಿ ಬದುಕು' ಎಂದು ಆಶೀರ್ವದಿಸುತ್ತಾರೆ. ಇಂದಿಗೂ 'ಬಗಿನಿ' ಮರದ ಹೆಂಡಕ್ಕೂ, ಕುಡಿಯರಿಗೂ ಅವಿನಾಭಾವ ಸಂಬಂಧವಿದೆ.

ಮತ್ತೊಂದು ಕತೆಯಲ್ಲಿ ಶಿವಪಾರ್ವತಿಯರು ಜಗತ್ತಿನಲ್ಲಿ ಸಕಲವನ್ನು ಸೃಷ್ಟಿಸಿದೆವು, ಆದರೆ ನಮ್ಮ ಮಕ್ಕಳೆಂದು ಯಾರನ್ನೂ ಸೃಷ್ಟಿಸಲಿಲ್ಲ ಎಂದುಕೊಂಡು ಮಲೆಯ ಮೇಲೆ ಮನುಷ್ಯರನ್ನು ಸೃಷ್ಟಿಸಿದರು. ಮಲೆ ಎಂದರೆ ಬೆಟ್ಟ, ಕುಡಿ ಎಂದರೆ ತುದಿ ಎಂದರ್ಥ. ಮಲೆಯ ಮೇಲೆ ವಾಸ ಮಾಡುವ ಈ ಕುಡಿಯರನ್ನು ಸೃಷ್ಟಿಸಿದರು. ಅವರೇ ಈ ಕುಡಿಯರು. ಕುಡಿ ಸಂತಾನ ಶಿವ ಪಾರ್ವತಿಯರ ಸಂತಾನ ಆದ್ದರಿಂದ ಬೆಟ್ಟಗಳಲ್ಲಿ ಬದುಕುತ್ತಾ ಅಲ್ಲಿಯ ಅರಣ್ಯ ಉತ್ಪನ್ನಗಳನ್ನು ಬಳಸಿಕೊಂಡು ಇವರು ಜೀವನವನ್ನು ನಡೆಸುತ್ತಿದ್ದಾರೆ. ಇವು ಪೌರಾಣಿಕ ಹಿನ್ನೆಲೆಯ ಕತೆಗಳು. ಹಾಗೆಯೇ ಐತಿಹಾಸಿಕ ಕತೆಯ ಮೂಲಕ ಕೂಡ ಕುಡಿಯರು ತಮ್ಮ ಇರುವಿಕೆಗೆ ಪ್ರಾಧಾನ್ಯತೆ ಯನ್ನು ನೀಡಿದ್ದಾರೆ.

'ಕೊಡಗಿನ ಬಾಡಗ ಗ್ರಾಮದಲ್ಲಿ ವಾಸವಿದ್ದ ಕೊತ್ತುಳ ಮನೆತನದ ಕರುಂಬಯ್ಯ ಎಂಬುವವನು ಕಾಡಿಗೆ ಬೇಟೆಗೆಂದು ಹೋಗಿದ್ದ ಸಮಯದಲ್ಲಿ ಕಾಡುಹಂದಿಯೊಂದಕ್ಕೆ ಗುಂಡು ಹೊಡೆದನಂತೆ. ಗುಂಡು ತಾಗಿದ ಹಂದಿ ಕಾಡಿನಲ್ಲಿ ಓಡುತ್ತಾ ಮರೆಯಾಯಿತಂತೆ. ಅದರ ರಕ್ತದ ಕಲೆಯ ಜಾಡನ್ನು ಹಿಡಿದು ಹೊರಟ ಕರುಂಬಯ್ಯ ಕಾಡಿನಲ್ಲಿ ಅಲೆಯುತ್ತಾ ದೇವವಾರೆ ಎಂಬ ಸ್ಥಳಕ್ಕೆ ಬಂದನಂತೆ. ಆದರೆ ಹಂದಿಯ ಸುಳಿವು ಎಲ್ಲೂ ದೊರಕಲಿಲ್ಲ. ಬದಲಿಗೆ ಎಲ್ಲಿಂದಲೋ ಕಾಡಿನ ಮಧ್ಯೆ ದುಡಿ ಬಾರಿಸುವ ಶಬ್ದ ಕೇಳಬರತೊಡಗಿತಂತೆ. ಇದನ್ನು ಕೇಳಿ ಆಶ್ಚರ್ಯಗೊಂಡ ಆತ ಆ ದುಡಿಯ ಧ್ವನಿ ಬಂದ ಕಡೆ ನಡೆದು ಬಂದಾಗ ಅಲ್ಲಿ ಹತ್ತಾರು ಜನ ಗಂಡು ಹೆಣ್ಣುಗಳು ಬೆತ್ತಲೆಯಾಗಿ ದುಡಿಯ ನಾದಕ್ಕೆ ನೃತ್ಯವನ್ನು ಮಾಡುತ್ತಿದ್ದನ್ನು ಕಂಡು ಆಶ್ಚರ್ಯಚಕಿತನಾಗುತ್ತಾನೆ. ಆಗ ಕರುಂಬಯ್ಯನನ್ನು ಕಂಡ ಆ ಗುಂಪು ಕಿರುಚುತ್ತಾ ದಿಕ್ಕಾಪಾಲಾಗಿ ಓಡಲು ಪ್ರಾರಂಭಿಸುತ್ತಾರೆ. ಓಡಿ ಬೆಟ್ಟದಲ್ಲಿ ಗವಿಗಳಲ್ಲಿ ಅವಿತುಕೊಳ್ಳುತ್ತಾರೆ. ಅದರಲ್ಲಿ ಒಂದು ಗಂಡು ಮತ್ತು ಒಂದು ಹೆಣ್ಣು ಇವರ ಕೈಗೆ ಸಿಕ್ಕಿ ಬೀಳುತ್ತಾರೆ. ಅವರ ಮೈ

ಮೇಲೆ ಯಾವುದೇ ಬಟ್ಟೆ ಇರಲಿಲ್ಲ ಬದಲಿಗೆ ಹೆಣ್ಣಿನ ಕುತ್ತಿಗೆಯಲ್ಲಿ ಏಲಕ್ಕಿ ಪೋಣಿಸಿದ ನಾಲ್ಕಾರು ಮಾಲೆಗಳು ಮಾತ್ರ ಇದ್ದವು. ಅವರನ್ನು ಹಿಡಿದು ತನ್ನ ಊರಿಗೆ ಕರೆತಂದನಂತೆ. ಅವರ ಭಾಷೆಯೂ ಭಿನ್ನವಾಗಿದ್ದು ಮಲಯಾಳಂನಂತೆಯೇ ಇರುವುದನ್ನು ಗಮನಿಸುತ್ತಾನೆ. ಆಕೆಯ ಕುತ್ತಿಗೆಯಲ್ಲಿದ್ದ ಏಲಕ್ಕಿ ಬೀಜದಿಂದ ಕೊಡಗಿನಲ್ಲಿ ಏಲಕ್ಕಿ ಬೆಳೆ ಪ್ರಾರಂಭವಾಯಿತು' ಎನ್ನುತ್ತಾರೆ.

ಕುಕ್ಕೆ ಮತ್ತು ಲಿಂಗ ಎಂಬ ಕುಡಿಯರು ಒಮ್ಮೆ ಕುಮಾರಪರ್ವತಕ್ಕೆ ಬೇಟೆಗೆಂದು ಹೋದ ಸಂದರ್ಭದಲ್ಲಿ ಕಾಡಿನಲ್ಲಿ ಒಂದು ಪೊದೆಗೆ ಬೆಂಕಿ ಬಿದ್ದಿರುತ್ತದೆ. ಆ ಪೊದೆಯ ನಡುವೆ ಒಂದು ಸರ್ಪ ಸಿಕ್ಕಿ ಹಾಕಿಕೊಂಡಿರುತ್ತದೆ. ಅದು ತನ್ನನ್ನು ಕಾಪಾಡುವಂತೆ ಬೇಡಿಕೊಳ್ಳುತ್ತದೆ. ಆದರೆ ಇವರಿಗೆ ಅದರ ಬಳಿ ಹೋಗಲು ಭಯ. ಅವರಿಗೆ ಅಭಯ ಹೇಳಿದ ಸರ್ಪ ತನ್ನನ್ನು ಮುಟ್ಟುವುದು ಬೇಡ ಬದಲಿಗೆ ಬಿಲ್ಲಿನಿಂದ ತನ್ನನ್ನು ರಕ್ಷಿಸುವಂತೆ ಕೇಳಿಕೊಳ್ಳುತ್ತದೆ. ಅಂತೆಯೇ ಬಿಲ್ಲನ್ನು ಅದರ ಮುಂದೆ ಹಿಡಿದಾಗ ಅದರ ತುದಿಯಲ್ಲಿ ಸರ್ಪ ಸುತ್ತಿಕೊಳ್ಳುತ್ತದೆ. ಅದನ್ನು ತಮ್ಮ ಮುಂಡಾಸಿನಿಂದ ಜೋಲಿಯಂತೆ ಮಾಡಿ ಇಬ್ಬರೂ ಎತ್ತಿಕೊಂಡು ಬರುತ್ತಾರೆ. ಆಗ ಸರ್ಪ ನಿಮಗೆ ಎಷ್ಟು ದೂರ ಸಾಧ್ಯವೋ ಅಷ್ಟು ದೂರ ಎತ್ತಿಕೊಂಡು ಹೋಗಿ, ನಿಮಗೆ ಹೊರಲಾರದಷ್ಟು ಭಾರವೆನಿಸಿದರೆ ಇಟ್ಟುಬಿಡಿ ಎನ್ನುತ್ತದೆ. ಅಂತೆಯೇ ಸರ್ಪವನ್ನು ಹೊತ್ತು ತಂದ ಅವರು ಈಗಿನ ಕುಕ್ಕೆ ಲಿಂಗೇಶ್ವರ ದೇವಾಲಯದ ಬಳಿ ಸರ್ಪದ ಭಾರವನ್ನು ಹೊರಲಾರದೆ ಕೆಳಗಿಟ್ಟುಬಿಡುತ್ತಾರೆ. ಆ ಸ್ಥಳ ಮುಂದೆ 'ಕುಕ್ಕೆ ಲಿಂಗೇಶ್ವರ' ಎಂಬ ಪವಿತ್ರ ಸ್ಥಳವಾಯಿತು. ಅಂದಿನಿಂದ ಅವರೇ ಅಲ್ಲಿಯ ಪೂಜಾರಿಗಳಾಗಿ ಪೂಜೆ ನೆರವೇರಿಸತೊಡಗಿದರು. ಒಂದು ದಿನ ಸರ್ಪಕ್ಕೆ ತುಂಬಾ ಬಾಯಾರಿಕೆಯಾಗುತ್ತದೆ. ಆದರೆ ಎಲ್ಲೂ ನೀರು ಸಿಗುವುದಿಲ್ಲ. ಆಗ ಸರ್ಪವು ಅಲ್ಲೇ ಇದ್ದ ಬೈನೆ ಮರದ ಕೊಂಬೆಯನ್ನು ಕತ್ತರಿಸಿ ಬರುವ ರಸವನ್ನು ಕೊಡಲು ಹೇಳಿತು. ಕುಕ್ಕೆ ಮತ್ತು ಲಿಂಗ ಸರ್ಪವು ಹೇಳಿದಂತೆ ಬೈನೆ ಮರದ ರಸವನ್ನು ತಂದುಕೊಡುತ್ತಾರೆ. ಸರ್ಪವು ಅದರ ರಸ ಕುಡಿದು ಉಳಿದಿದ್ದನ್ನು ಅವರಿಗೆ ನೀಡಿತು. ಹೀಗೆ ಇವರ ಸ್ನೇಹ ಮುಂದುವರಿಯುತ್ತದೆ. ಬೈನೆಯ ರುಚಿ ಹತ್ತಿದ ಕುಡಿಯರ ಕುಕ್ಕೆ ಮತ್ತು ಲಿಂಗ ಬಿದಿರ ಬೊಂಬಿನಲ್ಲಿ ಅದನ್ನು ಸಂಗ್ರಹಿಸಿ ಕುಡಿಯಲು ಪ್ರಾರಂಭಿಸುತ್ತಾರೆ. ಕೊನೆ ಕೊನೆಗೆ ಅವರು ಹೆಂಡದ ಅಮಲಿನಲ್ಲಿ ಸರ್ಪವನ್ನು ಅಲಕ್ಷಿಸುತ್ತಾರೆ. ಇದರಿಂದ ಸರ್ಪ ಕೋಪಗೊಂಡು ನಿಮ್ಮ ಪೂಜೆ ಇನ್ನು ನನಗೆ ಅಗತ್ಯವಿಲ್ಲ ಎಂದು ಹೇಳಿತಂತೆ. ಅಂದಿನಿಂದ ಮಲೆಕುಡಿಯರಿಗೆ ಪೂಜೆ ತಪ್ಪಿ ಹೋಗಿ ಬ್ರಾಹ್ಮಣರು ಪೂಜೆ ಮಾಡಲು ಪ್ರಾರಂಭಿಸುತ್ತಾರೆ. ಅಂದಿನಿಂದ ಅಲ್ಲಿನ ಪೂಜಾಕಾರ್ಯವನ್ನು ಬ್ರಾಹ್ಮಣ ಮಾಡಿದರೆ, ಉಳಿದ ಸೇವೆಯನ್ನು

ಕುಡಿಯರು ಮಾಡುತ್ತಾರೆ.

ಬುಡಕಟ್ಟು ದೈವಗಳ ಮೇಲಿನ ವೈದಿಕಶಾಹಿಯ ಆಕ್ರಮಣಕ್ಕೆ ಮತ್ತೊಂದು ಉದಾಹರಣೆಯಾಗಿ ನಾವು ಈ ಕತೆಯನ್ನು ಪರಿಗಣಿಸಬಹುದು. ಕುಡಿಯ ಬುಡಕಟ್ಟು ಸಮುದಾಯದಲ್ಲಿ ಅತ್ಯಂತ ಪ್ರಸಿದ್ಧವಾದ ಈ ಕುಕ್ಕೆ ಲಿಂಗವು ತನ್ನ ಖ್ಯಾತಿ ಹೆಚ್ಚಾದಂತೆ, ತಮ್ಮ ವಿಶಿಷ್ಟ ಪೂಜಾವಿಧಾನದ ಮೂಲಕ ಅಲ್ಲಿಗೆ ಆಗಮಿಸುವ ವೈದಿಕಶಾಹಿಯು ನಿಧಾನವಾಗಿ ತನ್ನ ಅಸ್ತಿತ್ವವನ್ನು ಸ್ಥಾಪಿಸುವುದರ ಮೂಲಕ ಸ್ಥಳೀಯ ಸಮುದಾಯಗಳ ನಂಬಿಕೆಯನ್ನು ಗಳಿಸುತ್ತಾ ತಮ್ಮ ಪ್ರಾಬಲ್ಯವನ್ನು ಸ್ಥಾಪಿಸುತ್ತಾ ಸಾಗುತ್ತದೆ. ಕೊನೆಗ ಸ್ಥಳೀಯ ಸಮುದಾಯವನ್ನು ಸಂಪೂರ್ಣವಾಗಿ ಕಡೆಗಣಿಸಿ ಕೇವಲ ಸೇವೆಯ ಹಂತದಲ್ಲಿ ಆ ಸಮುದಾಯವನ್ನು ಬಳಸಿಕೊಳ್ಳುತ್ತವೆ. ಈಗಲೂ ಕುಕ್ಕೆ ಸುಬ್ರಹ್ಮಣ್ಯ ದೇವಾಲಯದಲ್ಲಿ ಪ್ರತಿ ವರ್ಷ ನಡೆಯುವ ಜಾತ್ರೆಯಲ್ಲಿ ಕೆಲವು ಮುಖ್ಯ ಜವಾಬ್ದಾರಿಗಳನ್ನು ಕುಡಿಯರೇ ನಿರ್ವಹಿಸುತ್ತಾರೆ. ಆ ಸಮುದಾಯವೂ ಕೂಡ ಅದನ್ನು ಬಹಳ ಭಕ್ತಿಯಿಂದ ಒಪ್ಪಿಕೊಂಡು ಹೆಮ್ಮೆಯ ಭಾವದಿಂದ ಮೇಲರಿಮೆ ಹೊಂದುವುದನ್ನು ನಾವು ಇಲ್ಲಿ ಕಾಣುತ್ತೇವೆ.

## 5.4. ಬುಡಕಟ್ಟುಗಳಲ್ಲಿ ಯಜಮಾನಿಕೆಯ ಸ್ವರೂಪ

ಬುಡಕಟ್ಟುಗಳು ಅತ್ಯುತ್ತಮವಾದ ಒಳಾಡಳಿತ ವ್ಯವಸ್ಥೆಯನ್ನು ಹೊಂದಿದೆ. ಸಮುದಾಯವೇ ನಿರ್ಧರಿಸಿದ ನಾಯಕತ್ವ ವ್ಯವಸ್ಥೆಯಿದೆ. ಇಲ್ಲಿ ಯಜಮಾನಿಕೆ ಎಂಬುದು ಅಧಿಕಾರವಲ್ಲ. ಬದಲಿಗೆ ಜವಾಬ್ದಾರಿಯಾಗಿದೆ.

### ಎರವರಲ್ಲಿ ಯಜಮಾನಿಕೆಯ ಸ್ವರೂಪ

**ಪಂಜರಿ ಎರವರು:** ಪಂಜರಿ ಎರವರಲ್ಲಿ ಸಮುದಾಯದ ಯಜಮಾನಿಕೆಯು ಒಬ್ಬ ವ್ಯಕ್ತಿಯಲ್ಲಿ ಕೇಂದ್ರೀಕೃತವಾಗದೆ ಶ್ರೇಣೀಕರಣ ವ್ಯವಸ್ಥೆಯಿದೆ. ಯಜಮಾನಿಕೆಯನ್ನು ಹಲವು ಹಂತಗಳಾಗಿ ವಿಭಾಗಿಸಲ್ಪಟ್ಟಿದ್ದು ಆಡಳಿತವೂ ಕೂಡ ಸಮುದಾಯದ ಕಣ್ಗಾವಲಿನಲ್ಲಿರುತ್ತದೆ. ಆದಕ್ಕಿಂತಲೂ ಹೆಚ್ಚಾಗಿ ಸತ್ತ ತಮ್ಮ ಹಿರಿಯರು ಮತ್ತು ದೈವಗಳು ತಮ್ಮನ್ನು ಗಮನಿಸುತ್ತಿರುತ್ತಾರೆ ಎಂದು ಅವರು ನಂಬುತ್ತಾರೆ. ಅವರು ಅತ್ಯಂತ ಭಯ ಭಕ್ತಿಯಿಂದ ತಾವು ವಹಿಸಿಕೊಂಡಿರುವ ಜವಾಬ್ದಾರಿಗಳನ್ನು ನಿಭಾಯಿಸುತ್ತಾರೆ.

ಹಾಗೆಯೇ

ನಾಡಾಚು ಕುಂಜಾಚು ಮಂಜಾಚ ಚೆಮ್ಮಾಟು
ಕಜ ಕರ್ಮಿ ಕನ್ನೆಲಾಡಿನರಾಚು
ಮುಪ್ಪತ್ತೊಂಜು ಕುಡಿಂಜ ನಾಲ್ಯೆತ್ನಾಲು ಕುಡಿಂಜ

ಎಟ್ಟುಕಾಲು ಏವುಣಾಡು ಚಪ್ಪರ ತುಳ್ಳೆಚು
ಮಂಜ್ಲಿ ಪಟ್ಟರಳಾತು
ನಾಡಾಯಿತು ಊರಾಯಿತು, ಬರ್‍ನಲಾಯಿತು ಕುಲವಾಯಿತು
ಕರ್ಮಿ, ಕನ್ನಲಾಡಿಗಳಾದರು ಕುಳಿತುಕೊಳ್ಳುವ
ಎಂಟುಕಾಲಿನ ಕಂಬದ ಏಳುನಾಡಿನ ಚಪ್ಪರ
ಒಕ್ಕಲಲ್ಲಿ ಹಾಕಿದರು[40]

ಇವು ಸಮುದಾಯವೇ ರೂಪಿಸಿದ ಯಜಮಾನಿಕೆಯ ವಿವಿಧ ಹಂತಗಳನ್ನು ಪರಿಚಯಿಸುತ್ತದೆ, ಯಜಮಾನಿಕೆಯ ಸ್ಥಾನಮಾನಗಳನ್ನು ಹೇಳುತ್ತವೆ. ಸಮುದಾಯವು ವಾಸಿಸುವ ಪ್ರದೇಶವು ಅವರ ಮೌಖಿಕ ಸಾಹಿತ್ಯದಲ್ಲಿ ನಾಡು, ಊರು, ಗ್ರಾಮ, ಕುಲಗಳೆಂದು ವಿಭಾಗಿಸಲ್ಪಟ್ಟಿದೆ. ಕುಲದ ಆಗುಹೋಗುಗಳಲ್ಲಿ, ವಿಧಿವಿಧಾನಗಳಲ್ಲಿ ಯಾವುದೇ ತಪ್ಪು ನೆಪ್ಪು ಆಗದಂತೆ ಕನ್ನಲಾಡಿಗಳು ಕರ್ಮಿಗಳು ನಡೆಸಿಕೊಂಡು ಬರುತ್ತಾರೆ. ಇವರು ತಮ್ಮ ಹಿರಿಯರ ಆತ್ಮದ ಜೊತೆ ನೇರ ಸಂಪರ್ಕವನ್ನಿಟ್ಟುಕೊಂಡಿರುತ್ತಾರೆ. ಇವರು ಸಮುದಾಯವನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗುವ ಪಾಲಕರಂತಿರುತ್ತಾರೆ. ಹಿರಿಯರ ಆತ್ಮದ ಆಜ್ಞೆಯನ್ನು ಈಡೇರಿಸಲು ಎಲ್ಲರೂ ಬದ್ಧರಾಗಿರಬೇಕು. ಆಜ್ಞೆ ಆದೇಶಗಳನ್ನು ಅವರಿಗೆ ಅರಿವಿಲ್ಲದೆಯೇ ಅವರಲ್ಲಿ ಮಾಡಿಸುತ್ತಿರುತ್ತದೆ.

ಮುಖ್ಯವಾಗಿ ಈ ಒಳಾಡಳಿತದ ಜವಾಬ್ದಾರಿಗಳನ್ನು ಈ ರೀತಿ ವಿಭಾಗಿಸಲಾಗಿದೆ

1. ಕಞಲಾಡಿ
2. ಕುಂಜುಕಾರ
3. ನಾಡುಕಾರ
4. ಕರ್ಮಿ

ಎಂಬ ನಾಲ್ಕು ಹಂತಗಳಲ್ಲಿ ವಿಭಾಗಿಸಲಾಗಿರುತ್ತದೆ. ಶ್ರೇಣೀಕೃತ ಯಜಮಾನಿಕೆಯ ಪದ್ಧತಿಯನ್ನು ಹೊಂದಿರುವ ಇವರು ತಾವು ನಿರ್ವಹಿಸುವ ಕೆಲಸಗಳಿಗೆ ಅನುಗುಣವಾಗಿ ಸಮಾಜದಲ್ಲಿ ಮಾನ್ಯತೆಯನ್ನು ಹೊಂದಿರುತ್ತಾರೆ.

**ಕಞಲಾಡಿ:** ಎರವರು ಅತಿಮಾನುಷ ಶಕ್ತಿಗಳನ್ನು ನಂಬುತ್ತಾರೆ ಮತ್ತು ಪೂಜಿಸುತ್ತಾರೆ. ತಮ್ಮ ಹಿರಿಯರ ಆತ್ಮಗಳು ತಮ್ಮನ್ನು ಕಾಪಾಡುತ್ತಿರುತ್ತವೆ ಎಂದು ಇವರು ನಂಬುತ್ತಾರೆ. ಇವರ ಎಲ್ಲಾ ಆಚರಣೆಗಳಲ್ಲೂ ಆತ್ಮಗಳಿಗೆ ವಿಶೇಷವಾದ ಸ್ಥಾನವಿದೆ. ಈ ಆಚರಣೆಗಳಿಗೆ ಸಂಬಂಧಿಸಿದಂತೆ

ಮೌಖಿಕ ಸಾಹಿತ್ಯವಿರುತ್ತದೆ. ಪಂಜರಿ ಎರವರ ಜೀವನಾವರ್ತದ ಎಲ್ಲ ಆಚರಣೆಗಳನ್ನು ನೆರವೇರಿಸುವ ಮತ್ತು ಅದಕ್ಕೆ ಸಂಬಂಧಿಸಿದ ಮೌಖಿಕ ಸಾಹಿತ್ಯವನ್ನು ಹಾಡುವ ವ್ಯಕ್ತಿಯನ್ನು ಕಙಲಾಡಿ ಎಂದು ಕರೆಯುತ್ತಾರೆ. ಈತ ಸಮುದಾಯದಲ್ಲಿ ಪುರೋಹಿತನಂತೆ ಕೆಲಸ ಮಾಡುತ್ತಾನೆ. ಸಮುದಾಯದಲ್ಲಿ ನಡೆಯುವ ಈ ಎಲ್ಲ ಆಚರಣೆಗಳನ್ನು ನೆರವೇರಿಸಲು ಈತನನ್ನು ನಿಯಮಿಸಲಾಗುತ್ತದೆ. ಸಮುದಾಯದ ಪ್ರತಿ ಆಚರಣೆಗೆ ಸಂಬಂಧಿಸಿದ ಮೌಖಿಕ ಸಾಹಿತ್ಯಗಳನ್ನು ಹಗಲು ರಾತ್ರಿ ನಿರಂತರವಾಗಿ ಹಾಡುವ ಕಲೆ ಇವನಿಗೆ ಸಿದ್ಧಿಸಿರುತ್ತದೆ. ಸಮುದಾಯಕ್ಕೆ ಸಂಬಂಧಿಸಿದ ಹುಟ್ಟು, ಸಾವು, ಋತುಮತಿ ಶಾಸ್ತ್ರ, ಮದುವೆಯ ಸಂದರ್ಭ ಮೊದಲಾದ ಯಾವುದೇ ಆಚರಣೆಗಳಿದ್ದರೂ ಅದನ್ನು ಈತನೇ ನೆರವೇರಿಸುತ್ತಾನೆ. ಇಂತಹ ವಿಶೇಷ ಸಂದರ್ಭದಲ್ಲಿ ಈತನಿಲ್ಲದೆ ಯಾವುದೇ ಕಾರ್ಯವೂ ನಡೆಯುವುದಿಲ್ಲ. ಸಂದರ್ಭಕ್ಕೆ ತಕ್ಕಂತೆ ವಿಧಿವಿಧಾನಗಳು, ಹಾಡುಗಳು, ಮಂತ್ರಗಳು ಎಲ್ಲವೂ ಈತನಿಗೆ ಕರತಲಾಮಲಕವಾಗಿರುತ್ತವೆ. ಈತ ಶಾಸ್ತ್ರ, ಸಂಪ್ರದಾಯ, ವಿಧಿವಿಧಾನಗಳನ್ನು ಬಲ್ಲವನಾಗಿದ್ದು, ಅವುಗಳನ್ನು ನಿರ್ವಹಿಸಲು ಬೇಕಾದ ವಿಶೇಷ ಅಧಿಕಾರವನ್ನು ಪಡೆದಿರುತ್ತಾನೆ. ಈ ಎಲ್ಲ ಸಂದರ್ಭದಲ್ಲೂ ಆತ ಕೆಲವು ವಿಶೇಷವಾದ ಬಳೆ ಮತ್ತು ಕೋಲನ್ನು ಬಳಸುತ್ತಾನೆ. ಈ ಬಳೆಯನ್ನು ಪೇಯಿಬಳೆ ಎಂದು ಕರೆಯುತ್ತಾರೆ. ಪೇಯಿಬಳೆ ಎಂದರೆ ದೆವ್ವದ ಬಳೆ ಎಂದೂ ಆತನ ಬಳಿ ಇರುವ ಕೋಲನ್ನು ಅಚ್ಚೇರಂಡಬಡಿ ಎಂದು ಕರೆಯುತ್ತಾರೆ. ಅಚ್ಚೇರಂಡಬಡಿ ಎಂದರೆ ಅಜ್ಜಯ್ಯನ ಕೋಲು ಎಂದರ್ಥ. ಇವು ಪೂಜನೀಯವಾಗಿದ್ದು, ವಿಶೇಷ ಸಂದರ್ಭದಲ್ಲಿ ಈ ವಸ್ತುಗಳನ್ನು ಬಳಸಲಾಗುತ್ತದೆ.

ಹಾಡಿಯ ಆಚರಣೆಗಳಲ್ಲದೆ ಹಾಡಿಯಲ್ಲಿ ಯಾರಿಗಾದರೂ ಸಣ್ಣ ಪುಟ್ಟ ಕಾಯಿಲೆ ಬಂದರೆ ವೈದ್ಯವನ್ನು ಮಾಡುವವನು ಕೂಡ ಈತನೇ ಆಗಿರುತ್ತಾನೆ. ಈತ ಸಣ್ಣ ಪುಟ್ಟ ಮಾಟ ಮಂತ್ರಗಳಿಗೂ ಪರಿಹಾರವನ್ನು ನೀಡುವವನಾಗಿರುತ್ತಾನೆ. ಹಾಡಿಯಲ್ಲಿ ಬಹಿಷ್ಕಾರ ಹಾಕುವ, ಜಾತಿಗೆ ತೆಗೆದುಕೊಳ್ಳುವ ಶಾಸ್ತ್ರವನ್ನು ಈತನೇ ನೆರವೇರಿಸುತ್ತಾನೆ. ಈತ ಕೆಲವೊಂದು ಅತಿಮಾನುಷ ಶಕ್ತಿಯನ್ನು ಹೊಂದಿರುತ್ತಾನೆ ಎಂದು ಎರವರು ನಂಬುತ್ತಾರೆ. ಆದ್ದರಿಂದ ಅವನಿಗೆ ವಿಶೇಷವಾದ ಗೌರವಗಳಿವೆ. ಕಙಲಾಡಿಯ ಜವಾಬ್ದಾರಿ ವಂಶಪಾರಂಪರ್ಯವಾಗಿ ಬರುವುದಿಲ್ಲ. ತಮ್ಮ ಸಮುದಾಯದ ಪ್ರತಿಯೊಂದು ಆಚರಣೆ, ನಂಬಿಕೆ, ವಿಧಿ, ನಿಷೇಧಗಳು, ಕ್ರಿಯೆಗೆ ಸಂಬಂಧಿಸಿದ ಹಾಡುಗಳು ಇತ್ಯಾದಿಗಳ ಬಗ್ಗೆ ಆಸಕ್ತಿ ಅಭಿಮಾನವನ್ನು ಹೊಂದಿರುವ ಯಾವುದೇ ವ್ಯಕ್ತಿಯೂ ಕೂಡ ಕಙಲಾಡಿಯಾಗಬಹುದು. ಅಂತಹ ವ್ಯಕ್ತಿ ಕಙಲಾಡಿಯೊಂದಿಗೆ ಸಮುದಾಯದ ಪ್ರತಿ ಆಚರಣೆಗಳಲ್ಲೂ ಭಾವಹಿಸುತ್ತಾ, ಎಲ್ಲ ಆಚರಣೆಗಳನ್ನು ತಿಳಿದುಕೊಂಡು

ಮೌಖಿಕ ಸಾಹಿತ್ಯವನ್ನೆಲ್ಲಾ ನಿರರ್ಗಳವಾಗಿ ಕಲಿತು ಮುಂದೆ ಕಞಲಾಡಿಯ ಅನುಮತಿಯ ಮೇರೆಗೆ ತಾನು ಈ ಕಾರ್ಯಗಳನ್ನು ನೆರವೇರಿಸಬಹುದು. ಈ ಎಲ್ಲ ಆಚರಣೆಗಳು ಮತ್ತು ಅದಕ್ಕೆ ಸಂಬಂಧಿಸಿದ ಮೌಖಿಕ ಸಾಹಿತ್ಯಗಳು ಸಿದ್ಧಿಸಿದ ನಂತರ ಈತನೇ ಕಞಲಾಡಿಯಾಗಬಹುದು..

**ಕುಂಜುಕಾರ :** ಪಂಜರಿ ಎರವರ ಭಾಷೆಯಲ್ಲಿ ಕುಂಜು ಎಂದರೆ ಗ್ರಾಮ, ಕುಂಜುಕಾರ ಎಂದರೆ ಗ್ರಾಮದ ಮುಖ್ಯಸ್ಥ. ಹಿಂದೆ ಎರವರು ಕಾಡಿನಲ್ಲಿ ಆಹಾರ ಸಂಗ್ರಹಣೆ ಮಾಡುತ್ತಾ ಕೆತ್ಲು ಬೇಸಾಯ ಮಾಡುತ್ತಾ ಅಲೆಮಾರಿಗಳಂತೆ ಬದುಕುತ್ತಿದ್ದವರು. ಇವರು ಯಾವುದೇ ಒಂದು ಸ್ಥಳದಲ್ಲಿ ಶಾಶ್ವತವಾಗಿ ನೆಲೆ ನಿಂತವರಲ್ಲ. ತಮ್ಮ ವಾಸಸ್ಥಳದಲ್ಲಿ ಯಾವುದಾದರೂ ಸಾಂಕ್ರಾಮಿಕ ರೋಗ ಹರಡಿದರೆ, ಪ್ರಾಣಿಗಳ ಅಥವಾ ಭೂತ ಚೇಷ್ಟೆಗಳಿದ್ದರೆ ಅಥವಾ ಇನ್ನಿತರ ಕಾರಣ ಗಳಿಂದ ವಾಸಸ್ಥಳವನ್ನು ಬದಲಾಯಿಸುತ್ತಿದ್ದರು. ಆ ಸಮಯದಲ್ಲಿ ಯೋಗ್ಯ ಸ್ಥಳವನ್ನು ಕಾಡಿನಲ್ಲಿ ಹುಡುಕುತ್ತಾ ಅಲೆಯುತ್ತಿದ್ದರು. ಹೀಗೆ ಅಲೆಯುತ್ತಿದ್ದಾಗ ಸಮುದಾಯವು ವಾಸಿಸಲು ಯೋಗ್ಯವಾದ ಸ್ಥಳವನ್ನು ಗುರುತಿಸಿ ಮೊದಲಿಗೆ ಹೋಗಿ ಅಲ್ಲಿ ಮೇಟಿ ಕಂಬ ನೆಟ್ಟು ತನ್ನ ಮನೆಯನ್ನು ಆ ಜಾಗದಲ್ಲಿ ಸ್ಥಾಪಿಸುತ್ತಾನೆಯೋ ಅವನನ್ನು 'ಕುಂಜುಕಾರ' ಎಂದು ಕರೆಯು ತ್ತಾರೆ. ಅವನ ಹೆಂಡತಿಯನ್ನು 'ಕುಂಜುಕಾರ್ತಿ' ಎಂದು ಕರೆಯುತ್ತಾರೆ. ಕುಂಜುಕಾರನ ನಂತರ ಆ ಸ್ಥಳಕ್ಕೆ ಬಂದು ನೆಲೆಸಿದವರು ಈ ಕುಂಜುಕಾರನಿಗೆ ವಿಶೇಷ ಮರ್ಯಾದೆಯನ್ನು ನೀಡುತ್ತಾರೆ. ಎರವರು ತಮ್ಮ ವಾಸಸ್ಥಳವನ್ನು ಆಯ್ಕೆ ಮಾಡಿಕೊಳ್ಳುವಾಗಲೂ ನಿರ್ದಿಷ್ಟ ಮಾನದಂಡಗಳನ್ನು ಅನುಸರಿಸುತ್ತಾರೆ. ಹಲವು ರೀತಿಯ ಪರೀಕ್ಷೆಗಳನ್ನು ನಡೆಸಿ ಎಲ್ಲ ರೀತಿಯಲ್ಲೂ ಯೋಗ್ಯವೆನಿಸಿದರೆ ಮಾತ್ರ ಆ ಸ್ಥಳಕ್ಕೆ ಹೋಗುತ್ತಾರೆ. ಅನಂತರದಲ್ಲಿ ಅಲ್ಲಿ ಹಾಡಿ ನಿರ್ಮಾಣವಾಗುತ್ತದೆ. ಅಲ್ಲಿನ ಕುಂಜುಕಾರನು ಅವರ ಮುಖಂಡನಾಗಿ ಆಯ್ಕೆಯಾಗುತ್ತಾನೆ. ನಂತರ ಆತ ಹಾಡಿಯ ಪ್ರತಿಯೊಬ್ಬರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾ ಪಾಲಕನಂತಿದ್ದು, ಎಲ್ಲರ ಗೌರವಕ್ಕೆ ಭಾಜನನಾಗುತ್ತಾನೆ. ಹಾಡಿಯ ಕುಂದುಕೊರತೆಗಳನ್ನು ನೋಡಿಕೊಳ್ಳುವುದು, ಹಬ್ಬ, ಪೂಜೆ, ಇನ್ನಿತರ ಸಮಾರಂಭಗಳನ್ನು ಮುಂದೆ ನಿಂತು ನೆರವೇರಿಸುವುದು, ಅದಕ್ಕೆ ಬೇಕಾದ ನಿಧಿ ಸಂಗ್ರಹಿಸಿ, ಲೆಕ್ಕಾಚಾರ ಬರೆದಿಡುವುದು, ಯಾರಿಗಾದರೂ ಸಾವು ನೋವಾದಾಗ, ಮದುವೆ, ಋತುಮತಿ ಇನ್ನಿತರೆ ಸಂದರ್ಭದಲ್ಲಿ ಅವರಿಗೆ ಆರ್ಥಿಕ ಅಥವಾ ಇನ್ನಿತರ ನೆರವು ನೀಡುವುದು, ಹಾಡಿಗೆ ಹೊರಗಿನಿಂದ ಯಾರಾದರೂ ಬಂದರೆ ಅವರ ಬಳಿ ಹೋಗಿ ಮಾತನಾಡಿ ಬಂದ ಕಾರಣವನ್ನು ವಿಚಾರಿಸುವುದು, ಈ ಎಲ್ಲಾ ಜವಾಬ್ದಾರಿಗಳು ಕುಂಜುಕಾರನದ್ದಾಗಿರುತ್ತದೆ. ಈ ಕುಂಜುಕಾರ ಯಾರು ಬೇಕಾದರೂ ಆಗಬಹುದು.

**ಚೆಮ್ಮಕಾರ:** ಎರವರಲ್ಲಿ ನಾವು ಈಗಾಗಲೇ ತಿಳಿದಿರುವಂತೆ ಕುಲವನ್ನು ಅಥವಾ ವಂಶವನ್ನು

'ಚೆಮ್ಮ' ಎಂದು ಕರೆಯುತ್ತಾರೆ. ಉದಾಹರಣೆಗೆ ತಿರ್ನೆಲಿಮಂಜು, ಕುಪ್ಪೆ ತೋಡು ಮಂಜು, ಮುದಂಗುಚ್ಚು ಮಂಜು, ಕಾಳಕೋಟ್ಯೆ ಮಂಜು, ಬಡಾಕ್ಮಂಜು ಇತ್ಯಾದಿ. ಈ ರೀತಿಯ ಪ್ರತಿಯೊಂದು ವಿಭಿನ್ನ ಹೆಸರಿನ ವಿಭಿನ್ನ ಕುಲಕ್ಕೆ ಅವರದೇ ಕುಲದ ಹಿರಿಯ ಮತ್ತು ಅನುಭವಸ್ಥನಾದ ಒಬ್ಬ ಮುಖಂಡನಿರುತ್ತಾನೆ. ಅವನನ್ನು ಚೆಮ್ಮಕಾರ ಎಂದು ಕರೆಯುತ್ತಾರೆ. ಆ ಕುಲಕ್ಕೆ ಸಂಬಂಧಿಸಿದ ಎಲ್ಲ ಆಗುಹೋಗುಗಳು ಇವನ ಸಮ್ಮುಖದಲ್ಲಿಯೇ ನಡೆಯಬೇಕು. ಆ ನಿರ್ದಿಷ್ಟ ಕುಲಕ್ಕೆ ಸಂಬಂಧಿಸಿದ ಒಳ್ಳೆಯದು ಕೆಟ್ಟದು ಎಲ್ಲವೂ ಇವರ ಮುಂದಾಳತ್ವದಲ್ಲಿ ನಡೆಯುತ್ತದೆ ಮತ್ತು ಕುಲದಲ್ಲಿ ವಿಶೇಷ ಗೌರವಾದರಗಳನ್ನು ಈತನು ಹೊಂದಿರುತ್ತಾನೆ.

**ನಾಡುಕಾರ:** ಕೊಡಗಿನಲ್ಲಿ ಒಂದು ನಿರ್ದಿಷ್ಟ ಜಮ್ಮಕ್ಕೆ ಸೇರಿದ ಹಲವು ಗ್ರಾಮಗಳ ಒಕ್ಕೂಟವನ್ನು 'ನಾಡು' ಎಂದು ಕರೆಯಲಾಗುತ್ತಿತ್ತು. ಉದಾಹರಣೆಗೆ ಬೆಪ್ಪುನಾಡು, ಯಡೆನಾಲ್ಕು ನಾಡು, ಬೆಟ್ಟೆಯತ್ ನಾಡು, ಹತ್ತುಗಟ್ಟು ನಾಡು, ಅಂಜಿಗೇರಿ ನಾಡು, ಶ್ರೀಮಂಗಲ ನಾಡು, ಯಡವ ನಾಡು ಇತ್ಯಾದಿ. ಈ ರೀತಿ ಎರವರು ವಾಸವಿರುವ ಒಂದೊಂದು ನಾಡಿಗೆ ಒಬ್ಬೊಬ್ಬ ಮುಖ್ಯಸ್ಥನಿರುತ್ತಿದ್ದನು. ಅವನನ್ನು 'ನಾಡುಕಾರ' ಎಂದೂ ಕರೆಯಲಾಗುತ್ತಿತ್ತು. ಈ ನಾಡಿನ ವ್ಯಾಪ್ತಿಗೆ ಬರುವ ಎಲ್ಲ ಹಾಡಿಗಳು ಇವನ ನಿಯಂತ್ರಣದಲ್ಲಿರುತ್ತಿತ್ತು ಹಾಗೂ ಎಲ್ಲ ಹಾಡಿಗಳ ಮುಖಂಡರೊಡನೆ ಈತನಿಗೆ ಸಂಪರ್ಕವಿರುತಿತ್ತು. ಈ ನಾಡಿನ ಒಳಗಡೆ ಉದ್ಭವಿಸುವ ವಾದ-ವಿವಾದಗಳು, ಸಾವು-ನೋವು, ಮುಖ್ಯವಾದ ಆಚರಣೆಗಳು, ಹಬ್ಬಗಳು ಪ್ರತಿಯೊಂದರಲ್ಲೂ ಇವನ ಪಾತ್ರವಿರುತ್ತದೆ. ಆ ಅಷ್ಟು ಹಾಡಿಗಳಲ್ಲಿ ಸುಖ ದುಃಖ, ಸಾವು, ನೋವು, ಸಭೆ ಸಮಾರಂಭಗಳು ನಡೆದಾಗ ನಾಡುಕಾರನ ಆಗಮನ ಮುಖ್ಯವಾಗಿರುತ್ತದೆ. ಹಾಡಿಗಳ ಯೋಗಕ್ಷೇಮದ ಜವಾಬ್ದಾರಿ ಇವನದ್ದಾಗಿರುತ್ತದೆ. ಆದರೆ ಈಗ ಬುಡಕಟ್ಟುಗಳ ವಾಸಸ್ಥಳದೊಂದಿಗೆ ಬದುಕೂ ಬದಲಾದ ಕಾರಣ ನಾಡುಕಾರರನ್ನು ನಾವು ಕಾಣಲು ಸಾಧ್ಯವಿಲ್ಲ.

**ಕರ್ಮಿ:** ಪಂಜರಿ ಎರವರ ಭಾಷೆಯಲ್ಲಿ ಕರ್ಮಿ ಎಂದರೆ ಸೇವಕ ಈತ ಕುಂಜುಕಾರನಿಗೆ ಸಹಾಯಕನಂತಿದ್ದು ಸಮುದಾಯದ ಹಲವು ಜವಾಬ್ದಾರಿಗಳನ್ನು ಈತ ನಿರ್ವಹಿಸುತ್ತಾನೆ. ಸಮಸ್ತ ಹಾಡಿಯ ಎಲ್ಲ ಆಗುಹೋಗುಗಳು ಸುಸೂತ್ರವಾಗಿ ನಡೆಯಬೇಕಾದರೆ ಈ ಕರ್ಮಿಯ ಪಾತ್ರವೇ ಮುಖ್ಯ. ಯಾವುದೇ ಕೆಲಸ ಕಾರ್ಯ ನಡೆಯುವಾಗ ಅದಕ್ಕೆ ಬೇಕಾದ ಸಾಮಾನು ಸರಂಜಾಮುಗಳನ್ನು ಒದಗಿಸಿಕೊಡುವುದು ಮಾತ್ರವಲ್ಲದೆ, ಮನೆಯ ಯಜಮಾನ, ಚಮ್ಮಕಾರ, ಕುಂಜುಕಾರರಿಗೆ ಸಮಯಕ್ಕೆ ಸರಿಯಾಗಿ ಅವರು ಮಾಡಬೇಕಾದ ಕೆಲಸಗಳನ್ನು ತಿಳಿಸಿ ಎಲ್ಲವೂ ಸುಸೂತ್ರವಾಗಿ ನಡೆಯುವಂತೆ ನೋಡಿಕೊಳ್ಳುತ್ತಾನೆ. ಹಾಡಿಯಲ್ಲಿ ಸೌಹಾರ್ದ ವಾತಾವರಣವನ್ನು ನೆಲೆಸಿರುವಂತೆ ನೋಡಿಕೊಳ್ಳುವುದು ಈತನ ಜವಾಬ್ದಾರಿಯಾಗಿರುತ್ತದೆ. ಏನಾದರೂ ಅಸಹಜ,

ಅಹಿತಕರ ಪರಿಸ್ಥಿತಿ ಎದುರಾದಾಗ ಅದನ್ನು ಕುಂಜುಕಾರನಿಗೆ ತಿಳಿಸುವ ಜವಾಬ್ದಾರಿ ಈತನದು. ಹಾಗೆಯೇ ಏನಾದರೂ ಗಲಾಟೆ ನಡೆದಾಗ ಕುಂಜುಕಾರನಿಗೆ ಶೀಘ್ರವಾಗಿ ತಿಳಿಸಿ ಎಲ್ಲವನ್ನೂ ಸರಿಪಡಿಸಬೇಕಾದದ್ದು ಅವನದೇ ಜವಾಬ್ದಾರಿ. ಮದುವೆ, ಹುಟ್ಟು, ಸಾವು, ಪಂಚಾಯ್ತಿ, ವ್ಯಾಜ್ಯಗಳು ಇತ್ಯಾದಿ ವಿಷಯವನ್ನು ಸಮಸ್ತರಿಗೆ ತಿಳಿಸಿ ಎಲ್ಲರೂ ಪಾಲ್ಗೊಳ್ಳುವಂತೆ ನೋಡಿ ಕೊಳ್ಳುವ ಜವಾಬ್ಧಾರಿಯೂ ಈತನದೇ. ಒಟ್ಟಾರೆಯಾಗಿ ಹಾಡಿಯ ಸಮಸ್ಥ ಆಗುಹೋಗುಗಳ ಅರಿವು ಈತನಿಗಿರುತ್ತದೆ. ಈತನಿಗೆ ಜವಾಬ್ದಾರಿಯೂ ಕೂಡ ಹೆಚ್ಚು. ಹಾಡಿಯಲ್ಲಿ ಅನಾಥರಾಗಿ ಯಾರಾದರೂ ಸತ್ತರೆ ಅವರ ಸಂಸ್ಕಾರವನ್ನು ಈತನೇ ನೆರವೇರಿಸಬೇಕು ಮತ್ತು ತಿಥಿಯ ಊಟ(ಎಡೆ ಅಥವಾ ನೂಕ)ವನ್ನು ಸಂಬಂಧಿಕರ ಪರವಾಗಿ ಕರ್ಮಿಯೇ ಸೇವಿಸಬೇಕು.

ಕರ್ಮಿಯ ಜವಾಬ್ಧಾರಿ ವಂಶಪಾರಂಪರ್ಯದಿಂದ ಬರುವಂತದ್ದು. 'ಕರ್ಮಿಯಾಗುವಂತಹ ವ್ಯಕ್ತಿ ನಾಲಪಡಿ ಕುಲದವನೇ ಆಗಿರಬೇಕೆಂಬ ನಿಯಮವಿದೆ.'[41]

ಎರವರ ಒಳಾಡಳಿತ ವ್ಯವಸ್ಥೆ ಅತ್ಯುತ್ತಮವಾಗಿದೆ. ಅಧಿಕಾರದ ವಿಕೇಂದ್ರೀಕರಣವು ಸಮುದಾಯದ ಹಿತಾಸಕ್ತಿಗೆಂದೇ ರಚಿಸಲ್ಪಟ್ಟವು. ಉತ್ತಮವಾದ ಒಳಾಡಳಿತ ವ್ಯವಸ್ಥೆಯನ್ನು ಎರವರು ಹೊಂದಿದ್ದು, ಯಜಮಾನಿಕೆಯ ಶ್ರೇಣೀಕರಣದ ಪ್ರತಿ ಹಂತದಲ್ಲೂ ಅನ್ಯೋನ್ಯತೆ ನಂಬಿಕೆ, ಗೌರವಗಳಿದ್ದು, ಪರಸ್ಪರ ಭಯ, ನಿಷ್ಠೆ, ಗೌರವಗಳಿಂದ ತಮ್ಮ ತಮ್ಮ ಜವಾಬ್ದಾರಿ ಗಳನ್ನು ಇವರು ನಿರ್ವಹಿಸಿಕೊಂಡು ಹೋಗುತ್ತಾರೆ. ಬುಡಕಟ್ಟುಗಳ ಈ ವ್ಯವಸ್ಥಿತವಾದ ಕಾರ್ಯವೈಖರಿ ಶ್ಲಾಘನೀಯವಾದದ್ದು, ಆದರೆ ಎರವರ ಬದುಕು ಅತಂತ್ರವಾಗುತ್ತಿದ್ದಂತೆಯೇ ಈಗ ಈ ಯಜಮಾನಿಕೆಯ ವ್ಯವಸ್ಥೆಗಳು ಶಿಥಿಲವಾಗುತ್ತವೆ.

## ಫಣಿ ಎರವರಲ್ಲಿ ಯಜಮಾನಿಕೆಯ ಸ್ವರೂಪ

ಫಣಿ ಎರವರೂ ಕೂಡ ಸಮುದಾಯದ ಒಳಾಡಳಿತ ವ್ಯವಸ್ಥೆಯನ್ನು ಸುಗಮವಾಗಿ ನಡೆಸಲು ಹಲವು ಹಂತದ ಯಜಮಾನಿಕೆಯ ವ್ಯವಸ್ಥೆಯನ್ನು ಹೊಂದಿದೆ. ಈ ಸಮುದಾಯದಲ್ಲಿ ಮುಖ್ಯಸ್ಥರುಗಳನ್ನು ತಮ್ಮಡಿ, ಅಟ್ಟಾಳಿ, ಚೆಮ್ಮಕಾರ ಎಂದು ವಿಭಾಗಿಸಿದ್ದಾರೆ. ಇವರು ಹಂತಹಂತವಾಗಿ ವಿವಿಧ ರೀತಿಯ ಜವಾಬ್ದಾರಿಗಳನ್ನು ನಿರ್ವಹಿಸುತ್ತಾರೆ ಮತ್ತು ಅದಕ್ಕೆ ತಕ್ಕಂತೆ ಸ್ಥಾನಮಾನಗಳನ್ನು ಹೊಂದಿರುತ್ತಾರೆ.

**1. ತಮ್ಮಡಿ:** ಈತ ಸಮುದಾಯದ ಮುಖ್ಯಸ್ಥನಾಗಿರುತ್ತಾನೆ. ಈತನಿಗೆ ಸಮುದಾಯದಲ್ಲಿ ವಿಶೇಷ ವಾದ ಗೌರವಗಳಿವೆ. ಈತನು ಫಣಿ ಎರವರ 'ಶಮನ್' ಆಗಿ ಪಾತ್ರ ನಿರ್ವಹಿಸುತ್ತಾನೆ. ಆತ್ಮವನ್ನು ಆವಾಹಿಸಿಕೊಳ್ಳುವುದು, ಅದರೊಂದಿಗೆ ಮಾತುಕತೆ ನಡೆಸುವುದು, ಕಷ್ಟಗಳಿಗೆ

ಪರಿಹಾರವನ್ನು ಕೇಳುವುದು, ಈ ಮೊದಲಾದ ಅಲೌಕಿಕ ಆಚರಣೆಗಳನ್ನು ಈತ ನೆರವೇರಿಸುತ್ತಾನೆ. ಸಮುದಾಯಕ್ಕೆ ಸಂಬಂಧಿಸಿದ ಜೀವನಾವರ್ತದ ಆಚರಣೆಗಳು ಈತನ ಸಮ್ಮುಖದಲ್ಲಿ ನೆರವೇರುತ್ತವೆ. ಈತ ಸಮುದಾಯಕ್ಕೆ ಸಂಬಂಧಿಸಿದ ಎಲ್ಲ ಮೌಖಿಕ ಸಾಹಿತ್ಯವನ್ನು ಕಂಠಪಾಟ ಮಾಡಿಕೊಂಡಿರುತ್ತಾನೆ. ಅಷ್ಟೇ ಅಲ್ಲದೆ ಸಣ್ಣಪುಟ್ಟ ಕಾಯಿಲೆಗಳಿಗೆ ನಾಟಿ ವೈದ್ಯ, ಮಾಟ ಮಂತ್ರ, ಪೂಜೆ ಪುನಸ್ಕಾರಗಳನ್ನು ಈತ ನಡೆಸಿಕೊಡುತ್ತಾನೆ.

**ಚಮ್ಮಕಾರ:** ಈತನನ್ನು ಚೆಮ್ಮಿ ಎಂದೂ ಕೂಡ ಕರೆಯುತ್ತಾರೆ. ಇದು ವಂಶಪಾರಂಪರ್ಯದಿಂದ ಬರುವ ಜವಾಬ್ದಾರಿಯಲ್ಲ. ಯಾರಿಗೆ ಈ ಸಮುದಾಯದ ಬಗ್ಗೆ ಕಳಕಳಿಯಿದ್ದು ಸಮುದಾಯಕ್ಕೆ ಸಂಬಂಧಿಸಿದ ಆಚರಣೆಗಳು, ನಂಬಿಕೆಗಳು, ವಿಧಿನಿಷೇಧಗಳು, ಸಂಪ್ರದಾಯಗಳು ಇವೆಲ್ಲದರ ಬಗ್ಗೆ ಸಂಪೂರ್ಣವಾದ ತಿಳುವಳಿಕೆ ಹೊಂದಿರುತ್ತಾರೋ ಅವರು ಚೆಮ್ಮಕಾರರಾಗಬಹುದು. ಈತನಿಗೆ ಕುಂಜಿನ ಎಲ್ಲ ಹುಟ್ಟು ಮದುವೆ ಸಾವಿಗೆ ಸಂಬಂಧಿಸಿದ ಆಚರಣೆಗಳನ್ನು ನಿರ್ವಹಿಸಬೇಕಾದ ಜವಾಬ್ದಾರಿಯಿರುತ್ತದೆ. ವ್ಯಕ್ತಿಯ ಆಸಕ್ತಿ, ಜಾಣ್ಮೆ, ಮಾತು, ಸಮದಾಯದ ಜ್ಞಾನವನ್ನು ಹೊಂದಿರುವವನನ್ನು ಊರಿನವರೆಲ್ಲ ಸೇರಿ ಆಯ್ಕೆ ಮಾಡುತ್ತಾರೆ.

**2. ಅಟ್ಟಾಳಿ:** ಫಣಿ ಎರವರ ಭಾಷೆಯಲ್ಲಿ ಅಟ್ಟಾಳಿ ಎಂದರೆ ಪುರೋಹಿತ ಎಂದರ್ಥ. 'ಬಣ್ಣ ಪೊದುವ' ಎಂದೂ ಕೂಡ ಇವನನ್ನು ಕರೆಯುತ್ತಾರೆ. ತಿಥಿ ದಿನದಂದು ರಾತ್ರಿಯಲ್ಲಿ ನೆರವೇರಿಸುವ ಆಚರಣೆ ಮತ್ತು ಅಂದು ರಾತ್ರಿಯಿಡೀ ತಿಥಿ ಹಾಡನ್ನು ಹಾಡುವ ಜವಾಬ್ದಾರಿ ಈತನದ್ದಾಗಿರುತ್ತದೆ. ಸಮುದಾಯಕ್ಕೆ ಸಂಬಂಧಿಸಿದ ಎಲ್ಲ ಶಾಸ್ತ್ರ, ಸಂಪ್ರದಾಯಗಳನ್ನು, ಆಚರಣೆಗಳನ್ನು ಈತ ಬಲ್ಲವನಾಗಿರುತ್ತಾನೆ. ಈ ಜವಾಬ್ದಾರಿ ವಂಶಪಾರಂಪರ್ಯವಾಗಿ ಬರುವುದಿಲ್ಲ. ಯಾರೇ ಅಗಲಿ ಸಮುದಾಯದ ಆಚರಣೆಗಳ ಬಗ್ಗೆ ಮೌಖಿಕ ಸಾಹಿತ್ಯದ ಬಗ್ಗೆ ಆಳವಾದ ಜ್ಞಾನವನ್ನು ಹೊಂದಿರುವವರು ಈ ಜವಾಬ್ದಾರಿಯನ್ನು ನಿರ್ವಹಿಸಬಹುದು. ಇಡೀ ಸಮುದಾಯವು ಈತನನ್ನು ಬಹಳ ಗೌರವದಿಂದ ಕಾಣುತ್ತದೆ.

ಈ ರೀತಿ ಫಣಿ ಎರವರಲ್ಲಿ ಅಧಿಕಾರವು ವಿವಿಧ ಹಂತಗಳಾಗಿ ಹಂಚಿಕೆಯಾಗಿದೆ. ಅತ್ಯುತ್ತಮವಾದ ಒಳಾಡಳಿತ ವ್ಯವಸ್ಥೆಯನ್ನು ಇವರು ಹೊಂದಿದ್ದಾರೆ. ಅಧಿಕಾರದ ವಿಕೇಂದ್ರೀಕರಣವನ್ನು ಇಲ್ಲಿ ನಾವು ಕಾಣಬಹುದು. ಅಧಿಕಾರ ಯಾವುದೇ ಒಬ್ಬ ವ್ಯಕ್ತಿಯಲ್ಲಿದ್ದಾಗ ದುರುಪಯೋಗಗೊಳ್ಳುವ ಸಾಧ್ಯತೆಗಳು ಹೆಚ್ಚಿರುತ್ತವೆ. ಅದನ್ನು ಅರಿತಿರುವ ಈ ಬುಡಕಟ್ಟುಗಳು ಅಧಿಕಾರವನ್ನು ಹಲವು ಹಂತಗಳಾಗಿ ವಿಭಾಗಿಸಿ ಪ್ರತಿಯೊಬ್ಬರೂ ನಿರ್ದಿಷ್ಟವಾದ ಬೇರೆ ಬೇರೆ ಜವಾಬ್ದಾರಿಗಳನ್ನು ಹಂಚಿಕೊಂಡಿರುತ್ತಾರೆ. ಕೆಲವೊಂದು ಅಧಿಕಾರವು ವಂಶಪಾರಂಪರ್ಯವಾಗಿ ಬಂದರೂ ಕೂಡ ಯೋಗ್ಯತೆಯಿಲ್ಲದ ವ್ಯಕ್ತಿಗಳಿಗೆ ಜವಾಬ್ದಾರಿಗಳು

ವರ್ಗಾವಣೆಯಾದಾಗಲೂ ಕೂಡ ಅನುಕೂಲಕ್ಕಿಂತ ಅಪಾಯವೇ ಹೆಚ್ಚು, ಅಂತಹ ಸಂದರ್ಭದಲ್ಲಿ ಅದೇ ಕುಲಕ್ಕೆ ಸೇರಿದ ಸೋದರಸಂಬಂಧಿಗಳು ಸಮರ್ಥರೆಂದು ಕಂಡುಬಂದರೆ ಅಂತವರಿಗೆ ಜವಾಬ್ದಾರಿ ವರ್ಗಾವಣೆಯಾಗುತ್ತದೆ. ಈ ಬುಡಕಟ್ಟು ಸಮುದಾಯಗಳ ಎಲ್ಲ ಆಗುಹೋಗುಗಳು ಸಮುದಾಯದ ದೈವಿಕ, ಅತಿಮಾನುಷ ನಂಬಿಕೆಗಳೊಂದಿಗೆ ತಳುಕು ಹಾಕಿಕೊಂಡಿರುವುದರಿಂದ ಪ್ರತಿಯೊಬ್ಬರೂ ಭಯ ಭಕ್ತಿಯಿಂದ ತಮ್ಮ ಕರ್ತವ್ಯಗಳನ್ನು ನಿಭಾಯಿಸುತ್ತಾರೆ.

## ಸೋಲಿಗರಲ್ಲಿ ಯಜಮಾನಿಕೆಯ ಸ್ವರೂಪ

ಸೋಲಿಗರದ್ದು ಒಂದು ಒಕ್ಕೂಟ ಸಮಾಜವ್ಯವಸ್ಥೆ. ಇವರು ಅತ್ಯತ್ತಮವಾದ ಒಳಾಡಳಿತ ವ್ಯವಸ್ಥೆಯನ್ನು ಹೊಂದಿದ್ದಾರೆ. ಈ ಸಮುದಾಯದ ಪ್ರತಿಯೊಬ್ಬರೂ ಕೂಡ ಗುಂಪಿನ ಆಡಳಿತ ವ್ಯವಸ್ಥೆಗೆ ಒಳಪಟ್ಟಿರಬೇಕು. ಸೋಲಿಗರಲ್ಲಿ ಒಳಾಡಳಿತದ ಜವಾಬ್ದಾರಿಗಳು ಹಲವು ಹಂತಗಳಾಗಿ ವಿಭಜಿಸಲ್ಪಟ್ಟಿದೆ ಮತ್ತು ಪ್ರತಿಯೊಬ್ಬರೂ ತಮ್ಮ ಹುದ್ದೆಗೆ ಅನುಗುಣವಾಗಿ ಶ್ರದ್ಧಾಭಕ್ತಿಯಿಂದ ಅದನ್ನು ನಿಭಾಯಿಸುತ್ತಾರೆ. ಈ ಯಜಮಾನಿಕೆಯು ಕೂಡ ನಿರ್ದಿಷ್ಟ ಕುಲಕ್ಕೆ ವಂಶಪಾರಂಪರ್ಯವಾಗಿ ಬಂದಿರುತ್ತದೆ. ಆದರೂ ಕೂಡ ಸಮುದಾಯದ ಹಿರಿಯರೆಲ್ಲಾ ಸೇರಿ ನಿರ್ದಿಷ್ಟ ಕುಲದಿಂದ ಸೂಕ್ತವಾದ ವ್ಯಕ್ತಿಯನ್ನು ಆಯ್ಕೆ ಮಾಡುತ್ತಾರೆ. ಸೋಲಿಗರಲ್ಲಿ ಯಜಮಾನಿಕೆಯ ವಿವಿಧ ಹಂತಗಳು:

**ಯಜಮಾನ:** ಈತನೇ ಸಮುದಾಯದ ಮುಖ್ಯಸ್ಥನಾಗಿರುತ್ತಾನೆ. ಈತ ಒಳಾಡಳಿತ ವ್ಯವಸ್ಥೆಯ ಮೊದಲಿಗನಾಗಿರುತ್ತಾನೆ. ಸೋಲಿಗರಲ್ಲಿ ವಂಶಪಾರ್ಯವಾಗಿ 'ಸೆಳೆಕರ' ಕುಲದವರಿಗೆ ಈ ಅಧಿಕಾರವು ವರ್ಗಾವಣೆಯಾಗುತ್ತದೆ. ಕೆಲವೊಂದು ಕಡೆಯಲ್ಲಿ ಊರವರೆಲ್ಲ ಸೇರಿ ಸೂಕ್ತ ವ್ಯಕ್ತಿಯನ್ನು ಆಯ್ಕೆ ಮಾಡುತ್ತಾರೆ. ಜವಾಬ್ದಾರಿಯ ಸಮಾನ ಹಂಚಿಕೆಗಾಗಿ ಹಲವು ಹಂತ ಗಳಾಗಿ ಜವಾಬ್ದಾರಿ ಹಂಚಲ್ಪಟ್ಟಿರುತ್ತದೆ. ಉಳಿದ ಹಂತದ ಮುಖ್ಯಸ್ಥರು ಈತನಿಗೆ ಸಹಾಯಕ ರಾಗಿರುತ್ತಾರೆ. ಕೆಳ ಹಂತದ ಮುಖ್ಯಸ್ಥರು ಯಜಮಾನನಿಗೆ ಅಗತ್ಯ ಸಲಹೆ ಸೂಚನೆ ಗಳನ್ನು ನೀಡುತ್ತಾ ಉತ್ತಮ ಆಡಳಿತವನ್ನು ನೀಡಲು ಸಹಕರಿಸುತ್ತಾರೆ. ಇವರಲ್ಲಿ ಅಧಿಕಾರ ನಿರಂಕುಶ ವಾಗಿರುವುದಿಲ್ಲ.

**ಪಟ್ಟೆಗಾರ:** ಸೋಲಿಗರು ವಾಸಿಸುವ ಪ್ರದೇಶವನ್ನು ಪೋಡು ಎಂದು ಕರೆಯುತ್ತಾರೆ. ಏಳು ಪೋಡಿಗೆ ಒಬ್ಬರಂತೆ ಪಟ್ಟೆಗಾರನನ್ನು ನೇಮಿಸುತ್ತಾರೆ. ಪಟ್ಟೆಗಾರನು ವಂಶಪಾರಂಪರ್ಯವಾಗಿ 'ತೆನೆಯರ' ಕುಲಕ್ಕೆ ಸೇರಿದವನಾಗಿರುತ್ತಾನೆ. ಆ ಏಳು ಪೋಡಿಗೆ ಸೇರಿದ ಎಲ್ಲ ಸುಖ ದುಃಖ ನ್ಯಾಯ ತೀರ್ಮಾನಗಳಲ್ಲಿ ಈತನು ಬಹುಮುಖ್ಯ ಪಾತ್ರ ವಹಿಸುತ್ತಾನೆ. ಆ ಏಳು ಪೋಡಿನ

ಯಜಮಾನರು ತಮ್ಮ ತಮ್ಮ ಪೋಡಿಗೆ ಸಂಬಂಧಿಸಿದ ಎಲ್ಲ ಒಳ್ಳೆಯದು ಕೆಟ್ಟದ್ದನ್ನು ಪಟ್ಟೆಗಾರನಿಗೆ ತಿಳಿಸುತ್ತಾರೆ. ಆ ಏಳು ಪೋಡಿನಲ್ಲಿ ನಡೆಯುವ ಹಬ್ಬ, ಆಚರಣೆಗಳು, ಸಾವು ನೋವುಗಳು ಎಲ್ಲವೂ ಈತನಿಗೆ ತಿಳಿದಿರುತ್ತದೆ ಮತ್ತು ಈತ ಕಡ್ಡಾಯವಾಗಿ ಇದರಲ್ಲಿ ಭಾಗವಹಿಸುತ್ತಾನೆ.

**ಚಲುವಾದಿ:** ಈತ ಯಜಮಾನನಿಗೆ ಸಹಾಯಕನಾಗಿರುತ್ತಾನೆ. ವಂಶಪಾರಂಪರ್ಯವಾಗಿ 'ಸೂರರ' ಕುಲದವರು ಈ ಜವಾಬ್ದಾರಿಯನ್ನು ನಿಭಾಯಿಸುತ್ತಾರೆ. ಯಜಮಾನನ ಆಣತಿಯಂತೆ ಪೋಡಿಗೆ ಸಂಬಂಧಿಸಿದ ಮಾಹಿತಿಯನ್ನು ಇತರೆ ಯಜಮಾನರಿಗೆ ತಲುಪಿಸುವುದು ಈತನ ಜವಾಬ್ದಾರಿ.

**ಕೋಲುಕಾರ:** ಸಾಮಾನ್ಯವಾಗಿ ಸೋಲಿಗರಲ್ಲಿ ಇಬ್ಬರು ಕೋಲುಕಾರರು ನೇಮಕವಾಗಿರುತ್ತಾರೆ. ವಂಶಪಾರಂಪರ್ಯವಾಗಿ 'ಬೆಳ್ಳರ' ಕುಲದವರು ಈ ಜವಾಬ್ದಾರಿ ಹೊತ್ತಿರುತ್ತಾರೆ. ಹಿಂದೆ ಪಂಚಾಯಿತಿಯಲ್ಲಿ ಶಿಕ್ಷೆಗೆ ಒಳಗಾದವರಿಗೆ ಶಿಕ್ಷೆಯನ್ನು ಜಾರಿಗೊಳಿಸುವ ಜವಾಬ್ದಾರಿಯೂ ಕೂಡ ಇವರದ್ದಾಗಿರುತ್ತಿತ್ತು. 'ಅಪರಾಧಿಯು ತಪ್ಪೊಪ್ಪಿಕೊಳ್ಳದೆ ಹೋದರೆ ಯಜಮಾನನಿಗೆ ಸಹಾಯಕರಾಗಿರುವ ಎರಡು ಜನ ಕೋಲುಕಾರರು ಯಜಮಾನನ ಆಜ್ಞೆಯಂತೆ ಅಪರಾಧಿಯನ್ನು ಸೊಂಟದಿಂದ ಕೆಳಕ್ಕೆ ಚೆನ್ನಾಗಿ ಥಳಿಸುತ್ತಾರೆ. ಈ ಶಿಕ್ಷೆಯು ಅಪರಾಧಿಯಲ್ಲಿ ಭಯವನ್ನು ಮೂಡಿಸಿ ಆತ/ಆಕೆ ತಪ್ಪನ್ನು ಒಪ್ಪಿಕೊಳ್ಳುತ್ತಾನೆ'.[42] ಈ ಕೋಲುಕಾರನ ಕುರಿತ ಪ್ರಸ್ತಾಪ ಪಿ.ಕೆ ರಾಜಶೇಖರ್‌ರವರು ಸಂಗ್ರಹಿಸಿದ ಸಂಕಮ್ಮನ ಸಾಲಿನಲ್ಲಿ ಬರುತ್ತದೆ. ಊರಿನ ಯಜಮಾನ ಕುಲದ ಬೇಟೆಗೆ ಹೋಗಬೇಕು ಎಂದು ತೀರ್ಮಾನಿಸಲು ಪಂಚಾಯ್ತಿ ಕರೆದಾಗ ನೀಲಯ್ಯ ಪಂಚಾಯ್ತಿಗೆ ಬರುವುದಿಲ್ಲ ಆಗ ಯಜಮಾನ ಕೋಲುಕಾರನನ್ನು ಕರೆದು ನೀಲಯ್ಯನನ್ನು ಕರೆತರಲು ಹೇಳುತ್ತಾನೆ.

**ದಳವಾಯಿ:** ಸಮುದಾಯದಲ್ಲಿ ಆಡಳಿತದ ಸುವ್ಯವಸ್ಥೆಗಾಗಿ ಕೆಲವು ಜವಾಬ್ದಾರಿಯನ್ನು ಈತ ನಿರ್ವಹಿಸಬೇಕಾಗುತ್ತದೆ. ವಂಶಪಾರಂಪರ್ಯವಾಗಿ 'ಹಾಲೇರ' ಕುಲದವರು ಈ ಜವಾಬ್ದಾರಿಯನ್ನು ನಿರ್ವಹಿಸುತ್ತಾರೆ. ಈತನು ನ್ಯಾಯ ತೀರ್ಮಾನದಲ್ಲಿ ಯಜಮಾನನಿಗೆ ಸಹಾಯವನ್ನು ಮಾಡಬೇಕಾಗುತ್ತದೆ.

**ಪಟೇಲ:** ಈತನನ್ನು ಪಟೇಲ ಎಂದು ಕರೆಯುತ್ತಾರೆ. ಯಜಮಾನನು ನ್ಯಾಯ ತೀರ್ಮಾನ ಮಾಡುವ ಸಮಯದಲ್ಲಿ ಯಜಮಾನನಿಗೆ ಸಹಾಯಕನಾಗಿ ಈತ ಕೆಲಸ ಮಾಡುತ್ತಾನೆ.

## ಜೇನುಕುರುಬರಲ್ಲಿ ಯಜಮಾನಿಕೆಯ ಸ್ವರೂಪ

ಜೇನುಕುರುಬರು ಅತ್ಯತ್ತುಮವಾದ ಒಳಾಡಳಿತ ವ್ಯವಸ್ಥೆಯನ್ನು ಹೊಂದಿದ್ದಾರೆ. ಸಮುದಾಯಕ್ಕೆ ಸಂಬಂಧಿಸಿದ ನ್ಯಾಯ, ಪಂಚಾಯ್ತಿ ಪ್ರಮುಖ ನಿರ್ಧಾರಗಳು ಸಮುದಾಯದಲ್ಲೇ ಇತ್ಯರ್ಥವಾಗುತ್ತದೆ. ಜೇನುಕುರುಬರಲ್ಲಿ ಮುಖ್ಯವಾಗಿ ಯಜಮಾನಿಕೆಯನ್ನು ಈ ಕೆಳಗಿನಂತೆ ವಿಭಾಗಿಸಲಾಗಿದೆ

1. ಯಜಮಾನ
2. ಕೋಲುಕಾರ

**ಯಜಮಾನ:** ಪ್ರತಿ ಜಮ್ಮದೊಳಗಡೆ ಇರುವ ಹಾಡಿಯಲ್ಲಿ ಒಬ್ಬೊಬ್ಬ ಯಜಮಾನನಿರುತ್ತಾನೆ. ವಂಶಪಾರಂಪರ್ಯವಾಗಿ ಈ ಯಜಮಾನಿಕೆ ಒಂದೊಂದು ಕುಲಕ್ಕೆ ನಿಗದಿಯಾಗಿರುತ್ತದೆ. ಆ ನಿರ್ದಿಷ್ಟ ಕುಲದವರೇ ಯಜಮಾನರಾಗಬೇಕು. ಸಮುದಾಯಲ್ಲಿ ನಡೆಯುವ ನ್ಯಾಯ ಪಂಚಾಯಿತಿ, ಹಬ್ಬ ಮೊದಲಾದವುಗಳಲ್ಲದೆ, ಜೀವನಾವರ್ತನ ಆಚರಣೆಗಳಲ್ಲಿ ಈತ ಮುಖ್ಯ ಪಾತ್ರ ವಹಿಸುತ್ತಾನೆ.

**ಕೋಲುಕಾರ:** ಈತನೂ ಕೂಡ ವಂಶಪಾರಂಪರ್ಯವಾಗಿ ಆಯ್ಕೆಯಾಗುತ್ತಾನೆ. ಈತ ಯಜಮಾನನ ಸಹಾಯಕನಾಗಿದ್ದು ಯಜಮಾನನ ಆದೇಶದಂತೆ ಜವಾಬ್ದಾರಿಗಳನ್ನು ನಿಭಾಯಿ ಸುತ್ತಾನೆ.

## ಬೆಟ್ಟಕುರುಬರಲ್ಲಿ ಯಜಮಾನಿಕೆಯ ಸ್ವರೂಪ

ಬೆಟ್ಟಕುರುಬರು ಕೂಡ ಅತ್ಯುತ್ತಮವಾದ ಒಳಾಡಳಿತ ವ್ಯವಸ್ಥೆಯನ್ನು ಹೊಂದಿದ್ದಾರೆ. ಕಾಡಿನಲ್ಲಿ ನಿರ್ದಿಷ್ಟ ಗಡಿಯೊಳಗೆ ವಾಸಿಸುತ್ತಾರೆ. ಆ ಗಡಿಯನ್ನು 'ಎಲ್ಲೆ' ಎಂದು ಕರೆಯುತ್ತಾರೆ. ಪ್ರತಿಯೊಂದು ಹಾಡಿಯಲ್ಲಿಯೂ ಒಬ್ಬ ನಾಯಕನಿರುತ್ತಾನೆ. ಆತನು ಆ ನಿರ್ದಿಷ್ಟ ಜಮ್ಮಕ್ಕೆ ಸೇರಿದವನಾಗಿರಬೇಕು. ಯಜಮಾನಿಕೆಯು ವಂಶಪಾರಂಪಾರ್ಯವಾಗಿ ಸಾಗಿಬರುತ್ತದೆ. ಬೆಟ್ಟಕುರುಬರ ನ್ಯಾಯ ಪಂಚಾಯಿತಿಯು ಅಂಬಾಲದಲ್ಲಿ ನಡೆಯುತ್ತದೆ. ಪಂಚಾಯಿತಿ ನಡೆಯುವಾಗ ಪ್ರತಿ ಮನೆಯಿಂದ ಒಬ್ಬರು ಕಡ್ಡಾಯವಾಗಿ ಬರಲೇ ಬೇಕು. ಅಲ್ಲಿ ನೆರೆದ ಎಲ್ಲರೂ ಕೂಡ ಈ ಚರ್ಚೆಯಲ್ಲಿ ಪಾಲ್ಗೊಂಡು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಎಲ್ಲರ ಪಾಲ್ಗೊಳ್ಳುವಿಕೆಯಿಂದ ವಿಚಾರಗಳು ಇತ್ಯರ್ಥವಾಗುತ್ತವೆ. ಯಜಮಾನನ ತೀರ್ಮಾನ ಅಂತಿಮವಲ್ಲ. ಸಮುದಾಯದ ಪಾಲ್ಗೊಳ್ಳುವಿಕೆಯು ಇಲ್ಲಿ ಪ್ರಧಾನವಾಗಿರುತ್ತದೆ.

ಅಂಬಾಲವು ಹಾಡಿಯ ಮಧ್ಯಭಾಗದಲ್ಲಿರುತ್ತದೆ ಮತ್ತು ಅಂಬಾಲವನ್ನು ಬಹಳ ಭಕ್ತಿ ಗೌರವದಿಂದ ಕಾಣುತ್ತಾರೆ. ಈ ಅಂಬಾಲದ ಸುತ್ತ ಚೌಕಾಕಾರದಲ್ಲಿ ಹಾಡಿಯವರು ಮನೆಯನ್ನು ನಿರ್ಮಿಸುತ್ತಾರೆ. ಪ್ರತೀ ಮನೆಯು ಕೂಡ ಅಂಬಾಲಕ್ಕೆ ಕಾಣುವಂತಿರುತ್ತದೆ. ಅಂಬಾಲದಲ್ಲಿ ಹಾಡಿಯ ಯಜಮಾನ ಕುಳಿತಿದ್ದರೆ ಆ ಹಾಡಿಯ ಪ್ರತಿ ಮನೆಯ ವ್ಯವಹಾರವು ಆತನಿಗೆ ಕಾಣುವಂತಿರುತ್ತದೆ. ಆತ ಹಾಡಿಯ ಸಮಸ್ತ ಒಳಿತು ಕೆಡುಕು, ಕಷ್ಟ ಸುಖಗಳನ್ನು ಬಲ್ಲವ ನಾಗಿರುತ್ತಾನೆ. ಯಾವುದಾದರು ಮನೆಯಲ್ಲಿ ಗಲಾಟೆ ಆಗುತ್ತಿದ್ದರೆ ಅದನ್ನು ಅಂಬಾಲದಿಂದಲೆ ಕೇಳಿಸಿಕೊಂಡು ಅವರನ್ನು ಅಂಬಾಲಕ್ಕೆ ಕರೆಸಿ ಸಮಸ್ಯೆಯನ್ನು ಬಗೆಹರಿಸುತ್ತಿದ್ದನು. ಹಾಡಿಯ ಯಾವುದೇ ಮನೆಯವರು ಉಪವಾಸವಿರುತ್ತಿರಲಿಲ್ಲ. ಪ್ರತಿಯೊಬ್ಬರು ಹಂಚಿ ತಿನ್ನುತ್ತಿದ್ದರು. ಹಾಡಿಯ ಯಜಮಾನ ಅದನ್ನೆಲ್ಲಾ ಸುಸೂತ್ರವಾಗಿ ನೊಡಿಕೊಳ್ಳುವವನಾಗಿರುತ್ತಿದ್ದನು. ಅವನಿಗೆ ಸಮುದಾಯದಲ್ಲಿ ವಿಶೇಷವಾದ ಗೌರವವಿರುತ್ತದೆ ಮತ್ತು ಆತನಿಗೆ ಇರುವಷ್ಟೇ ಗೌರವ ಆತನ ಹೆಂಡತಿಗೂ ಇರುತ್ತಿತ್ತು.

ಬೆಟ್ಟಕುರುಬರ ಸಮುದಾಯದಲ್ಲಿ ಹೆಂಗಸರಿಗೆ ಸಮಾನ ಪ್ರಾಶಸ್ತ್ಯವಿದೆ. ಹಾಗೆಯೇ ಯುವಕರಿಗೂ, ಯುವತಿರಿಗೂ ನಾಯಕತ್ವವನ್ನು ಕಲ್ಪಿಸಿಕೊಟ್ಟಿದ್ದಾರೆ. ಸಮುದಾಯದ ಯುವಕರಲ್ಲಿ ಮತ್ತು ಯುವತಿಯರಲ್ಲಿ ಅತ್ಯಂತ ಚುರುಕಾದ, ಸಮುದಾಯವನ್ನು ಏಕಸೂತ್ರದಲ್ಲಿ ಕೊಂಡೊಯ್ಯುವ ಸಾಮರ್ಥ್ಯವಿರುವವರನ್ನು ಆಯ್ಕೆ ಮಾಡಿ ಅವರಿಗೆ ನಾಯಕತ್ವವನ್ನು ವಹಿಸಿಕೊಡುತ್ತಿದ್ದರು. ಹೀಗೆ ಆಯ್ಕೆಯಾದ ಯುವ ನಾಯಕ ಅಥವ ಯುವ ನಾಯಕಿ ಆ ಗುಂಪಿನ ಮುಂದಾಳುಗಳಾಗಿ ಹಬ್ಬ ಪೂಜೆ ಸಮಾರಂಭ ಇತ್ಯಾದಿ ಸಂದರ್ಭದಲ್ಲಿ ತಮ್ಮ ಗುಂಪನ್ನು ಪ್ರೋತ್ಸಾಹಿಸಿ ಕಾರ್ಯಕ್ರಮಗಳಲ್ಲಿ ಮುಖ್ಯವಾದ ಜವಾಬ್ದಾರಿಯನ್ನು ನಿಭಾಯಿಸುತ್ತಿದ್ದರು.

ಬುಡಕಟ್ಟು ಮೌಖಿಕ ಸಾಹಿತ್ಯದಲ್ಲಿ ಅತಂತ್ರತೆಯ ಭಾವವಿದೆ. ಶಿಷ್ಟ, ಜನಪದ ಮತ್ತು ಬುಡಕಟ್ಟು ಸಾಹಿತ್ಯಗಳ ಅಂತಃಸತ್ವವನ್ನು ಗಮನಿಸಿದಾಗ ಅವು ತಮ್ಮಲ್ಲಿ ವಿಶಿಷ್ಟತೆಯನ್ನು ಪ್ರತ್ಯೇಕತೆಯನ್ನು ಹೊಂದಿರುವುದನ್ನು ಗಮನಿಸಬಹುದು. ಬುಡಕಟ್ಟುಗಳು ತಮ್ಮ ಪ್ರಕೃತಿಯ ಅಗಾಧತೆಯನ್ನು ವಿಸ್ಮಯವನ್ನು ತಮ್ಮ ಒಡಲಲ್ಲಿ ಅಡಗಿಸಿಕೊಂಡಿವೆ. ಕುಲದ ಪ್ರಜ್ಞೆ, ಶ್ರಮದ ಮಹತ್ವ, ಪಾರಂಪರಿಕ ನಂಬಿಕೆ, ಪ್ರಕೃತಿಯ ಆರಾಧನೆಯ ಜೊತೆಗೆ ತಮ್ಮ ಅಸ್ತಿತ್ವದ ಕುರಿತಾದ ಆತಂಕ, ಗೊಂದಲವನ್ನು ನಾವು ಗುರುತಿಸಬಹುದು. ಈ ಸಮುದಾಯಗಳು ಹಿಂದೆ ಕಾಡಿನಲ್ಲಿ ಕೃಷಿಕರಾಗಿ ಬದುಕು ಕಟ್ಟಿಕೊಂಡವರು ಎಂಬ ಮಾಹಿತಿ ನಮಗೆ ಅವರ ಮೌಖಿಕ ಸಾಹಿತ್ಯದಿಂದ ತಿಳಿದುಬರುತ್ತದೆ. ಇವರು ಮಾತೃದೇವತೆಗಳ ಪೂಜಕರು, ಹೆಣ್ಣು ಕುಟುಂಬವನ್ನು

ಮಾತ್ರವಲ್ಲದೆ ಇಡೀ ಸಮುದಾಯವನ್ನು ಮುನ್ನಡೆಸುವವಳಾಗಿದ್ದಳು ಎಂಬುದು ನಮಗೆ ಎರವರ ಮಹಾಕಾವ್ಯಗಳಿಂದ ತಿಳಿದುಬರುತ್ತದೆ. ವ್ಯವಸ್ಥಿತವಾದ ಜಮ್ಮದ ಕಲ್ಪನೆಯನ್ನು ಹೊಂದಿದ್ದವರು. ಬೆಟ್ಟಕುರುಬರನ್ನು ಕುರಿತಂತೆ ಈ ಹಿಂದೆ ಹಲವಾರು ಸಂಶೋಧನೆಗಳು ನಡೆದು ಬೆಟ್ಟಕುರುಬರು ಪಲ್ಲವರ ವಂಶಸ್ಥರು ಎಂಬಂತೆ ಚಿತ್ರಿಸಿದ್ದಾರೆ. ಆದರೆ ಇವರ ಮೌಖಿಕ ಸಾಹಿತ್ಯದಲ್ಲಿ ಈ ಕುರಿತಂತೆ ಯಾವುದೇ ಉಲ್ಲೇಖಗಳು ಕಂಡುಬರುವುದಿಲ್ಲ. ಈ ಸಮುದಾಯ ಗಳು ತಮ್ಮ ಪೂರ್ವಿಕರು ಪಲ್ಲವರ ವಂಶಸ್ಥರು ಎಂಬುದನ್ನು ಸಾರಾಸಗಟಾಗಿ ತಿರಸ್ಕರಿಸುತ್ತಾರೆ. ಕುಡಿಯರು ಮತ್ತು ಮಲೆಕುಡಿಯರು ಒಂದೇ ಸಮುದಾಯಕ್ಕೆ ಸೇರಿದವರು ಮತ್ತು ಹಿಂದೆ ಈ ಎರಡೂ ವಿಭಾಗಗಳ ನಡುವೆ ವೈವಾಹಿಕ ಸಂಬಂಧವಿತ್ತು ಎಂಬುದು ತಿಳಿಯುತ್ತದೆ.

ಕೊಡಗಿನ ಬುಡಕಟ್ಟುಗಳು ಅರಣ್ಯವಾಸಿ ಬುಡಕಟ್ಟುಗಳಾಗಿದ್ದು, ಎಷ್ಟೋ ವರ್ಷಗಳ ಕಾಲ ನಾಡಿನ ಸಂಪರ್ಕವೇ ಇಲ್ಲದೇ ತಮ್ಮದೇ ಆದ ನಂಬಿಕೆ, ದೈವ, ಭಾಷೆ, ಒಳಾಡಳಿತ ವ್ಯವಸ್ಥೆಯನ್ನು ಹೊಂದಿದ್ದಂತವು. ಕಾಡಿನಲ್ಲಿ ನಿರ್ದಿಷ್ಟ ಎಲ್ಲೆಯಲ್ಲಿ ಹಾಡಿಗಳನ್ನು ಕಟ್ಟಿಕೊಂಡು ಹಲವಾರು ಸಮುದಾಯಗಳು ಒಂದೇ ಕಡೆ ಬದುಕುತ್ತಿದ್ದರೂ ಪರಸ್ಪರ ಅನ್ಯೋನ್ಯವಾಗಿದ್ದವರು. ಆಹಾರ ಸಂಗ್ರಹಣೆ ಮತ್ತು ಕೆತ್ತು ಬೇಸಾಯವನ್ನು ಮಾಡುತ್ತಾ ಒಂದು ನಿರ್ದಿಷ್ಟ ಎಲ್ಲೆಯೊಳಗೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಂಚರಿಸುತ್ತಾ ಅಲೆಮಾರಿಗಳಂತೆ ಬದುಕುತ್ತಿದ್ದವರು. ಕಾಲಾನಂತರ ಒಂದು ಕಡೆ ಸ್ಥಿರವಾಗಿ ನಿಂತು ನಿರ್ದಿಷ್ಟ ಎಲ್ಲೆಯಲ್ಲಿ ಬದುಕಲು ಪ್ರಾರಂಭಿಸಿದರು. ಇವರು ಸಾಮಾಜಿಕವಾಗಿ ಕಾಡಿನಿಂದ ಹೊರ ಬಂದು ನಾಡು ಸೇರಿರುವ ಸಮುದಾಯಗಳು ಈಗಾಗಲೇ ಗುರುತಿಸಿರುವ ಅಸ್ಪೃಶ್ಯ ಸಮುದಾಯಗಳಿಗಿಂತ ತಮ್ಮನ್ನು ತಾವು ಶ್ರೇಷ್ಠ ಎಂದು ಭಾವಿಸುತ್ತಾರೆ.

**ಎರವರು**

ಎರವರ ಸಾಮಾಜಿಕ ಜೀವನದ ಸ್ಪಷ್ಟ ಚಿತ್ರಣ ನಮಗೆ ಅವರ ಮೌಖಿಕ ಸಾಹಿತ್ಯದಲ್ಲಿ ಹೇರಳವಾಗಿ ದೊರೆಯುತ್ತದೆ. ಇವು ಮನರಂಜನೆಯೊಂದಿಗೆ ಸಮುದಾಯಕ್ಕೆ ನೀತಿ, ನಿಯಮ ನಿಷೇಧಗಳನ್ನು ಹೇಳುವ ರೂಪದಲ್ಲಿರುತ್ತದೆ. ಇವರ ಜೀವನಾವರ್ತನದ ಆಚರಣೆಗಳಲ್ಲಿ ಈ ಹಾಡುಗಳನ್ನು ಹಾಡುವುದು ಕಡ್ಡಾಯವಾಗಿರುವುದರಿಂದ ಇವರ ಜೀವನ ಮೌಲ್ಯಗಳು ವಿಧಿ–ನಿಷೇದಗಳು ಪ್ರತಿಯೊಬ್ಬರಿಗೂ ತಿಳಿದಿರುತ್ತದೆ ಮತ್ತು ಅದನ್ನು ಯಾರೂ ಮೀರುವುದಿಲ್ಲ.

ಎರವರ 'ಸೋಬಾನೆ ಪಾಟ್'ಎಂಬ ಹಾಡಿನ ರೂಪದ ಕತೆಯಲ್ಲಿ ಇವರ ಸಾಮಾಜಿಕ ಬದುಕಿನ ಚಿತ್ರಣವನ್ನು ಕಟ್ಟಿ ಕೊಟ್ಟಿದ್ದಾರೆ. 'ಸೋಬಾನೆ ಪಾಟ್'ನಲ್ಲಿನ ಕಥಾನಾಯಕಿಯಾದ 'ಪೆರುಂಗಾಲಿ ಪೂಲಿ'ಯ ಮೂಲಕ ಎರವರ ಹೆಣ್ಣು ಮಕ್ಕಳು ಪಾಲಿಸಬೇಕಾದ ಕುಲಾಚಾರಗಳನ್ನು

ಕುರಿತು ಹೇಳಿದ್ದಾರೆ.

ಎರವರ 'ಓಲೆಪಾಟ್'ನಲ್ಲಿ ಎರವರ ಮೂಲಪುರುಷರಾದ ಆರ್ಯೆ-ಬಾಣ್ಯೆಯರ ಪ್ರಪಂಚ ಪರ್ಯಟನೆಯ ಸಂದರ್ಭದಲ್ಲಿ ಎದುರಾಗುವ ಸನ್ನಿವೇಶಗಳು ಅವರ ಸಾಮಾಜಿಕ ಚಿತ್ರಣವನ್ನು ನಮಗೆ ಮೂಡಿಸುತ್ತದೆ. ಎರವರು ದನದ ಮಾಂಸ ಸೇವಿಸದ ಕಾರಣ ಸಾಮಾಜಿಕವಾಗಿ ಹೊಲೆಯ ಮತ್ತು ಮಾದಿಗರಿಗಿಂತ ಉತ್ತಮ ಸ್ಥಾನಮಾನವನ್ನು ಹೊಂದಿದ್ದಾರೆ. ಎರವ ಸಮುದಾಯದಲ್ಲಿ ಕುಲ ಮತ್ತು ಜಾತಿಯ ಕಲ್ಪನೆ ಗಟ್ಟಿಯಾಗಿರುವುದರಿಂದ ತಮಗಿಂತ ಕೀಳು ಜಾತಿಯರವನ್ನು ವಿವಾಹವಾದರೆ ಅಂತವರನ್ನು ಜಾತಿಯಿಂದ ಬಹಿಷ್ಕರಿಸುತ್ತಾರೆ. ವಿಶೇಷ ಸಂದರ್ಭದಲ್ಲಿ ಶುದ್ಧೀಕರಣ ಕ್ರಿಯೆಯ ಮೂಲಕ ಜಾತಿಗೆ ಸೇರಿಸಿಕೊಳ್ಳುತ್ತಾರೆ.

**ಜೇನುಕುರುಬರು**

ಜೇನುಕುರುಬರು ಇತರೆ ಬುಡಕಟ್ಟುಗಳಿಗಿಂತ ತಮ್ಮನ್ನು ಶ್ರೇಷ್ಟ ಎಂದು ಪರಿಗಣಿಸುತ್ತಾರೆ. ಇತರೆ ಮೇಲ್ವರ್ಗದರು ಕೂಡ ಇವರನ್ನು ಅಸ್ಪೃಶ್ಯರಂತೆ ಕಾಣುವುದಿಲ್ಲ, ಮೇಲ್ವರ್ಗದವರ ಮನೆಯ ಜಗಲಿಯವರೆಗೆ ಇವರು ಹೋಗಬಹುದಾದ ಸ್ಥಾನವನ್ನು ಪಡೆದಿದ್ದಾರೆ. ಜೇನುಕುರುಬರು ಹೊಲೆಯರನ್ನು ಮಾದಿಗರನ್ನು ತಮಗಿಂತ ಕೀಳು ಎಂದು ಭಾವಿಸುತ್ತಾರೆ. ಜೇನುಕುರುಬರು ಹಿಂದೆ ತಮ್ಮ ಹಾಡಿಯ ಒಳಗೆ ಇತರೆ ಸಮುದಾಯದ ಯಾರನ್ನೂ ಸೇರಿಸುತ್ತಿರಲಿಲ್ಲ ಮತ್ತು ಒಂದು ವೇಳೆ ಯಾರಾದರೂ ಬಂದರೆ ಮೈಲಿಗೆ ಆಗುತ್ತದೆ ಎಂದು ಭಾವಿಸುತ್ತಿದ್ದರು. ಜೇನುಕುರುಬರ ಹಾಡಿಯ ಒಳಗೆ ಯಾರೂ ಚಪ್ಪಲಿ ಹಾಕಿಕೊಂಡು ಬರುವಂತಿಲ್ಲ. ಅಷ್ಟು ಕಟ್ಟುನಿಟ್ಟಾದ ನಿಯಮಗಳನ್ನು ಪಾಲಿಸುತ್ತಿದ್ದರು. ಜೇನುಕುರುಬರು ಇತರೆ ಸಮುದಾಯದವರನ್ನು ಮದುವೆಯಾದರೆ ಅವರನ್ನು ಜಾತಿಭ್ರಷ್ಟರೆಂದು ಪರಿಗಣಿಸಿ ಜಾತಿಯಿಂದ ಹೊರಗೆ ಹಾಕಲಾಗುತ್ತಿತ್ತು, ಒಂದು ವೇಳೆ ಜೇನುಕುರುಬರ ಹುಡುಗ ಕೆಳಜಾತಿಯ ಹುಡುಗಿಯನ್ನು ಮದುವೆಯಾಗಿ ತಮ್ಮನ್ನು ಕುಲಕ್ಕೆ ಸೇರಿಸಿಕೊಳ್ಳಿ ಎಂದು ಕೇಳಿಕೊಂಡರೂ ಕೂಡ 'ನಾಯಿ ನೆಕ್ಕಿದ ಮಡಕೆ ನಾಯಿನಾಗೆ ಇದ್ಕೊ ಬಿಡ್ಲಿ' ಎಂದು ಸೇರಿಸಿಕೊಳ್ಳುವುದಿಲ್ಲ, ಆದರೆ ತಮಗಿಂತ ದೊಡ್ಡಜಾತಿಯವರನ್ನು ಮದುವೆಯಾದರೆ ಯಜಮಾನ ಮತ್ತು ಊರಿನ ಎಲ್ಲಾ ಹಿರಿಯರು ಒಪ್ಪಿಕೊಂಡು ಅವನು/ಳನ್ನು ಶುದ್ಧೀಕರಿಸಿ ಮತ್ತೆ ಜಾತಿಗೆ ಸೇರಿಸಿಕೊಳ್ಳುತ್ತಾರೆ.

**ಬೆಟ್ಟಕುರುಬರು**

ಇತರೆ ಎಲ್ಲಾ ಬುಡಕಟ್ಟುಗಳಿಗಿಂತ ತಾವು ಮೇಲು ಎಂಬ ಶ್ರೇಷ್ಟತೆಯ ಭಾವ ಬೆಟ್ಟ ಕುರುಬರಲ್ಲೂ ಇದೆ. ಅನ್ಯ ಜಾತಿ ವಿವಾಹ ಇವರಲ್ಲಿ ನಿಷಿದ್ಧ. ಒಂದು ವೇಳೆ ಬೆಟ್ಟಕುರುಬರ

ಯುವಕ ಬೇರೆ ಜಾತಿಯ ಹುಡುಗಿಯನ್ನು ಮದುವೆಯಾದರೆ ಅವನನ್ನು ಬಹಿಷ್ಕರಿಸಿ ಕುಲದಿಂದ ಹೊರಹಾಕಲಾಗುತ್ತಿತ್ತು. ಬೇರೆ ಜಾತಿಯ ಹೆಣ್ಣಿನೊಂದಿಗೆ ಮದುವೆಯಾದ ಬೆಟ್ಟಕುರುಬರ ಗಂಡಿಗೆ ಆ ಹೆಣ್ಣಿನೊಂದಿಗೆ ವಿವಾಹ ವಿಚ್ಛೇದನವನ್ನು ಮಾಡಿಕೊಳ್ಳಲು ಕೂಡ ಅವಕಾಶವಿಲ್ಲ. ಜೇನುಕುರುಬರಲ್ಲಿ ಶಿಕ್ಷೆ ನೀಡುವ ಪದ್ಧತಿಯಿಲ್ಲ ಆದರೆ ಪ್ರಾಯಶ್ಚಿತಕ್ಕೆ ಅವಕಾಶವಿದೆ. ಸಮುದಾಯದಲ್ಲಿ ಯಾರಾದರೂ ತಪ್ಪು ಮಾಡಿದರೆ ತಪ್ಪು ಮಾಡಿದವನ ಮನೆಯವರನ್ನು ಆತನ ಎದುರಿಗೆ ಅಂಬಾಲದಲ್ಲಿ ನಿಲ್ಲಿಸಿ ಆತನ ಕುಟುಂಬದವರನ್ನು, ಕುಲದ ಹಿರಿಯರನ್ನು, ಸತ್ತ ಹಿರಿಯರ ಆತ್ಮಗಳನ್ನು ಪ್ರಶ್ನಿಸಲಾಗುತ್ತದೆ. ಈ ರೀತಿಯ ಆಚರಣೆಯನ್ನು ಸಮುದಾಯ ಅವಮಾನಕರ ಎಂದು ಭಾವಿಸುತ್ತದೆ. ಆದ್ದರಿಂದ ತಪ್ಪಿತಸ್ಥನಿಗೆ ಮಾನಸಿಕವಾಗಿ ಪ್ರಾಯಶ್ಚಿತ್ತ ಅನುಭವಿಸಲು ಈ ಕ್ರಿಯೆ ಸಹಕಾರಿಯಾಗಿದೆ. ಮತ್ತು ಸತ್ತ ಹಿರಿಯರ ಆತ್ಮಗಳನ್ನು ಕರೆಸಿ ಆತನ ಪರವಾಗಿ ಪ್ರಶ್ನಿಸುವುದು ಬಹಳ ವಿಭಿನ್ನವಾದ ಆಚರಣೆಯಾಗಿ ಕಂಡು ಬರುತ್ತದೆ. 12ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಸಾಮಾಜಿಕ ಕ್ರಾಂತಿ ನಡೆದ ಸಂದರ್ಭದಲ್ಲಿ ಅದರ ಪ್ರಭಾವಕ್ಕೆ ಒಳಗಾದ ಬೆಟ್ಟಕುರುಬರು ತಮ್ಮದೇ ಮಠಗಳನ್ನು ಹೊಂದಿದ್ದರು ಎಂಬುದಕ್ಕೆ ಇವರ ಮೌಖಿಕ ಸಾಹಿತ್ಯದಲ್ಲಿ ನಮಗೆ ಪುರಾವೆ ದೊರೆಯುತ್ತದೆ. ಆ ಸಂದರ್ಭದಲ್ಲಿ ಬೆಟ್ಟಕುರುಬರ ಹನ್ನೆರಡು ಮಠಗಳು ಇದ್ದು ಅದರಲ್ಲಿ ಒಂದು ಕುಟ್ಟದ ಬಳಿಯ ನಾಣಚ್ಚಿಯಲ್ಲಿದೆ ಎಂಬ ಮಾಹಿತಿ ದೊರೆಯುತ್ತದೆ.

**ಸೋಲಿಗರು**

ಮೂಲದಲ್ಲಿ ಜಡೇಸ್ವಾಮಿ, ಕ್ಯಾತೇ ದೇವರು, ಹುಲೀರಪ್ಪ, ಎಲ್ಲಮ್ಮ, ಚಿಕ್ಕಮ್ಮರನ್ನು ಪೂಜಿಸುತ್ತಿದ್ದವರು. ಅನಂತರದಲ್ಲಿ ಶೈವರಾಧಕರಾಗಿಯೂ ನಂತರ ಬಿಳಿಗಿರಿರಂಗನನ್ನು ಭಾವ ಎಂದು ಕರೆಯುವುದರ ಮೂಲಕ ವೈಷ್ಣವಾರಾಧಕರಾಗಿ ಬದಲಾದದ್ದು ಇತಿಹಾಸ, ಸೋಲಿಗರು ಮಲೆಮಹದೇಶ್ವರನ ಕಾವ್ಯಾದಲ್ಲಿ ಬರುವ ಸಂಕಮ್ಮನ ಸಾಲನ್ನು ಆಧಾರವಾಗಿಟ್ಟುಕೊಂಡು ಶೈವಮತದೊಂದಿಗೆ ತಮ್ಮ ಸಂಬಂಧವನ್ನು ಜೋಡಿಸುತ್ತಾರೆ. ಹಾಗೆಯೇ ಮತ್ತೊಂದು ಪ್ರಭಲ ಮತಧರ್ಮವಾದ ವೈಷ್ಣವ ಧರ್ಮದೊಡನೆ ತಮ್ಮ ನಂಟನ್ನು ಪ್ರತಿಪಾದಿಸಲು ಅವರ ಮೌಖಿಕ ಸಾಹಿತ್ಯದಲ್ಲಿ ಕುಸುಮಾಲೆಯನ್ನು ಬಿಳಿಗಿರಿರಂಗ ಮದುವೆಯಾದ ಕತೆಯನ್ನು ಉದಾಹರಿಸುತ್ತಾರೆ. ಕುಲ, ಜಾತಿಯ ಬಗ್ಗೆ ಅತ್ಯಂತ ನಿಷ್ಠೆ ಹೊಂದಿರುವ ಇವರು ಅಂತರ ಜಾತಿ ವಿವಾಹವನ್ನು ಮಾನ್ಯ ಮಾಡುವುದಿಲ್ಲ. ಅಲ್ಲದೆ ನಿಷಿದ್ಧ ಕುಲಗಳೊಡನೆ ವಿವಾಹ ಸಂಬಂಧವನ್ನು ಕೂಡ ಏರ್ಪಡಿಸುವುದಿಲ್ಲ. ಇದು ಬುಡಕಟ್ಟುಗಳ ಸಹಜ ಲಕ್ಷಣವಾಗಿದೆ. ಸೋಲಿಗರಲ್ಲಿ ಬಹಿಷ್ಕಾರ ಮತ್ತು ಶುದ್ಧೀಕರಣ ಕ್ರಿಯೆಯನ್ನು ಇಲ್ಲಿ ವಿವರಿಸಲಾಗಿದೆ.

**ಕುಡಿಯರು**

ಕುಡಿಯರು ಹೊರ ಪ್ರಪಂಚಕ್ಕೆ ಬೇಗ ತಮ್ಮನ್ನು ತೆರೆದುಕೊಂಡ ಕಾಣದಿಂದಾಗಿ ತಮ್ಮ ಪ್ರತಿಯೊಂದು ಆಚರಣೆ, ಜೀವನ ವಿಧಾನ ಭಾಷೆ, ನಂಬಿಕೆ, ನಿಯಮ, ನಿಷೇಧ, ದೈವ ಈ ಮೊದಲಾದ ಎಲ್ಲಾ ವಿಚಾರಗಳಲ್ಲೂ ಇತರ ಬಲಿಷ್ಟ ಸಮುದಾಯಗಳ ದಟ್ಟ ಪ್ರಭಾವಕ್ಕೆ ಒಳಗಾದವರು ಅದರಲ್ಲೂ ಕೊಡಗಿನ ಕುಡಿಯರು ಆ ಬಾಗದ ಪ್ರಭಲ ಸಮುದಾಯವಾದ ಕೊಡವರನ್ನು ಹೆಚ್ಚಾಗಿ ಅನುಕರಿಸಲು ಪ್ರಾರಂಭಿಸಿದರು. ಕೊಡವರು ಮತ್ತು ಇತರೆ ಮೇಲ್ಜಾತಿಯವರು ಮತ್ತು ಮೇಲ್ವರ್ಗದವರು ಇವರನ್ನು ಬಹಳ ಗೌರವದಿಂದ ಕಾಣುತ್ತಾರೆ. ಕುಡಿಯರಿಗೆ ಸಾಮಾಜಿಕವಾಗಿ ಉತ್ತಮವಾದ ಗೌರವ ಸ್ಥಾನಮಾನಗಳಿವೆ. ಅಸ್ಪೃಶ್ಯರು ಏಲಕ್ಕಿ ತೋಟಗಳಿಗೆ ಹೋಗುವುದು ಮತ್ತು ಏಲಕ್ಕಿಯನ್ನು ಕೀಳುವುದು ನಿಶಿದ್ಧ ಆದರೆ ಈ ನಿಶಿದ್ಧತೆ ಕುಡಿಯರಿಗಿಲ್ಲ. ಕುಡಿಯರು ಹೆಚ್ಚಾಗಿ ಏಲಕ್ಕಿ ಹೆಚ್ಚಾಗಿ ಬೆಳೆಯುವ ಪ್ರದೇಶದಲ್ಲಿ ವಾಸಿಸುತ್ತಾರೆ ಮತ್ತು ಕುಡಿಯರ ಮೌಖಿಕ ಸಾಹಿತ್ಯದ ಪ್ರಕಾರ ಏಲಕ್ಕಿ ಭೂಮಿಗೆ ಬಂದಿದ್ದೇ ಕುಡಿಯರಿಂದ ಎನ್ನುತ್ತಾರೆ. ಅದಕ್ಕೆ ಐತಿಹ್ಯ ಮತ್ತು ಪುರಾಣದ ಕತೆಗಳ ಮೂಲಕ ದಾಖಲೆಯನ್ನು ಕೂಡ ಒದಗಿಸುತ್ತಾರೆ.

ಈ ಐದೂ ಬುಡಕಟ್ಟುಗಳೂ ಅನುಸರಿಸುವ ತಾವು ಶ್ರೇಷ್ಟ ಅಂದುಕೊಳ್ಳುವ ಆಚರಣೆಗಳು, ನಂಬಿಕೆಗಳು ನಿಯಮಗಳು, ನಿಷೇಧಗಳು ಇವೇ ಮೊದಲಾದ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಬುಡಕಟ್ಟುಗಳ ಸಾಮಾಜಿಕ ಸ್ಥಾನಮಾಣಗಳನ್ನು ತಿಳಿಯಲು ಈ ಭಾಗವು ಸಹಕಾರಿಯಾಗಿದೆ.

**ಹೆಣ್ಣಿನ ಅನನ್ಯತೆ**

ಮೂಲದಲ್ಲಿ ಮಾತೃಮೂಲೀಯ ವ್ಯವಸ್ಥೆಯನ್ನು ಹೊಂದಿದ್ದ ಸಮುದಾಯಗಳು ಅನಂತರ ಹಲವಾರು ಕಾರಣಗಳಿಂದ ಹೆಣ್ಣನ್ನು ಕೆಳದರ್ಜೆಯ ವ್ಯಕ್ತಿಯಾಗಿ ಕಾಣುವ ಮೂಲಕ ಅವಳನ್ನು ಹಂತಹಂತವಾಗಿ ಪುರುಷನ ಅಧೀನಕ್ಕೆ ಒಳಪಡಿಸಲಾಯಿತು. ಆದರೆ ಬುಡಕಟ್ಟು ಮಹಿಳೆ ತನ್ನ ಸಮುದಾಯದಲ್ಲಿ ವಿಶೇಷವಾದ ಮನ್ನಣೆ, ಗೌರವವನ್ನು ಹೊಂದಿದ್ದಾಳೆ ಇಂದಿಗೂ ಹೊಂದಿದ್ದಾಳೆ. ಬುಡಕಟ್ಟು ಸಮುದಯಗಳಲ್ಲಿ ಹೆಣ್ಣು ಸಮಾಜದಲ್ಲಿ ಮತ್ತು ಕುಟುಂಬದ ಒಳಗೆ ನಿರ್ಣಾಯಕ ಪಾತ್ರವನ್ನು ವಹಿಸುತ್ತಿದ್ದವಳು. ಸ್ವಾತಂತ್ರ್ಯ, ಸಮಾನತೆಗೆ ಸಂಬಂದ ಪಟ್ಟಂತೆ ವಿಶೇಷವಾದ ಅಧಿಕಾರನ್ನು ಆಕೆ ಹೊಂದಿದ್ದವಳು ಎಂಉದಕ್ಕೆ ಪೂರಕವಾದ ದಾಖಲೆಗಳು ಅವರ ಮೌಖಿಕ ಸಾಹಿತ್ಯದಲ್ಲಿ ದೊರೆಯುತ್ತದೆ. ಪಂಜರಿ ಎರವರದು ಮಾತೃಪ್ರಧಾನ ಕುಟುಂಬ ವ್ಯವಸ್ಥೆ. ಇವರಲ್ಲಿ ಹೆಣ್ಣಿಗೆ ಹೆಚ್ಚಿನ ಸ್ಥಾನಮಾನಗಳಿವೆ. ಇವರದ್ದು ಅಳಿಯ ಕಟ್ಟು ಪದ್ಧತಿ.

ಹಿಂದೆ ಎರವರ ಹೆಣ್ಣು ಮಕ್ಕಳು ಸ್ವತಂತ್ರವಾಗಿ ಆಡಳಿತವನ್ನು ನಡೆಸುತ್ತಿದ್ದರು ಎಂಬುದಕ್ಕೆ

ನಮಗೆ 'ಕೊಟ್ಟತ್ತೇರಿ ಅಕ್ಕವ್ವೆ' ಮತ್ತು 'ಕುಂಡಾಬೆತೇರಿಬಾವು ಪೆಂಗವ್ವೆ' ಎಂಬ ಕತೆಯಲ್ಲಿ ಮಾಹಿತಿ ದೊರೆಯುತ್ತದೆ. 'ಒಲೆಪಾಟ್' ಎಂಬ ಎರವರ ಮಹಾಕಾವ್ಯದಲ್ಲಿ 'ಬಡಾಕು' ದೇಶದ 'ಇಲಾಚಿ ತೇವರು ಅಮ್ಮೆ' 'ಪಲಾಚುತೇವರು ಅಮ್ಮೆ' ಎಂಬ ಇಬ್ಬರು ಸಹೋದರಿಯರ ಇಬ್ಬರು ಹೆಣ್ಣುಮಕ್ಕಳು 'ಕಾರುಮಚುಣಿ' ಮತ್ತು 'ಬೆಳ್ಳಿಮಚುಣಿ'. ಇವರು ಅವಿವಾಹಿತರಾಗಿದ್ದುಕೊಂಡು ಗಂಡಸಿನ ಸಹಾಯವಿಲ್ಲದೆ ತಮ್ಮ ಕೋಟೆಯನ್ನು ಆಳುತಿದ್ದವರು. ಮಕ್ಕಳಿಲ್ಲದ ಇವರು ಇಬ್ಬರು ಗಂಡು ಮಕ್ಕಳನ್ನು ಕದ್ದು ತಂದು ಸಾಕುತ್ತಾರೆ. ಇವರೇ ಎರವರ ಮೂಲಪುರುಷರಾದ ಆರ್ಯ-ಬಾಣ್ಯೆಯರು. ಇಲ್ಲಿ ಇವರಿಗೆ ಲೈಂಗಿಕ ಸ್ವಾತಂತ್ರ್ಯವಿತ್ತು. ಸ್ವತಂತ್ರವಾಗಿ ಅಧಿಕಾರ ನಡೆಸುವ ಸಾಮರ್ಥ್ಯವಿತ್ತು, ಇಡೀ ಪ್ರಾಂತ್ಯ ಅವರ ಆಳ್ವಿಕೆಗೆ ಒಳಪಟ್ಟಿತ್ತು ಎಂಬ ವಿಚಾರಗಳಿವೆ. ಸ್ತ್ರೀಯರಿಬ್ಬರನ್ನು ಇಲ್ಲಿ ಅಬಲೆಯರನ್ನಾಗಿ ಎಲ್ಲೂ ಚಿತ್ರಿಸಿಲ್ಲ.

ಹಾಗೆಯೇ ಎರವರಲ್ಲಿ ಮಾತೃ ದೇವತೆಯ ಆರಾಧನೆಯಿದೆ. ಇಲ್ಲಿ ಹೆಣ್ಣು ದೈವಗಳು ಕೇವಲ ಹಬ್ಬಗಳಿಗೆ ಪೂಜೆಗಳಿಗಷ್ಟೇ ಸೀಮಿತವಾಗದೆ ಕಷ್ಟಗಳನ್ನು ಪರಿಹರಿಸುವ ಉಗ್ರದೇವತೆಗಳಾಗಿದ್ದಾರೆ, ಕರಿಚಾತೆ ಮಾಳಿಯಮ್ಮೆ , ಕುಟ್ಟದ ಕರುಂಗಾಲಿರಿಯರು ಇದಕ್ಕೆ ಉದಾಹರಣೆ.

ವಿಪರ್ಯಾಸವೆಂದರೆ ಎರವ ಸಮುದಾಯವು ಜಾತಿಯಲ್ಲಿ, ಕುಲದಲ್ಲಿ ಶ್ರೇಷ್ಠಳಾದ ಹೆಣ್ಣಿಗೆ ನೀಡಿರುವ ಈ ಸ್ಥಾನಮಾನಗಳನ್ನು ತಮಗಿಂತ ಹೀನ ಕುಲದ ಹೆಣ್ಣಿನ ವಿಷಯದಲ್ಲಿ ಸಂಪೂರ್ಣವಾಗಿ ಕುರುಡಾಗಿದೆ ಎಂದೇ ಹೇಳಬಹುದು. ಅದಕ್ಕೆ ಉದಾಹರಣೆಯಾಗಿ ಕಡಲ ಚೀತೆಯ ಕಥೆಯನ್ನು ನಾವು ಗಮನಿಸಬಹುದು. ಹೀನಕುಲದವಳಾದ ಕಡಲಚೀತೆಯನ್ನು ಕೂಡಿದ ಕಾರಣಕ್ಕೆ ಆರ್ಯೇ- ಬಾಣ್ಯೆಯರು ಪಶ್ಚಾತಾಪ ಪಡುವುದು, ಅದಕ್ಕೆ ಪ್ರಾಯಶ್ಚಿತವಾಗಿ ಸೊಂಟದುದ್ದ ನೀರನ್ನು ಹಾದು ತಮ್ಮ ಕಳಂಕವನ್ನು ನಿವಾರಿಸಿಕೊಳ್ಳುವುದು. ಈ ಉಪಾಯವನ್ನು ಹೆಣ್ಣಿನಿಂದಲೇ ಸಮರ್ಥಿಸಿಕೊಳ್ಳುವ ನಡೆ ಅವರಲ್ಲಿ ನೆಲೆಮಾಡಿರುವ ಪುರುಷಾಧಿಕಾರ ಮತ್ತು ಜಾತಿ ಪ್ರಜ್ಞೆ ಏಕಕಾಲದಲ್ಲಿ ಹೊರಹೊಮ್ಮಿಸುತ್ತದೆ.

ಹೆಣ್ಣು ಋತುತಿಯಾಗುವುದನ್ನು ಸಂಭ್ರಮಿಸುವ ಎರವರು ಆ ಸಂದರ್ಭದಲ್ಲಿ ಹೇಳುವ ಸೋಭಾನೆ ಪಾಟ್‌ನಲ್ಲಿ ಕಞಲಾಡಿಯು 'ಅವಳು ಬಾಗಿಲು ದಾಟುವಾಗ ಬಾಗಿಲುವಾಡ ನೆತ್ತಿಗೆ ಬಡಿಯದಿರಲಿ, ನಡೆಯುವಾಗ ಎಡವಿ ಬೀಳದಿರಲಿ ಎಂಬ ಮಾತನ್ನು ಹೇಳುತ್ತಾನೆ. ಈ ಮಾತುಗಳು ಹೆಣ್ಣು ಸದಾ ತನ್ನ ಶೀಲದ ಬಗ್ಗೆ ಜಾಗೃತಳಾಗಿರಬೇಕೆಂದು, ಗುರು ಹಿರಿಯರಿಗೆ ತಗ್ಗಿ-ಬಗ್ಗಿ ವಿಧೇಯತೆಯಿಂದ ನಡೆದುಕೊಳ್ಳಬೇಕೆಂದು, ಹಾಗೆಯೇ ವಯಸ್ಸಿನ ಸಹಜವಾದ ವಾಂಛೆಗೆ ಬಲಿಯಾಗದೆ ತನ್ನ ಶೀಲದ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳಬೇಕು ಎಂಬುದನ್ನು

ಹೆಣ್ಣಿಗೆ ಮನದಟ್ಟು ಮಾಡುತ್ತದೆ ಪುರುಷ ಸಮಾಜ ಸದಾ ಹೆಣ್ಣಿನಿಂದ ಅವಳ ವಿದೇಯತೆಯನ್ನು ಅಪೇಕ್ಷಿಸುತ್ತಿರುತ್ತದೆ. ಅವಳ ನಡೆ, ನುಡಿ ಪ್ರತಿಯೊಂದು ಸಮಾಜದ ಹಾಗೂ ಸಮುದಾಯದ ಪ್ರಧಾನ ಪಾತ್ರವಾಗಿರುವ ಗಂಡಿನ ಕಣ್ಗಾವಲಿನಲ್ಲಿಯೇ ಇರಬೇಕಾಗುತ್ತದೆ ಎಂಬುದನ್ನು ಹೇಳುವ ಪೆರುಂಗಾಲಿ ಪೊಲಿಯ ಕಥೆ ಏಕಕಾಲಕ್ಕೆ ಹೆಣ್ಣಿನ ಅಧೀನತೆ ಮತ್ತು ಪ್ರಧಾನತೆ ಎರಡನ್ನೂ ವ್ಯಕ್ತಪಡಿಸುತ್ತದೆ.

ಸೋಲಿಗ– ಮಲೆಮಾದೇಶ್ವರ ಕಾವ್ಯದಲ್ಲಿ ಸ್ತ್ರೀ ಸಂವೇದನೆಗೆಂದೇ ಮೀಸಲಾಗಿರುವ ಬಹುಮುಖ್ಯವಾದ ಭಾಗವೆಂದರೆ ಸಂಕಮ್ಮನ ಸಾಲು. ಇದು ಕೇವಲ ಮಾದೇಶ್ವರನ ಒಕ್ಕಲಿನವರಾದ ಹೊಲೆ–ಮಾದಿಗರಿಗೆ ಮಾತ್ರವಲ್ಲದೆ ಸೋಲಿಗರ ಧಾರ್ಮಿಕ ನಂಬಿಕೆಯಲ್ಲೂ ಅತಿ ಪ್ರಧಾನವಾದ ಸ್ಥಾನ ಪಡೆದಿದೆ. ಸೋಲಿಗರ ಸಾಂಸ್ಕೃತಿಕ ವೀರರಾದ ಕಾರಯ್ಯ, ಬಿಲ್ಲಯ್ಯ, ಹಾಗು ಸಂಕಮ್ಮನ ಪಾತ್ರಗಳು ಈ ಕಾವ್ಯದಲ್ಲಿ ತಳಕು ಹಾಕಿಕೊಂಡಿವೆ. ಬಂಜೆಯೆಂಬ ಕಳಂಕವನ್ನು ನಿವಾರಿಸಿಕೊಳ್ಳಲು ತನ್ನ ಗಂಡನಾದ ನೀಲಯ್ಯನನ್ನು ದಿಕ್ಕರಿಸಿ ಮಲೆಮಾದೇಶ್ವರನನ್ನು ಕೂಡುವ ಮೂಲಕ ಮಕ್ಕಳನ್ನು ಪಡೆಯುವ ಸಂಕಮ್ಮನನ್ನು ದೈವತ್ವಕ್ಕೇರಿಸಿ ಸೋಲಿಗರು ತಮ್ಮ ಅನನ್ಯತೆಯನ್ನು ಮೆರೆದಿದ್ದಾರೆ. ಸ್ತ್ರೀ ಅನನ್ಯತೆ, ಸ್ವಾಭಿಮಾನ, ಛಲ, ಭಕ್ತಿ ನಿಷ್ಠೆ ಎಲ್ಲವೂ ಸಂಕಮ್ಮನ ಪಾತ್ರದ ಮೂಲಕ ಹೊರಹೊಮ್ಮಿದೆ. ಶಿಷ್ಟ ಸಾಹಿತ್ಯದಲ್ಲಾದರೆ ಇಂತಹ ಸಂದರ್ಭದಲ್ಲಿ ಹೆಣ್ಣನ್ನು ಚಂಚಲೆ, ನಂಬಿಕೆಗೆ ಅನರ್ಹಳು, ಸ್ವಯಂ ನಿಯಂತ್ರಣವಿಲ್ಲದವಳು, ಕಾಮಿ ಎಂದೆಲ್ಲಾ ಚಿತ್ರಿಸಲು ಸಾಧ್ಯತೆಯಿದೆ. ಆದರೆ ಜನಪದವಾಗಲೀ, ಬುಡಕಟ್ಟು ಸಾಹಿತ್ಯವಾಗಲೀ ಶಿಷ್ಟಕ್ಕಿಂತ ಭಿನ್ನವಾಗಿ ಹೆಣ್ಣಿನ, ಸ್ವಾತಂತ್ರ್ಯ ಆತ್ಮಾಭಿಮಾನವನ್ನು ಎತ್ತಿ ಹಿಡಿಯುತ್ತದೆ.

ಜೇನುಕುರುಬ: ಜೇನುಕುರುಬ ಸಮುದಾಯದಲ್ಲಿ ಗಂಡ ಹೆಂಡತಿಯ ನಡುವಿನ ವೈವಾಹಿಕ ಸಂಬಂಧ ಊಳಿಗಮಾನ್ಯ ಸ್ವರೂಪದಲ್ಲಿಲ್ಲ, ಬದಲಿಗೆ ಅದು ಸಮಾನತೆಯ ಆಶಯಗಳನ್ನು ಗೌರವಿಸುವ ಒಂದು ವ್ಯವಸ್ಥೆಯಾಗಿದೆ. ಅದಕ್ಕೆ ಜೇನುಕುರುಬರ ಮೌಖಿಕ ಸಾಹಿತ್ಯವು ಉದಾಹರಣೆಯಾಗಿದೆ. ಹೆಣ್ಣು ಗಂಡಿಗಿರುವ ಆಯ್ಕೆಯ ಸ್ವಾತಂತ್ರ್ಯ ಮತ್ತು ಸಮಾಜ ಅದನ್ನು ಮುಕ್ತವಾಗಿ ಸ್ವೀಕರಿಸಿದ ಪರಿಯನ್ನು ಜೇನುಕುರುಬರ ಮನರಂಜನೆಯ ಹಾಡು 'ಸೊಪ್ಪು ಗೋದವ ಬಂದಿಲ್ಲ ಕಣೆ, ನೀರಿಗೋದವ ಬಂದಿಲ್ಲ ಕಣೆ ಎಂದು ಸಾಗುವ ಹಾಡಿನಲ್ಲಿ ನಿರೂಪಿತವಾಗಿದೆ.

ಕುಡಿಯರು: ಕುಡಿಯರ ಹೆಣ್ಣು ತನಗೆ ಇಷ್ಟವಾದ ಗಂಡನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ಹೊಂದಿದ್ದಳು ಎಂಬುದಕ್ಕೆ ಸಾಕ್ಷಿಯಾಗಿ ಹಲವು ಕತೆಗಳನ್ನು ನಾವು ಉಧಾಹರಿಸಬಹುದು. ಇಲ್ಲಿ ಉಲ್ಲೇಖಿಸಿರುವ ಇವರ ಮೌಖಿಕ ಸಾಹಿತ್ಯವು ಹಾಸ್ಯಮಿಶ್ರಿತ

ಧಾಟಿಯಲ್ಲಿದೆ. ವರನ ಆಯ್ಕೆಯ ಸಂದರ್ಭದಲ್ಲಿ ಹೆಣ್ಣಿನ ಜಾಣತನ, ತಾನು ಮದುವೆಯಾಗ ಬಯಸುವ ಹುಡುಗ ಸ್ಥಿತಿವಂತನಾಗಿರಬೇಕು ಆದರೆ ಸ್ಥಿತಿವಂತನಾದರೆ ಮಾತ್ರ ಸಾಲದು ಆತ ಕಷ್ಟಪಟ್ಟು ಕೆಲಸ ಮಾಡುವವನಾಗಿರಬೇಕು. ತನ್ನ ಸಂಸಾರದ ಜವಾಬ್ಧಾರಿಯನ್ನು ಸಮರ್ಥವಾಗಿ ನಿಭಾಯಿಸುವವನೂ ಆಗಿರಬೇಕು ಎಂಬ ಆಕೆಯ ಆಶಯ ಇಲ್ಲಿ ವ್ಯಕ್ತವಾಗುತ್ತದೆ.

ಕೇತಂಡ ಚಟ್ಟಿ ಎಂಬುವವನಿಗೆ 300 ಮಾನಿ ಗದ್ದೆಯಿದೆ ಆದ್ದರಿಂದ ಆತನನ್ನು ನಾನು ಮದುವೆಯಾಗುತ್ತೇನೆ ಎನ್ನುವ ಆಕೆ ಗದ್ದೆಯೇನೋ ಇದೆ. ಗದ್ದೆ ಇದ್ದರೆ ಸಾಲದು ಅದನ್ನು ಸಮರ್ಥವಾಗಿ ನಿಭಾಯಿಸುವ ಸಾಮರ್ಥ್ಯ ಆತನಿಗೆ ಇಲ್ಲ ಆದ್ದರಿಂದ ಆತನನ್ನು ನಾನು ಮದುವೆಯಾಗುವುದಿಲ್ಲ ಎಂದು ತಿರಸ್ಕರಿಸುವ ಜಾಣ್ಮೆ ವ್ಯಕ್ತಪಡಿಸಿದ್ದಾಳೆ.

ಹಾಗೆಯೇ ಅದಕ್ಕೆ ವ್ಯತಿರಿಕ್ತವಾಗಿ ತಳಸಮುದಾಯಗಳು ಆರಾಧಿಸುವ 'ಪನ್ನಂಗಾಲ ತಮ್ಮೆ'ಯ ಕತೆಯಲ್ಲಿ ಹೆಣ್ಣು ಬುದ್ಧಿವಂತೆ ಎಂಬ ಕಾರಣಕ್ಕೆ ಆಕೆಯ ಸಹೋದರರು ಆಕೆಯನ್ನು ತಿರಸ್ಕರಿಸುವುದು. ಆ ಕಾರಣಕ್ಕೆ ಕೆಳಜಾತಿ ಮತ್ತು ಕೆಳವರ್ಗದ ದೇವತೆಯ ಸ್ಥಾನ ನೀಡುವುದು. ಗಂಡೆಂಬ ಕಾರಣಕ್ಕೆ ಮೇಲ್ಜಾತಿ ಮೇಲ್ವರ್ಗದ ದೇವರುಗಳಾಗಿ ಪೂಜಿಸಲ್ಪಡುವುದನ್ನು ಇಂದಿಗೂ ಕಾಣಬಹುದು. ಹೆಣ್ಣು ಎಷ್ಟೇ ಬುದ್ಧಿವಂತಳಾದರೂ ಕೂಡ ಗಂಡಿನ ಸರಿಸಮಾನಳಾಗಿ ಸ್ಥಾನಮಾನಗಳನ್ನು ಪಡೆಯಲು ಅರ್ಹಳಲ್ಲ ಎಂಬ ಸಮಾಜದ ಸುಪ್ತ ಆಲೋಚನೆಗಳನ್ನು ಈ ಸಾಹಿತ್ಯವು ವ್ಯಕ್ತಪಡಿಸಿವೆ.

ಸೃಷ್ಟಿಪುರಾಣಗಳು: ಬೆವರಿನ ಮೂಲ ಶ್ರಮದ ಮೂಲ ಈ ಬುಡಕಟ್ಟು ಸಮುದಾಯಗಳದ್ದು ಅದನ್ನು ಅವರ ಸೃಷ್ಟಿಪುರಾಣಗಳ ಮೂಲಕ ಉಲ್ಲೇಖಿಸಲಾಗಿದೆ. ಈ ಪ್ರಪಂಚದಲ್ಲಿರುವ ಪ್ರತಿಯೊಂದು ಬುಡಕಟ್ಟುಗಳೂ ಸಹ ಈ ಭೂಮಿಯ ಮೇಲೆ ಮನುಷ್ಯನ ಸೃಷ್ಟಿ ತಮ್ಮಿಂದಲೇ ಆಯಿತು ಮತ್ತು ಈ ಭೂಮಿಗೆ ನಾವೇ ಮೊದಲಿಗರು ಎಂದು ಪ್ರತಿಪಾದಿಸುತ್ತಾರೆ. ಅದಕ್ಕೆ ಪೂರಕವಾಗಿ ತಮ್ಮ ಸಮುದಾಯಕ್ಕೆ ಸಂಬಂಧಿಸಿದ ಕತೆಗಳು, ಐತಿಹ್ಯಗಳು, ಪುರಾಣಗಳ ನಿದರ್ಶನವನ್ನು ಒದಗಿಸುತ್ತಾರೆ. ಅಂತೆಯೆ ಎರವರೂ ಕೂಡ ತಮ್ಮ ಸಮುದಾಯದ ಉಗಮವನ್ನು ಕುರಿತು ಹೇಳುವ ಇವರ ಸೃಷ್ಟಿ ಪುರಾಣದಲ್ಲಿ ಇದನ್ನು ಅತ್ಯಂತ ಸ್ವಾರಸ್ಯಕರವಾಗಿ ಪ್ರತಿಪಾದಿಸುತ್ತಾರೆ. ಕೊಡಗಿನ ಬುಡಕಟ್ಟುಗಳಾದ ಎರವ, ಜೇನುಕುರುಬ, ಬೆಟ್ಟಕುರುಬ, ಸೋಲಿಗ ಮತ್ತು ಕುಡಿಯರ ಸೃಷ್ಟಿ ಪುರಾಣಗಳನ್ನು ಇಲ್ಲಿ ನೀಡಲಾಗಿದೆ

ಯಜಮಾನಿಕೆ: ಬುಡಕಟ್ಟುಗಳು ಅತ್ಯುತ್ತಮವಾದ ಒಳಾಡಳಿತ ವ್ಯವಸ್ಥೆಯನ್ನು ಹೊಂದಿದ್ದಾರೆ. ಸಮುದಾಯವೇ ನಿರ್ಧರಿಸಿದ ನಾಯಕತ್ವ ವ್ಯವಸ್ಥೆಯಿದೆ.

ಎರವರಲ್ಲಿ ನಾಡಾಚು ಕುಂಜಾಚು ಮಂಜಾಚ ಚೆಮ್ಮಾಟು

ಕಜ ಕರ್ಮಿ ಕನ್ನೆಲಾಡಿನರಾಚು

ಎಂಬ ಸಾಲುಗಳು ಎರವರ ಯಜಮಾನಿಕೆಯ ವಿವಿಧ ಹಂತಗಳನ್ನು ಪರಿಚಯಿಸುತ್ತದೆ. ಕೆಲವು ಜವಾಬ್ದಾರಿಗಳು ವಂಶಪರಂಪರೆಯಿಂದಲೂ ಕೆಲವು ವ್ಯಕ್ತಿಯ ಸ್ವಸಾಮರ್ಥ್ಯದಿಂದಲೂ ಕೆಲವು ನಾಯಕರನ್ನು ಸಮುದಾಯವೇ ಆಯ್ಕೆ ಮಾಡುವಂತಹ ಸ್ಥಿತಿ ಎರವರಲ್ಲಿದೆ.

ಸೋಲಿಗರಲ್ಲಿ ಒಳಾಡಳಿತದ ಜವಾಬ್ದಾರಿಗಳು ಹಲವು ಹಂತಗಳಾಗಿ ವಿಭಜಿಸಲ್ಪಟ್ಟಿದೆ ಮತ್ತು ಪ್ರತಿಯೊಬ್ಬರೂ ತಮ್ಮ ಹುದ್ದೆಗೆ ಅನುಗುಣವಾಗಿ ಶ್ರದ್ಧಾಭಕ್ತಿಯಿಂದ ಅದನ್ನು ನಿಭಾಯಿಸುತ್ತಾರೆ. ಈ ಯಜಮಾನಿಕೆಯು ಕೂಡ ನಿರ್ದಿಷ್ಟ ಕುಲಕ್ಕೆ ವಂಶಪಾರಂಪರ್ಯವಾಗಿ ಬಂದಿರುತ್ತದೆ. ಆದರೂ ಕೂಡ ಸಮುದಾಯದ ಹಿರಿಯರೆಲ್ಲಾ ಸೇರಿ ನಿರ್ದಿಷ್ಟ ಕುಲದಿಂದ ಸೂಕ್ತವಾದ ವ್ಯಕ್ತಿಯನ್ನು ಆಯ್ಕೆ ಮಾಡುತ್ತಾರೆ.

ಜೇನುಕುರುಬ: ಪ್ರತಿ ಜಮ್ಮದೊಳಗಡೆ ಹಲವು ಹಾಡಿಗಳಿರುತ್ತವೆ. ಪ್ರತೀ ಹಾಡಿಯಲ್ಲಿ ಒಬ್ಬೊಬ್ಬ ಯಜಮಾನನಿರುತ್ತಾನೆ. ವಂಶಪಾರಂಪರ್ಯವಾಗಿ ಈ ಯಜಮಾನಿಕೆ ಒಂದೊಂದು ಕುಲಕ್ಕೆ ನಿಗಧಿಯಾಗಿರುತ್ತದೆ, ಆ ನಿರ್ದಿಷ್ಟ ಕುಲದವರೇ ಯಜಮಾನರಾಗಬೇಕು. ಸಮುದಾಯದಲ್ಲಿ ನಡೆಯುವ ನ್ಯಾಯ ಪಂಚಾಯತಿ, ಹಬ್ಬ ಮೊದಲಾದವುಗಳಲ್ಲದೆ. ಜೀವನಾವರ್ತನ ಆಚರಣೆಗಳಲ್ಲಿ ಈತ ಮುಖ್ಯ ಪಾತ್ರ ವಹಿಸುತ್ತಾನೆ. ಕೋಲುಕಾರ ಆತನಿಗೆ ಸಹಾಯಕನಾಗಿ ವಂಶಪಾರಂಪರ್ಯವಾಗಿ ಆಯ್ಕೆಯಾಗುತಾನೆ.

ಬೆಟ್ಟಕುರುಬರ ಪ್ರತಿಯೊಂದು ಹಾಡಿಯಲ್ಲಿಯೂ ಒಬ್ಬ ನಾಯಕನಿರುತ್ತಾನೆ. ನಾಯಕನಾದವನು ಆ ನಿರ್ದಿಷ್ಟ ಜಮ್ಮಕ್ಕೆ ಸೇರಿದವನಾಗಿರಬೇಕು. ಇವರಲ್ಲಿ ಯಜಮಾನಿಕೆಯು ವಂಶ ಪಾರಂಪಾರ್ಯವಾಗಿ ಸಾಗಿ ಬರುತ್ತದೆ. ಬೆಟ್ಟಕುರುಬರ ನ್ಯಾಯ ಪಂಚಾಯತಿಯು ಅಂಬಾಲದಲ್ಲಿ ನಡೆಯುತ್ತದೆ. ಪಂಚಾಯತಿ ನಡೆಯುವಾಗ ಪ್ರತಿ ಮನೆಯಿಂದ ಒಬ್ಬರು ಕಡ್ಡಾಯವಾಗಿ ಬರಲೇ ಬೇಕು. ಪ್ರತಿಯೊಬ್ಬರ ಅಭಿಪ್ರಾಯವೂ ಇಲ್ಲಿ ಮುಖ್ಯ. ಅಲ್ಲಿ ನೆರೆದ ಎಲ್ಲರೂ ಕೂಡ ಈ ಚರ್ಚೆಯಲ್ಲಿ ಪಾಲ್ಗೊಂಡು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಎಲ್ಲರ ಪಾಲ್ಗೊಳ್ಳುವಿಕೆಯಿಂದ ವಿಚಾರಗಳು ಇತ್ಯಾರ್ಥವಾಗುತ್ತದೆ. ಯಜಮಾನನ ತೀರ್ಮಾನ ಅಂತಿಮವಲ್ಲ. ಸಮುದಾಯದ ಪಾಲ್ಗೊಳ್ಳುವಿಕೆಯು ಇಲ್ಲಿ ಪ್ರಧಾನವಾಗಿರುತ್ತದೆ. ಬೆಟ್ಟಕುರುಬರು ಸಮುದಾಯದಲ್ಲಿ ಹೆಂಗಸರಿಗೂ ಸಮಾನ ಪ್ರಾಶಸ್ತ್ಯವಿದೆ. ಹಾಗೆಯೇ ಯುವಕರಿಗೂ, ಯುವತಿಯರಿಗೂ ನಾಯಕತ್ವವನ್ನು ಕಲ್ಪಿಸಿಕೊಟ್ಟಿದ್ದಾರೆ. ಸಮುದಾಯದಲ್ಲಿ ಅತ್ಯಂತ ಚುರುಕಾದ, ಸಮುದಾಯವನ್ನು ಏಕ ಸೂತ್ರದಲ್ಲಿ

ಕೊಂಡೊಯ್ಯುವ ಸಾಮರ್ಥ್ಯವಿರುವವ ಯುವಕ ಮತ್ತು ಯುವತಿಯರನ್ನು ಆಯ್ಕೆ ಮಾಡಿ ಅವರಿಗೆ ನಾಯಕತ್ವವನ್ನು ವಹಿಸುವ. ಹೀಗೆ ಆಯ್ಕೆಯಾದ ಯುವ ನಾಯಕ ಅಥವ ಯುವ ನಾಯಕಿ ಆ ಗುಂಪಿನ ಮುಂದಾಳುಗಳಾಗಿ ಹಬ್ಬ ಪೂಜೆ ಸಮಾರಂಭ ಇತ್ಯಾದಿ ಸಂದರ್ಭದಲ್ಲಿ ತಮ್ಮ ಗುಂಪನ್ನು ಪ್ರೋತ್ಸಾಹಿಸಿ ಕಾರ್ಯಕ್ರಮಗಳಲ್ಲಿ ಮುಖ್ಯವಾದ ಜವಾಬ್ದಾರಿಯನ್ನು ನಿಭಾಯಿಸುತ್ತಿದ್ದರು. ಅತ್ಯುತ್ತಮವಾದ ಒಳಾಡಳಿತ ವ್ಯವಸ್ಥೆಯನ್ನು ಇವರು ಹೊಂದಿದ್ದಾರೆ. ಅಧಿಕಾರದ ವಿಕೇಂದ್ರಿಕರಣವನ್ನು ಬುಡಕಟ್ಟುಗಳು ಪಾಲಿಸುತ್ತಾರೆ. ಅಧಿಕಾರ ಯಾವುದೇ ಒಬ್ಬ ವ್ಯಕ್ತಿಯಲ್ಲಿದ್ದಾಗ ದುರುಪಯೋಗಗೊಳ್ಳುವ ಸಾಧ್ಯತೆಗಳು ಹೆಚ್ಚಿರುತ್ತವೆ. ಅದನ್ನು ಅರಿತಿರುವ ಈ ಬುಡಕಟ್ಟುಗಳು ಅಧಿಕಾರವನ್ನು ಹಲವು ಹಂತಗಳಾಗಿ ವಿಭಾಗಿಸಿ ಪ್ರತಿಯೊಬ್ಬರಿಗೂ ನಿರ್ದಿಷ್ಟವಾದ ಬೇರೆ ಬೇರೆ ಜವಾಬ್ದಾರಿಗಳನ್ನು ಹಂಚಿಕೊಂಡಿರುತ್ತಾರೆ. ಕೆಲವೊಂದು ಅಧಿಕಾರವು ವಂಶಪಾರಂಪರ್ಯವಾಗಿ ಬಂದರೂ ಕೂಡ ಯೋಗ್ಯತೆಯಿಲ್ಲದ ವ್ಯಕ್ತಿಗಳಿಗೆ ಜವಾಬ್ದಾರಿಗಳು ವರ್ಗಾವಣೆಯಾದಾಗ ಅನುಕೂಲಕ್ಕಿಂತ ಅಪಾಯವೇ ಹೆಚ್ಚು ಅಂತಹ ಸಂದರ್ಭದಲ್ಲಿ ಅದೇ ಕುಲಕ್ಕೆ ಸೇರಿದ ಸೋದರಸಂಬಂದಿಗಳು ಸಮರ್ಥರೆಂದು ಕಂಡು ಬಂದರೆ ಅಂತವರಿಗೆ ಜವಾಬ್ದಾರಿ ವರ್ಗಾವಣೆಯಾಗುತ್ತದೆ. ಈ ಬುಡಕಟ್ಟು ಸಮುದಾಯಗಳ ಎಲ್ಲಾ ಆಗು ಹೋಗುಗಳು ಸಮುದಾಯದ ದೈವೀಕ, ಅತಿಮಾನುಷ ನಂಬಿಕೆಗಳೊಂದಿಗೆ ತಳುಕು ಹಾಕಿಕೊಂಡಿರುವುದರಿಂದ ಪ್ರತಿಯೊಬ್ಬರೂ ಭಯ ಭಕ್ತಿಯಿಂದ ತಮ್ಮ ಕರ್ತವ್ಯಗಳನ್ನು ನಿಭಾಯಿಸುತ್ತಾರೆ.

**ಅಡಿ ಟಿಪ್ಪಣಿಗಳು**

1. ಹರೀಶ್ ಪಿ.ಎನ್., ಎರವರ ಸಂಸ್ಕೃತಿ, ಪು.103, 1993.
2. ಅದೇ, ಪು.283.
3. ಅದೇ, ಪು.271.
4. ಅದೇ, ಪು.272.
5. ಅದೇ, ಪು.272.
6. Sheering Rev M.A, Hindu Tribes and Castes, P 76, 1872.
7. ನಡಿಕೇರಿಯಂಡ ಚಿಣ್ಣಪ್ಪ ಪಟ್ಟೋಲೆ ಪಳಮೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.500, 1975.
8. ಹರೀಶ್ ಪಿ.ಎನ್., ಎರವರ ಸಂಸ್ಕೃತಿ, ಪು.153, 1993.

9. ಅದೇ, ಪು.66 1993.

10. ಅದೇ, ಪು.267, 1993.

11. ಅದೇ, ಪು.267 1993.

12. ಅದೇ, ಪು.272 1993.

13. ಅದೇ, ಪು.272 1993.

14. ಅದೇ, ಪು.272, 1993.

15. ಅದೇ, ಪು.272, 1993.

16. ಕೇಶವನ್ ಪ್ರಸಾದ್ ಕೆ., ಮಲೆ ಮಾದೇಶ್ವರ ಕಾವ್ಯ, ಪು.125, 1997.

17. ಅದೇ, ಪು.130, 1997.

18. ಅದೇ, ಪು.140, 1997.

19. ಅದೇ, ಪು.150, 1997.

20. ಅದೇ, ಪು.152, 1997.

21. ಅದೇ, ಪು.152, 1997.

22. ಅದೇ, ಪು.152, 1997.

23. ಅದೇ, ಪು.154, 1997.

24. ಅದೇ, ಪು.164, 1997.

25. ಅದೇ, ಪು.166, 1997.

26. ಅದೇ, ಪು.167, 1997.

27. ಅದೇ, ಪು.169, 1997.

28. ಅದೇ, ಪು.172, 1997.

29. ಅದೇ, ಪು.173, 1997.

30. ಅದೇ, ಪು.173, 1997.

31. ಅದೇ, ಪು.173, 1997.

32. ಅದೇ, ಪು.176, 1997.

33. ಅದೇ, ಪು.179, 1997.

34. ಅದೇ, ಪು.217, 1997.

35. ಅದೇ ಪು.59, 1997

36. ಅದೇ ಪು.172, 1997

37. Nanjundiah H.V., Ananth Krishna Iyer, The Mysore Tribes and Castes,197, 1922.

38. ಮರಿಸ್ವಾಮಿ, ಆರ್., ಸೋಲಿಗ; ಸಮಾಜೋ ಭಾಷಿಕ ಅಧ್ಯಯನ, ಪು.24, 2014.

39. ಅದೇ, ಪು.24.

40. ಹರೀಶ್ ಪಿ.ಎನ್., ಎರವರ ಸಂಸ್ಕೃತಿ, ಪು.104, 1993.

41. ರಾಜು ಕೆ.ಸಿ., ಕರ್ನಾಟಕದ ಎರವರು; ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಪು.58, 2013.

42. ಸುನಂದಮ್ಮ, ಮೈಸೂರು ಮತ್ತು ಚಾಮರಾಜನಗರಗಳಲ್ಲಿ ಸೋಲಿಗ ಬುಡಕಟ್ಟು ಜನಾಂಗದ ಅಭಿವೃದ್ಧಿಗೆ ಕರ್ನಾಟಕ ಸರಕಾರ ಕಾರ್ಯಕ್ರಮಗಳು: ಒಂದು ವಿಮರ್ಶಾತ್ಮಕ ಅಧ್ಯಯನ. ಪು.59-60, 2011.

ಅಧ್ಯಾಯ: ಆರು

# ಕೊಡಗಿನ ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ದುಡಿಮೆಯ ಸ್ವರೂಪ

6.1. ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ದುಡಿಮೆ

6.2. ಎರವರ ಮೌಖಿಕ ಸಾಹಿತ್ಯದಲ್ಲಿ ದುಡಿಮೆಯ ಸ್ವರೂಪ

6.3. ಜೇನುಕುರುಬರ ಮೌಖಿಕ ಸಾಹಿತ್ಯದಲ್ಲಿ ದುಡಿಮೆಯ ಸ್ವರೂಪ

6.4. ಬೆಟ್ಟಕುರುಬರ ಮೌಖಿಕ ಸಾಹಿತ್ಯದಲ್ಲಿ ದುಡಿಮೆಯ ಸ್ವರೂಪ

6.5. ಸೋಲಿಗರ ಮೌಖಿಕ ಸಾಹಿತ್ಯದಲ್ಲಿ ದುಡಿಮೆಯ ಸ್ವರೂಪ

6.6. ಕುಡಿಯರ ಮೌಖಿಕ ಸಾಹಿತ್ಯದಲ್ಲಿ ದುಡಿಮೆಯ ಸ್ವರೂಪ

6.7. ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಪ್ರತಿರೋಧದ ಸ್ವರೂಪ

## ಅಧ್ಯಾಯ: ಆರು

# ಕೊಡಗಿನ ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ದುಡಿಮೆಯ ಸ್ವರೂಪ

### 6.1. ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ದುಡಿಮೆ

ಶ್ರಮಸಂಸ್ಕೃತಿಯ ಹಿನ್ನೆಲೆಯ ಬುಡಕಟ್ಟುಗಳು ತಮ್ಮ ಕುಟುಂಬ ಮತ್ತು ಸಮುದಾಯಗಳ ಪೋಷಣೆಗೆ, ಐಕ್ಯತೆಗಾಗಿ ಎಂತಹ ಕಠಿಣ ಕೆಲಸವನ್ನು ಕೂಡ ನಿಭಾಯಿಸಬಲ್ಲವು. ಬುಡಕಟ್ಟುಗಳಿಗೆ ದುಡಿಮೆ ಎನ್ನುವುದು ಹಣ ಗಳಿಸುವ ಏಕೈಕ ಮಾರ್ಗವಲ್ಲ. ಖಾಸಗಿ ಸಂಪತ್ತನ್ನು ಹೆಚ್ಚಿಸಿಕೊಳ್ಳುವ ಹಪಾಹಪಿತನವೂ ಅಲ್ಲ. ದುಡಿಮೆ ಎಂದರೆ, ಆದಿವಾಸಿಗಳು ಕಾಡಿನ ಜೊತೆ ತಮ್ಮ ಸುತ್ತಲ ಪರಿಸರದ ಜೊತೆ ನಡೆಸುವ ಅನುಸಂಧಾನ. 'ಭಾರತದ ಸಾಮಾಜಿಕ ಸಂದರ್ಭದಲ್ಲಿ ಅರಣ್ಯ ಮತ್ತು ಸಮುದಾಯಗಳ ಸಂಬಂಧ ಅವಿಚ್ಛಿನ್ನವಾದದ್ದು. ಅರಣ್ಯಗಳು ಸ್ಥಳೀಯ ಸಮುದಾಯಗಳ ಬದುಕಿನ ಭಾಗವಾಗಿಯೇ ಪರಿಭಾವಿಸಲ್ಪಟ್ಟಿದ್ದವು. ಈ ಸಮುದಾಯಗಳು, ಅರಣ್ಯಗಳನ್ನು ಕೇವಲ ಮಳೆ ಸುರಿಸುವ ಮತ್ತು ಹಸಿರಿನಿಂದ ಕಂಗೊಳಿಸಿ ಮನಸ್ಸಿಗೆ ಮುದ ನೀಡುವ ಭೂಭಾಗಗಳನ್ನಾಗಿ ಮಾತ್ರ ಪರಿಗಣಿಸಿರಲಿಲ್ಲ. ಸಮುದಾಯಗಳ ಸಂಸ್ಕೃತಿ ಮತ್ತು ಆಧ್ಯಾತ್ಮಿಕ ಜಗತ್ತನ್ನು ಅರಣ್ಯಗಳು ರೂಪಿಸುತ್ತಲೇ ಬಂದಿದ್ದವು. ಈ ಕಾರಣದಿಂದಾಗಿ ಸಮುದಾಯಗಳು ಯಾವತ್ತೂ ಅರಣ್ಯವನ್ನು ಉಪಯೋಗವಾದಿ ದೃಷ್ಟಿಕೋನದಿಂದ ನೋಡುವ ಪರಿಪಾಟವನ್ನು ಬೆಳೆಸಿಕೊಂಡಿರಲಿಲ್ಲ. ಅರಣ್ಯಗಳು ಸಮುದಾಯಗಳ ಬದುಕಿನ ಅವಿಭಾಜ್ಯ ಅಂಗಗಳಾಗಿದ್ದವು. ಜೊತೆಗೆ ಅರಣ್ಯವು ಒಂದು 'ಆಸ್ತಿ'ಯಾಗಿ ಪರಿಗಣಿಸಲ್ಪಟ್ಟಿರಲಿಲ್ಲ. ಅರಣ್ಯವು ಅಧ್ಯಾತ್ಮವಾಗಿ, ಸಂಸ್ಕೃತಿಯಾಗಿ, ಮನುಷ್ಯನ ಯಾವತ್ತೂ ಸಂಗಾತಿಯಾಗಿ ಸಮುದಾಯಗಳ ಬದುಕಲ್ಲಿ ಹಾಸುಹೊಕ್ಕಾಗಿತ್ತು. ಈ ಹಂತದಲ್ಲಿ ಅರಣ್ಯ ಉಪಭೋಗಕ್ಕೆ ಒಳಗಾಗಿರಲಿಲ್ಲ. ಹಾಗಿದ್ದೂ ಸಹ ಸಮುದಾಯದ ಆರ್ಥಿಕತೆಯನ್ನು ರೂಪಿಸುವಲ್ಲಿ ಅರಣ್ಯ ಉಪಯುಕ್ತ ಪಾತ್ರ ವಹಿಸುತ್ತಲೇ ಇತ್ತು. ಮನುಷ್ಯನ ಸಾಮಾಜಿಕ ಸಂಸ್ಥೆಗಳಾದ ಬೇಟೆ, ಪಶುಪಾಲನೆ ಮತ್ತು ಆದಿಮ ಕೃಷಿ ಹಂತಗಳಲ್ಲಿ ಅರಣ್ಯ ಬಳಕೆಯಾಗುತ್ತಿತ್ತು.'[1]

ಅರಣ್ಯದ ಸಾಹಚರ್ಯ ಆದಿವಾಸಿಗಳ ಕ್ರಿಯಾಶೀಲತೆಯ ಮೂಲಧಾತು. ಅರಣ್ಯವೇ ಅವರ ಸರ್ವಸ್ವ. ಅರಣ್ಯದ ಹೃದಯ ಭಾಗದಲ್ಲಿದ್ದ ಆದಿವಾಸಿಗಳಿಗೆ ಕಾಡು ಎಂದೂ ಖಾಲಿಯಾಗದ ನಿಧಿ. ಅದು ಅವಿನಾಶಿ. ಅರಣ್ಯದ ಜೊತೆಗಿನ ಆದಿವಾಸಿಗಳ ಒಡನಾಟವು ವ್ಯಾವಹಾರಿಕವಲ್ಲ. ಅದು ಕರುಳುಬಳ್ಳಿಯ ಸಂಬಂಧ. 'ಮನುಷ್ಯನ ಸಾಮಾಜಿಕ ಸಂಸ್ಥೆಗಳಾದ ಬೇಟೆ, ಪಶುಪಾಲನೆ ಮತ್ತು ಆದಿಮ ಕೃಷಿ ಹಂತಗಳಲ್ಲಿ ಅರಣ್ಯ ಬಳಕೆಯಾಗುತ್ತಿತ್ತು. ಆದರೆ ಇಂದಿನಂತೆ ಖಿಲಗೊಳ್ಳುವ ಸ್ವರೂಪದಲ್ಲಿ ಬಳಕೆಯಾಗುತ್ತಿರಲಿಲ್ಲ. ಆದಿಮಾನವ ಅಥವಾ ಇಂದಿನ ಆದಿವಾಸಿಗಳು ರೂಢಿಸಿಕೊಂಡಿದ್ದ ಕುಮ್ರಿ ಬೇಸಾಯ ಪದ್ಧತಿಯು ಅರಣ್ಯದ ಸಾವಯವತೆಯನ್ನು ನಾಶ ಮಾಡುವಂತದ್ದಲ್ಲ. ಬದಲಿಗೆ ಅರಣ್ಯವನ್ನು ಅದರ ಸಾವಯವತೆಯ ಜೊತೆಗೆ ಈ ಪದ್ಧತಿಯು ಪೋಷಿಸುತ್ತಿತ್ತು. ಈ ಕಾರಣದಿಂದ ಭಾರತದ ಸ್ಥಳೀಯ ಸಮುದಾಯಗಳಿಗೆ ಅರಣ್ಯವು ಭೋಗಿಸಲ್ಪಡುವ ಆಸ್ತಿಯಲ್ಲ. ಅರಣ್ಯದ ಮೇಲೆ ಖಾಸಗಿ ಒಡೆತನವೂ ಈ ಸಮುದಾಯಗಳಿಗೆ ಸಾಧ್ಯವಾಗಲಿಲ್ಲ. ಆಧುನಿಕ ಪೂರ್ವ ಕಾಲಘಟ್ಟದವರೆಗೆ ಭಾರತದಲ್ಲಿ ಈ ಸ್ಥಿತಿ ಮುಂದುವರಿದುಕೊಂಡು ಬಂದಿತು.'[2] ಆದರೆ ಮಧ್ಯಕಾಲೀನ ಊಳಿಗಮಾನ್ಯ ಸಮಾಜದಲ್ಲಿ ಕಾಡು ಮತ್ತು ಆದಿವಾಸಿಗಳನ್ನು ಪರಿಭಾವಿಸುವ ವಿಧಾನದಲ್ಲಿ ಕೆಲವು ಬದಲಾವಣೆಗಳಾದವು. ಊಳಿಗಮಾನ್ಯ ರಾಜಶಾಹಿ ಕಾಡು ಮತ್ತು ಆದಿವಾಸಿಗಳನ್ನು ಬಳಕೆಗೆ ಒಳಪಡಿಸಿತು. ಕಾಡಿನ ಉತ್ಪನ್ನಗಳ ಮೇಲೆ ಅನೇಕ ತೆರಿಗೆಗಳನ್ನು ಹಾಕಲಾಯಿತು. ಆನೆಗಳನ್ನು ಹಿಡಿಯಲು, ಪಳಗಿಸಲು ಮತ್ತು ಅರಣ್ಯದ ಉತ್ಪನ್ನಗಳನ್ನು ವ್ಯಾಪಕವಾಗಿ ಬಳಸಲು ಆದಿವಾಸಿಗಳನ್ನು ಮತ್ತು ಅರಣ್ಯಗಳನ್ನು ಬಳಸಲು ಪ್ರಾರಂಭಿಸಲಾಯಿತು. ಮಧ್ಯಕಾಲೀನ ಸಾಮ್ರಾಜ್ಯಗಳ ರಾಜಾದಾಯವನ್ನು ಹೆಚ್ಚಿಸಲು ಅರಣ್ಯ ಮತ್ತು ಆದಿವಾಸಿಗಳನ್ನು ವ್ಯಾಪಕವಾಗಿ ಬಳಸಲಾಯಿತು.[3] ಈ ಕುರಿತು ಚರಿತ್ರೆಕಾರರಾದ ಪ್ರೊ. ಇರ್ಫಾನ್ ಹಬೀಬ್ ಮಹತ್ವದ ಅಧ್ಯಯನವನ್ನು ಮಾಡಿದ್ದಾರೆ. ಮಧ್ಯಕಾಲದ ಈ ಆರ್ಥಿಕ ನಡೆಯು ಮನುಷ್ಯ ಮತ್ತು ಅರಣ್ಯದ ನಡುವಿನ ಸಂಬಂಧಗಳನ್ನು ಬದಲಿಸಿತು. ಅರಣ್ಯ ಮತ್ತು ಅರಣ್ಯದ ಕುರಿತು ಹೆಚ್ಚು ತಿಳಿದಿದ್ದ ಆದಿವಾಸಿಗಳು ಊಳಿಗಮಾನ್ಯ ಆರ್ಥಿಕತೆಯಲ್ಲಿ ಬೆರೆತುಹೋದರು. ಆದರೆ, ಊಳಿಗಮಾನ್ಯ ಆರ್ಥಿಕತೆ ಅರಣ್ಯ ಮತ್ತು ಆದಿವಾಸಿಗಳ ನಡುವಿನ ಸಂಬಂಧವನ್ನು ವಿಚ್ಛಿದ್ರಗೊಳಿಸಲಿಲ್ಲ. ಇವೆರಡನ್ನೂ ವ್ಯಾಪಕವಾಗಿ ಬಳಸಲಾರಂಭಿಸಿತು. ಜೊತೆಗೆ ಆದಿವಾಸಿಗಳು ಮುಖ್ಯವಾಹಿನಿಯ ಜಾತಿವ್ಯವಸ್ಥೆಯನ್ನು ಅನುಕರಿಸತೊಡಗಿದರು. ಕುಲಗಳೇ ಪ್ರಧಾನವಾಗಿದ್ದ ಆದಿವಾಸಿ ಸಮಾಜದಲ್ಲಿ ಜಾತಿವ್ಯವಸ್ಥೆ ಕಾಲಿಟ್ಟಿತ್ತು. ಕುಲಗಳು ಜಾತಿಗಳಾಗಿ ಹೋದವು. ಮುಖ್ಯವಾಹಿನಿಯ ಸಾಮಾಜಿಕ ಏರುಪೇರುಗಳು ಆದಿವಾಸಿ ಸಮಾಜದಲ್ಲೂ ಸಂಭವಿಸಿದವು. 'ಈ ನೆಲದ ಪಾರಂಪರಿಕ ಗಣ ಸಮಾಜಗಳು ತಮ್ಮ ಸಮತಾವಾದಿ ಸಾಮಾಜಿಕ ಸಂರಚನೆಯಲ್ಲಿ ಬದುಕಲು ಪ್ರಯತ್ನಿಸಿದರೂ ಸಹ ಊಳಿಗಮಾನ್ಯ ವರ್ಣವ್ಯವಸ್ಥೆ ಅವರನ್ನು ಮುಕ್ತವಾಗಿ

ಬಿಡಲಿಲ್ಲ. ಊಳಿಗಮಾನ್ಯ ದೊರೆಗಳಿಗೆ ಸೋತು ಶರಣಾದ ಸಮುದಾಯಗಳು ಕಾಡಂಚು, ಕೇರಿ ಮತ್ತು ಬಯಲುಗಳಲ್ಲಿ ಬದುಕುತ್ತ ಬಂದವು. ಇನ್ನು ಕಾಡಲ್ಲಿಯೇ ಉಳಿದ ಸಮುದಾಯಗಳು ತಮ್ಮ ಅನನ್ಯತೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದರೂ ಸಹ ವ್ಯಾಪಕ ಪ್ರಭಾವಳಿಯ ಊಳಿಗಮಾನ್ಯ ಸಮಾಜದ ಹಿಡಿತದಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಜಾತಿಯ ವಿವಿಧ ಸ್ತರಗಳೊಳಗೆ ಇಲ್ಲಿ ಬದುಕುವ ಸಮುದಾಯಗಳನ್ನು ನಿಯುಕ್ತಿಗೊಳಿಸಲಾಯಿತು. ವೀರೋಚಿತ ಸೋಲು, ಆತ್ಮದ್ವೇಷ, ತಬ್ಬಲಿತನ ಅಸಹಾಯಕತೆಗಳಲ್ಲಿ ಈ ದುಡಿಯುವ ಸಮುದಾಯಗಳು ಸಿಲುಕಿಕೊಂಡವು. ಒಂದೆಡೆ ತಮ್ಮ ಆದಿಮ ಗಣ ಸಮಾಜದ ಜೀವನವಿಧಾನಗಳನ್ನು ಉಳಿಸಿಕೊಳ್ಳಲಾಗದೆ, ಹೇರಲ್ಪಟ್ಟ ಊಳಿಗಮಾನ್ಯ ಆಚರಣೆಗಳನ್ನು ಒಪ್ಪಿಕೊಳ್ಳಲೂ ಆಗದೆ ಅತಂತ್ರ ಸ್ಥಿತಿಯಲ್ಲಿಯೇ ಈ ಸಮುದಾಯಗಳು ಬದುಕಿಬಂದವು. ಅರಣ್ಯ, ಅರಣ್ಯದ ಅಂಚು, ಬಯಲು, ಪರ್ವತ ಕಣಿವೆಗಳಲ್ಲಿ ಬದುಕುವ ಯಾವ ಸಮುದಾಯಗಳೂ ಈ ಊಳಿಗಮಾನ್ಯ ವ್ಯವಸ್ಥೆಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಜಾತಿಯ ಅಸಮಾನತೆಯನ್ನು ಒಪ್ಪಿಕೊಂಡೇ ಬದುಕುವ ಅನಿವಾರ್ಯತೆ ಈ ಸಮುದಾಯಗಳಿಗೆ ತಲೆದೋರಿತು.'[4]

ಆದರೆ, ಅರಣ್ಯ ಮತ್ತು ಆದಿವಾಸಿಗಳ ನಡುವಿನ ಸಂಬಂಧಗಳಲ್ಲಿ ವಿಚ್ಛಿದ್ರ ಏರುಪೇರುಗಳಾಗಿದ್ದು ವಸಾಹತು ಆಡಳಿತದ ಸಂದರ್ಭದಲ್ಲಿ. ಕಾಡನ್ನು ಎಂದೂ 'ಬಳಸುವ' ಬಳಸಿ ನಾಶ ಮಾಡುವ ಕೃತ್ಯಗಳಲ್ಲಿ ತೊಡಗದ ಆದಿವಾಸಿಗಳು ವಸಾಹತು ಆಡಳಿತದ ಸಂದರ್ಭದಲ್ಲಿ ದಿಕ್ಕೆಟ್ಟು ಹೋದರು. 'ಆದರೆ ವಸಾಹತು ಆಡಳಿತ ಯಾವತ್ತು ಭಾರತವನ್ನು ಸಂಪೂರ್ಣವಾಗಿ ಆಕ್ರಮಿಸಿಕೊಂಡಿತೋ ಅಂದಿನಿಂದ ಅರಣ್ಯವು ಆಸ್ತಿಯಾಗಿ ರೂಪಾಂತರಗೊಂಡಿತು. ಮಾರುಕಟ್ಟೆಯಲ್ಲಿ ಬಿಕರಿಯಾಗುವ 'ವಸ್ತು'ವಾಗಿ ಅರಣ್ಯ ಪರಿಭಾವಿಸಲ್ಪಟ್ಟಿತು. ವಸಾಹತುಶಾಹಿ ಆಳ್ವಿಕೆಯಲ್ಲಿ ಸಮುದಾಯಗಳ ಬದುಕಿನ ಭಾಗವಾಗಿದ್ದ ಅರಣ್ಯವು ಸರಕಾರದ ಬಂಡವಾಳಶಾಹಿಗಳ ಖಾಸಗಿ ಆಸ್ತಿಯಾಗಿ ಬದಲಾಯಿತು. ಇದರ ಜೊತೆಗೆ ಸಮುದಾಯ ಮತ್ತು ಅರಣ್ಯಗಳ ನಡುವೆ ಇದ್ದ ಪಾರಂಪರಿಕ ಸಂಬಂಧಗಳಿಗೂ ಈ ಹಂತದಲ್ಲಿ ಸಂಚಕಾರ ಬಂದೊದಗಿತು. ಅರಣ್ಯವು ಕಂಪನಿ ಆಡಳಿತದ ಸಂದರ್ಭದಲ್ಲಿ ಉಪಭೋಗಕ್ಕೆ ಒಳಗಾಗತೊಡಗಿತು. ಅರಣ್ಯವು ವಸಾಹತು ಆಡಳಿತದ ವಿಸ್ತರಣೆಗೆ ಬಳಕೆಯಾಗತೊಡಗಿದ ಮೇಲೆ ಸಮುದಾಯ ಮತ್ತು ಅರಣ್ಯಗಳ ನಡುವಿನ ಪಾರಂಪರಿಕ ಸಂಬಂಧವು ಕ್ರಮೇಣ ನಶಿಸತೊಡಗಿತು. ಅದರಲ್ಲೂ ಅರಣ್ಯಗಳಲ್ಲಿ ಬದುಕುತ್ತಿದ್ದ ಆದಿವಾಸಿಗಳು ವಸಾಹತು ಆಡಳಿತದ ಅರಣ್ಯನೀತಿಗಳಿಂದ ಅತಂತ್ರ ಸ್ಥಿತಿಗೆ ತಳ್ಳಲ್ಪಟ್ಟರು. ಅರಣ್ಯವನ್ನು ಸರ್ವಸ್ವವೆಂದು ಬದುಕುತ್ತಿದ್ದ ಆದಿವಾಸಿಗಳು ವಸಾಹತು ಆಡಳಿತದ ಅರಣ್ಯನೀತಿಯಿಂದಾಗಿ ತಮ್ಮ ವಾಸದ ನೆಲೆಗಳಲ್ಲಿಯೇ ಅನ್ಯರಾಗುವ ಬಿಕ್ಕಟ್ಟನ್ನು ಎದುರಿಸಿದರು.'[5] ಮೊದಲ ಬಾರಿಗೆ ಅರಣ್ಯವು ಆದಿವಾಸಿಗಳ ಸ್ವಚ್ಛಂದ ಬದುಕಿನ ವ್ಯಾಪ್ತಿಯಿಂದ

ಬೇರ್ಪಟ್ಟು ಸರಕಾರದ ಆಸ್ತಿಯಾಗತೊಡಗಿತು. ಅರಣ್ಯವನ್ನು ಬಳಸುವ ಉಪಭೋಗಿಸುವ ಅಧಿಕಾರವನ್ನು ವಸಾಹತು ಆಡಳಿತ ಬಳಸತೊಡಗಿತು. ವಸಾಹತುಶಾಹಿಯ ಆರ್ಥಿಕ ನೀತಿಗಳಲ್ಲಿ ಇಲ್ಲಿನ ನಿಸರ್ಗ ಸಂಪತ್ತಿನ ಲೂಟಿಯೇ ಬಹುಮುಖ್ಯವಾದದ್ದಾಗಿತ್ತು. 1830ರಲ್ಲಿ ವಸಾಹತು ಆಡಳಿತವು ಮೊದಲಿಗೆ ಅರಣ್ಯನೀತಿಯೊಂದನ್ನು ರೂಪಿಸಿತು. ಅರಣ್ಯವನ್ನು ಯಾರು ಬಳಸಬೇಕು? ಅರಣ್ಯ ಯಾರ ಸುಪರ್ದಿಯಲ್ಲಿರಬೇಕು? ಅರಣ್ಯದ ಒಡೆತನ ಯಾರದ್ದು? ಎಂಬ ಪ್ರಶ್ನೆಗಳಿಗೆ ಈ ಅರಣ್ಯನೀತಿಯಲ್ಲಿ ಸ್ಪಷ್ಟ ಉತ್ತರಗಳಿದ್ದವು. 'ಈ ಹಂತದಲ್ಲಿ ಅರಣ್ಯದಲ್ಲಿನ ಬುಡಕಟ್ಟುಗಳು ವಸಾಹತು ಆಡಳಿತದ ಈ ಕ್ರಮದ ವಿರುದ್ಧ ಬಂಡೆದ್ದವು. ಅರಣ್ಯವನ್ನು ತಮ್ಮ ಬಂಡವಾಳದ ವಿಸ್ತರಣೆಯ ಭಾಗವಾಗಿ ಬಳಸುತ್ತಿದ್ದ ವಸಾಹತುಶಾಹಿ ಆಡಳಿತ ಸ್ಥಳೀಯ ಬುಡಕಟ್ಟುಗಳ ಪ್ರತಿರೋಧಗಳನ್ನು ಸೈನ್ಯದ ಮೂಲಕ ಹತ್ತಿಕ್ಕಿತು. ಸೈನ್ಯದ ಕಾರ್ಯಾಚರಣೆಗಳನ್ನು ನ್ಯಾಯಬದ್ಧಗೊಳಿಸಲು ಅರಣ್ಯ ಕಾಯ್ದೆಗಳು ರೂಪುಗೊಂಡವು. ಅಂದಿನಿಂದ ಸಮುದಾಯ ಮತ್ತು ಅರಣ್ಯಗಳ ನಡುವೆ ಶತಮಾನಗಳ ಕಾಲ ರೂಢಿಯಲ್ಲಿದ್ದ ಅವಿನಾಭಾವ ಸಂಬಂಧಗಳೂ ಕೊನೆಗೊಂಡವು. ಅರಣ್ಯ ವಸಾಹತು ಆಡಳಿತದ ಖಾಸಗಿ ಆಸ್ತಿಯಾಯಿತು. ಈ ಆಸ್ತಿಯನ್ನು 'ರಕ್ಷಿಸಬೇಕೆಂದು' ಸದರಿ ಆಡಳಿತ ನಿಶ್ಚಯಿಸಿತು. ಆದರೆ ಯಾರಿಂದ ಅರಣ್ಯವನ್ನು 'ರಕ್ಷಿಸಲಾಗುತ್ತದೆ' ಎಂಬುದು ಅಗೋಚರ ಸಂಗತಿಯೇ ಆಗಿತ್ತು. ಅರಣ್ಯವನ್ನು 'ಸಂರಕ್ಷಿಸಲೆಂದೇ' ಅರಣ್ಯ ಕಾಯ್ದೆಗಳನ್ನು ವಸಾಹತು ಆಡಳಿತ ರೂಪಿಸಿತು. ಈ ಕಾಯ್ದೆಗಳಲ್ಲಿ ಅರಣ್ಯ ಮತ್ತು ಅವುಗಳ ಭಾಗವಾಗಿಯೇ ಬದುಕುತ್ತಿದ್ದ ಆದಿವಾಸಿಗಳ ಹಿತ ಕಾಯುವ ಅಂಶಗಳು ಅಂತರ್ಗತವಾಗಿರಲಿಲ್ಲ. ಅರಣ್ಯ ಯಾರದು? ಯಾರು ಅದನ್ನು ಬಳಸಬೇಕು? ಅರಣ್ಯದಲ್ಲಿ ಯಾರಿರಬೇಕು? ಯಾರಿರಬಾರದು? ಎಂಬೆಲ್ಲ ಸಂಗತಿಗಳು ಈ ಅರಣ್ಯನೀತಿಯಿಂದ ಸ್ಪಷ್ಟಗೊಂಡವು. ಈವತ್ತಿನ ಸಂರಕ್ಷಿತ ಅರಣ್ಯ, ಅಭಯಾರಣ್ಯ, ವನ್ಯಮೃಗ ಸಂರಕ್ಷಣೆ, ರಾಷ್ಟ್ರೀಯ ಉದ್ಯಾನ ಎಂಬ ಆಧುನಿಕ ಕಲ್ಪನೆಗಳೆಲ್ಲ ಈ ಪುರಾತನ ಕಾಯ್ದೆಯಲ್ಲಿಯೇ ತಮ್ಮ ಬೇರುಗಳನ್ನು ಬಿಟ್ಟುಕೊಂಡಿವೆ. ಭಾರತಕ್ಕೆ ಸ್ವಾತಂತ್ರ್ಯ ಬಂದು 66 ವರ್ಷ ಕಳೆದರೂ ಇಲ್ಲಿನ ಅರಣ್ಯನೀತಿ, ಬ್ರಿಟಿಷ್ ಸರ್ಕಾರದ ಅರಣ್ಯನೀತಿಯ ಯಥಾವತ್ತು ನಕಲಾಗಿಯೇ ಉಳಿದುಕೊಂಡಿದೆ.'[6] ಅಂದಿನಿಂದ ಆದಿವಾಸಿಗಳ ಮತ್ತು ಕಾಡಿನ ನಡುವಿನ ಪಾರಂಪರಿಕ ಸಂಬಂಧ ಕಡಿದು ಬಿದ್ದಿತು. ಜೊತೆಗೆ ಆದಿವಾಸಿಗಳು ಅವಲಂಬಿಸಿದ್ದ ಅರಣ್ಯವು ಸರಕಾರಗಳ ಖಾಸಗಿ ಆಸ್ತಿಯಾಗಿ ರೂಪಾಂತರಗೊಂಡಿತು. ಅಲ್ಲದೆ, ಆದಿವಾಸಿಗಳ ಆರ್ಥಿಕತೆಯೂ ದಿಕ್ಕೆಟ್ಟು ಹೋದದ್ದಲ್ಲದೆ, ಊಳಿಗಮಾನ್ಯ ವಿಷಮ ಆರ್ಥಿಕತೆಯ ಭಾಗವಾಗಿ ಹೋಯಿತು. ಜೊತೆಗೆ ಆದಿವಾಸಿಗಳ ಸಹಜ ದುಡಿಮೆಯು ಮೂಲೋತ್ಪಾಟನೆಗೊಂಡು, ಅಸಮಾನ ಶ್ರಮ ವಿಭಜನೆಯಲ್ಲಿ ಬೆರೆತುಹೋಯಿತು. ಹೀಗಾಗಿ ಆದಿವಾಸಿಗಳ ಬದುಕು ಮತ್ತು ದುಡಿಮೆಗಳು ಛಿದ್ರಗೊಂಡವು. ಛಿದ್ರಗೊಂಡ ಈ ಸ್ಥಿತಿಯು ಆದಿವಾಸಿಗಳ ಬದುಕಲ್ಲಿ ಸಂಕೇತದ ಮಟ್ಟದಲ್ಲಿ

ಇನ್ನೂ ಉಳಿದುಕೊಂಡು ಬಂದಿವೆ. ಆದಿವಾಸಿಗಳ ದೈವಾಚರಣೆ, ಪ್ರದರ್ಶನ ಕಲೆಗಳು ಮತ್ತು ಮೌಖಿಕ ಸಾಹಿತ್ಯ ಇತ್ಯಾದಿ ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಉಳಿದುಕೊಂಡು ಬಂದಿವೆ. ಮುಖ್ಯವಾಗಿ ಆದಿವಾಸಿಗಳ ಸೃಷ್ಟಿಪುರಾಣಗಳಲ್ಲಿ ಅವರ ಬದುಕು ಮತ್ತು ಜೀವನ ವಿಧಾನಗಳು ತಲ್ಲಣಗೊಂಡ ಪರಿಯು ಸಾಂಕೇತಿಕವಾಗಿ ವ್ಯಕ್ತವಾಗಿದೆ.

ತಳಸಮುದಾಯಗಳ ಸೃಷ್ಟಿಪುರಾಣಗಳನ್ನು ನಾವು ಗಮನಿಸಿದರೆ ಶಿವನ ದೇಹದ ಕೊಳೆಯಿಂದ ಮನುಷ್ಯನ ಸೃಷ್ಟಿಯಾಯಿತು. ಅವರೇ ನಮ್ಮ ಪೂರ್ವಿಕರು ಎಂದು ಹೇಳುವ ಹಲವು ಕಥೆಗಳನ್ನು ನಾವು ಗಮನಿಸಬಹುದು. ಬೆವರು ಶ್ರಮಸಂಸ್ಕೃತಿಯ ಪ್ರತೀಕ. ಪ್ರತಿಯೊಂದು ಸಮುದಾಯಗಳು ಕೂಡ ಭೂಮಿಯೊಂದಿಗೆ ನೇರ ಸಂಪರ್ಕ ಹೊಂದಿದ್ದವರು ಮತ್ತು ಶ್ರಮದ ಹಿನ್ನೆಲೆಯಿಂದ ಬಂದವರು ಎಂಬುದೇ ಇದರ ಅರ್ಥ.

ಅರಣ್ಯವಾಸಿ ಬುಡಕಟ್ಟುಗಳು ತಮ್ಮ ಜೀವನಕ್ಕಾಗಿ ಮೊದಲಿಗೆ ಕಾಡಿನ ಉತ್ಪನ್ನಗಳನ್ನು ಅವಲಂಬಿಸಿದ್ದರು. ಕಾಡಲ್ಲಿ ಸಿಗುವ ಗೆಡ್ಡೆ ಗೆಣಸು, ಸೊಪ್ಪುಗಳು, ಹಣ್ಣುಗಳಲ್ಲದೆ, ಮೀನು, ನಲ್ಲಿ, ಸಣ್ಣಪುಟ್ಟ ಪ್ರಾಣಿ ಪಕ್ಷಿಗಳ ಬೇಟೆ ಇವೇ ಅವರ ಬದುಕಿಗೆ ಆಧಾರವಾಗಿತ್ತು. ಆದರೂ ಈ ಎಲ್ಲಾ ಬುಡಕಟ್ಟುಗಳೂ ತಮ್ಮದೇ ಆದ ಭಿನ್ನ ಭಿನ್ನ ಕುಲಕಸುಬುಗಳನ್ನು ಕೂಡ ರೂಢಿಸಿಕೊಂಡಿದ್ದವರು. ಈ ಕುಲಕಸುಬುಗಳು ತಲತಲಾಂತರಗಳಿಂದ ಆ ಸಮುದಾಯಗಳ ಬದುಕಿನ ಭಾಗವಾಗಿದ್ದು ತಮ್ಮ ತಮ್ಮ ಕುಲವೃತ್ತಿಗಳಲ್ಲಿ ನೈಪುಣ್ಯತೆಯನ್ನು ಮೆರೆದಿದ್ದಾರೆ. ಉದಾಹರಣೆಗೆ ಬೆಟ್ಟಕುರುಬರು ತಮ್ಮ ಕುಲಕಸುಬಾದ ಬಿದಿರಿನಿಂದ ಕರಕುಶಲ ವಸ್ತುಗಳನ್ನು ತಯಾರಿಸುವದರಲ್ಲಿ ಸಿದ್ಧಹಸ್ತರಾಗಿರುವಂತೆ ಜೇನುಕುರುಬರು ಜೇನುಕೀಳುವುದರಲ್ಲಿ ಪರಿಣತರಾಗಿದ್ದಾರೆ. ಬುಡಕಟ್ಟುಗಳು ಕಾಡಿನ ಮತ್ತು ಕಾಡುಪ್ರಾಣಿಗಳ ನಾಡಿಮಿಡಿತವನ್ನು ಬಲ್ಲವರು. ಕಾಡಿನಲ್ಲಿ ಬದುಕಬೇಕಾದವರಿಗೆ ಕಾಡುಪ್ರಾಣಿಗಳಿಂದ ಯಾವ ಸಮಯದಲ್ಲಾದರೂ ಅಪಾಯ ಎದುರಾಗಬಹುದು. ಆದ ಕಾರಣ ಅವರು ಕಾಡು ಪ್ರಾಣಿಗಳ ಚಲನವಲನಗಳನ್ನು ಕಾಡಿನ ಸೂಕ್ಷ್ಮಗಳನ್ನು ಅರಿತಿದ್ದಾರೆ. ಕಾಡಿನಲ್ಲಿ ಬದುಕಬೇಕಾದ ಉಪಾಯಗಳನ್ನು ಕಂಡುಕೊಂಡಿದ್ದಾರೆ. ಕೊಡಗಿನಲ್ಲಿ ಆನೆಗಳ ಸಂತತಿ ಹೆಚ್ಚಿದ್ದು, ಕಾಡಿನಲ್ಲಿ ಆನೆಗಳು ಎದುರಾದರೆ ಅದರಿಂದ ತಪ್ಪಿಸಿಕೊಳ್ಳಲು ಅನೇಕ ಉಪಾಯಗಳನ್ನು ಕಂಡುಕೊಂಡಿದ್ದಾರೆ. ಆನೆಗಳ ಕಣ್ಣು ಚಿಕ್ಕದಾಗಿದ್ದು ಮನುಷ್ಯರಂತೆ ವಿಶಾಲವಾಗಿ ನೋಡಲು ಸಾದ್ಯವಿಲ್ಲ. ಕಾಡು ದಾರಿಯಲ್ಲಿ ಒಮ್ಮೆಲೆ ಆನೆ ಅಟ್ಟಿಸಿಕೊಂಡು ಬಂದರೆ ಆನೆಯ ಎಡಭಾಗದಲ್ಲಿ ಓಡಬೇಕು. ಏಕೆಂದರೆ ಆನೆಯ ಎಡಗಣ್ಣು ಮಂದವಿರುತ್ತದೆ ಮತ್ತು ಆನೆಯ ಎಡಭಾಗದ ದಿಕ್ಕಿಗೆ ಹಿಮ್ಮುಖವಾಗಿ ಓಡಿದರೆ ತನ್ನ ದೈತ್ಯ ದೇಹವನ್ನು ಮತ್ತೆ ಮತ್ತೆ ತಿರುಗಿಸಲು ಸಾಧ್ಯವಾಗದೆ ಅದು ಬೇಗ ನಿತ್ರಾಣವಾಗಿಬಿಡುತ್ತದೆ. ಕಾಡಿನಲ್ಲಿ ಆನೆ ಎದುರಾದರೆ ದೊಡ್ಡ ಮರವನ್ನು ಏರಬೇಕಾಗುತ್ತದೆ.

ಚಿಕ್ಕ ಮರ ಏರಿದರೆ ಸೊಂಡಿಲಿನಿಂದ ಆನೆ ಹಿಡಿಯಬಹುದು ಅಥವಾ ಮರವನ್ನು ಅಲ್ಲಾಡಿಸಿ ಬೀಳಿಸಬಹುದು. ಒಂದು ವೇಳೆ ಕರಡಿ ಎದುರಾದರೆ ಚಿಕ್ಕ ಮರವನ್ನು ಏರಬೇಕು. ಕರಡಿಗೆ ಚಿಕ್ಕ ಮರವನ್ನು ತಬ್ಬಿಕೊಂಡು ಏರಲು ಸಾಧ್ಯವಿಲ್ಲ. ಈ ರೀತಿ ಪ್ರಾಣಿ ಪಕ್ಷಿಗಳ ಸಂಪೂರ್ಣ ಗುಣಗಳ ಅರಿವು ಇರುವುದರಿಂದ ಅವರು ಅವುಗಳೊಂದಿಗೆ ಧೈರ್ಯವಾಗಿ ಬದುಕಬಲ್ಲರು. ಕಾಲಕ್ರಮೇಣ ಕುಮರಿ ಬೇಸಾಯವನ್ನು ಅಳವಡಿಸಿಕೊಂಡ ಈ ಸಮುದಾಯಗಳು ಒಂದೆಡೆ ಕೆಲವು ಕಾಲ ಸ್ಥಿರವಾಗಿ ನೆಲೆ ನಿಂತು ಬೆಳೆ ಬೆಳೆಯಲು ಪ್ರಾರಂಭಿಸಿದವು. 'Originally most tribes were shifting cultivators, burning the forest and sowing their seeds in the fertile ashes. many tribes in South India, in central india, in Chota Nagpur and Bengal on the slops of the Himalaya and in assam practiced, until fairley recent time, this slash-and-burn cultivation for which no plough, animals were required. The only implements required for this type of cultivation were the axe and the digging stick.'[7] ಅಂದಂದಿನ ಬದುಕನ್ನು ಅಂದಂದೇ ಬದುಕುವ ಈ ಸಮುದಾಯಗಳು ನಾಳೆಗಾಗಿ ಸಂಗ್ರಹಿಸಿಡುವವರಲ್ಲ. ಬದಲಾಗಿ ತಮ್ಮೊಂದಿಗೆ ಸಹಬಾಳ್ವೆ ನಡೆಸುವ ಪ್ರಾಣಿ, ಪಕ್ಷಿ, ಗಿಡ ಮರಗಳನ್ನು ತಮ್ಮಂತೇ ಕಾಣುವವರು. ಈ ಪರಿಸರ ತಮಗೆ ಮಾತ್ರ ಸೃಷ್ಟಿಯಾದುದಲ್ಲ. ತಮ್ಮೊಂದಿಗೆ ಬದುಕುವ ತಮ್ಮ ಸಹಜೀವಿಗಳಿಗೂ ಅದರ ಪಾಲಿದೆ ಎಂಬ ಆದರ್ಶವನ್ನು ಹೊಂದಿರುವವರು. ಈ ಎಲ್ಲವೂ ಅವರ ಆಚರಣೆಗಳಲ್ಲೂ ಪಾಲನೆಯಾಗುತ್ತವೆ. ತಮ್ಮ ಜೀವನಾದರ್ಶಗಳನ್ನು ತಮ್ಮ ಮೌಖಿಕ ಸಾಹಿತ್ಯದ ಮೂಲಕ ತಲೆಮಾರುಗಳಿಗೆ ಸಾಗಿಸುವ ಜವಾಬ್ದಾರಿಯನ್ನು ಕೂಡ ಸಮರ್ಥವಾಗಿ ನಿಭಾಯಿಸುತ್ತಾರೆ.

## 6.2. ಎರವರ ಮೌಖಿಕ ಸಾಹಿತ್ಯದಲ್ಲಿ ದುಡಿಮೆಯ ಸ್ವರೂಪ

ಎರವರು ಬಹಳ ಹಿಂದಿನಿಂದಲೂ ಆಹಾರೋತ್ಪನ್ನಗಳ ಸಂಗ್ರಹಣೆ ಮತ್ತು ಕಾಡಿನಲ್ಲಿ ಸಣ್ಣಪುಟ್ಟ ಕಿರುಬೇಟೆಯಾಡುತ್ತಾ ಆಹಾರಕ್ಕಾಗಿ ಕಾಡನ್ನೇ ನಂಬಿದ್ದವರು. ಕಾಲಾನಂತರದಲ್ಲಿ ಕುಮರಿ ಬೇಸಾಯ ಪದ್ಧತಿಯನ್ನು ರೂಢಿಸಿಕೊಂಡು ಕಾಡಂಚಿನಲ್ಲಿ ವ್ಯವಸಾಯ ಮಾಡಲು ಪ್ರಾರಂಭಿಸಿದರು. ಕುಮರಿ ಬೇಸಾಯ ಪದ್ಧತಿಯನ್ನು ಕೆತ್ತು ಬೇಸಾಯ, ಕಿರು ಬೇಸಾಯ, ಸ್ಥಳಾಂತರ ಬೇಸಾಯ, 'ಕೊಚ್ಚು ಮತ್ತು ಸುಡುವ ಬೇಸಾಯ'ವೆಂದು ಕರೆಯುತ್ತಾರೆ. ಕಬ್ಬಿಣದ ಉಪಯೋಗವಿನ್ನೂ ಪ್ರಾರಂಭವಾಗದಿದ್ದ ಸಮಯದಲ್ಲಿ ಚೂಪಾದ ಕಡ್ಡಿಯನ್ನು ಉಪಯೋಗಿಸಿ ಭೂಮಿಯ ಮೇಲೆ ಗೆರೆ ಎಳೆದು ಅದರಲ್ಲಿ ಬೀಜ ಬಿತ್ತಿ ತಮಗೆ ಅವಶ್ಯಕತೆ ಇರುವಷ್ಟು ಆಹಾರ ಧಾನ್ಯಗಳನ್ನು ಬೆಳೆಯುತ್ತಿದ್ದರು. ಎರವರ ಮೌಖಿಕ ಸಾಹಿತ್ಯದಲ್ಲಿ ಇವರು ಹಿಂದೆ ಬೇಸಾಯ

ಗಾರರಾಗಿದ್ದರು ಎಂಬುದಕ್ಕೆ ಪುರಾವೆಗಳು ದೊರೆಯುತ್ತವೆ.'[8]

'ತಮ್ಮ ಒಡತಿಯರ ಆಜ್ಞೆ ಈಡೇರಿಸುವ ಸಲುವಾಗಿ ಅವರು ತಮ್ಮ ಆಳುಗಳನ್ನು ಕರೆಸಿ ಪೂಜಾ ಸಾಮಗ್ರಿ ತರಿಸಿ ಭೂಮಿ ಪೂಜೆ ಮಾಡಿ(ತೆಂಕಣ, ಬಡಗಣ, ಮೂಡಣ, ಪಡುವಣ ದಿಕ್ಕಿಗೆ ಪೂಜೆ ಮಾಡಿ) ಕಾಡಿಗೆ ಬೆಂಕಿ ಹಚ್ಚುತ್ತಾರೆ. ಬೆಂಕಿ ಇಡೀ ಒಣಗಿದ ಮರ ಗಿಡ ಎಲ್ಲವನ್ನು ಸುಡಲು ಪ್ರಾರಂಭಿಸಿದಾಗ ಆ ಬೆಂಕಿಯ ಕೆನ್ನಾಲಿಗೆಗೆ ಪೂಜಿಸಿ ಅಕ್ಕಿ ಪುರಿ ನೈವೇದ್ಯವನ್ನು ಅರ್ಪಿಸಿ, ನೆಲವನ್ನು ಚೊಕ್ಕಗೊಳಿಸಿ, ಸಮತಟ್ಟು ಮಾಡಿ ಅಷ್ಟು ಪ್ರದೇಶಕ್ಕೂ ಬೇಲಿ ಹಾಕುತ್ತಾರೆ.'[9] ಈ ಸಾಲುಗಳು ಎರವರು ಕಬ್ಬಿಣವನ್ನು ಬಳಸಿ ನೇಗಿಲಿನಿಂದ ಉಳುವ ಕಾಲದ ಸಂದರ್ಭದ  ವಿವರಣೆಯಾಗಿದೆ.

ಇವರು ಎಂದೂ ನಾಳೆಗಾಗಿ ಕೂಡಿಡಬೇಕು ಎಂದು ಆಲೋಚಿಸಿ ಸ್ವಾರ್ಥದಿಂದ ಬದುಕಿದವರಲ್ಲ, ಇದ್ದುದ್ದರಲ್ಲೇ ತೃಪ್ತಿಪಡುವವರು. ಎರವರು ವ್ಯವಸಾಯಗಾರರಾಗಿದ್ದರು ಎಂಬುದಕ್ಕೆ ಬಹಳಷ್ಟು ಉದಾಹರಣೆಗಳು ಇವರ ಮೌಖಿಕ ಸಾಹಿತ್ಯದಲ್ಲಿ ದೊರಕುತ್ತವೆ. ಅದಕ್ಕೆ ಸಾಕ್ಷಿಯಾಗಿ ಇವರ ಓಲೆಪಾಟಿನಲ್ಲಿ ಅವರ ವ್ಯವಸಾಯದ ಕ್ರಮವನ್ನು ವಿವರಿಸಿದ್ದಾರೆ.

'ತೊಂಡನಾಟು ತೋಣಿಪರುವಳತಿ ಕೊಟ್ಟತೇರಿ ಅಕ್ಕವ್ವೆ,  
ಕುಡಾಂಬೆತೇರಿ ಬಾವು ಪೆಂಗವ್ವೆ, ಬರ್ಚಲು ಬಾವು ಅಕ್ಕವ್ವೆ  
ಬರ್ಚಲು ಬಾವು ಪೆಂಗವ್ವೆ ತೇವಾಳತಿ ಅಮ್ಮೆ-ಮೂವಾಳತಿ ಅಮ್ಮೆರ'

ಪಾಂಬಿಲಿ ಪರುವಾಳತಿ ಅಮ್ಮೆರ ತೊಂಡನಾಟಿ ತೋಣಿಪರುವಳತಿ. ತೊಂಡನಾಟು ತೋಣಿ ಪರುವಳತೆ ಕೊಟ್ಟತೇರಿ ಲಕ್ಕವ್ವ ಕುಡಾಂಬೆತೇರಿ ಬ್ಬಾವು ಪೆಂಗವ್ವ ಬಚಲು ಬಾವು ಅಕ್ಕವ್ವ ಬರ್ಚಲು ಬಾಮ ಪೆಂಗವ್ವ ತೇವಾಳತಿ ಅಮ್ಮ ಮೂವಾಳತಿ ಅಮ್ಮಕ ಪಾಂಬಿಲಿ ಪರುವಾಳತಿ ಅಮ್ಮೆರ ತೊಂಡನಾಟ ತೋಣಿಪರುವಳತಿ ಪೊನ್ನಲೆ ಪುರಾವಿ ಪೊಲಿಂಜುರಾಳು ಪಾಲಲೆಂಬ ಸೂಲಬೋದುರಾಳು

ಏವರಕ್ಕೆ-ಏವೆರುಪೆಂಗವ್ವ ತಾಂಗ ಪರೆಂಜುಳಾರು  
ಕಾಡು ಮೂಲೆಕು ತೊಂಡಾಣಿ ಮೂಲೆಕಂ  
ಶಂಭನಾಕಿಕು ಬೆಳ್ನಲೋಡಿಕಲಿ  
ತಕ್ಕಲು ತರಿ ಕೋಣು ತಕ್ಕಲು ಮುರಿಯೋಣು  
ಎಂಜಾರಲ್ಲಾ  
ಏವೆರಕ್ನವರ ಏವೆರು ಬಾವೆ ಪೆಂಗವ್ವೆಯ  
ಮೂಂಜು ಕುಂಜು ಮೂಸ ಮಾರನೆ

ನಾಲುಕುಂಜು ತೆಯ್ಯತ್ತಡಿಯಾನೆ
ಮಾತ್ರ ಕೂಟಿ ಕುರ್ದು ಬುಳ್ಳುಳಾರು
ಪಾನಾಡುಬಾವು ಕುರಿಯ ಕುರ್ಮರಳೆ
ಮಾತ್ಯ ಕೂಟ ಕುರ್ದು ಬುಳ್ಬುಳಾರಿಲ್ಲಾ
ಕಾಡು ಮೂಲೆಕು ತೊಂಡಾಣಿ ಮೂಲೆಕು
ಶಂಬನಾಕು ಕುಮು ಬೆಳ್ಳಲೋಡಿ ಕುಮು
ತಕ್ಕಲು ತರ್ಚುಳಾರು ತಕ್ಕಲು ಮುರ್ಚುಳಾರು
ನನಾಳುನಲ್ಲ ನನ್ನಾಳಿಲೆ ಅರಿಮು–ತಿರಿಮು ಎಡ್ತಾರು,
ತೀ ಮುಗಿಲು ಎಡ್ತಾರು
ತಕ್ಕುಲೆಂಜ ತಿಲೆಮೂಲೆಕು ಓಡಿನಿಂಜಾರು
ಅರಿಮು ತಿರಿಮು ಬೆಚ್ಚಾರು
ತೆಕ್ಕುಮ್ ಬಡಾಕುಮ್, ಕುವಾಕು ಪಡಿಬರಕು
ಹಾಜಿರ ಸೈಯ್ದಾರು, ತೀಮುಗಿಲು ಬೆಚ್ಚಾರು
ಅಕ್ಕಿಪಗವೆಂಜ ತಿರುಬಾಯ್ಕು ಪಿಟ್ಟುಮುರಿಮು ಚೆಲ್ಲಿನಾರು
ತಕ್ಕಲು ಬೆಂದುಗೂನ ತಕ್ಕಲು ಮಡಿಯಾನ.
ತಕ್ಕಲು ತಿರಿಬೇಲಿ ಕಟ್ಟಿನ್ನಾರು ತಕ್ಕಲು ತಿರಿಮುರಿ ಎಡ್ತಾರು
ನಾಳು ನನ್ನೆಂಜ ನನ್ನಾಳಲ ಕಾರೆ ಇಡಾಗೋಲು
ಬೆಳೆ ಬಲಾಗೋಲು ಕಟ್ಟಿನ್ನಾರು
ಅರಿಮು ತಿರಿಮು ಎಡ್ತು ತಕ್ಕುಲುಂಜ
ತಲೆಮೂಲೆಕು ಓಡಿ ನಿಂಜಾರು
ಅರಿಮು ತಿರಿಮು ಬೆಚ್ಚಾದರು
ತೆಕ್ಕ ಬಡಾಕು ಕುವಾಕು ಪಡಿ ಬರುಕು ಹಾಜಿರ ಸೈಯ್ದರು
ಕುವಾರು ಪಡಿಬರು ಸಾಲಿಟ್ಟ ತೆರ ಬಡಾರು ಸಾಲಿಟ್ಟ
ಥೆಯ್ಯಮ್ ಸಾಲಿಟ್ಟ ಕಿಣಾಂದಿ ಸಾಲಮ್ ಇಟ್ಟ
ಉದೊಂಡೆ ಊದು ಬಾವುಂದ ಸೇರೂಂಡೆ ಸೇರುಬಾವುಂದ
ನಾಳು ನನ್ನೆಂಜನನ್ನಾಳಿ ಏವರಕ್ಕಾವ್ಯೆರ ಏವೆರು ಬಾವು
ಪೆಂಗವ್ವರ ಏವು ಕುಲಾಂಬಿ ಮೊಬಿತ್ತುನೇ ಏಕ್ಕುಲ್ಕ ಮೊರುಕ್ಕಲಿ

ಏವು ಕುಲಾಂಬಿ ಪೂ ಬಿತ್ತನೆ ಓಡಿ ಎಡ್ತು
ಕಾಡ ಮೂಲೆಕು ತೊಂಡಾಣಿ ಮೂಲೆಕು
ಶಂಭನಾಕಿಕುಮು ಬೆಳ್ಳಿ ಲೋಡಿಕುಮು
ಏವು ಕುಲಕ್ಕೆ ಕುಲಾಂಬಿ ಪೂ ಬಿತ್ತನೆ
ಚಲ್ಲಿಡು ಚೆಲ್ಲಿ ಕೂಚನ್ನಾರು
ಬುದೇಬಿಚ ಬಂದೆಗೂಟನ್ನಾರು
ಮುಲ್ಲೆಲು ಮುದುಮಾವುಕು
ಮುತ್ತುಪಲ್ಲೆಮುಳೆ ಕಡಾಂದೈ
ಚಿನ್ನಪಲ್ಲೆ ಚಿಗುರೂತೆಂಜೈ
ಏವು ತೋಟ ಪೂತೋಟ ಉಂಡಾಯುಳಾನು'[10]

**ಸಾರಾಂಶ:** ತೊಂಡನಾಟು ಅಥವಾ ತೊಂಡನಾಡಿನಲ್ಲಿ 'ಕೊಟ್ಟತ್ತೇರಿ ಅಕ್ಕವ್ವೆ' ಮತ್ತು 'ಕುಡಾಂಬೆತೇರಿಬಾವು ಪೆಂಗವ್ವೆ' ಎಂಬ ಅಕ್ಕತಂಗಿಯರು ವಾಸವಿದ್ದರು. ಆ ಊರಿನ ಒಡತಿಯರಾದ ಇವರಿಬ್ಬರಿಗೆ ತಮ್ಮ ಊರಿನ ಕಾಡುಮೂಲೆಯಿಂದ ಬೆಳ್ಳಿಲೋಡಿಯವರೆಗಿನ ಅರಣ್ಯದಲ್ಲಿ ಹೂ ತೋಟ ನಿರ್ಮಿಸಬೇಕೆಂದು ಇಚ್ಛೆಯಾಯಿತು. ಅದಕ್ಕಾಗಿ ಮೂರು ಗ್ರಾಮದ ಮುಖಂಡನಾದ 'ಮೂಪಮಾರ'ನನ್ನು ನಾಲ್ಕು ಗ್ರಾಮದ ಮುಖಂಡ 'ಥೆಯ್ಯತ್ತಡಿ'ಯನನ್ನು ಕರೆಸಿ, ಅವರಿಗೆ ತಮ್ಮ ಮನದ ಇಚ್ಛೆಯನ್ನು ತಿಳಿಸುತ್ತಾರೆ. ತಮ್ಮ ಒಡತಿಯರ ಆಜ್ಞೆ ಈಡೇರಿಸುವ ಸಲುವಾಗಿ ಆ ಮುಖಂಡರು ತಮ್ಮ ಆಳುಗಳನ್ನು ಕರೆಸಿ ಪೂಜಾಸಾಮಗ್ರಿ ತರಿಸಿ ಭೂಮಿಪೂಜೆ ಮಾಡಿ (ತೆಂಕಣ, ಬಡಗಣ, ಮೂಡಣ, ಪಡುವಣ ದಿಕ್ಕಿಗೆ ಪೂಜೆ ಮಾಡಿ) ಕಾಡಿಗೆ ಬೆಂಕಿ ಹಚ್ಚುತ್ತಾರೆ. ಬೆಂಕಿ ಇಡೀ ಒಣಗಿದ ಮರ ಗಿಡ ಎಲ್ಲವನ್ನು ಸುಡಲು ಪ್ರಾರಂಭಿಸಿದಾಗ ಆ ಬೆಂಕಿಯ ಕೆನ್ನಾಲಿಗೆಗೂ ಪೂಜಿಸಿ ಅಕ್ಕಿ ಪುರಿ ನೈವೇದ್ಯವನ್ನು ಅರ್ಪಿಸಿ, ನೆಲವನ್ನು ಚೊಕ್ಕಗೊಳಿಸಿ, ಸಮತಟ್ಟು ಮಾಡಿ ಅಷ್ಟು ಪ್ರದೇಶಕ್ಕೂ ಬೇಲಿ ಹಾಕುತ್ತಾರೆ.

ಒಂದು ಶುಭದಿನದಂದು 'ಕಾರೆ' ಮತ್ತು 'ಬೆಳ್ಳೆ' ಎಂಬ ಎತ್ತುಗಳಿಗೆ ಪೂಜಿಸಿ 4 ದಿಕ್ಕಿಗೂ ಸಾಲು ಹೊಡೆದು ಉಳುಮೆ ಮಾಡುತ್ತಾರೆ. ಶುಭ ಘಳಿಗೆಯಲ್ಲಿ ಒಡತಿಯರು ಕೊಟ್ಟ ಏಳು ಕುಕ್ಕೆ ಹೂ ಬೀಜವನ್ನು ಬಿತ್ತುತ್ತಾರೆ. ಅವು ಮುಂಗಾರು ಮಳೆಗೆ ಮುತ್ತಿನಂತೆ ಮೊಳೆತು ಚಿನ್ನದಂತೆ ಚಿಗುರಿದವು. ಹೂ ಬಿಟ್ಟ ನಂತರ ತೋಟಕ್ಕೆ ಬಂದ ಅಕ್ಕತಂಗಿಯರು ಮೊಗ್ಗಾಗಿ ಆಗಷ್ಟೇ ಅರಳಿದ ಹೂವನ್ನು ಕೀಳುತ್ತಾರೆ. ಎರವ ಸಮುದಾಯವು ಹೆಣ್ಣುಮಕ್ಕಳ ಆಡಳಿತಕ್ಕೆ ಒಳಪಟ್ಟಿತ್ತು ಮತ್ತು ಅವರು ಸಮರ್ಥವಾಗಿ ತನ್ನ ಸಮುದಾಯವನ್ನು ನಿಯಂತ್ರಿಸುತ್ತಿದ್ದಳು.

ಅವರ ಆಳ್ವಿಕೆಯನ್ನು ಇಡೀ ಸಮುದಾಯವೇ ಒಪ್ಪಿ ಅವರ ಆಜ್ಞೆಯನ್ನು ಪಾಲಿಸುತ್ತಿದ್ದವು ಎಂಬುದನ್ನು ನಾವು ಕಾಣಬಹುದು. ಈ ಸಮುದಾಯಗಳ ಕುಮರಿ ಬೇಸಾಯಕ್ರಮವನ್ನು ಈ ಕಥೆಯು ವಿವರಿಸುತ್ತದೆ. ಬುಡಕಟ್ಟು ಸಮುದಾಯಗಳು ಮೊದಲಿಗೆ ಆಯ್ಕೆ ಮಾಡಿಕೊಂಡ ಕಾಡಿಗೆ ಬೆಂಕಿ ಹಾಕುತ್ತಾರೆ. ಆ ರೀತಿ ಬೆಂಕಿಯಿಂದ ಸುಟ್ಟ ಬೂದಿಯು ಬೆಳೆಗೆ ಉತ್ತಮ ಗೊಬ್ಬರವಾಗಿ ಪರಿವರ್ತನೆಯಾಗುತ್ತದೆ. ಬೆಳೆಯು ಸಮೃದ್ಧವಾಗಿ ಬೆಳೆಯಲು ಸಹಕಾರಿಯಾಗುತ್ತದೆ. ಆದ್ದರಿಂದಲೇ ಈ ಕುಮರಿ ಬೇಸಾಯವನ್ನು ಇಂಗ್ಲಿಷ್‌ನಲ್ಲಿ Slash and Burn Cultivation ಎಂದು ಕರೆಯುತ್ತಾರೆ.

ಈ ಸಮುದಾಯಗಳು ಕಾಡಿನಲ್ಲಿ ವಾಸ ಮಾಡುತ್ತಿದ್ದ ಸಮಯದಲ್ಲಿ ತಮ್ಮ ಮನೆಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸ್ಥಳಾಂತರಿಸಬೇಕಾದಾಗ ವಾಸಕ್ಕೆ ಯೋಗ್ಯವಾದ ಸೂಕ್ತ ಸ್ಥಳವನ್ನು ಗುರುತಿಸಿ ಮೊದಲು ಒಂದು ಮೇಟಿ ಕಂಬ ನೆಟ್ಟು ಮನೆ ನಿರ್ಮಿಸಿದವನನ್ನು ಕುಂಜುಕಾರ ಎಂದು ಕರೆಯುತ್ತಾರೆ. ಎರವರ ಭಾಷೆಯಲ್ಲಿ ಕುಂಜು ಎಂದರೆ ಊರು, ಕುಳ್ಳು ಎಂದರೆ ಗುಡಿಸಲು ಎಂದರ್ಥ. ಮೇಟಿ ಕಂಬ ವ್ಯವಸಾಯದ ಸಂಕೇತ. ಹಿಂದೆ ಎರವರು ವ್ಯವಸಾಯಗಾರರಾಗಿದ್ದರು ಎಂಬುದಕ್ಕೆ ನಿದರ್ಶನವೇ ಈ ಮೇಟಿ ಕಂಬ ನೆಡುವ ಪದ್ಧತಿ. ಈ ಮೇಟಿ ಕಂಬವನ್ನು ಕಣದಲ್ಲಿ ನೆಡುತ್ತಾರೆ. ಕಣ ಎಂದರೆ ಭತ್ತವನ್ನು ಒಟ್ಟುಹಾಕುವ ವಿಶಾಲವಾದ ಜಾಗ. ಇವರು ಮುಖ್ಯವಾಗಿ ವ್ಯವಸಾಯವನ್ನು ಅವಲಂಬಿಸಿಕೊಂಡು ಬದುಕುತಿದ್ದವರು ಎಂಬುದು ನಮಗೆ ಇದರಿಂದ ತಿಳಿದುಬರುತ್ತದೆ. ಜೊತೆಗೆ ಇವರು ಸಣ್ಣಪುಟ್ಟ ಪ್ರಾಣಿ ಪಕ್ಷಿಗಳನ್ನು ಬಲೆ ಬೀಸಿ ಬೇಟೆಯಾಡಿ ಆಹಾರಕ್ಕಾಗಿ ಬಳಸುತ್ತಿದ್ದರು. ಕಾಡಿನಲ್ಲಿ ಸಿಗುವ ಎಲ್ಲ ರೀತಿಯ ಗಿಡಮರಗಳ ಪರಿಚಯವಿರುವ ಇವರು ತಿನ್ನಲು ಯೋಗ್ಯವಾದ ಸೊಪ್ಪು, ಹಣ್ಣು, ಬೇರು, ಅಣಬೆ ಮೊದಲಾದವುಗಳ ಬಗ್ಗೆ ಸಂಪೂರ್ಣ ಜ್ಞಾನವನ್ನು ಹೊಂದಿದ್ದಾರೆ. ವಿವಿಧ ರೀತಿಯ ತಂತ್ರಗಳನ್ನು ಉಪಯೋಗಿಸಿ ಮೀನು ಏಡಿಗಳನ್ನು ಹಿಡಿದು ಆಹಾರಕ್ಕಾಗಿ ಬಳಸುತ್ತಾರೆ. ಅಷ್ಟೇ ಅಲ್ಲದೆ ಕಾಡಿನ ಉತ್ಪನ್ನಗಳನ್ನು ಮಾರಿ ಹಣ ಗಳಿಸುತ್ತಾರೆ. ಇದು ಇವರ ಅಲ್ಪ ಆದಾಯದ ಮೂಲಗಳಾಗಿವೆ.

ಎರವರು ಕಾಡಿನ ಅಂಚಿನಲ್ಲಿ ಕಿರು ಬೇಸಾಯ ಮಾಡಿ ಬದುಕುತ್ತಿದ್ದವರು ಮತ್ತು ಇವರು ಭಾರಿ ದೊಡ್ಡ ಬೇಟೆಗಾರರಲ್ಲ. ಕಾಡಂಚಿನಲ್ಲಿದ್ದ ಕಾರಣ ಬಹಳ ಬೇಗ ಇವರು ಹೊರ ಜಗತ್ತಿನೊಂದಿಗೆ ಸಂಪರ್ಕವನ್ನು ಬೆಳೆಸಿಕೊಂಡವರು. ಬಹಳ ಅಮಾಯಕರಾದ ಇವರು ಬಲಾಢ್ಯ ಭೂ ಅತಿಕ್ರಮಣಕಾರರ ಆಕ್ರಮಣಕ್ಕೆ ಸುಲಭವಾಗಿ ತುತ್ತಾದವರು ಮತ್ತು ಅವರ ತೊತ್ತುಗಳಾಗಿ ಬದಲಾದರು. ತಮ್ಮ ಕಣ್ಣ ಎದುರಲ್ಲೇ ತಮ್ಮ ಭೂಮಿಯನ್ನು ಇತರರು ಅತಿಕ್ರಮಣ

ಮಾಡಿಕೊಂಡಾಗಲೂ ಅದನ್ನು ಪ್ರತಿಭಟಿಸಲಾಗದೆ ನಿಸ್ಸಹಾಯಕರಾಗಿ ಅದನ್ನು ಒಪ್ಪಿಕೊಂಡರು. ಬಲಿಷ್ಠ ಭೂಮಾಲೀಕರು ತಮ್ಮದೇ ಭೂಮಿಯಲ್ಲಿ ಇಡೀ ಸಮುದಾಯವನ್ನು ಕೂಲಿಯಾಳುಗಳಾಗಿ, ಜೀತದಾಳುಗಳಾಗಿ ದುಡಿಮೆಗೆ ಬಳಸಿಕೊಂಡಾಗಲೂ ಅದನ್ನು ತಮ್ಮ ಹಣೆಬರಹ ಎಂದು ಅನುಭವಿಸಿದವರು. ಇವರ ನೋವು ಅರಣ್ಯರೋದನವಾಯಿತು. ಆದರೆ ಇವರೆಂದೂ ತಮ್ಮ ಮೇಲಾಗುತ್ತಿದ್ದ ದೌರ್ಜನ್ಯಕ್ಕೆ ಪ್ರತಿರೋಧವನ್ನು ವ್ಯಕ್ತಪಡಿಸಿದವರಲ್ಲ. ಆದರೆ ಪ್ರತಿಭಟನೆಯು ಸಮುದಾಯದ ಆಳದಲ್ಲಿ ಸುಪ್ತವಾಗಿತ್ತು. ಆದರೆ ಅಸಹಾಯಕತೆಯಿಂದಾಗಿ ಮೂಕವೇದನೆಯಂತೆ ಅವರ ಮನದ ಒಳಗೇ ಉಳಿಯಿತು. ಆದರೆ ತಮ್ಮ ಮೇಲಾಗಿರುವ ದೌರ್ಜನ್ಯಗಳಿಗೆ ಇವರು ಮೌಖಿಕ ಸಾಹಿತ್ಯದ ಮೂಲಕ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾರೆ. ಇದಕ್ಕೆ ಉದಾಹರಣೆಯೆಂದರೆ ಎರವರ ಓಲೆಪಾಟಿನಲ್ಲಿ ಬರುವ ಕಾಲಚಿತ್ರ ಬಲಮಗನ ಕತೆ. ಎರವರದು ತಲತಲಾಂತರಗಳಿಂದ ಜೀತದ ಬದುಕು. ಹಿಂದೆ ಬಲಿಷ್ಠರಿಂದ, ಅನಂತರ ಅರಣ್ಯ ಕಾನೂನುಗಳಿಂದ ಭೂಮಿಯನ್ನು ಕಳೆದುಕೊಂಡ ಎರವರು ಈಗ ಕೂಲಿಕಾರ್ಮಿಕರಾಗಿ ಲೈನ್ ಮನೆಗಳಲ್ಲಿ ಬದುಕು ಸಾಗಿಸುತ್ತಿದ್ದಾರೆ. ಇನ್ನು ಕಾಡಿನ ಅಂಚಿನಲ್ಲಿ ಬದುಕುತ್ತಿರುವವರು ಕಾಡಿನ ಉತ್ಪನ್ನಗಳಾದ ಅಂಟುವಾಳ, ಜೇನು, ಮರದ ಪಾಚಿ, ಗೋಂದು, ನೆಲ್ಲಿಕಾಯಿ, ಅರಳೇಕಾಯಿ ಮೊದಲಾದವನ್ನು ಸಂಗ್ರಹಿಸಿ ಲ್ಯಾಂಪ್ ಸೊಸೈಟಿಗೆ ಮಾರಿ ಬಂದ ಹಣದಿಂದ ಜೀವನ ನಡೆಸುತ್ತಾರೆ. ಆದರೆ ಕಾಡಿನ ವಿಸ್ತೀರ್ಣ ಕಡಿಮೆಯಾಗುತ್ತಿರುವ ಈ ಸಮಯದಲ್ಲಿ ಅರಣ್ಯ ಉತ್ಪನ್ನಗಳು ಕೂಡ ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತಿಲ್ಲ. ಇತ್ತೀಚೆಗೆ ಇವರನ್ನು ಫಾರೆಸ್ಟ್ ಗಾರ್ಡ್‌ಗಳಾಗಿ ಅರಣ್ಯ ಇಲಾಖೆ ಸೇರ್ಪಡೆಗೊಳಿಸುತ್ತಿದೆ. ಅದೂ ಕೂಡ ದಿನಗೂಲಿಯ ಆಧಾರದ ಮೇಲೆ. ಅರಣ್ಯ ಇಲಾಖೆ ನಿಗದಿಪಡಿಸಿದ ವಿದ್ಯಾರ್ಹತೆಯಾಗಲೀ, ಸರ್ಟಿಫಿಕೇಟ್‌ಗಳಾಗಲೀ ಇವರಲ್ಲಿ ಇಲ್ಲವಾದ್ದರಿಂದ ಕಾಡಿನ ಅಪಾರ ಜ್ಞಾನವಿದ್ದರೂ ಕೂಡ ಇವರು ಅಲ್ಲೂ ಕೂಡ ಕೂಲಿಯಾಳುಗಳಾಗೇ ಬದುಕಬೇಕಾಗಿದೆ. ಇವರಲ್ಲಿ ಅಂತರ್ಗತವಾಗಿರುವ ಕಾಡಿನ ಕುರಿತಾದ ಅಪಾರ ಜ್ಞಾನಕ್ಕೆ ಯಾವ ಸರ್ಟಿಫಿಕೇಟ್‌ಗಳಾಗಲೀ ಮಾನ್ಯತೆಯಾಗಲೀ ಕಾನೂನಿನಲ್ಲಿ ಇಲ್ಲ. ಕಾಡಿನ ನಂಟೇ ಇಲ್ಲದೆ ಕಾಲೇಜುಗಳಲ್ಲಿ ಪದವಿ ಪಡೆದ ಅಧಿಕಾರಿಗಳ ಆಜ್ಞಾನುವರ್ತಿಗಳಾಗಿ ಕಾಡಿನ ಮಕ್ಕಳು ಬದುಕುತ್ತಿದ್ದಾರೆ.

## 6.3. ಜೇನುಕುರುಬರ ಮೌಖಿಕ ಸಾಹಿತ್ಯದಲ್ಲಿ ದುಡಿಮೆಯ ಸ್ವರೂಪ

ಜೇನುಕುರುಬರು ಹೆಸರಿಗೆ ತಕ್ಕಂತೆ ಜೇನು ಕೊಯ್ಯುವುದರಲ್ಲಿ ಪರಿಣತರು. ಅವರ ಬದುಕಿನ ಆಧಾರವೇ ಜೇನು ಕೀಳುವುದು. ಹೀಗೆ ಸಂಗ್ರಹಿಸಿದ ಜೇನುತುಪ್ಪವನ್ನು ಮಾರಾಟ ಮಾಡಿ ಹಣ ಸಂಪಾದಿಸುತ್ತಾರೆ. ಜೇನುಗಳಲ್ಲಿ ಹಲವಾರು ಜಾತಿಯ ಜೇನುಗಳಿದ್ದು ಅದರಲ್ಲಿ

ಹೆಜ್ಜೇನು ಕೂಡ ಒಂದು. ಹೆಜ್ಜೇನಿನಿಂದ ಸಂಗ್ರಹಿಸಿದ ಜೇನು ಅತ್ಯಂತ ರುಚಿಕರವಾಗಿದ್ದು ಇದು ಬಹಳ ಅಪಾಯಕಾರಿಯಾದ ಜೇನು. ಹೆಜ್ಜೇನು ಕೊಯ್ಯುವುದು ಅತ್ಯಂತ ಸಾಹಸದ ಕೆಲಸವಾಗಿದ್ದು, ಹೆಜ್ಜೇನು ದಟ್ಟ ಕಾಡಿನ ಮಧ್ಯೆ ದೊಡ್ಡ ಮರಗಳ ಮೇಲೆ ಎತ್ತರದಲ್ಲಿ ಗೂಡು ಕಟ್ಟಿ ತುಪ್ಪವನ್ನು ಸಂಗ್ರಹಿಸುತ್ತದೆ. ವಿಶೇಷವಾಗಿ ಮಳೆಗಾಲದಲ್ಲಿ ಹೆಜ್ಜೇನು ಹೆಚ್ಚಾಗಿ ತುಪ್ಪ ಸಂಗ್ರಹಿಸುತ್ತದೆ, ಕಾಡಿನಲ್ಲಿ ಅದೂ ಮಳೆಗಾಲದಲ್ಲಿ ಬೃಹತ್ತಾದ ಮರವನ್ನು ಏರುವುದು ಅಷ್ಟು ಸುಲಭವಲ್ಲ ಇದು ಅತ್ಯಂತ ಧೈರ್ಯ ಮತ್ತು ನೈಪುಣ್ಯತೆಯನ್ನು ಬಯಸುತ್ತದೆ. ವರ್ಷದಲ್ಲಿ ಎರಡು ಬಾರಿ ಹೆಜ್ಜೇನು ತುಪ್ಪ ದೊರೆಯುತ್ತದೆ. ಮೇನಿಂದ ಜೂನ್ ತಿಂಗಳಲ್ಲಿ ಒಂದು ಬಾರಿ ಹಾಗೂ ಅಕ್ಟೋಬರ್ ಮತ್ತು ನವೆಂಬರ್ ತಿಂಗಳಲ್ಲಿ ಎರಡನೇ ಬಾರಿ ಜೇನು ಸಂಗ್ರಹವಾಗುತ್ತದೆ. ಜೇನುಕುರುಬರು ದೀಪಾವಳಿ ಹಬ್ಬದ ಸಮಯ ಎಂದು ಎರಡನೇ ಅವಧಿಯನ್ನು ಗುರುತಿಟ್ಟು ಕೊಳ್ಳುತ್ತಾರೆ. ಜೇನು ಬುಡಕಟ್ಟುಗಳ ಬದುಕಿನ ಭಾಗವಾಗಿದೆ. ಸಾಮಾನ್ಯವಾಗಿ ಎಲ್ಲ ಅರಣ್ಯವಾಸಿ ಬುಡಕಟ್ಟುಗಳು ಜೇನು ಕೀಳುವುದರಲ್ಲಿ ಪರಿಣತರಾಗಿರುತ್ತಾರೆ. ಫಿನ್‌ಲ್ಯಾಂಡ್‌ನ ಕಲೇವಾಲದಲ್ಲಿ ಜೇನಿನ ಔಷಧೀಯ ಗುಣವನ್ನು ಉಲ್ಲೇಖಿಸಿದೆ.

ನಿನ್ನ ರೆಕ್ಕೆಗಳನೀ ಜೇನಲ್ಲಿ ಮುಳುಗಿಸು,
ಅದರ ಸಿಹಿಯಲಿ ನಿನ್ನ ರೆಕ್ಕೆಗಳನ್ನು ಅದ್ದು,
ಭಗವಂತನ ಸೃಷ್ಟಿಯ ಅಗರು,
ಚಂದನವನಿಲ್ಲಿ ತಂದಿರುವುದೀ ಜೇನು,
ಇದು ನನ್ನ ನಾಯಕನ ತಲ್ಲಣವನಡಗಿಸುವುದು,
ಇದು ಅವನ ಗಾಯಗಳ ಮಾಯಿಸುವುದು,
ಇದು ಅವನ ಕಳೆದ ದೃಷ್ಟಿಯ ಮತ್ತೆ ತರುವುದು.[11]

ಅಪಾರವಾದ ಔಷಧೀಯ ಸತ್ವವನ್ನು ಒಳಗೊಂಡಿರುವ ಜೇನಿನ ನಿರಂತರ ಸೇವನೆಯು ನಮ್ಮ ಆರೋಗ್ಯದ ಗುಟ್ಟು ಎನ್ನುತ್ತಾರೆ.

**ಜೇನು ಸಂಗ್ರಹಣೆ:** ಜೇನುಕುರುಬ ಸಮುದಾಯವು ತಮ್ಮ ಜಮ್ಮದ ಒಳಗೆ ಜೇನಿರುವ ಮರವನ್ನು ಮೊದಲು ಗುರುತಿಸುತ್ತಾರೆ. ಜೇನುಕುರುಬರು ಜೇನು ಕಟ್ಟುವ ಮರವನ್ನು ಜೇನು ಬರ ಮರ ಎಂದು ಕರೆಯುತ್ತಾರೆ. ಈ ಮರಗಳು ಬೃಹತ್ ಆಕಾರದಲ್ಲಿದ್ದು ಒಮ್ಮೆಲೆ ನೂರಾರು ಜೇನುಗಳು ಗೂಡು ಕಟ್ಟುತ್ತವೆ. ಊರಿನವರು ಜೇನು ಕೊಯ್ಯಲು ಸಮಯವಾಗಿದೆ ಎಂದು ತಿಳಿದಾಗ ಒಂದು ನಿರ್ದಿಷ್ಟ ದಿನವನ್ನು ಗೊತ್ತುಮಾಡಿಕೊಂಡು ಅಂದು ಬೆಳಗ್ಗೆ ಹಾಡಿಯ ಯಜಮಾನ ಮತ್ತು ಇತರರೆಲ್ಲಾ ಸೇರಿ ಆ ಜೇನು ಮರದ ಬಳಿಗೆ ಬಂದು ಅದರ ಬುಡಕ್ಕೆ ಪೂಜೆ

ಮಾಡುತ್ತಾರೆ. ತಮ್ಮ ಹಿರಿಯರ ಆತ್ಮಗಳಿಗೆ ಪೂಜಿಸಿ ಎಡೆಯಿಟ್ಟು ಜೇನು ಕೊಯ್ಯುವ ಸಮಯದಲ್ಲಿ ಯಾವುದೇ ತೊಂದರೆ ಎದುರಾಗದಂತೆ ರಕ್ಷಿಸಬೇಕಾಗಿ ಪ್ರಾರ್ಥಿಸುತ್ತಾರೆ. ಅಂದು ರಾತ್ರಿ ಹತ್ತರಿಂದ ಹನ್ನೆರಡು ಜನ ಯುವಕರ ತಂಡ ಆ ನಿರ್ದಿಷ್ಟ ಮರದ ಬಳಿಗೆ ಬರುತ್ತಾರೆ. ರಾತ್ರಿ ಹೊತ್ತು ಜೇನುಹುಳಕ್ಕೆ ಕಣ್ಣು ಕಾಣಿಸುವುದಿಲ್ಲ. ಆದ್ದರಿಂದ ರಾತ್ರಿ ಹೊತ್ತು ಜೇನುಕೊಯ್ಯಲು ಸೂಕ್ತವಾದ ಸಮಯ ಎಂಬುದು ಅವರ ನಂಬಿಕೆ. ಮೊದಲೇ ಈ ಕಾರ್ಯಕ್ಕೆ ಬೇಕಾದ ಪೂಣಿ, ಒತ್ತೆ ಮತ್ತು ಹಗ್ಗವನ್ನು ತಯಾರಿ ಮಾಡಿಕೊಂಡಿರುತ್ತಾರೆ. ಐದು ನೂರಕ್ಕಿಂತಲೂ ಹೆಚ್ಚು ಜೇನು ಗೂಡುಗಳಿದ್ದರೆ ಇಬ್ಬರು ಮರ ಹತ್ತುತ್ತಾರೆ. ಅದಕ್ಕಿಂತಲೂ ಕಡಿಮೆಯಿದ್ದರೆ ಒಬ್ಬನೇ ವ್ಯಕ್ತಿ ಮರ ಹತ್ತುತ್ತಾನೆ. ಮರ ಹತ್ತುವವನು ತನ್ನ ಸೊಂಟಕ್ಕೆ ಹಗ್ಗದ ಒಂದು ತುದಿಯನ್ನು ಕಟ್ಟಿಕೊಂಡು ಹತ್ತುತ್ತಾನೆ. ನಂತರ ಒಂದು ಮರದ ಗೆಲ್ಲಿನ ಮೇಲೆ ಕುಳಿತುಕೊಳ್ಳಲು ಜಾಗವನ್ನು ಮಾಡಿಕೊಂಡು ದೇವರನ್ನು ಹಿರಿಯರ ಆತ್ಮಗಳನ್ನು ಪ್ರಾರ್ಥಿಸುತ್ತಾನೆ. ಮರದ ಕೆಳಗಡೆ ಇರುವವರು ಮೊದಲೇ ಸಿದ್ದಪಡಿಸಿಕೊಂಡಿರುವ ಒತ್ತೆಗೆ ಬೆಂಕಿ ಕೊಟ್ಟು ಹೊಗೆಯಾಡುವಂತೆ ಮಾಡಿ ಅದನ್ನು ಹಗ್ಗದ ಇನ್ನೊಂದು ತುದಿಗೆ ಕಟ್ಟಿ ಮೇಲಕ್ಕೆ ಕಳಿಸುತ್ತಾರೆ, ಒತ್ತೆ ಕಟ್ಟುವಾಗ ಕಾಡುಮೆಣಸಿನ ಸೊಪ್ಪು, ಕಳ್ಳಿನ ಸೊಪ್ಪು ಮೊದಲಾದ ಕೆಲವು ವಿಶೇಷವಾದ ಎಲೆಗಳನ್ನು ಸೇರಿಸಿ ಕಟ್ಟುತ್ತಾರೆ. ಈ ಸೊಪ್ಪಿನ ಎಲೆಗಳ ವಾಸನೆಗೆ ಜೇನು ಹತ್ತಿರ ಬರುವುದಿಲ್ಲವಂತೆ. ಕೆಲವೊಮ್ಮೆ ಮರ ಹತ್ತುವವನು ಕೆಲವು ಮರದ ರಸವನ್ನು ಮೈಗೆ ಹಚ್ಚಿಕೊಂಡು ಹತ್ತುತ್ತಾನೆ. ಇದರಿಂದ ಜೇನು ಕಚ್ಚುವುದಿಲ್ಲ ಎನ್ನುತ್ತಾರೆ.

ಮರದ ಮೇಲಿರುವವನು ಆ ಒತ್ತೆಯಿಂದ ಜೇನಿನ ಗೂಡಿನ ಕೆಳಗೆ ಹೊಗೆ ಹಾಕಿ ಜೇನು ಗೂಡಿನ ಎರಡೂ ಕಡೆ ಹುಳಕ್ಕೆ ನೋವಾಗದಂತೆ ಒತ್ತೆಯಿಂದ ಸವರುತ್ತಾನೆ ಆಗ ಹುಳಗಳೆಲ್ಲಾ ಕೊಂಬೆಯ ಅಕ್ಕಪಕ್ಕ ಜರುಗುತ್ತವೆ ನಂತರ ಆತ ಪೂಣಿ ಕೇಳುತ್ತಾನೆ. ಕೆಳಗಿನಿಂದ ಪೂಣಿ (ಜೇನು ಸಂಗ್ರಹಿಸಲು ಮರದ ಎಲೆಗಳಿಂದ ತಯಾರಿಸಿದ ಬುಟ್ಟಿಯಂತಹ ವಸ್ತು) ಮತ್ತು ಅದರಲ್ಲಿ ಬಿದಿರಿನಿಂದ ಮಾಡಿದ ಚಾಕುವಿನಂತಹ ವಸ್ತುವನ್ನು ಹಗ್ಗಕ್ಕೆ ಕಟ್ಟಿ ಮೇಲಕ್ಕೆ ಕಳಿಸುತ್ತಾರೆ. ಮೊದಲು ಜೇನಿನ ತಟ್ಟಿಯನ್ನು(ಮರಿಗಳಿರುವ ಗೂಡು) ಆ ಬಿದಿರಿನ ಚಾಕುವಿನಿಂದ ಕತ್ತರಿಸಿ ಪೂಣಿಯ ಒಳಗೆ ಹಾಸಿಗೆಯಂತೆ ಇಡುತ್ತಾನೆ ಇದರಲ್ಲಿ ಮರಿಗಳಷ್ಟೇ ಇರುತ್ತವೆ ಹೊರತು ಜೇನುತುಪ್ಪ ಇರುವುದಿಲ್ಲ. ಇದು ಜೇನುತುಪ್ಪ ಚೆಲ್ಲದಂತೆ ಕಾಪಾಡುತ್ತದೆ. ಈ ತಟ್ಟಿ ಬಹಳ ಪೌಷ್ಟಿಕಾಂಶಭರಿತವಾದದ್ದು ಎಂಬ ಕಾರಣಕ್ಕೆ ಈ ಬುಡಕಟ್ಟುಗಳು ಜೇನುತುಪ್ಪವನ್ನು ಮಾರುತ್ತಾರೆ. ಆದರೆ ಈ ತಟ್ಟಿಯನ್ನು ಮಾತ್ರ ತಾವೇ ಸೇವಿಸುತ್ತಾರೆ ಹೊರತು ಬೇರೆಯವರಿಗೆ ಕೊಡುವುದಿಲ್ಲ. ಹೀಗೆ ಸಂಗ್ರಹಿಸಿದ ಜೇನನ್ನು ಅತ್ಯಂತ ನಾಜೂಕಿನಿಂದ ಕೊಯ್ದು ತಟ್ಟಿಯ ಮೇಲಿಡುತ್ತಾನೆ.

ಹೀಗೆ ಒಂದಾದ ಮೇಲೆ ಒಂದರಂತೆ ಜೇನುತಟ್ಟೆಯನ್ನು ಕೊಯ್ದು ಪೂಣಿಯಲ್ಲಿ ಇಟ್ಟು ಮರದ ಕೆಳಗೆ ಕಳಿಸುತ್ತಾನೆ. ಪೂಣಿಯ ಕೆಳಗೆ ಇರುವವರು ಒಂದು ದೊಡ್ಡ ಪಾತ್ರೆಯಲ್ಲಿ ಅದನ್ನು ಸಂಗ್ರಹಿಸುತ್ತಾರೆ. ಒಂದೇ ರಾತ್ರಿಯಲ್ಲಿ ಇಡೀ ಮರದ ಜೇನನ್ನು ಕೀಳುವುದು ಪದ್ಧತಿ. ಹೆಜ್ಜೇನು ಒಮ್ಮೆಲೆ ಐದರಿಂದ ಆರು ಹೆಜ್ಜೇನು ಹುಳುಗಳು ಕಚ್ಚಿದರೆ ವ್ಯಕ್ತಿ ಸಾಯಲೂಬಹುದು. ಇದು ಅಪಾಯಕಾರಿಯಾದ ಕೆಲಸ ಎಂದು ಇವರ ಜೇನು ಹಾಡಿನಲ್ಲಿ ಈ ಕೆಳಗಿನಂತೆ ಹಾಡುತ್ತಾರೆ.

'ಜೇನೆ ಜೇನು ಕೀಯನ ಹೆಂಡ್ತಿ ಮುಂಡೆಬಾಳು ಜೇನೇ ಜೇನೇ

ಜೇನೆ ಪೂಣಿ ಹಿಡಯಾನ ಹೆಂಡ್ತಿ ಸುಖ ಬಾಳು ಜೇನೇ ಜೇನೇ'

ಜೇನು ಕೀಳುವ ಸಮಯದಲ್ಲಿ ಯಾವುದೆ ಅಪಾಯವು ಬೇಕಾದರೂ ಎದುರಾಗಬಹುದು. ಆದ್ದರಿಂದ ಜೇನು ಕೀಳಲು ಮರ ಹತ್ತುವವನ ಜೀವಕ್ಕೆ ಅಪಾಯ ತಪ್ಪಿದ್ದಲ್ಲ ಎಂಬುದು ಈ ಸಾಲಿನ ಅರ್ಥ.

ಜೇನನ್ನು ಇಷ್ಟ ಪಡುವ ಆನೆ, ಕರಡಿಗಳಂತಹ ಕಾಡುಪ್ರಾಣಿಗಳಿಗೆ ಸುಳಿವು ನೀಡದೆ ಅವುಗಳಿಂದ ತಪ್ಪಿಸಿಕೊಂಡು ಮಳೆಗಾಲದಲ್ಲಿ ಆ ಬೃಹತ್ತಾದ ಮರವನ್ನು ಹತ್ತಿ ಹೆಜ್ಜೇನು ಕೊಯ್ಯವುದು ಅದ್ಭುತವಾದ ಕಲೆ. ಇದಕ್ಕೆ ಅಪರಿಮಿತವಾದ ದೈರ್ಯ, ಇಚ್ಚಾಶಕ್ತಿ, ದೈಹಿಕ ಮತ್ತು ಮಾನಸಿಕ ಸಾಮರ್ಥ್ಯ, ನೈಪುಣ್ಯತೆ, ತಂತ್ರಗಾರಿಕೆ, ಚಾಲಾಕಿತನ, ಅಪಾಯವನ್ನು ಅರಿತು ಉಪಾಯವನ್ನು ಆಲೋಚಿಸುವ ಬುದ್ಧಿಶಕ್ತಿ ಇರಬೇಕಾಗುತ್ತದೆ. ಎಲ್ಲರೂ ಜಾಗ್ರತೆಯಿಂದ ಒಟ್ಟಾಗಿ ಕೆಲಸ ಮಾಡಬೇಕಾಗುತ್ತದೆ. ಜೇನುಹುಳುಗಳಲ್ಲಿ ಹಲವಾರು ವಿಧಗಳಿದ್ದು ಜೇನುಕುರುಬರು ಆ ಎಲ್ಲ ಜಾತಿಯ ಜೇನಿನ ಬಗ್ಗೆ ಸಂಪೂರ್ಣವಾದ ಜ್ಞಾನವನ್ನು ಹೊಂದಿದ್ದಾರೆ. ಅದರ ಸ್ವಭಾವ, ಗುಣಲಕ್ಷಣಗಳನ್ನು ಅರ್ಥ ಮಾಡಿಕೊಂಡಿರುತ್ತಾರೆ. ಜೇನಿನ ರುಚಿ, ವಾಸನೆಯಿಂದಲೇ ಇದು ಇಂತದ್ದೇ ಜೇನು ಎಂದು ಹೇಳುತ್ತಾರೆ. ಜೇನುಕುರುಬರಂತೆ ಉತ್ತರ ಭಾರತದ ಬೈಗಾ ಬುಡಕಟ್ಟುಗಳು ಸಹ ಜೇನು ಬೇಟೆಯಲ್ಲಿ ಅತ್ಯಂತ ಪರಿಣತರು. ಇವರು ಪ್ರತಿ ಒಂಬತ್ತು ವರ್ಷಕ್ಕೊಮ್ಮೆ 'ಜೇನು ಹಬ್ಬವನ್ನು' ಆಚರಿಸುತ್ತಾರೆ.

ಆದರೆ ಇಂದು ಕಾಡು ಅವ್ಯಾಹತವಾಗಿ ಹನನವಾಗುತ್ತಿದೆ. ಅರಣ್ಯ ಇಲಾಖೆಯ ಮುಂದಾಲೋಚನೆಯಿಲ್ಲದ ತೀರ್ಮಾನದಿಂದಾಗಿ ಕಾಡಿನಲ್ಲಿ ಮರಗಳನ್ನು ಕಡಿದು ಇದೇ ಬುಡಕಟ್ಟುಗಳಿಂದಲೇ ತೇಗದ ಮರಗಳನ್ನು ನೆಡೆಸಿದ ಪರಿಣಾಮ ಇಂದು ತೇಗದ ಮರಗಳು ಬೃಹದಾಕಾರವಾಗಿ ಬೆಳೆದುನಿಂತಿದೆ. ನೆರಳು ಇಲ್ಲದ ಪ್ರಾಣಿ ಪಕ್ಷಿಗಳಿಗೆ ಆಶ್ರಯ ನೀಡದ ಈ ಮರಗಳ ಬೇರುಗಳು ನೀರನ್ನು ಕೂಡ ತಡೆದಿಡುವ ಸಾಮರ್ಥ್ಯ ಹೊಂದಿಲ್ಲ. ಕೇವಲ ಮನುಷ್ಯನ

ಹಣದಾಸೆಗಾಗಿ ಬೆಳೆಸಿದ ಈ ಬೆಲೆಬಾಳುವ ಮರಗಳು ಒಂದು ದಿನ ಧರೆಗುರುಳುತ್ತವೆ. ಪರ್ಯಾಯ ಆಲೋಚನೆಯಿಲ್ಲದ ಈ ರೀತಿಯ ಕ್ರಮದಿಂದ ಪರಿಸರದ ಮೇಲೆ ಅಗಾಧಾದ ಪರಿಣಾಮ ಉಂಟಾಗುತ್ತಿದೆ.

**ಜೇನಿನ ವಿಧಗಳು**

1. **ಹೆಜ್ಜೇನು:** ಅರಣ್ಯದ ಮಧ್ಯಭಾಗದ ದೊಡ್ಡ ಮರಗಳ ಮೇಲೆ(ಅದನ್ನು ಜೇನು ಬರಮರ ಎನ್ನುತ್ತಾರೆ), ಕಲ್ಲುಬಂಡೆ, ದೊಡ್ಡ ಕಟ್ಟಡ ಇತ್ಯಾದಿಗಳ ಮೇಲೆ ದೊಡ್ಡ ಗಾತ್ರದಲ್ಲಿ ಈ ಜೇನು ಕಟ್ಟುತ್ತದೆ. ಇದರಲ್ಲಿ ಜೇನು ಹಾಗೂ ಮೇಣ ಹೆಚ್ಚು ದೊರೆಯುತ್ತದೆ. ಒಂದು ಗೂಡಿನಿಂದ ಸುಮಾರು 8–10 ಲೀಟರ್ ಜೇನು ಒಂದೇ ಬಾರಿಗೆ ದೊರೆಯುತ್ತದೆ. ಹೆಜ್ಜೇನನ್ನು ರಾತ್ರಿಯ ಸಮಯದಲ್ಲಿ ಮಾತ್ರ ತೆಗೆಯುತ್ತಾರೆ. ಹೆಜ್ಜೇನು ಹುಳಗಳು ಜಾಸ್ತಿ ಕಚ್ಚಿದರೆ ವಿಷವೇರಿ ಮನುಷ್ಯ ಸಾಯುತ್ತಾನೆ.

2. **ತುಡುವೆ ಜೇನು:** ಇದು ಹುತ್ತ, ಪೊಟರೆ, ಕಲ್ಲುಬಂಡೆ ಮರದ ಬೊಡ್ಡೆಯಲ್ಲಿ ಕಟ್ಟುತ್ತದೆ.

3. **ಕೋಲು ಜೇನು(ಕಿರು ಜೇನು):** ಇದು ಗಿಡಗಳ ಪೊದೆ, ಬಿದಿರುಗಳ ಕುರುಚಲು ಪೊದೆಯಲ್ಲಿ ಕಟ್ಟುತ್ತದೆ. ಇದು ಹೆಚ್ಚು ಸಿಹಿಯಾಗಿರುತ್ತದೆ.

4. **ಮೆಸ್ರೆ ಜೇನು:** ಇದು ಮರದ ಪೊಟರೆಯಲ್ಲಿ ಕಟ್ಟುತ್ತದೆ. ಅಲ್ಲದೆ ಮನೆಯ ಗೋಡೆ, ಸೇತುವೆ, ಮೋರಿಯ ಬಿರುಕುಗಳಲ್ಲಿ ಕೂಡ ಇದು ಗೂಡು ಕಟ್ಟುತ್ತದೆ. ಈ ಜೇನನ್ನು ಔಷಧಿಗಾಗಿ ಬಳಸುತ್ತಾರೆ.

5. **ಅಟ್ಟಕ ಜೇನು:** ಜೇನು ಹುಳ ತನ್ನ ಬಾಯಿಯಿಂದ ಒಸರುವ ಅಂಟಿನಿಂದ ಪದರ ಪದರದ ರೀತಿಯಲ್ಲಿ ಮರದ ಮೇಲೆ ಚಿಕ್ಕ ಬಿಂದಿಗೆಯ ಆಕಾರದಲ್ಲಿ, ಫುಟ್ಬಾಲ್ ಆಕಾರದಲ್ಲಿ ಗೂಡು ಕಟ್ಟಿ ಜೇನು ತಯಾರಿಸುತ್ತದೆ. ಕಾಡಿನಲ್ಲಿ ಮಾತ್ರ ಇದನ್ನು ಕಾಣಬಹುದು.

6. **ಹೆಗ್ಗಡಜ:** ಹೆಜ್ಜೇನಿಗಿಂತ ಗಾತ್ರದಲ್ಲಿ ಇದು ದೊಡ್ಡದಾಗಿರುತ್ತದೆ. ದೊಡ್ಡ ಬಿಂದಿಗೆಯ ಆಕಾರದಲ್ಲಿ ಗೂಡು ಕಟ್ಟುತ್ತದೆ. ಇಡೀ ಗೂಡಿನಲ್ಲಿ ಒಂದೇ ದ್ವಾರವಿರುತ್ತದೆ. ರಾತ್ರಿ ಹೊತ್ತು ಆ ದ್ವಾರವನ್ನು ಅಂಟಿನಿಂದ ಮುಚ್ಚಿ ಗೋಣಿ ಚೀಲದಲ್ಲಿ ಹೊತ್ತು ಹಾಡಿಗೆ ತರುತ್ತಾರೆ. ಮನೆಗೆ ತಂದು ರಾತ್ರಿ ಹೊತ್ತು ಹೊಗೆ ಹಾಕಿ ರಂಧ್ರ ತೆಗೆಯುತ್ತಾರೆ. ಅದರ ಮೇಲೆ ಸೊಪ್ಪಿನ ಹೊಗೆ ಹಾಕಿ ಹುಳಗಳನ್ನು ಓಡಿಸುತ್ತಾರೆ.

ಜೇನುಕುರುಬರು ಜೇನಿನ ಪ್ರತಿ ನಡವಳಿಕೆಯನ್ನು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ ಹೊಂದಿದ್ದಾರೆ. ಜೇನಿನ ಹಾರಾಟದ ದಿಕ್ಕನ್ನು ನೋಡಿ ಅವರು ಜೇನಿನ ಇರುವಿಕೆಯನ್ನು ಪತ್ತೆ

ಹಚ್ಚುತ್ತಾರೆ. ಜೇನು ಹುಳಗಳೂ ಕೂಡ ಬಹಳ ಬುದ್ಧಿಶಾಲಿಯಾಗಿರುತ್ತವೆ. ತನ್ನನ್ನು ಹಿಂಬಾಲಿಸಿ ಕೊಂಡು ಬರುವ ಮನುಷ್ಯನನ್ನು ಅವು ದಿಕ್ಕು ತಪ್ಪಿಸುತ್ತವೆ ಎನ್ನುತ್ತಾರೆ. ಜೇನು ಕಚ್ಚಿದರೆ ಹಸಿರೌಷಧಿಯನ್ನು ಅವರೇ ಮಾಡಿಕೊಳ್ಳುತ್ತಾರೆ. ಆದರೆ ಅದರ ಹೆಸರನ್ನು ಯಾರಿಗೂ ಹೇಳುವುದಿಲ್ಲ. ಹೇಳಿದರೆ ಔಷಧಿ ಕೆಲಸ ಮಾಡುವುದಿಲ್ಲ ಎಂಬುದು ಅವರ ನಂಬಿಕೆ. ಆದರೆ ಅವರ ಮಕ್ಕಳಿಗೆ ಮಾತ್ರ ಗುಟ್ಟಾಗಿ ತೋರಿಸಿಕೊಡುತ್ತಾರೆ. ಹಾಗೆಯೇ ಮನೆಯ ಒಳಗೆ ಬಿಲಗಳ ಒಳಗೆ ಹಾವುಗಳೇನಾದರೂ ಸೇರಿಕೊಂಡರೆ ಕಾಡು ನಾಗದಾಳಿ ಸೊಪ್ಪಿನ ಹೊಗೆ ಹಾಕಿ ಬಿಲವನ್ನು ಮುಚ್ಚುತ್ತಾರೆ. ಅದರ ವಾಸನೆಗೆ ಹಾವು ಅಲ್ಲೇ ಸಾಯುತ್ತದಂತೆ. ಈ ರೀತಿ ಹಲವು ತಂತ್ರಗಳನ್ನು ಅವರು ತಿಳಿದಿದ್ದಾರೆ. ಜೇನುಕುರುಬರು ಹಿಂದೆ ಕಾಡಿನಲ್ಲಿ ಕೆತ್ತು ಬೇಸಾಯ ಪದ್ಧತಿ ರೂಢಿಸಿಕೊಂಡಿದ್ದರು. ಚೂಪಾದ ಕೋಲಿನಿಂದ ಮಣ್ಣನ್ನು ಅಗೆದು ರಾಗಿಯನ್ನು ಗೆಣಸನ್ನು ಇವರು ಬೆಳೆಯುತಿದ್ದರು.

**ಜೇನುಕುರುಬರಲ್ಲಿ ಆಹಾರದ ಬೇಟೆ**

ಕಾಡಿಗೆ ಹೋಗುವಾಗ ಜೇನುಕುರುಬರು ಕೈಯಲ್ಲಿ ಚೂಪಾದ ಎರಡು ಮೊಳ ಉದ್ದದ ಕೋಲನ್ನು ಹಿಡಿದಿರುತ್ತಾರೆ. ಅದನ್ನು ದಸ್‌ಗಡ್ಡಿ ಎನ್ನುತ್ತಾರೆ. ದಾರಿಯಲ್ಲಿ ಗೆಡ್ಡೆ, ಗೆಣಸು ಕಂಡರೆ ಆ ಕೋಲಿನ ಸಹಾಯದಿಂದ ಅಗೆದು ತೆಗೆದು ಅರ್ಧಭಾಗವನ್ನು ತೆಗೆದುಕೊಂಡು ಅದರ ಬೇರನ್ನು ಅಲ್ಲಿಯೇ ಉಳಿಸುತ್ತಾರೆ. ಅದರ ಸಂತತಿ ಉಳಿದು ಇತರರಿಗೆ ಆಹಾರಕ್ಕೆ ದಾರಿಯಾಗಲಿ ಎಂಬುದು ಅದರ ಉದ್ದೇಶ. ಅವರಿಗೆ ಪರಿಸರದೊಂದಿಗೆ ಇರುವ ಅನ್ಯೋನ್ಯ ಸಂಬಂಧ ಮತ್ತು ನೈಸರ್ಗಿಕ ಪ್ರಜ್ಞೆಯು ನಮಗೆ ಇದರಿಂದ ತಿಳಿದುಬರುತ್ತದೆ. ಇವರು ಬಿದಿರಿನ ಅಚ್ಚೆಯಲ್ಲಿ ಬಿಲ್ಲು ಮಾಡಿಕೊಳ್ಳುತ್ತಾರೆ. ಹುತ್ತದ ಮಣ್ಣನ್ನು ಹದ ಮಾಡಿ ಬೇಯಿಸಿ ಚಿಕ್ಕ ಚಿಕ್ಕ ಗೋಲಿ ಗಾತ್ರದ ಮಣ್ಣಿನ ಉಂಡೆಯನ್ನು ತಯಾರಿಸುತ್ತಾರೆ. ಅದನ್ನು ಉರುಣೆ ಎಂದು ಕರೆಯುತ್ತಾರೆ. ಈ ಬಿಲ್ಲಿಗೆ ಉರುಣೆಯನ್ನು ಹೂಡಿ ಚಿಕ್ಕ ಪುಟ್ಟ ಪ್ರಾಣಿ ಪಕ್ಷಿಗಳ ಕಿರುಬೇಟೆ ಮಾಡುತ್ತಾರೆ. ಕಾಡಿನಲ್ಲಿ ಕಾಡು ಪಾಣಿಗಳಿಂದ ತಮ್ಮ ರಕ್ಷಣೆಯನ್ನು ಮಾಡಿಕೊಳ್ಳುವಾಗ ಕೂಡ ಇದನ್ನು ಉಪಯೋಗಿಸುತ್ತಾರೆ. ಹಾಡಿಯ ಬಳಿ ರಾತ್ರಿ ಹೊತ್ತು ಆನೆಗಳು ಬಂದರೆ ಈ ಉರುಣೆಯಿಂದ ಎರಡು ಮೂರು ಬಾರಿ ಹೊಡೆದರೆ ಸಾಕು, ಅದರ ತೀಕ್ಷ್ಣವಾದ ಏಟಿಗೆ ಆನೆಗಳೂ ಕೂಡ ಹೆದರಿ ಹೊರಟು ಹೋಗುತ್ತವೆ. ಆನೆಯಂತಹ ದೈತ್ಯ ಪ್ರಾಣಿಯನ್ನು ಕೂಡ ಬೆದರಿಸುವ ಸಾಮರ್ಥ್ಯ ಈ ಗೋಲಿಯಾಕಾರದ ಉಂಡೆಗಿದೆ. ಹಾಗೆಯೇ ಪಕ್ಷಿಗಳನ್ನು ಹಿಡಿಯಲು ಇವರು ಬಳಸುವ ಉಪಾಯ ವಿಶಿಷ್ಟವಾಗಿದೆ. ಅರಳಿ ಮರದ ಅಂಟನ್ನು ತೆಗೆದು ಅದನ್ನು ಹದ ಮಾಡಿ ಪಾತ್ರೆಯಲ್ಲಿ ಬೇಯಿಸಿ ಬಿಸಿಯಿರುವಾಗಲೇ ಬಿದಿರಿನ ಸಣ್ಣ ಕಡ್ಡಿಗಳಿಗೆ ಸವರಿ ಬಿದಿರಿನ ಕೊಟ್ಟೆಯೊಳಗೆ

ಹಾಕಿ ಇಟ್ಟಿರುತ್ತಾರೆ. ಹಣ್ಣು ಬಿಡುವ ಮರಗಳಾದ ಬಸಿರಿ ಮರ, ಆಲದ ಮರ, ಗೋಣಿ ಮರ, ಕೀಚಗ ಮರ ಮೊದಲಾದ ಮರಗಳ ಹೂವಿನ ಮಧು ಹೀರಲು ಬರುವ ಹಕ್ಕಿಗಳನ್ನು ಹಿಡಿಯಲು ಈ ಅಂಟನ್ನು ಬಳಸುತ್ತಾರೆ. ಈ ಮರಗಳ ಕೊಂಬೆಯ ಮೇಲೆ ಹಣ್ಣುಗಳ ಅಕ್ಕ ಪಕ್ಕ ಎರಡು ಕಡ್ಡಿಗಳನ್ನು ತೊಗಟೆಗೆ ಚುಚ್ಚುತ್ತಾರೆ. ಅಲ್ಲಿಗೆ ಬಂದ ಪಕ್ಷಿ ಕೊಂಬೆಯ ಮೇಲೆ ಕುಳಿತುಕೊಳ್ಳುತ್ತಿದ್ದಂತೆ ಅದರ ಎರಡು ರೆಕ್ಕೆಗಳು ಕಡ್ಡಿಗಳ ಅಂಟಿಗೆ ಸಿಕ್ಕಿ ಹಾಕಿಕೊಳ್ಳುತ್ತದೆ. ಅದು ಎಷ್ಟೇ ಪ್ರಯತ್ನ ಪಟ್ಟರೂ ಹಾರಿ ಹೋಗಲಾರದಷ್ಟು ಗಟ್ಟಿಯಾಗಿ ಹಕ್ಕಿಗಳನ್ನು ಅಂಟು ಹಿಡಿದಿಡುತ್ತದೆ. ಹೀಗೆ ಕಾಡಿನಲ್ಲಿ ಬೇಟೆಯಾಡಿದ ಪ್ರಾಣಿ ಪಕ್ಷಿಗಳನ್ನು ಅಲ್ಲೇ ಸುಟ್ಟು ತಿನ್ನುತ್ತಾರೆ. ಈ ರೀತಿ ಸುಟ್ಟು ತಿನ್ನಲು ಇವರು ಕಾಡಿನಲ್ಲಿ ಬೆಂಕಿ ಹಚ್ಚಲು ಬಳಸುವ ವಿಧಾನ ವಿಸ್ಮಯಕರವಾದುದು. ರೋಜಾ ಗಿಡದ ಕಿರುಬೆರಳ ಗಾತ್ರದ ಎರಡು ಹಸಿಕೋಲನ್ನು ಒಂದೊಂದು ಮೊಳದುದ್ದ ಕತ್ತರಿಸಿಕೊಂಡು ಒಂದಕ್ಕೆ ಕಿರಿದಾದ ಒಂದು ಗುಳಿ ಮಾಡಿ ಮತ್ತೊಂದು ಕಡ್ಡಿಯನ್ನು ಪೆನ್ಸಿಲ್ಲಿನಂತೆ ಚೂಪು ಮಾಡುತ್ತಾರೆ ಗುಳಿ ಮಾಡಿದ ಕಡ್ಡಿಯನ್ನು ಎರಡು ಅಂಗಾಲುಗಳ ಮಧ್ಯೆ ಊರಿಕೊಂಡು ಎರಡು ಹಸ್ತಗಳಿಂದ ಬಲವಾಗಿ ಉಜ್ಜುತ್ತಾರೆ. ಕೆಲವೇ ನಿಮಿಷಗಳಲ್ಲಿ ತರಗುಗಳ ಸಹಾಯದಿಂದ ಇದು ಬೆಂಕಿಯಾಗುತ್ತದೆ. ಈ ರೀತಿ ಬೆಂಕಿ ಮಾಡಿ ಸುಟ್ಟು ತಿನ್ನುತ್ತಾರೆ. ಯಾವುದೇ ಕಾರಣಕ್ಕೂ ಗಬ್ಬದ ಪ್ರಾಣಿ ಮತ್ತು ಮರಿಗಳನ್ನು ಬೇಟೆಯಾಡುವುದಿಲ್ಲ.

**ಖೆಡ್ಡಾ:** ಮೈಸೂರಿನ ಹೆಚ್.ಡಿ.ಕೋಟೆಯ ಕಾಕನಕೋಟೆ ಭಾಗವು ಹಿಂದೆ ಗಂಗರ ಆಳ್ವಿಕೆಯಲ್ಲಿದ್ದು ಅಂದಿನಿಂದಲೇ ಈ ಭಾಗದಲ್ಲಿ ಖೆಡ್ಡಾ ಕಾರ್ಯಾಚರಣೆಯು ಚಾಲ್ತಿಯಲ್ಲಿತ್ತು, ಹಾಗೆಯೇ ನಾಗರಹೊಳೆಯ ಭಾಗದಲ್ಲಿಯೂ ಹಿಂದೆ ಖೆಡ್ಡಾ ಕಾರ್ಯಾಚರಣೆ ನಡೆಯುತ್ತಿತ್ತು. ಇದೇ ಪರಂಪರೆಯು ಆ ನಂತರದ ಮೈಸೂರು ಅರಸರ ಕಾಲದಲ್ಲಿಯೂ ಮುಂದುವರಿಯಿತು. ಈ ಕಾರ್ಯಾಚರಣೆಯ ಬಹುಪಾಲು ಮನ್ನಣೆ ಸಿಗಬೇಕಾದದ್ದು ಈ ಭಾಗದ ಬುಡಕಟ್ಟುಗಳಿಗೆ. ಈ ಖೆಡ್ಡಾ ಕಾರ್ಯಾಚರಣೆಯ ಸಂದರ್ಭದಲ್ಲಿ ಸಾವಿರಾರು ಸಂಖ್ಯೆಯಲ್ಲಿ ಈ ಬುಡಕಟ್ಟುಗಳು ಭಾಗವಹಿಸುತ್ತಿದ್ದರಂತೆ. ಈ ಸಂದರ್ಭದಲ್ಲಿ ಆನೆಗಳನ್ನು ಹಿಡಿದು ಪಳಗಿಸಿ ಯುದ್ಧಗಳಲ್ಲಿ. ಹಬ್ಬಗಳಲ್ಲಿ, ದೇವಾಲಯಗಳಲ್ಲಿ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ, ರಾಜರ ಶುಭಕಾರ್ಯಗಳಲ್ಲಿ ಈ ರೀತಿಯ ಹಲವು ಸಂದರ್ಭಗಳಲ್ಲಿ ಬಳಸಲಾಗುತ್ತಿತ್ತು.

ಮೈಸೂರು ಒಡೆಯರು ಖೆಡ್ಡಾ ಕಾರ್ಯಾಚರಣೆಗೆ ಮುನ್ನ ಕಾಕನಕೋಟೆಯಲ್ಲಿರುವ ಪ್ರಸಿದ್ಧ ಮಾಸ್ತಿಗುಡಿಯ ಮಾಸ್ತಮ್ಮನಿಗೆ ಮೊದಲ ಪೂಜೆ ಸಲ್ಲಿಸುತ್ತಿದ್ದರಂತೆ. ಹೀಗೆ ಪೂಜೆ ಸಲ್ಲಿಸುವುದರಿಂದ ಕಾಡಿನಲ್ಲಿ ಕಾಡುಪ್ರಾಣಿಗಳಿಂದ ತಮಗೆ ತೊಂದರೆಯಾಗುವುದಿಲ್ಲ ಮತ್ತು ಯಾವುದೇ ತೊಂದರೆ ಎದುರಾಗುವುದಿಲ್ಲ ಎಂದು ನಂಬುತ್ತಿದ್ದರಂತೆ. ಈಗ ಈ ಮಾಸ್ತಿಗುಡಿ ಕಬಿನಿ ಜಲಾಶಯದಿಂದ ಮುಳುಗಡೆಯಾಗಿದೆ.

ಖೆಡ್ಡಾ ಕಾರ್ಯಾಚರಣೆಯನ್ನು ಮೂರು ವಿವಿಧ ರೀತಿಯ ಕಾರ್ಯತಂತ್ರಗಳನ್ನು ಉಪಯೋಗಿಸಿ ಮಾಡಲಾಗುತ್ತಿತ್ತು.

1. ಕಪ್ಪ ಮಾದರಿ
2. ಪವರ್ ಡ್ರೈವ್ ಲ್ಯಾಂಬ್
3. ಲ್ಯಾಂಡ್ ಡ್ರೈವ್

**1. ಕಪ್ಪ ಮಾದರಿ(ಪಿಟ್ ಮೆಥಡ್):** ಆನೆಗಳು ಸಾಮಾನ್ಯವಾಗಿ ಓಡಾಡುವ ಜಾಗದಲ್ಲಿ ಒಂದು ದೊಡ್ಡ ಗುಂಡಿಯನ್ನು ತೋಡಿ ಅದರ ಮೇಲೆ ಮಣ್ಣು ಸೊಪ್ಪನ್ನು ಮುಚ್ಚುತ್ತಾರೆ. ಈ ಗುಂಡಿಗೆ 'ಖೆಡ್ಡ' ಎಂದು ಕರೆಯುತ್ತಾರೆ. ಇದು 12 ಅಡಿ ಅಗಲ 12 ಅಡಿ ಆಳವಿರುತ್ತದೆ. ಇದರ ಕೆಳಗೆ ಹುಲ್ಲು ಹಾಸಿಗೆ ಹಾಕಿ ಅದರ ಮೇಲೆ ಕೂಡ ಹುಲ್ಲು, ಮಣ್ಣು ಬಿದಿರು ಮುಚ್ಚುತ್ತಾರೆ. ಆ ದಾರಿಯಲ್ಲಿ ಬಂದ ಆನೆ ಗುಂಡಿ ಇರುವುದು ತಿಳಿಯದೆ ಅದರೊಳಗೆ ಬೀಳುತ್ತದೆ. ನಂತರ ಸಾಕಾನೆಗಳ ಸಹಾಯದಿಂದ ಆನೆಯನ್ನು ಮೇಲಕ್ಕೆ ಎತ್ತಿ ಅದನ್ನು ಪಂಜರದಲ್ಲಿ ಇಟ್ಟು ಪಳಗಿಸುತ್ತಾರೆ.

**2. ರಿವರ್ ಡ್ರೈವ್:** ಕಾಡಾನೆಗಳು ಓಡಾಡುವ ಜಾಗಗಳನ್ನು ತಿಳಿದು, ಅಲ್ಲಿ ಮರದ ಪಂಜರವನ್ನು ಇಟ್ಟಿರುತ್ತಾರೆ. ಮೊದಲೇ ನಿರ್ಧರಿಸಿದಂತೆ ಸಾಕಾನೆಗಳ ಸಹಾಯದಿಂದ ಕಾಡಾನೆಗಳನ್ನು ಪಂಜರದ ಕಡೆಗೆ ಓಡಿಸಿಕೊಂಡು ಬರುತ್ತಾರೆ. ಓಡಿ ಬಂದ ಕಾಡಾನೆಗಳು ಪಂಜರದೊಳಗೆ ಹೊಕ್ಕ ಕೂಡಲೆ ಮರದ ಬಾಗಿಲಿನಿಂದ ಮುಚ್ಚಿ ಬಂಧಿಸಲಾಗುತ್ತದೆ. ಅವುಗಳನ್ನು ಪಳಗಿಸಿದ ನಂತರ ಕಬಿನಿ ನದಿಯ ಎಡದಂಡೆಯಿಂದ ಬಲದಂಡೆಗೆ ಓಡಿಸಲಾಗುತ್ತಿತ್ತು. ಇದನ್ನು ರಿವರ್ ಡ್ರೈವ್ ಎಂದು ಕರೆಯುತ್ತಾರೆ. ಇದು ಅತ್ಯಂತ ರೋಮಾಂಚನಕಾರಿ ಹಾಗೆಯೇ ಅಪಾಯಕಾರಿಯಾದ ಕ್ರೀಡೆಯಾಗಿದೆ. ಇದನ್ನು ವೀಕ್ಷಿಸಲು ದೇಶ ವಿದೇಶಗಳಿಂದ ಅತಿಥಿಗಳು ಆಗಮಿಸುತ್ತಿದ್ದರಂತೆ. ಸಾಕಾನೆಗಳು ಪಳಗಿಸಿದ ಆನೆಯನ್ನು ಒಂದು ಬದಿಯಿಂದ ಮತ್ತೊಂದು ಕಡೆಗೆ ಓಡಿಸಿಕೊಂಡು ಹೋಗುವ ಈ ಕ್ರೀಡೆ ಮೈನವಿರೇಳಿಸುವಂತಿದ್ದು, ಅದರಲ್ಲಿ ಪಾಲ್ಗೊಳ್ಳುವ ಬುಡಕಟ್ಟುಗಳು ತಮ್ಮ ಪ್ರಾಣವನ್ನು ಒತ್ತೆ ಇಡಬೇಕಾಗುತ್ತಿತ್ತಂತೆ.

**3. ಲ್ಯಾಂಡ್ ಡ್ರೈವ್:** ಸಾಕಾನೆಗಳನ್ನು, ಪ್ರಾಣಿಗಳನ್ನು ಬಳಸಿ ಕಾಡಾನೆಗಳನ್ನು ಓಡಾಡಿಸಿ ಹಿಡಿಯುವುದು.

ಅರಣ್ಯ ಇಲಾಖೆಯು ಇವರನ್ನು ಆನೆ ಮಾವುತರಾಗಿ ಮತ್ತು ಕಾಲಾಳುಗಳಾಗಿ ನೇಮಿಸಿಕೊಂಡಿದೆ. ಆದರೆ ಇದೂ ಕೂಡ ದಿನಗೂಲಿಯ ಆಧಾರದ ಮೇಲೆ. ಇವರಿಗೆ ಸಿಗುವ ಅಲ್ಪ ಸ್ವಲ್ಪ ಸಂಬಳದಲ್ಲೇ ಮನೆ ನಿರ್ವಹಣೆ ಮಾಡಬೇಕು. ವಂಶಪಾರಂಪರ್ಯವಾಗಿ ಈ

ವೃತ್ತಿಯನ್ನು ಮಾಡಿಕೊಂಡು ಬರುತ್ತಿರುವ ಇವರಿಗೆ ಬೇರೆ ಉದ್ಯೋಗ ತಿಳಿದಿಲ್ಲ. ಕಿಷ್ಕಿಂದೆಯಂತ ಸರಕಾರಿ ವಸತಿಗೃಹದಲ್ಲಿ ಎರಡು ಮೂರು ಕುಟುಂಬಗಳು ಜೀವನವನ್ನು ನಡೆಸುತ್ತಿದ್ದಾರೆ. ಕನಿಷ್ಠ ಮೂಲಭೂತ ಸೌಲಭ್ಯಗಳು ಇಲ್ಲದ ಜೀವನ ಇವರದ್ದು. ಇವರಲ್ಲಿ ಕೆಲವರು ಫಾರೆಸ್ಟ್ ಗಾರ್ಡ್‌ಗಳಾಗಿದ್ದಾರೆ. ಜೊತೆಗೆ ಅರಣ್ಯೋತ್ಪನ್ನಗಳನ್ನು ಸಂಗ್ರಹಿಸಿ ಲ್ಯಾಂಪ್ ಸೊಸೈಟಿಗೆ ಮಾಡಿ ಸಂಪಾದಿಸುತ್ತಾರೆ. ಕಾಫಿತೋಟಗಳಲ್ಲಿ ಕೂಲಿಕಾರ್ಮಿಕರಾಗಿಯೂ ಕೆಲವರು ಬದುಕು ಕಟ್ಟಿಕೊಂಡಿದ್ದಾರೆ.

## 6.4. ಬೆಟ್ಟಕುರುಬರ ಮೌಖಿಕ ಸಾಹಿತ್ಯದಲ್ಲಿ ದುಡಿಮೆಯ ಸ್ವರೂಪ

ಬೆಟ್ಟಕುರುಬರು ದಟ್ಟ ಕಾಡಿನ ಒಳಗೆ ಬೆಟ್ಟಗಳಲ್ಲಿ ಬದುಕುತ್ತಿದ್ದ ಬುಡಕಟ್ಟು ಸಮುದಾಯ. ಇವರು ಕೂಡ ಕಾಡಿನಲ್ಲಿ ಸಣ್ಣ ಪುಟ್ಟ ಬೇಟೆಯಾಡುತ್ತಾ ಆಹಾರಕ್ಕಾಗಿ ಕಾಡನ್ನು ಅವಲಂಬಿಸಿದ್ದವರು. ಕಾಡಿನ ಅಂತರಾಳವನ್ನು ಬಲ್ಲ ಇವರು ಕಾಡಿನ ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನು ಗ್ರಹಿಸಬಲ್ಲವರಾಗಿದ್ದಾರೆ. ಹಿಂದೆ ಇವರೂ ಕೂಡ  ಸೀಮಿತ ಪ್ರದೇಶದಲ್ಲಿ ಕೆತ್ಲು ಬೇಸಾಯವನ್ನು ಅಳವಡಿಸಿಕೊಂಡು ರಾಗಿ, ಜೋಳ, ಕುಂಬಳ, ಸೋರೆ ಇತ್ಯಾದಿಗಳನ್ನು ಬೆಳೆಯುತ್ತಿದ್ದರು. ಪದ್ಧತಿಯಂತೆ ವರ್ಷದ ಮೊದಲ ಬೀಜವನ್ನು ಬಿತ್ತಲು ಕೆಲವು ವಿಶೇಷ ನಿಯಮಗಳನ್ನು ಅನುಸರಿಸುತ್ತಾರೆ. ಹಾಡಿಯ ಯಜಮಾನನನ್ನು ಮನೆಗೆ ಕರೆಯಿಸುತ್ತಾರೆ. ಈತನೇ ಮೊದಲ ಬೀಜ ಬಿತ್ತಬೇಕು ಎಂಬುದು ನಿಯಮ. 'ಒಂದು ಶುಭ ದಿನದಲ್ಲಿ ಗುಳಿ ಮಾಡಿ ಕುಂಬಳ ಬೀಜ ಬಿತ್ತುತ್ತಾನೆ. ಕುಂಬಳ ಬೀಜವನ್ನು ಮೊದಲೇ ಶೇಖರಿಸಿಕೊಂಡಿರುತ್ತಾನೆ ಅಥವಾ ಬೇರೆಯವರಿಂದ ಪಡೆದಿರುತ್ತಾನೆ. ಈ ಬೀಜಗಳು ಮೊಳಕೆ ಬಂದು ಸಸಿಗಳಾದ ನಂತರ ರಾಗಿ, ಜೋಳ ಮುಂತಾದ ಬೆಳೆಗಳನ್ನು ಮತ್ತು ತರಕಾರಿ ಬೆಳೆಗಳನ್ನು ಆಯಾ ಕುಟುಂಬಗಳು ಬೆಳೆಯಬಹುದು, ಆಕಸ್ಮಿಕವಾಗಿ ಬೀಜಗಳು ಹುಟ್ಟದಿದ್ದಲ್ಲಿ ಆ ಕುಟುಂಬಸ್ಥರಿಂದ ಅಪಚಾರ ವಾಗಿದೆಯೆಂದು ತಿಳಿದು ಕುಟುಂಬದ ಮುಖ್ಯಸ್ಥರು ಅವರ ಮನೆದೇವತೆಗಳಿಗೆ ತಪ್ಪು ಕಾಣಿಕೆಗಳನ್ನು ಕಟ್ಟಿ ಮತ್ತು ಹಾಡಿಯ ಯಜಮಾನನನ್ನು ಕರೆದುಕೊಂಡು ಬಂದು ಕುಂಬಳ ಬೀಜ ಪುನಃ ಬಿತ್ತಿಸಲಾಗುತ್ತದೆ.'[12] ಅಲ್ಲದೆ ಯಜಮಾನ ತಾನು ಸಂಗ್ರಹಿಸಿದ ಬೀಜಗಳನ್ನು ಮೊದಲು ತನ್ನ ಮನೆಯಲ್ಲಿ ನೆಟ್ಟು ಅದು ಮೊಳಕೆ ಬಂದ ನಂತರ ತನ್ನ ಸಮುದಾಯಕ್ಕೆ ಆ ಬೀಜಗಳನ್ನು ಹಂಚುತ್ತಿದ್ದನಂತೆ. ಆ ನಂತರ ಅವರು ತಮ್ಮ ತಮ್ಮ ಭೂಮಿಗಳಲ್ಲಿ ಬೀಜ ನೆಡುತ್ತಿದ್ದರಂತೆ.

ಬೆಟ್ಟಕುರುಬರು ತಮ್ಮ ಹೆಸರಿಗೆ ತಕ್ಕಂತೆ ಬೆಟ್ಟಗಳ ಮೇಲೆಯೇ ತಮ್ಮ ಬದುಕನ್ನು ಕಂಡುಕೊಂಡವರು. ಇವರು ಇತರೆ ಬುಡಕಟ್ಟುಗಳಾದ ಎರವರು, ಜೇನುಕುರುಬರಂತೆ ಹೊರ

ಜಗತ್ತಿನೊಂದಿಗೆ ಹೆಚ್ಚಿನ ಸಂಪರ್ಕವನ್ನು ಹೊಂದಿರಲಿಲ್ಲ. ಬೆಟ್ಟಕುರುಬರು ಮುಖ್ಯವಾಗಿ ಮೇಲ್ವರ್ಗದವರ, ಭೂಮಾಲೀಕರ ಬಳಿ ಜೀತದಾಳುಗಳಾಗಿರಲಿಲ್ಲ. ಅನಂತರ ಸರಕಾರದ ಅರಣ್ಯ ನೀತಿಗಳಿಂದಾಗಿ ಇವರು ಅನಿವಾರ್ಯವಾಗಿ ಕಾಡನ್ನು ಬಿಟ್ಟು ಹೊರಬರಬೇಕಾಯಿತು. ಜೇನುಕುರುಬರು ಬಿದಿರಿನ ಕರಕುಶಲ ವಸ್ತುಗಳ ತಯಾರಿಕೆಯಲ್ಲಿ ಪರಿಣತರು. ಕಾಡಿನಲ್ಲಿ ಸಿಗುವ ಬಿದಿರು, ಬೆತ್ತ, ಜೊಂಡು ಹುಲ್ಲು ಇತ್ಯಾದಿಗಳನ್ನು ತಂದು ಮೊರ, ಕುಕ್ಕೆ, ವಂದ್ರಿ, ಚಾಪೆ ಇತ್ಯಾದಿ ವಸ್ತುಗಳನ್ನು ತಯಾರಿಸಿ ಅದನ್ನು ಮಾರಾಟ ಮಾಡಿ ಅಲ್ಪ ಸ್ವಲ್ಪ ಹಣ ಸಂಪಾದಿಸುತ್ತಾರೆ. ಹಾಗೆಯೇ ಬೆಟ್ಟಕುರುಬರು ಆನೆಯನ್ನು ಪಳಗಿಸುವುದರಲ್ಲಿ ಕೂಡ ಪರಿಣತರು. ಈ ಕಲೆ ಇವರಿಗೆ ರಕ್ತಗತವಾಗಿ ಬಂದಿದೆ. ಕಾಡಿನಿಂದ ಹಿಡಿದು ತಂದ ಕಾಡಾನೆಗಳನ್ನು ಕೆಲವೇ ತಿಂಗಳಲ್ಲಿ ಪಳಗಿಸಿ ಅವುಗಳಿಂದ ಕೆಲಸ ಮಾಡಿಸುವಷ್ಟು ಇವರು ಚಾಣಾಕ್ಷರು. ಮಾವುತರಾಗಿ ಕಾಲಾಳುಗಳಾಗಿ ಕೆಲವರು ನೇಮಕವಾಗಿದ್ದಾರೆ. ಅದರಲ್ಲೂ ಕೂಡ ಹೆಚ್ಚಿನವರು ಖಾಯಂ ಉದ್ಯೋಗಿಗಳಲ್ಲ. ಅಲ್ಲದೆ ಅರಣ್ಯೋತ್ಪನ್ನಗಳನ್ನು ಸಂಗ್ರಹಿಸಿ ಲ್ಯಾಂಪ್ ಸೊಸೈಟಿಗೆ ಮಾರಿ ಪುಡಿಗಾಸನ್ನು ಸಂಪಾದಿಸುತ್ತಾರೆ. ಅತ್ಯಂತ ಬಡತನದಲ್ಲಿ ಜೀವನವನ್ನು ಸಾಗಿಸುತ್ತಿರುವ ಈ ಸಮುದಾಯಗಳು ಮೀಸಲಾತಿಯಿಂದಲೂ ವಂಚಿತರು. ಹಿಂದೆ ಪರಿಶಿಷ್ಟ ಪಂಗಡದ ಅಡಿಯಲ್ಲಿ ನಮೂದಾಗಿದ್ದ ಬೆಟ್ಟಕುರುಬ ಎಂಬ ಪದವನ್ನು ಸಂವಿಧಾನದಿಂದ ತೆಗೆದುಹಾಕಿದ್ದು ಬೆಟ್ಟ ಕುರುಬ ಎಂಬ ಬದಲಿಗೆ ಕೂರ್ಗ್ ಕುರುಬ, ಕಾಡುಕುರುಬ ಎಂಬ ಪದಗಳನ್ನು ಸೇರಿಸಲಾಗಿದೆ. ಆದರೆ ಇತರೆ ಮುಂದುವರಿದ ಕುರುಬರು ಕೊಡಗಿನಲ್ಲಿ ಬಂದು ಕೂರ್ಗ್ ಕುರುಬರು, ಕಾಡು ಕುರುಬರು ಎಂದು ದಾಖಲೆಗಳನ್ನು ಪಡೆಯುತ್ತಾ ಸರಕಾರಿ ಸವಲತ್ತುಗಳನ್ನು ಪಡೆಯುತ್ತಿದ್ದು ನಿಜವಾದ ಕೊಡಗಿನ ಬೆಟ್ಟಕುರುಬರು ಈ ಸೌಲಭ್ಯಗಳಿಂದ ವಂಚಿತರಾಗುತ್ತಿದ್ದಾರೆ. ಈ ಕಾರಣದಿಂದ ಪರಿಶಿಷ್ಟ ಪಂಗಡದ ದಾಖಲೆಗಳಿಲ್ಲದೆ ಈ ಸಮುದಾಯದ ಮಕ್ಕಳು ಆರ್ಥಿಕ ಅಡಚಣೆಗಳಿಂದಾಗಿ ಹೆಚ್ಚಿನ ವಿದ್ಯಾಭ್ಯಾಸವನ್ನು ಪಡೆಯಲು ಸಾಧ್ಯವಾಗದೆ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಸರಕಾರ ಈ ಬಗ್ಗೆ ಗಂಭೀರವಾಗಿ ಆಲೋಚಿಸಿ ಇವರಿಗೆ ನ್ಯಾಯವನ್ನು ಒದಗಿಸಬೇಕಾಗಿದೆ.

## 6.5. ಸೋಲಿಗರ ಮೌಖಿಕ ಸಾಹಿತ್ಯದಲ್ಲಿ ದುಡಿಮೆಯ ಸ್ವರೂಪ

ಸೋಲಿಗರು ಕಾಡಿನ ಉತ್ಪನ್ನಗಳಾದ ಗೆಡ್ಡೆ ಗೆಣಸು, ನಾರು ಬೇರುಗಳನ್ನು ಸಂಗ್ರಹಿಸಿ ಆಹಾರವಾಗಿ ಸೇವಿಸುತ್ತಿದ್ದವರು. ಸೋಲಿಗರ ಮುಖ್ಯ ಆಹಾರ ಗೆಣಸು. ಈ ಮಾತನ್ನು ಪುಷ್ಟೀಕರಿಸಲು ಬೇಕಾದ ಮಾಹಿತಿ ಅವರ ಸೃಷ್ಟಿಪುರಾಣದಲ್ಲಿ ಸಿಗುತ್ತದೆ. ಸೋಲಿಗರು ಸೋಲನ ಗೆಣಸನ್ನು ಆಹಾರವಾಗಿ ಬಳಸುವುದರಿಂದ ಅವರನ್ನು ಸೋಲಿಗರು ಎಂದು ಕರೆಯಲಾಗುತ್ತದೆ

ಎಂಬುದು ಕತೆ.

ಒಮ್ಮೆ ಪಾರ್ವತಿ ಪರಮೇಶ್ವರರು ತಮ್ಮ ಬೆವರಿನಿಂದ ಎರಡು ಗೊಂಬೆಗಳನ್ನು ಮಾಡಿ ಅವಕ್ಕೆ ಜೀವ ತುಂಬಿದರು. ಒಂದು ನೀಲಯ್ಯನಾಯಿತು ಇನ್ನೊಂದು ಸಂಕಮ್ಮನಾಯಿತು. ಮುಂದೆ ವಂಶ ಇವರಿಂದ ಬೆಳೆಯಿತು. ಈ ಮಕ್ಕಳು ಸೋಲನ ಹಂಬಿನ ಗೆಡ್ಡೆಯನ್ನು ತಿಂದು ಜೀವಿಸುತ್ತಿದ್ದರು. ಹೀಗೆಯೇ ಇವರು ಗೆಡ್ಡೆಯನ್ನು ಕಿತ್ತು ಬೇಯಿಸುತ್ತಾ ತಿನ್ನುತ್ತಲೇ ಮುಪ್ಪಾದರು. ಆದರೆ ಸೋಲನ ಹಂಬು ಮಾತ್ರ ಮತ್ತೆ ಚಿಗುರಿ, ಹೊಸ ಹೊಸ ಗೆಡ್ಡೆ ಬಿಟ್ಟಿತು. ಈ ಮುದುಕ ಗೆಡ್ಡೆ ಕೀಳಲು ಬಂದಾಗ ಆ ಸೋಲನ ಹಂಬು 'ನಿನ್ನ ಕೈಯಿಂದ ನನ್ನ ಗೆಡ್ಡೆಯನ್ನು ನೀನು ಸಾಯೋವರೆಗೂ ಕಿತ್ತರೂ ನನ್ನ ಸೋಲಿಸಕ್ಕೆ ಆಗಲ್ಲ ಆದ್ದರಿಂದ ನನ್ನ ಗೆಡ್ಡೆ ಕಿತ್ತು ಸೋತವನು ನೀನು ಸೋಲಿಗ'[13] ಎಂದು ಹೇಳಿತಂತೆ. ಈ ಕತೆಯಿಂದ ನಾವು ಆಹಾರೋತ್ಪನ್ನಗಳ ಸಂಗ್ರಹವೇ ಇವರ ಮುಖ್ಯ ಜೀವನಾಧಾರ ಎಂದು ತಿಳಿಯಬಹುದು.

ಗೆಣಸು ಇವರ ಬದುಕಿನೊಂದಿಗೆ ಬೆಸೆದುಕೊಂಡಿದೆ. ಅವರ ಪುರಾಣದ ಕತೆಗಳೂ ಕೂಡ ಇದನ್ನು ಸಮರ್ಥಿಸುತ್ತವೆ. ಕುಸುಮಾಲೆ ಮತ್ತು ಬಿಳಿಗಿರಿರಂಗನ ಪ್ರಣಯ ಪ್ರಸಂಗದಲ್ಲಿ ಕುಸುಮಾಲೆಯು ಬಿಳಿಗಿರಿರಂಗನನ್ನು ತನ್ನ ಅಕ್ಕಂದಿರೊಡನೆ ಕಾಡಿನಲ್ಲಿ ಗೆಣಸು ಅಗಿಯಲು ಹೋದಾಗ ಭೇಟಿಯಾಗುತ್ತಾಳಂತೆ. ಎಲ್ಲ ಅರಣ್ಯವಾಸಿ ಬುಡಕಟ್ಟುಗಳಂತೆ ಸೋಲಿಗರ ಬದುಕಿನಲ್ಲೂ ಕೂಡ ಬೇಟೆ ಬಹುಮುಖ್ಯ ಸ್ಥಾನವನ್ನು ಪಡೆದಿದೆ. ಸೋಲಿಗರು ಹಿಂದೆ ಕಾಡಿನಲ್ಲಿ ಹಲವು ತಂತ್ರಗಳನ್ನು ಉಪಯೋಗಿಸಿ ಜೇನುಬೇಟೆ, ಮೊಲ, ಕಾಡುಹಂದಿ, ಮುಳ್ಳುಹಂದಿ, ಕಾಡುಕುರಿ, ಜಿಂಕೆ, ಕಡವೆ, ಬೆಕ್ಕು, ಮೊಲ, ಚಿಣಪು wild fowl alemac (the large squirrel), ಮುಸುವೆ (Blaes Monkey)ಯನ್ನು ಬೇಟೆಯಾಡುತ್ತಿದ್ದರು. ಜಲಚರಗಳನ್ನು ಹಿಡಿದು ಆಹಾರವಾಗಿ ಸೇವಿಸುತ್ತಿದ್ದರು. ಪೆಟಲು ಎನ್ನುವ ಬಿದಿರಿನ ಕೊಳವೆಗೆ ಸಿರುಹೊನ್ನಕಾಯಿ ತುಂಬಿ ಗುರಿಯಿಟ್ಟು ಹೊಡೆದು ಕೋಳಿ ಪಕ್ಷಿ ಮೊದಲಾದವುಗಳನ್ನು ಬೇಟೆಯಾಡುವ ಪದ್ಧತಿ ಇತ್ತು. ಸೋಲಿಗರು ಬೇಟೆಗಾರರು ಎಂಬುದಕ್ಕೆ ಸೋಲಿಗರ ನೀಲಯ್ಯ ಕುಲದ ಬೇಟೆಗೆ ಹೋಗುವ ಪ್ರಸಂಗವನ್ನು ನಾವು ಉದಾಹರಿಸಬಹುದು

ಅದು ಅಂತಿಂತ ಬೇಟೆಯಲ್ಲ
'ಹೋಗಾದೆ ಮೂರು ತಿಂಗಳು
ಬರುವಾದೆ ಮೂರು ತಿಂಗಳು
ಇರುವಾದೆ ಮೂರು ತಿಂಗಳು
ಮಡದಿ ಆರು ಮೂರು ಒಂಬತ್ತು ತಿಂಗಳು'[14]

ಈ ರೀತಿಯ ಸುದೀರ್ಘವಾದ ಬೇಟೆಯನ್ನು ಮುಗಿಸಿ ಇಡೀ ಸಮುದಾಯದವರು ತಮ್ಮ ತಮ್ಮ ಪಾಲನ್ನು ಸಮಾನವಾಗಿ ಹಂಚಿಕೊಳ್ಳುತ್ತಿದ್ದರು. ಹೋಗುವಾಗ ತಮ್ಮ ದೈವವಾದ ಕಾರಯ್ಯನನ್ನು ನೆನೆಯುತ್ತಿದ್ದರು. ಇದರಿಂದ ಬೇಟೆಗೆ ಹೊರಟವರು ಮಾನಸಿಕವಾಗಿ ದೃಢವಾಗಿರುತ್ತಿದ್ದರು. ಕಾರಯ್ಯ ತಮ್ಮ ಜೊತೆ ಬೇಟೆಗೆ ಬರುತ್ತಿದ್ದಾನೆ ಎಂಬುದು ಸಮುದಾಯದಲ್ಲಿ ಒಂದು ರೀತಿಯ ಆತ್ಮಸ್ಥೈರ್ಯವನ್ನು ನೀಡುತ್ತಿತ್ತು

'ಕಾರಾನಾ ಕರೆಯೋ ಕಾರಯ್ಯ
ಸೊಪ್ಪಿನರಕೆ ಕಾರಾನಾ ॥ಪ॥
ಜೇನು ಕುಯ್ಯೋ ಕುಯ್ಯೋ ಬಿಲ್ಲಯ್ಯೋ । ಸೊಪ್ಪಿನರಕೆ ಕಾರಾನಾ
ಕೆಂಬಾರೆ ಜೇನು ಕೆಂಚುಜೇನು। ಸೊಪ್ಪಿನರಕೆ ಕಾರಾನಾ
ಏಡಿಹಳ್ಳಿ ಜೇನು ಎಡ್ಡು ಜೇನು । ಸೊಪ್ಪಿನರಕೆ ಕಾರಾನಾ
ಗುಂಡು ಬಾರೆ ಜೇನು ಗುಡುಗಿದಾದೆ ।ಸೊಪ್ಪಿನರಕೆ ಕಾರಾನಾ
ಕಮ್ಮಾರೆ ಜೇನು ಕೆಂಚು ಜೇನು ।ಸೊಪ್ಪಿನರಕೆ ಕಾರಾನಾ
ಮಾಲಕಣ್ಣಿನಲ್ಲಿ ಜೇನಾದಲ್ಲೋ । ಸೊಪ್ಪಿನರಕೆ ಕಾರಾನಾ
ಮೂರು ಮೊಳಕೊಂದು ಮುಂಡು ಸೂಟೆ । ಸೊಪ್ಪಿನರಕೆ ಕಾರಾನಾ
ಆರು ಮೊಳಕೊಂದು ಅಣಗಡ್ಡಿ । ಸೊಪ್ಪಿನರಕೆ ಕಾರಾನಾ
ಬೆಜ್ಜಾರು ಜೇನು ಬೆಚ್ಚು ಜೇನು ।ಸೊಪ್ಪಿನರಕೆ ಕಾರಾನಾ'[15]

ಅನಂತರದಲ್ಲಿ ಕಿರುಬೇಸಾಯವನ್ನು ರೂಢಿಸಿಕೊಂಡು ಅದರಲ್ಲಿ ತಮ್ಮ ಜೀವನಕ್ಕೆ ಬೇಕಾದ ಆಹಾರಧಾನ್ಯಗಳನ್ನು, ತರಕಾರಿಗಳನ್ನು ಬೆಳೆಯತೊಡಗಿದರು. ಒಕ್ಕಲುತನ ಅವರ ವೃತ್ತಿಯಾಗಿತ್ತು. ಸೋಲಿಗರ ಮುಖ್ಯ ಆಹಾರ ರಾಗಿ. ಇವರ ಪ್ರಮುಖ ಹಬ್ಬಗಳಾದ ಹೊಸರಾಗಿ ಹಬ್ಬ ಮತ್ತು ರೊಟ್ಟಿ ಹಬ್ಬದ ಆಚರಣೆಯಲ್ಲಿ ನಾವು ಇದನ್ನು ಗಮನಿಸಬಹುದು. ಉಳಿದ ಬುಡಕಟ್ಟುಗಳಾದ ಜೇನುಕುರುಬರು, ಬೆಟ್ಟಕುರುಬರು, ಎರವರಲ್ಲಿ ರಾಗಿ ಅಷ್ಟಾಗಿ ಬಳಕೆಯಲ್ಲಿಲ್ಲ. ಹೊಸರಾಗಿ ಹಬ್ಬದಂದು ತಾವು ಬೆಳೆದ ಮೊದಲ ಬೆಳೆಯನ್ನು ತಂದು ದೇವರಿಗೆ ಎಡೆಯಿಡುವಾಗ ಇವರು ರಾಗಿಯಿಂದ ತಯಾರಿಸಿದ ರೊಟ್ಟಿಯನ್ನು ಎಡೆಯಿಡುತ್ತಾರೆ. ಇದು ಅನಾದಿಕಾಲದಿಂದಲೂ ಪಾಲಿಸಿಕೊಂಡು ಬಂದಿರುವ ಒಂದು ಸಂಪ್ರದಾಯ. ಈ ಆದಿಮ ಆಚರಣೆಗಳು ಇಂದಿಗೂ ಜೀವಂತವಾಗಿದೆ.

**ಕುಮರಿ ಬೇಸಾಯ:** ಹಿಂದೆ ಕಾಡು ಯಥೇಚ್ಛವಾಗಿದ್ದ ಸಮಯದಲ್ಲಿ ಮಳೆ ಪ್ರಾರಂಭವಾಗುವುದಕ್ಕೆ

ಮುಂಚಿತವಾಗಿ ಫಲವತ್ತಾದ ಭೂಮಿಯನ್ನು ನೋಡಿ ತಮಗೆ ಅನುಕೂಲವಾಗುವಷ್ಟು ಭೂಮಿಯಲ್ಲಿ ವ್ಯವಸಾಯ ಮಾಡುತ್ತಿದ್ದರು. ಕಾಡಿನಲ್ಲಿ ಒಂದು ಕಡೆ ಫಲವತ್ತಾದ ಭೂಮಿ ಕಂಡುಬಂದಾಗ ಈ ಸ್ಥಳದ ಆಯ್ಕೆ ಸರಿಯಾಗಿದೆಯೇ ಇಲ್ಲವೇ ಎಂಬುದನ್ನು ತಿಳಿಯಲು ದೇವರ ಪೂಜೆ ಸಲ್ಲಿಸಿ ಹಿರಿಯರನ್ನು ಕುಲದೇವರುಗಳನ್ನು ಆವಾಹಿಸಿ ಒಪ್ಪಿಗೆ ಪಡೆಯುತ್ತಿದ್ದರು. ಮೊದಲು ಆಯ್ಕೆ ಮಾಡಿಕೊಂಡ ಕಾಡಿಗೆ ಬೆಂಕಿ ಹಾಕಿ ಅಲ್ಲಿರುವ ಒಣಗಿದ ಗಿಡ ಮರ, ಪೊದೆಗಳನ್ನು ಸುಡುತ್ತಿದ್ದರು. ನಂತರ ಭೂಮಿ ಹದಗೊಳಿಸಿ ಗಟ್ಟಿಯಾದ ಕೋಲನ್ನು ಒಂದು ಕಡೆ ಚೂಪುಗೊಳಿಸಿ ಅದರ ಸಹಾಯದಿಂದ ಭೂಮಿಯಲ್ಲಿ ಗೆರೆ ಎಳೆದು ತರಕಾರಿ, ಗೆಡ್ಡೆ ಗೆಣಸು, ಕುಂಬಳ ಮೊದಲಾದ ಬೀಜಗಳನ್ನು ಹಾಕಿ ಅದನ್ನು ಬೆಳೆಯುತ್ತಿದ್ದರು. ಬೆಳೆ ಹೊಲದಲ್ಲಿ ಮರದ ಮೇಲೆ ಅಟ್ಟಣಿಗೆಯನ್ನು ನಿರ್ಮಿಸಿ ಅಥವಾ ಪಕ್ಕದಲ್ಲಿ ಜೋಪಡಿ ನಿರ್ಮಿಸಿ ತಮ್ಮ ಬೆಳೆಗಳನ್ನು ಕಾಡು ಪ್ರಾಣಿಗಳಿಂದ ಕಾಪಾಡುತ್ತಿದ್ದರು. ಕಾಡುಪ್ರಾಣಿಗಳು ಬೆಳೆಯನ್ನು ತಿನ್ನಲು ಬಂದರೆ ಅದನ್ನು ಟಿನ್ನು ಮೊದಲಾದವುಗಳಿಗೆ ಬಡಿದು ಶಬ್ದ ಮಾಡಿ ಓಡಿಸುತ್ತಿದ್ದರು. ಒಂದು ವೇಳೆ ಕಾಡು ಪ್ರಾಣಿಗಳು ಬೆಳೆಯನ್ನು ತಿಂದು ಹಾಕಿದರೂ ಬೇಸರ ಪಡದೆ ಉಳಿದದ್ದರಲ್ಲೇ ತೃಪ್ತಿಯನ್ನು ಪಡುತ್ತಿದ್ದರು. ಸೋಲಿಗರು ಯಾವುದೇ ಕಾರಣಕ್ಕೂ ಭೂಮಿಯನ್ನು ತಮ್ಮ ಖಾಸಗಿ ಆಸ್ತಿ ಎಂದು ಪರಿಗಣಿಸುತ್ತಿರಲಿಲ್ಲ. ಪ್ರತಿ 3–4 ವರ್ಷಕ್ಕೆ ಸ್ಥಳ ಬದಲಾವಣೆ ಮಾಡುವುದರಿಂದ ಕಾಡು ಮತ್ತೆ ಕಾಡಾಗಿಯೇ ಉಳಿಯುತ್ತಿತ್ತು. ಇದು ಪ್ರಕೃತಿಯ ನಾಡಿ ಮಿಡಿತವನ್ನು ಬಲ್ಲ ಬುಡಕಟ್ಟುಗಳು ಅನುಸರಿಸುತ್ತಿದ್ದಂತಹ ಒಂದು ವೈಜ್ಞಾನಿಕ ವಿಧಾನ. ಕುಮರಿ ಬೇಸಾಯದ ಮೂಲಕ ಪರಿಸರದ ಸಮತೋಲನವನ್ನು ಬುಡಕಟ್ಟುಗಳು ಕಾಪಾಡಿಕೊಂಡು ಬರುತ್ತಿದ್ದವು. ಅರಣ್ಯ ಕಾಯಿದೆಗಳು ಅನುಷ್ಠಾನಕ್ಕೆ ಬರುತ್ತಿದ್ದಂತೆ ಇದ್ದ ಭೂಮಿಯು ಕೈತಪ್ಪಿಹೋಯಿತು. ಕುಮರಿ ಬೇಸಾಯವೂ ಕೂಡ ನಿಂತು ಹೋಯಿತು. ಅರಣ್ಯ ಹಕ್ಕು ಕಾಯಿದೆ ಬಂದ ನಂತರ ಸ್ವಲ್ಪ ಜಮೀನನ್ನು ಪಡೆದು ವ್ಯವಸಾಯವನ್ನು ಮಾಡುತ್ತಿದ್ದಾರೆ.

ಸೋಲಿಗರು ವರ್ಷದಲ್ಲಿ ಎರಡು ರೀತಿಯ ಬೆಳೆಯನ್ನು ಬೆಳೆಯುತ್ತಾರೆ. ಒಂದು ಹಿಂಗಾರು ಬೆಳೆ ಮತ್ತೊಂದು ಮುಂಗಾರು ಬೆಳೆ. ಮೊರಬರವರು ಸೋಲಿಗರ ವ್ಯವಸಾಯವನ್ನು ಕುರಿತು 'The Soligas begin the work of cultivation in their forest fields by the end of January. The feelings of the jungle. Growth, cutting of stumps and weeds mark the commencement of the agricultural operation for the new year'[16] ಮುಂಗಾರು ಬೆಳೆಯ ಸಮಯದಲ್ಲಿ ಜಮೀನಿನಲ್ಲಿರುವ ಕಸ ಕಡ್ಡಿ ತರಗೆಲೆ ಮೊದಲಾದವುಗಳನ್ನು ಸುಟ್ಟು ಆ ಬೂದಿ ಭೂಮಿಯಲ್ಲಿ ಹರಡುವಂತೆ ಮಾಡಿ, ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸಿ, ವರ್ಷದ ಮೊದಲನೇ

ಮಳೆಯಲ್ಲಿ ಬೇಸಾಯವನ್ನು ಪ್ರಾರಂಭಿಸುವುದು ಇವರ ಬಹು ಮುಖ್ಯ ಹಾಗೂ ಪ್ರಚಲಿತ ಕೃಷಿ ಪದ್ಧತಿಯಾಗಿದೆ. ವರ್ಷದ ಮೊದಲಲ್ಲಿ ಹೊನ್ನೇರು ಕಟ್ಟುವ ಸಮಯದಲ್ಲಿ ಎತ್ತುಗಳು ಗಂಜಲ ಮತ್ತು ಸೆಗಣಿ ಹಾಕಿದರೆ ಅದು ಶುಭ ಸೂಚನೆ ಎಂದು ನಂಬುತ್ತಾರೆ. ಸೋಲಿಗರು ಮಾಟ ಮಂತ್ರಗಳನ್ನು ನಂಬುವವರು. ಇವರ ಹೆಚ್ಚಿನ ಆಚರಣೆಗಳು ಅತಿಮಾನುಷ ಆಚರಣೆಗಳಿಗೆ ಸಂಬಂಧಿಸಿದ್ದಾಗಿದೆ. ಮಳೆಯಾಧಾರಿತ ಕೃಷಿಪದ್ಧತಿಯನ್ನು ಅಳವಡಿಸಿಕೊಂಡಿರುವ ಸೋಲಿಗರು ಮಳೆ ಬಾರದಿದ್ದಾಗ ಊರವರೆಲ್ಲಾ ಸೇರಿ ಮಳೆಗಾಗಿ ಕೆಲವು ವಿಶೇಷವಾದ ಆಚರಣೆಗಳನ್ನು ನಡೆಸುತ್ತಾರೆ.

**ಮಳೆ ಸಂಬಂಧಿ ಆಚರಣೆ:** ಇದನ್ನು ಕಪ್ಪೆ ಶಾಸ್ತ್ರ ಎಂದು ಕರೆಯುತ್ತಾರೆ. ಈ ಶಾಸ್ತ್ರಕ್ಕಾಗಿ ಒಂದು ಜೀವಂತ ಕಪ್ಪೆಯನ್ನು ಹಿಡಿದು ತರುತ್ತಾರೆ. ಆ ನಂತರ ಇಬ್ಬರು ಹುಡುಗರಿಗೆ ಸ್ನಾನ ಮಾಡಿಸುತ್ತಾರೆ. ಒಂದು ಒನಕೆಯನ್ನು ತೆಗೆದುಕೊಂಡು ಹುಟ್ಟಿದ ನಿರ್ವಾಣಕ್ಕಿರುವ ಆ ಎರಡು ಮಕ್ಕಳುಗಳ ಹೆಗಲ ಮೇಲೆ ಒನಕೆಯನ್ನು ಹೊರಿಸಿ ಅದರ ನಡುವಿನ ಭಾಗಕ್ಕೆ ಜೀವಂತ ಕಪ್ಪೆಯನ್ನು ಕಟ್ಟಿ ಇಬ್ಬರು ಹುಡುಗರೂ ಆ ಒನಕೆಯನ್ನು ಮನೆ ಮನೆಯ ಹತ್ತಿರ ಎತ್ತಿಕೊಂಡು ಹೋಗಿ

'ಹುಯ್ಯೋ ಹುಯ್ಯೋ ಮಳೆದೇವ
ಹೂವಿನ ತೋಟಕೆ ನೀರಿಲ್ಲ.......

ಎಂದು ಹೇಳಿಕೊಂಡು 'ಪೋಡ'ನ್ನು ಸುತ್ತಿ ಕಡೆಯಲ್ಲಿ ಕಪ್ಪೆಗೆ ಪೂಜೆಯನ್ನು ಸಲ್ಲಿಸಿ ನೀರಿನಲ್ಲಿ ತೇಲಿಬಿಡುವರು.'[17] ಈ ರೀತಿ ಮಾಡುವುದರಿಂದ ಕಪ್ಪೆ ಇಂದ್ರನ ಬಳಿಗೆ ಹೋಗಿ ಭೂಮಿಗೆ ಮಳೆ ತರಿಸುತ್ತದೆ ಎಂಬುದು ಅವರ ನಂಬಿಕೆ. ಇದರೊಂದಿಗೆ ಕಾಡಿನ ಕಿರು ಉತ್ಪನ್ನಗಳಾದ ಜೇನು, ನೆಲ್ಲಿಕಾಯಿ, ಅಂಟುವಾಳದ ಕಾಯಿ, ನೆಲ್ಲಿಕಾಯಿ, ಹುಣಸೆಹಣ್ಣು, ಪಾಚಿ, ಕಾಡು ಅರಿಶಿನ, ಕಾಡು ಶುಂಠಿ, ಮಾಕಳಿಬೇರು. ಅರಳೆಕಾಯಿ, ಗೋಂದು ಮೊದಲಾದವುಗಳನ್ನು ಸಂಗ್ರಹಿಸಿ ಲ್ಯಾಂಪ್ ಸೊಸೈಟಿಗೆ ಮಾರಿ ಸಂಪಾದನೆ ಮಾಡುತ್ತಾರೆ. ಅಲ್ಲದೆ ಕೂಲಿ ಕೆಲಸ ಮಾಡಿಕೊಂಡು ಈ ಬದುಕು ಸಾಗಿಸುತ್ತಿದ್ದಾರೆ.

ಬುಡಕಟ್ಟುಗಳಲ್ಲಿ ಗಂಡು ಹೆಣ್ಣಿಗೆ ಸಮಾನವಾದ ಪ್ರಾತಿನಿಧ್ಯತೆಯಿದೆ. ಇಲ್ಲಿ ಗಂಡು ಶೋಷಕನೂ ಅಲ್ಲ, ಹೆಣ್ಣು ಶೋಷಿತಳೂ ಅಲ್ಲ. ಈ ಸಮಾನತೆ ದುಡಿಮೆಯಲ್ಲೂ ಕೂಡ ಕಂಡುಬರುತ್ತದೆ. ಗಂಡು ಕಾಡಿನಲ್ಲಿ ಬೇಟೆಯಾಡಲು, ಗೆಡ್ಡ ಗೆಣಸು ಸಂಗ್ರಹಿಸಲು, ಜೇನು ಕುಯ್ಯಲು ಹೋದರೆ, ಹೆಣ್ಣು ಅದನ್ನು ಕುಟುಂಬಕ್ಕೆ ಸಮಾನವಾಗಿ ಹಂಚುವ, ಅದನ್ನು ಸಂರಕ್ಷಿಸುವ ಕೆಲಸವನ್ನು ನಿರ್ವಹಿಸುತ್ತಾಳೆ. ಅಲ್ಲದೆ ಕೃಷಿಯಲ್ಲಿ ಹೆಣ್ಣಿನ ಪಾಲೇ ಹೆಚ್ಚು. ಬುಡಕಟ್ಟು ಸಮಾಜದಲ್ಲಿ ಹೆಣ್ಣು ಅನುತ್ಪಾದಕಳಾಗಿ ಪರಿಗಣಿಸಲ್ಪಟ್ಟಿಲ್ಲ. ಮಾತೃಪ್ರಧಾನವಾಗಿದ್ದ

ಬುಡಕಟ್ಟುಗಳು ಪಿತೃಪ್ರಧಾನ ವ್ಯವಸ್ಥೆಯೆಡೆಗೆ ವಾಲುತ್ತಾ ಈ ಸ್ಥಾನಮಾನಗಳಲ್ಲೂ ಏರಿಳಿತ ಕಂಡುಬರತೊಡಗಿತು.

ಬುಡಕಟ್ಟುಗಳಲ್ಲಿ ಕುಟುಂಬದ ಜವಾಬ್ದಾರಿಯನ್ನು ಗಂಡು ಹೆಣ್ಣು ಸಮಾನವಾಗಿ ಹಂಚಿಕೊಂಡಿದ್ದಾರೆ. ಗಂಡ ಕಾಡಿನಲ್ಲಿ ಬೇಟೆಯಾಡಿ, ಕೂಲಿಗೆ ಹೋಗಿ ಸಂಪಾದನೆ ಮಾಡಿದರೆ, ಹೆಂಡತಿ ಅದನ್ನು ಇಡೀ ಕುಟುಂಬಕ್ಕೆ ಸಮಾನವಾಗಿ ಹಂಚುವ ಕೆಲಸವನ್ನು ನಿರ್ವಹಿಸುತ್ತಾಳೆ. ಕೆಲಸದಲ್ಲಿ ಮೇಲು ಕೀಳು ಎಂಬ ಕಲ್ಪನೆ ಇವರಲ್ಲಿಲ್ಲ.

'ಅವ್ವೆ ಎಲ್ಲಿಗೋದಪೋ?
ನೀರಿಗೋದಮಿ ಡಿಮಿಡಿಮಿ ಕಾಳೆ
ಅವ್ವೆ ಎಲ್ಲಿಗೋದಪೋ?
ಸೌದೆಗೋದಮಿ ಡಿಮಿ ಡಿಮಿ ಕಾಳೆ
ಅವ್ವೆ ಎಲ್ಲಿಗೋದಪೋ?
ಉಪ್ಲಿಗರ ಗೇರಿಗಿಟ್ಟಿಗೋದಮಿ'[18]

ಈ ಸಾಲು ಮದುವೆಯಾದ ಹೆಣ್ಣು ನೀರು ತರುವ, ಕಾಡಿನಿಂದ ಸೌದೆ ತರುವ ಮತ್ತು ಉಪ್ಪಾರರ ಹೊಲದಲ್ಲಿ ಕೂಲಿಕೆಲಸ ಮಾಡಿ ಅದಕ್ಕೆ ಕೂಲಿಯ ರೂಪದಲ್ಲಿ ಹಿಟ್ಟನ್ನು ತರುವ ಮೂಲಕ ತನ್ನ ಕುಟುಂಬವನ್ನು ನಿರ್ವಹಿಸುತ್ತಿದ್ದಳು ಎಂಬುದು ತಿಳಿಯುತ್ತದೆ. ಮಕ್ಕಳ ಆಟದ ಸಾಲುಗಳಾದರೂ ಕೂಡ ಸೋಲಿಗರ ಹೆಣ್ಣಿನ ಬದುಕಿನ ಚಿತ್ರಣ ಮತ್ತು ಕುಟುಂಬ ನಿರ್ವಹಣೆಯಲ್ಲಿ ಅವಳ ಪಾತ್ರವನ್ನು ತಿಳಿಸುತ್ತದೆ. ಬಂದೂಕನ್ನು ಮೊದಲ ಬಾರಿಗೆ ತಮ್ಮ ಮಾಲೀಕರ ಬಳಿ ಮತ್ತು ಅರಣ್ಯ ಇಲಾಖೆಯವರ ಬಳಿ ನೋಡಿದಾಗ ಆಶ್ಚರ್ಯಚಕಿತರಾಗುವ ಸೋಲಿಗರು ಫಾರೆಸ್ಟ್ ಗಾರ್ಡುಗಳಾಗಿ ನೇಮಕವಾದ ನಂತರ ಬಂದೂಕನ್ನು ತಾವೇ ಧರಿಸಿ ಸಂಭ್ರಮಿಸುತ್ತಾರೆ. ಶಿಕಾರಿಯನ್ನು ಹತ್ತಿರದಿಂದ ನೋಡಿದವರು ತಾವೇ ಶಿಕಾರಿ ಮಾಡಿದಂತೆ ಈ ಹಾಡಿನಲ್ಲಿ ವರ್ಣಿಸುತ್ತಾರೆ. ಗಂಡು ತಾನು ಶಿಕಾರಿಗೆ ಹೊರಡುವಾಗ ಕೋವಿಯನ್ನು ಧರಿಸುವ ಬೇಟೆಯಾಡುವ ರೀತಿಯನ್ನು ಇಲ್ಲಿ ಹಾಡಿನ ಮೂಲಕ ವ್ಯಕ್ತಪಡಿಸುತ್ತಾನೆ.

'ಕಟ್ಟಿದ ಕೋವಿ ಹೆಗಲೂಡಿ
ಕಾಡಿನ ಬೇಟೆ ಹೊಂಟಾಗ
ಜೋಡು ಕಡಬೆ ಬಂದಾತೆ
ಜೋಡಲೇಟು ಕೊಡಾನ

'ಢುಂ' ಎಂದರೇಟು ಬಿದ್ದಾದೆ

'ಢುಂ' ಎಂದು ಕಡಬೆ ಬಿದ್ಗೋತು'[19]

## 6.6. ಕುಡಿಯರ ಮೌಖಿಕ ಸಾಹಿತ್ಯದಲ್ಲಿ ದುಡಿಮೆಯ ಸ್ವರೂಪ

ಕುಡಿಯರಲ್ಲಿ ಹಲವು ಪಂಗಡಗಳಿವೆ ಮತ್ತು ಪ್ರತಿ ಪಂಗಡಗಳೂ ತಮ್ಮದೇ ಆದ ಕುಲಕಸುಬನ್ನು ಹೊಂದಿದ್ದಾರೆ. ಮುಖ್ಯವಾಗಿ ಪೂಮಲೆ ಕುಡಿಯರು ಸೇಂದಿ ಇಳಿಸುವ ಕಸುಬನ್ನು ಅವಲಂಬಿಸಿದ್ದಾರೆ. ತೇನ್‌ಮಲೆ ಕುಡಿಯರು ಹೆಸರೇ ಸೂಚಿಸುವಂತೆ ಜೇನು ಸಂಗ್ರಹ ಮತ್ತು ಮಾರಾಟವನ್ನು ತಮ್ಮ ಬದುಕಾಗಿಸಿಕೊಂಡಿದ್ದಾರೆ. ಅಡಿಕೆ ಕುಡಿಯರದು ಅಡಿಕೆ ಬೆಳೆದು ಮಾರಾಟ ಮಾಡುವುದೇ ಮುಖ್ಯ ಕಸುಬು. ಈ ರೀತಿ ವಿಭಿನ್ನ ಕುಲಕಸುಬನ್ನು ಹೊಂದಿದ್ದರೂ ಕೂಡ ಸಾಮಾನ್ಯವಾಗಿ ಕೊಡಗಿನಲ್ಲೇ ನೆಲೆಸಿರುವ ಕುಡಿಯರು ಸೇಂದಿ(ಬೊಳ್ಳೆಕಳ್ಳು) ಕಟ್ಟುವುದು ಮತ್ತು ಅದನ್ನು ಮಾರಾಟ ಮಾಡುವುದರ ಮೂಲಕ ತಮ್ಮ ಜೀವನ ನಿರ್ವಹಣೆ ಮಾಡುತ್ತಾರೆ. 'ಕುಡಿಯ' ಎಂಬ ಹೆಸರೇ ಸೂಚಿಸುವಂತೆ ಈ ಪದವು ಕುಡಿಯರ ಮೂಲ ವೃತ್ತಿಯೊಂದಿಗೆ ಸಂಬಂಧಿಸಿದೆ. ನಮ್ಮ ಸೃಷ್ಟಿಕರ್ತರಾದ ಶಿವ-ಪಾರ್ವತಿಯರೇ ನಮಗೆ ಕುಡಿಯ ಎಂಬ ಹೆಸರನ್ನು ಇಟ್ಟಿದ್ದಾರೆ ಮತ್ತು ನಮಗೆ ಬದುಕುವ ದಾರಿಯನ್ನು ಅವರೇ ಹೇಳಿಕೊಟ್ಟಿದ್ದಾರೆ. ಅವರ ಆದೇಶದಂತೆ ನಾವು ಬದುಕುತ್ತಿದ್ದೇವೆ ಎನ್ನುತ್ತಾರೆ. ಅದಕ್ಕೆ ಇವರು ತಮ್ಮ ಸೃಷ್ಟಿ ಪುರಾಣವನ್ನು ಉದಾಹರಣೆಯಾಗಿ ನೀಡುತ್ತಾರೆ.

'ಒಮ್ಮೆ ಶಿವ-ಪಾರ್ವತಿ ಭೂಲೋಕಕ್ಕೆ ವಿಹಾರಕ್ಕಾಗಿ ಬಂದ ಸಮಯದಲ್ಲಿ ಪಾರ್ವತಿಗೆ ದಾಹವಾಗಲು, ಶಿವ ತನ್ನ ತೊಡೆಯನ್ನು ಉಜ್ಜಿ ಬಂದ ಕೊಳೆಯಿಂದ ಮನುಷ್ಯನ ಆಕೃತಿಯೊಂದನ್ನು ಸೃಷ್ಟಿಸಿ, ಅದಕ್ಕೆ ಜೀವ ಕೊಟ್ಟು, 'ಭಗಿನಿ' ಮರವನ್ನು ಸೃಷ್ಟಿಸಿ ಆ ಮರದಿಂದ ಸೇಂದಿಯನ್ನು ಸಂಗ್ರಹಿಸುವುದನ್ನು ಹೇಳಿಕೊಟ್ಟನಂತೆ. ಅದರಂತೆ ಕುಡಿಯನು ಸಂಗ್ರಹಿಸಿ ತಂದ ಭಗಿನಿ ಮರದ ಹೆಂಡದಿಂದ ಪಾರ್ವತಿಯ ದಾಹ ಇಂಗಿಸುತ್ತಾನೆ. ಈ ರೀತಿ ಶಿವ ಪಾರ್ವತಿಯರಿಗೆ ಭಗಿನಿ ಮರದ ಹೆಂಡದಿಂದ ದಾಹ ತೀರಿಸಿದುದಕ್ಕಾಗಿ ಕುಡಿಯನಿಗೆ 'ನೀನು ಇನ್ನು ಮುಂದೆ ಇದೇ ಕಾಯಕ ಮಾಡಿ ಬದುಕು' ಎಂದು ಆಶೀರ್ವಾದಿಸುತ್ತಾರಂತೆ. ಅವನಿಗೆ ಜೊತೆಯಾಗಿ ಒಂದು ಹೆಣ್ಣು ಬೊಂಬೆಯನ್ನು ಸೃಷ್ಟಿ ಮಾಡಿದರಂತೆ. 'ಭಗಿನಿ' ಮರದ ಹೆಂಡ ಕುಡಿಸಿದ್ದಕ್ಕಾಗಿ ಶಿವ ಪಾರ್ವತಿಯರು ನಮ್ಮನ್ನು 'ಕುಡಿಯ' ಎಂದು ಕರೆದರು ಎಂದು ಹೇಳುತ್ತಾರೆ. ಇಂದಿಗೂ ಭಗಿನಿ ಮರದ ಹೆಂಡಕ್ಕೂ ಕುಡಿಯರಿಗೂ ಅವಿನಾಭಾವ ಸಂಬಂಧವಿದೆ. ಈ ಕತೆಯ ಮುಂದುವರಿಕೆಯಾಗಿ ಶಿವ ಪಾರ್ವತಿಯರು ಸ್ವಲ್ಪ ಕಾಲ ಭೂಮಿಯಲ್ಲೇ ಇರಲು ನಿರ್ಧರಿಸಿದರಂತೆ. ಒಂದು ದಿನ ಹೀಗೆ ಹೆಂಡ ಕುಡಿಯಲು ಶಿವನಿಗೆ ಮತ್ತೇರಿತಂತೆ. ಅಂತಹ ಸಂದರ್ಭದಲ್ಲಿ

ಶಿವನು ಪಾರ್ವತಿಗೆ ಹೊಡೆದು ಹೀನಾಮಾನ ಬೈಯ್ದನಂತೆ. ಇದರಿಂದ ನೊಂದ ಪಾರ್ವತಿಯು ತನ್ನ ಪತಿಯ ವರ್ತನೆಗೆ ಹಾಗೂ ತನ್ನ ಈ ಸ್ಥಿತಿಗೆ ಈ ಭಗಿನಿ ಮರದ ರಸವೇ ಕಾರಣವೆಂದು ಆರೋಪಿಸಿ ಶಪಿಸಿದಳಂತೆ. ತನ್ನ ಪತಿಗೆ ಇಂತಹ ಸ್ಥಿತಿಯಾದರೆ ಇನ್ನು ನರಮನುಷ್ಯರ ಪಾಡೇನೆಂದು ಯೋಚಿಸಿ 'ಭಗಿನಿ ಮರವು ಎತ್ತರಕ್ಕೆ ಬೆಳೆದು, ಅಮೃತ ಮೇಲೆ ಹೋಗಲಿ' ಅದು ಇತರರಿಗೆ ದೊರಕದಿರಲೆಂದು ಶಾಪ ನೀಡಿದಳು. ಅದಕ್ಕಾಗಿಯೇ ಅಂದು ಕುಳ್ಳಗಿದ್ದ ಭಗಿನಿ ಮರ ಇಂದು ಎತ್ತರವಾಗಿರುವುದು'[20] ಎನ್ನುತ್ತಾರೆ.

ಮತ್ತೊಂದು ಕತೆಯ ಪ್ರಕಾರ ಶಿವಪಾರ್ವತಿಯರು ನಾವು ಜಗತ್ತಿನಲ್ಲಿ ಸಕಲವನ್ನು ಸೃಷ್ಟಿಸಿದೆವು, ಆದರೆ ನಮ್ಮ ಮಕ್ಕಳೆಂದು ಯಾರನ್ನೂ ಸೃಷ್ಟಿಸಲಿಲ್ಲ ಎಂದುಕೊಂಡು ಮಲೆಯ ಮೇಲೆ ವಾಸ ಮಾಡುವ ಈ ಕುಡಿಯರನ್ನು ಸೃಷ್ಟಿಸಿದರು. ಅವರೇ ಈ ಕುಡಿಯರು. ಕುಡಿಯರ ಸಂತಾನ ಶಿವ ಪಾರ್ವತಿಯರ ಸಂತಾನ. ಕುಡಿ ಎಂದರೆ ತುದಿ. ಬೆಟ್ಟದ ತುದಿಯಲ್ಲಿ ವಾಸ ಮಾಡುವವರು ಕುಡಿಯರು. ಕಾಡಿನಲ್ಲೇ ಹುಟ್ಟಿ ಅಲ್ಲಿಯ ಅರಣ್ಯ ಉತ್ಪನ್ನಗಳನ್ನು ಬಳಸಿಕೊಂಡು ಜೀವನವನ್ನು ನಡೆಸುತ್ತಿದ್ದವರು. ಇನ್ನೊಂದು ಕತೆಯ ಪ್ರಕಾರ 'ದ್ವಾಪರ ಯುಗದಲ್ಲಿ ಪಾಂಡವರು ವನವಾಸಕ್ಕಾಗಿ ಮಲೆಕುಡಿಯರು ವಾಸಿಸುವ ಕಾಡಿಗೆ ಬಂದ ಸಂದರ್ಭದಲ್ಲಿ ಧರ್ಮರಾಯನು ಏಲಕ್ಕಿ ಗಿಡ ಮತ್ತು ಬೈನೆಮರವನ್ನು ದಯಪಾಲಿಸಿ ಅದರಿಂದ ನೀವು ಬದುಕಿಕೊಳ್ಳಿ ಎಂದನಂತೆ ಅಂದಿನಿಂದ ಏಲಕ್ಕಿ ಮತ್ತು ಬೈನೆ ಮರ ಅವರ ಬದುಕಿನ ಭಾಗವಾಗಿದೆ. ಈ ಮೇಲಿನ ಸಾಹಿತ್ಯದ ಪ್ರಕಾರ ನಾವು ಮುಖ್ಯವಾಗಿ ಬೈನೆ ಮರದ ಸೇಂದಿಯನ್ನು ಮಾರಾಟ ಮಾಡಿ ಬದುಕುವುದೇ ಅವರ ಮುಖ್ಯ ಕಾಯಕ ಎಂಬುದನ್ನು ತಿಳಿಯಬಹುದು.

**ಬೈನೆ ಮರದ ಸೇಂದಿ**

ಬೈನೆ ಮರದಿಂದ ಸೇಂದಿ ಇಳಿಸುವುದು ಪೂಮಲೆಕುಡಿಯರ ಮುಖ್ಯ ವೃತ್ತಿಯಾಗಿದೆ. ಬೈನೆ ಮರ ಸಾಮಾನ್ಯವಾಗಿ ಐವತ್ತು ಅಡಿಯವರೆಗೂ ಬೆಳೆಯುತ್ತದೆ. ವರ್ಷದ ಎಲ್ಲ ಕಾಲದಲ್ಲೂ ಸೇಂದಿ ದೊರೆಯುವುದರಿಂದ ಇವರ ಬದುಕಿಗೇನೂ ಕೊರತೆಯಿರುತ್ತಿರಲಿಲ್ಲ. ಆದರೆ ಮಳೆಗಾಲದಲ್ಲಿ ಸ್ವಲ್ಪ ಕಡಿಮೆ ಎಂದೇ ಹೇಳಬಹುದು. ಬೈನೆ ಮರ ಇಳುವರಿಗೆ ತಯಾರಾಗಿದೆ ಎಂದು ತಿಳಿದ ತಕ್ಷಣ ಮರದ ಬಳಿ ತೆರಳಿ ಮರದ ಬುಡಕ್ಕೆ ಅರಿಶಿನ ಕುಂಕುಮ ಊದು ಬತ್ತಿ ಹಚ್ಚಿ, ಮೊದಲಿಗೆ ತಮ್ಮಚ್ಚನಿಗೆ ಪೂಜಿಸಿ. ಮರ ಹತ್ತುತ್ತಾರೆ ಮರ ಹತ್ತಲು ಬಿದಿರಿನಿಂದ ತಯಾರಿಸಿದ ಏಣಿಯನ್ನು ಬಳಸುತ್ತಾರೆ. ಸೇಂದಿ ಕಟ್ಟುವುದು ಅತ್ಯಂತ ಸೂಕ್ಷ್ಮವಾದ ಕೆಲಸ. ಇದೊಂದು ವಿಶೇಷವಾದ ಕಲೆ. ಇದಕ್ಕಾಗಿ ಪನೆಕತ್ತಿಯನ್ನು ಬಳಸುತ್ತಾರೆ. ಮೊದಲ ಸಲ ಬೈನೆ ಮರದಿಂದ ಸೇಂದಿಯನ್ನು ಇಳಿಸಿದ ಮೇಲೆ ಅದರ ಬುಡದಲ್ಲಿ ಪೂಜೆ ಮಾಡಿ ಮಲೆತಮ್ಮಚ್ಚನಿಗೆ ಎಡೆ

ಇಡುತ್ತಾರೆ. ಅನಂತರ ಮನೆಯಲ್ಲಿರುವ ಮಕ್ಕಳು ವೃದ್ಧರಾದಿಯಾಗಿ ಎಲ್ಲರೂ ಸೇವಿಸುತ್ತಾರೆ. ಮುಂಜಾನೆಯಲ್ಲಿ ಇಳಿಸಿದ ಸೇಂದಿಯು ಸಿಹಿ ಮತ್ತು ಸ್ವಲ್ಪ ಹುಳಿ ಮಿಶ್ರಿತವಾಗಿದ್ದು ರುಚಿಯಾಗಿರುತ್ತದೆ. ಸಮಯ ಕಳೆಯುತ್ತಿದ್ದಂತೆ ಹುಳಿ ಹೆಚ್ಚಾಗಿ ಅಮಲು ಏರುತ್ತದೆ. ತಾಜಾ ಸೇಂದಿಗೆ ಬೇಡಿಕೆಯೂ ಹೆಚ್ಚು. ಹಿಂದೆ ವಿನಿಮಯ ಪದ್ಧತಿ ರೂಡಿಯಲ್ಲಿದ್ದ ಕಾಲದಲ್ಲಿ ಊರಿನ ಇತರೆ ಸಮುದಾಯದ ಜನರು ತಮ್ಮ ಬಳಿಯಲ್ಲಿದ್ದ ದವಸ ಧಾನ್ಯ ಇತ್ಯಾದಿಗಳನ್ನು ಕೊಟ್ಟು ಕುಡಿಯರಿಂದ ಸೇಂದಿಯನ್ನು ಕೊಂಡುಕೊಳ್ಳುತ್ತಿದ್ದರಂತೆ. ಇವರು ಸ್ವತಃ ಏನನ್ನೂ ಬೆಳೆಯುತ್ತಿರಲಿಲ್ಲ. ಬೈನೆಮರದ ಸೇಂದಿ ಮಾರಾಟ ಮಾಡುವುದರೊಂದಿಗೆ ಬೆಟ್ಟಗಳಲ್ಲಿ ಯಥೇಚ್ಛವಾಗಿ ತನ್ನಿಂದ ತಾನೆ ಬೆಳೆಯುವ ಏಲಕ್ಕಿಯನ್ನು ಕೊಯ್ದು ಮಾರಾಟ ಮಾಡಿ ಬದುಕುತ್ತಿದ್ದವರು. ಅನಂತರದಲ್ಲಿ ಕುಮರಿ ಬೇಸಾಯವನ್ನು ರೂಢಿಸಿಕೊಂಡು ಭತ್ತ ಇನ್ನಿತರ ದವಸ ಧಾನ್ಯ ಬೆಳೆಯಲು ಪ್ರಾರಂಭಿಸಿದರು. ಇತ್ತೀಚೆಗೆ ಕಾಫಿ, ಮೆಣಸು ಕೂಡ ಬೆಳೆಯುತ್ತಾರೆ.

ಕುಡಿಯರು ಮುಖ್ಯವಾಗಿ ಅವಲಂಬಿಸಿರುವ ಮತ್ತೊಂದು ಉಪಕಸುಬು ಯಾವುದೆಂದರೆ ಜೇನು ಕೊಯ್ಯುವುದು ಹಾಗೂ ಅದನ್ನು ಮಾರಾಟ ಮಾಡುವುದು. ಅದರಲ್ಲೂ ಜೇನುಮಲೆ ಕುಡಿಯರು (ತೇನ್‌ಮಲೆ ಕುಡಿಯರು) ಜೇನು ಕೊಯ್ಯುವುದರಲ್ಲಿ ಸಿದ್ಧಹಸ್ತರು. ದಟ್ಟಾರಣ್ಯದಲ್ಲಿ ಅದು ಎಂತದ್ದೇ ಜೇನಾಗಿರಲಿ ನಿರಾಯಾಸವಾಗಿ ಜೇನು ಕೀಳುವ ಕಲೆಯು ಅವರಿಗೆ ಪರಂಪರಾಗತವಾಗಿ ಸಿದ್ಧಿಸಿದೆ. ಮತ್ತೊಂದು ಪಂಗಡವಾದ ಅಡಿಕೆ ಕುಡಿಯರು ಅಡಿಕೆ ಬೆಳೆ ಬೆಳೆಯುತ್ತಾರೆ. ಇದರೊಂದಿಗೆ ಕಾಡಿನಲ್ಲಿ ದೊರೆಯುವ ಬಿದಿರು, ಬೆತ್ತದ ಉತ್ಪನ್ನಗಳಾದ ಮೊರ, ಕುಕ್ಕೆ, ಬುಟ್ಟಿ ಇತ್ಯಾದಿಗಳನ್ನು ಕಲಾತ್ಮಕವಾಗಿ ಸುಂದರವಾಗಿ, ಹೆಣೆದು ಮಾರಾಟ ಮಾಡಿ ಬಂದ ಅಲ್ಪಸ್ವಲ್ಪ ಆದಾಯದಲ್ಲಿ ಜೀವನ ಸಾಗಿಸುತ್ತಾರೆ.

ಆದರೆ ಇಂದು ಪರಿಸ್ಥಿತಿ ಸಂಪೂರ್ಣವಾಗಿ ಬದಲಾವಣೆಯಾಗಿದೆ. ಸರಕಾರ ಬೈನೆ ಮರದ ಸೇಂದಿಯನ್ನು ನಿಷೇಧಿಸಿದ ನಂತರ ತಮ್ಮ ಮೂಲ ಕಸುಬನ್ನೇ ಕಳೆದುಕೊಂಡಿದ್ದಾರೆ. ಬೈನೆ ಮರಕ್ಕೂ ತಮಗೂ ಇದ್ದ ಅವಿನಾಭಾವ ಸಂಬಂಧದ ಕೊಂಡಿ ಕಳಚುತ್ತಿದೆ. ಬೈನೆ ಮರದೊಂದಿಗೆ ಅದರೊಂದಿಗೆ ಸಮ್ಮಿಳಿತವಾಗಿದ್ದ ಮೌಖಿಕ ಸಾಹಿತ್ಯ, ಆಚರಣೆಗಳಿಗೂ ಕೂಡ ಕಳೆದುಹೋಗುತ್ತಿದೆ. ಕಾಡು, ಬೆಟ್ಟ, ಇಂದು ಇವರದ್ದಾಗಿ ಉಳಿದಿಲ್ಲ. ಬಲಿಷ್ಠರ ಭೂಮಿಯ ಅಕ್ರಮಣದ ವೇಗಕ್ಕೆ ಬೆರಗಾಗಿ ತಮ್ಮ ಅಂಗೈಯಗಲದ ಭೂಮಿ ಉಳಿಸಿಕೊಳ್ಳಲು ಹರಸಾಹಸ ಪಡುವಂತಾಗಿದೆ. ಕುಮರಿ ಬೇಸಾಯದ ಕಲ್ಪನೆಯೂ ಈಗ ಅಸಾಧ್ಯ. ಇರುವ ಅಲ್ಪ ಸ್ವಲ್ಪ ಜಮೀನಿನಲ್ಲಿ ಕಾಫಿ, ಏಲಕ್ಕಿ, ಅಡಿಕೆ, ಕರಿಮೆಣಸು ಬೆಳೆಯುತ್ತಾ ಅಲ್ಪ ಆದಾಯದಲ್ಲಿ ಬದುಕುತ್ತಿದ್ದಾರೆ. ಇವರು ರಾಸಾಯನಿಕಗಳನ್ನು ಬಳಸದೆ ನೈಸರ್ಗಿಕವಾಗಿ ಬೆಳೆಯುವ ಏಲಕ್ಕಿ, ಕಾಫಿಯನ್ನು

ಬಳಸುತ್ತಾರೆ. ಹೆಚ್ಚು ಮಳೆ ಬೀಳುವ ಪ್ರದೇಶದಲ್ಲಿ ಇವರು ವಾಸಿಸುವುದರಿಂದ ಇಳುವರಿಯೂ ಕಡಿಮೆ. ಇದ್ದುದರಲ್ಲೇ ಬದುಕು ಸಾಗಿಸುತ್ತಿದ್ದಾರೆ. ಇತ್ತೀಚೆಗೆ ಕಾಂಕ್ರೀಟು ಕಾಡುಗಳು ಹೆಚ್ಚಾಗಿ ಅಲ್ಪ ಸ್ವಲ್ಪ ಕಾಡು ಉಳಿದಿದೆ. ಕಾಡು ನಾಶವಾಗುತ್ತಿದ್ದಂತೆ ಜೇನು ಕೂಡ ಹಿಂದಿನಂತೆ ದೊರೆಯುತ್ತಿಲ್ಲ. ಸರಕಾರ ರಿಯಾಯತಿ ದರದಲ್ಲಿ ನೀಡುವ ಜೇನುಪೆಟ್ಟಿಗೆಗಳನ್ನು ಉಪಯೋಗಿಸಿ ಜೇನನ್ನು ಪೆಟ್ಟಿಗೆಯಲ್ಲಿ ಸಾಕಿ ಅದನ್ನು ಮಾರಾಟ ಮಾಡುತ್ತಾರೆ. ಇತ್ತೀಚೆಗೆ ಬದುಕಿಗಾಗಿ ಇತರೆ ಮಾಲೀಕರ ಕಾಫಿ ತೋಟದಲ್ಲಿ ಹಾಗೂ ಗದ್ದೆಗಳಲ್ಲಿ ಕೆಲಸ ಹುಡುಕಿಕೊಂಡು ಹೊರಟಿದ್ದಾರೆ. ಒಂದಷ್ಟು ಯುವಕರು ಪೇಟೆ ಕಡೆಗೂ ಮುಖ ಮಾಡಿದ್ದಾರೆ.

ಪಶುಸಂಗೋಪನೆ, ಹಂದಿಸಾಕಾಣಿಕೆ ಕೂಡ ಇವರ ಪ್ರಮುಖ ಉಪಕಸುಬುಗಳಲ್ಲಿ ಒಂದಾಗಿದೆ. ಸರಕಾರದ ಹಲವು ನೀತಿಗಳು ಅಮಾಯಕರಾದ, ನಿರುಪದ್ರವಿಗಳಾದ ಬುಡಕಟ್ಟುಗಳ ಜೀವನದ ಮೇಲೆ ಹಲವು ರೀತಿಯಲ್ಲಿ ಗದಾಪ್ರಹಾರವನ್ನು ಮಾಡುತ್ತಲೇ ಬಂದಿದೆ. ಮೊದಲಿಗೆ ಬೆಟ್ಟದ ಮೇಲಿದ್ದವರು ಅರಣ್ಯ ಸಂರಕ್ಷಣೆಯ ಹೆಸರಿನಲ್ಲಿ ಕಾಡಿನಿಂದ ಹೊರದಬ್ಬಲ್ಪಟ್ಟು ಊರಿಗೆ ಬಂದರು. ಕಾಡಿನಿಂದ ಬೈನೆ ಮರದ ಸೇಂದಿಯನ್ನು ಮಾರಾಟ ಮಾಡುತ್ತಾ ಬದುಕುತ್ತಿದ್ದವರ ಮೇಲೆ ಈ ಸೇಂದಿ ಮಾರಾಟವನ್ನು ನಿರ್ಬಂಧಿಸಿದ ನಂತರ ಅವರ ಮೂಲವೃತ್ತಿಯನ್ನು ನಾಶ ಮಾಡುವುದರ ಮೂಲಕ ಅವರ ಆದಾಯಕ್ಕೆ ಬದಲಿ ವ್ಯವಸ್ಥೆಯನ್ನು ಮಾಡುವಂತಹ ಯಾವ ಕ್ರಮವನ್ನೂ ಸರಕಾರ ತೆಗೆದುಕೊಳ್ಳಲಿಲ್ಲ. ಕಾಡಿನಲ್ಲಿ ಸ್ವತಂತ್ರವಾಗಿದ್ದವರು ಇಂದು ಕೂಲಿಯಾಳುಗಳಾಗಿ ಬದುಕುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ.

## 6.7. ಬುಡಕಟ್ಟುಗಳ ಮೌಖಿಕ ಸಾಹಿತ್ಯದಲ್ಲಿ ಪ್ರತಿರೋಧದ ಸ್ವರೂಪ

ಭೂಮಿಯ ಸೃಷ್ಟಿಯ ಕುರಿತ ಎರವರ ರಮ್ಯ ಕಲ್ಪನೆ ಇಂತಿದೆ. ಇವರು ಸೃಷ್ಟಿಯ ಮೂಲವನ್ನು ರೂಪಕದ ಮೂಲಕ ಹೇಳುತ್ತಾರೆ. ಇವರ ಪ್ರಕಾರ ಈ ಭೂಮಿ ಹುಟ್ಟಿದ್ದು ಮೇಲೋರಚ್ಚೆ ಮತ್ತು ಕಿಯೋರತ್ತಿ ಎಂಬ ದಂಪತಿಗಳಿಂದ ಮೇಲೋರಚ್ಚೆ ಅಂದರೆ ಮೇಲೆ ಒಬ್ಬ ಅಪ್ಪ ಅಂದರೆ ಆಕಾಶ ಮತ್ತು ಕೀಯೋರತ್ತಿ ಎಂದರೆ ಕೆಳಗೆ ಒಬ್ಬ ಅಮ್ಮ ಅಂದರೆ ಭೂಮಿ. ಇದು ಆಕಾಶ ಮತ್ತು ಭೂಮಿಯ ಪರಿಕಲ್ಪನೆ. ಈ ಭೂಮಿಯ ಸಕಲ ಜೀವರಾಶಿಗಳು ಹುಟ್ಟಿದ್ದು ಭೂಮಿ ಮತ್ತು ಆಕಾಶದಿಂದ ಎಂಬ ಇವರ ನಂಬಿಕೆ ವೈಜ್ಞಾನಿಕತೆಗೂ ಹತ್ತಿರವಾದದ್ದು.

ಪಂಜರಿ ಎರವರ ಚತ್ತವಂಡ ಪಾಟ್ ಕಾವ್ಯದ ನಾಯಕ ಕಾಲಚಿತ್ರಬಲಾಮಗ. ಈತ ಎರವರ ಭೂಮಿ ಹಕ್ಕಿಗಾಗಿ ಹೋರಾಟ ನಡೆಸಿ ಎರವರಿಗೆ ಭೂಮಿ ದೊರಕಿಸಿಕೊಟ್ಟ ಎರವರ ಪೌರಾಣಿಕ ನಾಯಕ. "ಕಾಲಚಿತ್ರ ಬಲಾಮಗನಿಗೆ ಎರವರು ವಿಶೇಷವಾದ ಗೌರವವನ್ನು

ಕೊಟ್ಟಿದ್ದಾರೆ. ತಮ್ಮ ಸಮುದಾಯದಲ್ಲಿ ಯಾವುದೇ ವ್ಯಕ್ತಿ ಸತ್ತರೂ ಪದಿಮೂಂಜು ( ಹನ್ನೆರಡನೇ ದಿನ ನಡೆಯುವ ಶ್ರಾದ್ಧ ಕ್ರಿಯೆಯಂದು) ದಿನದಂದು ಈತನಿಗೆ ನೂಕು ಕೂಳು (ಎಡೆ) ಇಡುವ ಪರಿಪಾಟವನ್ನು ಪಾಲಿಸಿಕೊಂಡು ಬಂದಿದ್ದಾರೆ. ಅಲ್ಲದೆ ತಾವು ಬೆಳೆದ ಮೊದಲನೇ ಬೆಳೆಯನ್ನು ಈತನಿಗೆ ಅರ್ಪಿಸುತ್ತಾರೆ.

ಎರವರ ಮೂಲಪುರುಷರಾದ ಆರ್ಯೆ ಬಾಣ್ಯೆಯರ ಕತೆಯಲ್ಲಿ ಕಾಲಚಿತ್ರ ಬಲಾಮಗನ ಪ್ರಸ್ತಾಪವಿದೆ. "ಊಡೆಕೂಣ ಆಣು ಜನಾಮು ಪೈನಾಟೇರಿ ಬಾವು......... ಹೀಗೆ ಸಾಗುವ ಹಾಡಿನಲ್ಲಿ " ಒಂದು ದಿನ ದೇವ ಪುರುಷರಾದ ಆರ್ಯೆ ಬಾಣ್ಯೆ ಸಹೋದರು ತಾವು ಸೃಷ್ಟಿಸಿದ ನೂರೆಂಟು ಕುಲ, ಹದಿನೆಂಟು ಜಾತಿಗಳನ್ನು ಕರೆದು 'ಪೈನಾಟೇರಿ ಬಾವು ಬೇಟೆ ಕರೀಮಗ' ಎಂಬುವವನ ಮನೆಯಲ್ಲಿ ಎಲ್ಲರನ್ನೂ ಸಭೆ ಸೇರಿಸಿ, ಅಲ್ಲಿ ನೆರೆದಿದ್ದ ಸರ್ವರಿಗೂ ಅವರು ಸ್ವತಂತ್ರವಾಗಿ ಬದುಕಲು ಅಂಗ್ಯೆ ಅಗಲ ಭೂಮಿಯನ್ನು ಅಳೆದು ಕೊಡುತ್ತಾರೆ. ಜೊತೆಗೆ ವ್ಯವಸಾಯ ಮಾಡಲು ದನಕರುಗಳು, ಬೆಳ್ಳಿ, ಬಂಗಾರವನ್ನೂ, ಭತ್ತ, ನವಣೆ, ಸಾಸುವೆ, ಹರಳುಗಳನ್ನು, ವ್ಯವಸಾಯಕ್ಕೆ ಬಿತ್ತನೆ ಬೀಜಗಳನ್ನು ನೀಡುತ್ತಾರೆ. ಜೊತೆಗೆ ಒಂದೆಡೆ ನೆಲೆ ನಿಂತು ಸಂಸಾರ ಮಾಡಲು ಬೇಕಾದ ಪಾತ್ರೆ ಪಗಡಗಳನ್ನು ನೀಡುತ್ತಾರೆ. ಬಂದವರೆಲ್ಲಾ ಆ ಎಲ್ಲಾ ವಸ್ತುಗಳನ್ನು ಪಡೆದು ಸಂತೃಪ್ತಿಯಿಂದ ಅವುಗಳನ್ನೆಲ್ಲಾ ಎತ್ತು, ಆನೆ ಕುದುರೆಗಳ ಮೇಲೆಲ್ಲಾ ಹೇರಿಕೊಂಡು ತಮ್ಮ ತಮ್ಮ ಮನೆಗೆ ತೆರಳುತ್ತಿರುತ್ತಾರೆ, ಆ ಸಮಯದಲ್ಲಿ ನೀರು ತರಲೆಂದು ಹೋಗಿದ್ದ ಕಾಲಚಿತ್ರಬಲಮಗನ ಹೆಂಡತಿ 'ಪೆರುಚುಂಡಿಲಿ' ಇದನ್ನು ನೋಡುತ್ತಾಳೆ. ತಕ್ಷಣ ಮನೆಗೆ ಓಡಿ ಬಂದು ಕಾಲೇಗುರು ಮನೆಯಲ್ಲಿ ಇದ್ಯಾವುದರ ಅರಿವಿಲ್ಲದೆ ಮಲಗಿದ್ದ ತನ್ನ ಗಂಡನನ್ನು ಎಬ್ಬಿಸಿ ಎಲ್ಲ ಜನರು ಬೆಳ್ಳಿ, ಬಂಗಾರ, ಹಣ, ದವಸ, ಧಾನ್ಯ, ದನಕರು, ಪಾತ್ರೆಪಗಡಗಳನ್ನು ಎತ್ತು, ಎಮ್ಮೆ, ಆನೆ, ಕುದುರೆಗಳ ಮೇಲೆ ಹೊರಲಾರದೆ ಹೊತ್ತು ಸಾಗಿಸುತ್ತಿದ್ದಾರೆ. ಆದರೆ ನೀನಿನ್ನೂ ಮಲಗಿದ್ದೀಯ, ಹೋಗು ನೀನು ಹೋಗಿ ಅದನ್ನೆಲ್ಲಾ ಪಡೆದುಕೊಂಡು ಬಾ ಎಂದು ಕಳಿಸುತ್ತಾಳೆ. ಗಾಬರಿಯಿಂದ ನಿದ್ದೆಯಿಂದ ಎದ್ದ ಕಾಲಚಿತ್ರಬಲಾಮಗನು ಮೈಮೇಲಿನ ಬಟ್ಟೆಯ ಅರಿವೂ ಇಲ್ಲದೆ 'ಪೈನಾಟೇರಿ ಬಾವು ಬೇಟೆ ಕರೀಮಗನನ ಮನೆಗೆ ಓಡಿ ಬರುತ್ತಾನೆ. ಬಂದು ಆರ್ಯೆ ಬಾಣ್ಯೆಯರ ಎದುರು ನಿಂತು ತಂಬೀಮಾರರೇ ನೀವು ಎಲ್ಲರಿಗೂ ಭೂಮಿಯನ್ನು ಬೆಳ್ಳಿ, ಬಂಗಾರ, ಹಣ, ದವಸ, ಧಾನ್ಯವನ್ನು, ದನಕರು, ಬಿತ್ತನೆ ಬೀಜ, ಪಾತ್ರೆ ಪಗಡಗಳನ್ನು ನೀಡಿದ್ದೀರ ಆದ್ದರಿಂದ ನನಗೂ ಒಂದು ಸೂಕ್ತ ಪಾಲು ಕೊಡಿ ಎಂದು ಕೇಳುತ್ತಾನೆ. ಅವನ ವೇಷ ಭೂಷಣವನ್ನು ಮತ್ತು ಅವನು ಕೇಳಿದ ರೀತಿಯನ್ನು ಕಂಡು ಕೋಪಗೊಂಡ ತಂಬೀರರು ಊರಿನವರಿಗೆಲ್ಲಾ ಅಳೆದು ಕೊಡುವಾಗ ನೀನು ಸತ್ತಿದ್ದೆಯೋ

ಕೆಟ್ಟಿದ್ದೆಯೋ: ಈಗ ಬಂದಿದ್ದೀಯ, ನಮ್ಮೆದುರು ನಿಲ್ಲದೆ ಹೊರಟು ಹೋಗು ಎಂದು ಗದರಿಸುತ್ತಾರೆ. ಇದರಿಂದ ಎಲ್ಲರೆದುರಿಗೆ ಅಪಮಾನಿತನಾದ ಕಾಲಚಿತ್ರಬಲಾಮಗನು ಬರಿಗೈಯಲ್ಲಿ ಹಿಂತಿರುಗುತ್ತಾನೆ. ತನಗೆ ಅಪಮಾನವೆಸಗಿ ಬರಿಗೈಯಲ್ಲಿ ಹಿಂತಿರುಗುವಂತೆ ಮಾಡಿದವರಿಗೆ ಸರಿಯಾಗಿ ಬುದ್ಧಿ ಕಲಿಸುತ್ತೇನೆಂದು ತೀರ್ಮಾನಿಸಿ ತಾನು ನಂಬಿದ್ದ ಕಾಲೇ ದೇವರಿಗೆ ಹರಕೆ ಮಾಡಿಕೊಳ್ಳುವ ಸಲುವಾಗಿ ಕಾಲೇ ಗುಡಿಯ ಬಳಿಗೆ ಓಡಿ ಬರುತ್ತಾನೆ. ಕಾಲೇ ದೇವರ ಬಳಿಯಲ್ಲಿ ಒಂದು ದಂಡಾಸ್ತ್ರವಿರುತ್ತದೆ ಇದನ್ನು ಕಾಲೇ ದಂಡು ಎಂದು ಕರೆಯುತ್ತಾರೆ. ಅದು ಅತ್ಯಂತ ಶಕ್ತಿಶಾಲಿಯಾದ ದಂಡವಾಗಿದ್ದು; ಏಳು ಆನೆಗಳ ಬಲವನ್ನು ಹೊಂದಿರುವಂತದ್ದು. ಆ ಕಾಲೇ ದಂಡವನ್ನು ಕೈಗೆತ್ತಿಕೊಂಡು ಹರಕೆ ಹೊತ್ತು ಚಂದ್ರನ ಎಡಗಣ್ಣಿಗೂ ಸೂರ್ಯನ ಬಲಗಣ್ಣಿಗೂ ಹೊಡೆದು ರಾತ್ರಿ ಹಗಲುಗಳನ್ನು ನಿಲ್ಲಿಸಿ ಬಿಡುತ್ತಾನೆ. ಇದರಿಂದ ಇಡೀ ಭೂಮಿಯೇ ತಟಸ್ಥಗೊಳ್ಳುತ್ತದೆ. ರಾತ್ರಿ, ಹಗಲುಗಳು ನಿಂತು ಹೋಗುತ್ತದೆ. ರಾತ್ರಿಯಲ್ಲಿ ಶಬ್ಧ ಮಾಡುವ ಕ್ರಿಮಿಕೀಟಗಳು ಶಬ್ಧ ಮಾಡುವುದನ್ನು ನಿಲ್ಲಿಸುತ್ತವೆ. ಹಗಲು ಹಾರಾಡುವ ಪ್ರಾಣಿಪಕ್ಷಿಗಳು, ಆಹಾರ ತಿನ್ನಲಾಗದೆ, ಮನುಷ್ಯರಿಗೆ ದಾರಿ ಕಾಣದೆ ಇಡೀ ಜಗತ್ತೇ ಸ್ಥಬ್ಧಗೊಳ್ಳುತ್ತದೆ. ಈ ಸೋಜಿಗವನ್ನು ಕಂಡು ಎಲ್ಲರೂ ದಿಗ್ಭ್ರಾಂತರಾಗುತ್ತಾರೆ. ಇದನ್ನು ಕಂಡು ಚಿಂತಿತರಾದ ಆರ್ಯೆ ಬಾಣ್ಯೆಯರು ಈ ಆಪತ್ತಿಗೆ ಕಾರಣವೇನೆಂದು ತಿಳಿಯಲು ಪಂಚಾಂಗವನ್ನು ತೆಗೆದು ನೋಡುತ್ತಾರೆ ಆದರೆ ಪಂಚಾಂಗದಲ್ಲಿ ಅವರಿಗೆ ಉತ್ತರ ಸಿಗುವುದಿಲ್ಲ. ಕೊನೆಗೆ ಕವಡೆ ಹಾಕಿ ಕಣಿ ಹೇಳುವ 'ಮಾಮಲೆ ಮುತ್ತಾಚಿ' ಎಂಬ ದೇವತೆಯ ಬಳಿಗೆ ತೆರಳುತ್ತಾರೆ. 'ಮಾಮಲೆ ಮುತ್ತಾಚಿ' ಸದಾ ಕೆಸರಿನಲ್ಲಿಯೇ ಇರುವ ದೇವತೆ. ತಂಬೀರರು ಅವಳ ಬಳಿಗೆ ಹೋದಾಗಲೂ ಕೂಡ ಆಕೆ ಕುತ್ತಿಗೆಯವರೆಗೆ ಕೆಸರಿನಲ್ಲಿ ಮುಳುಗಿರುತ್ತಾಳೆ. ಅವರು ಕೆಸರಿನ ದಡದಲ್ಲಿ ನಿಂತು ಆಕೆಯನ್ನು ಕರೆಯುತ್ತಾರೆ. ಅದಕ್ಕೆ ಆಕೆ "ನೀವು ಬಂದ ಕಾರಣ ನನಗೆ ತಿಳಿದಿದೆ. ನನ್ನ ಮೈಮೇಲೆ ಬಟ್ಟೆಯಿಲ್ಲ ನೀವು ಧರಿಸಿರುವ ತಲೆಯ ರುಮಾಲನ್ನು ಹೆಗಲ ಮೇಲಿರುವ ಬಟ್ಟೆಯನ್ನು ನನ್ನೆಡೆಗೆ ಹಾಕಿ ನನಗೆ ಬೆನ್ನು ಮಾಡಿ ನಿಂತುಕೊಳ್ಳಿ ನಾನು ಮೇಲೆ ಬರುತ್ತೇನೆ ಎನ್ನುತ್ತಾಳೆ. ಅಂತೆಯೇ ಅವರು ಬಟ್ಟೆಯನ್ನು ಬಿಸಾಡುತ್ತಾರೆ ಆಕೆ ಕೆಸರಿನಿಂದ ಎದ್ದು ಸ್ನಾನ ಮಾಡಿ ಅವರು ಕೊಟ್ಟ ಬಟ್ಟೆಯನ್ನು ತೊಟ್ಟು ಆಕೆ ಮೇಲಕ್ಕೆ ಬರುತ್ತಾಳೆ. ನಂತರ ಈ ಭೂಮಿಯ ತಟಸ್ಥತೆಗೆ ಕಾರಣ ಯಾರೂ ಎಂದು ತಿಳಿಯಲು ಕವಡೆ ಹಾಕಿ ನೋಡುತ್ತಾಳೆ ಆದರೆ ಆಕೆಗೆ ಅದರ ಕಾರಣಕರ್ತರು ಯಾರೆಂದು ತಿಳಿದು ಬರುವುದಿಲ್ಲ ಆಗ ಅವಳು ತಂಬೀರರೆ ನಿಮಗೆ ನಾಮಕರಣ ಮಾಡಿದ ಸಂದರ್ಭದಲ್ಲಿ ಜನರು ನಿಮಗೆ ಕಾಣಿಕೆಯಾಗಿ ನೀಡಿದ ಮೂಲೆ ಮೊರಗಳನ್ನು ನೀವು ಬಳಸದೆ ನಿಮ್ಮ ಮನೆಯ ಸೂರಿಗೆ ಕಟ್ಟಿ ನೇತು ಹಾಕಿದ್ದೀರಿ. ಅವು ಈಗ ಮಸಿ ಹಿಡಿದು ಕಪ್ಪಾಗಿದೆ. ಅವು ನನಗೀಗಲೇ ಬೇಕು ಎಂದು ಕೇಳುತ್ತಾಳೆ. ಅವರು ಅಂತೆಯೇ ತಂದು

ಕೊಡುತ್ತಾರೆ. ಅವಳು ಅದನ್ನು ಹಿಡಿದು ಹಾಡುತ್ತಾ ತೂಗಾಡಲು ಪ್ರಾರಂಭಿಸುತ್ತಾಳೆ. ಆಗ ಅವಳ ದಿವ್ಯ ದೃಷ್ಟಿಗೆ ಈ ಪರಿಸ್ಥಿತಿಗೆ ಕಾರಣನಾದ ವ್ಯಕ್ತಿ ಗೋಚರಿಸುತ್ತಾನೆ. ಆಗ ಅವಳು ತಂಬೀಮಾರರೇ ಈ ಪರಿಸ್ಥಿತಿಗೆ ಕಾರಣನಾದ ವ್ಯಕ್ತಿ ಅವಳ ಕಣ್ಣಿಗೆ ಗೋಚರಿಸುತ್ತಾನೆ. ಆಗ ಅವಳು ತಂಬೀಮಾರರನ್ನು ಕುರಿತು 'ನೀವು ಹದಿನೆಂಟು ಜಾತಿ ನೂರೆಂಟು ಕುಲದವರಿಗೆ ಭೂಮಿ, ಬೆಳ್ಳಿ, ಬಂಗಾರ ಹಣ, ದವಸ ಧಾನ್ಯವನ್ನು, ದನಕರು, ಬಿತ್ತನೆ ಬೀಜ, ಪಾತ್ರೆ ಪಗಡಗಳನ್ನು ಕೊಟ್ಟಿದ್ದೀರ ಆದರೆ ಅಲ್ಲಿಗೆ ತಡವಾಗಿ ಬಂದವನಿಗೆ ನೀವು ಏನನ್ನೂ ಕೊಡದೆ ಅವಮಾನಿಸಿ ಕಳುಹಿಸಿದ್ದೀರಿ. ಆತ ಬೇರಾರೂ ಅಲ್ಲ ಕಾಲೇ ಎಂಬ ದೇವರ ಭಕ್ತ. ಆತ ನೀವು ಮಾಡಿದ ಅವಮಾನದಿಂದಾಗಿ ಕುಪಿತನಾಗಿ ಕಾಲೇ ದೇವರ ಏಳು ಆನೆ ತೂಕದ ಮಂತ್ರ ದಂಡವನ್ನು ಸೂರ್ಯ ಚಂದ್ರರ ಮೇಲೆ ಪ್ರಯೋಗಿಸಿ ಅವರ ಚಲನೆಯನ್ನು ಸ್ಥಭ್ಧಗೊಳಿಸಿದ್ದಾನೆ ಎಂದು ವಿವರಿಸುತ್ತಾಳೆ. ಆಗ ತಂಬೀರರು ಇದಕ್ಕೆ ಪರಿಹಾರವನ್ನು ಕೇಳಿದಾಗ ನೀವು ಪುನಃ ಊರಿನ ಸಮಸ್ತರನ್ನು ಒಂದೆಡೆ ಸೇರಿಸಿ. ಅವನು ಕೇಳಿದ ಭೂಮಿಯನ್ನು ಬೆಳ್ಳಿ, ಬಂಗಾರ ಹಣ, ದವಸ ಧಾನ್ಯವನ್ನು, ದನಕರು, ಬಿತ್ತನೆ ಬೀಜ, ಪಾತ್ರೆ ಪಗಡಗಳನ್ನು ಕೊಟ್ಟರೆ ಅವನು ಇದೆಲ್ಲವನ್ನು ಮತ್ತೆ ಮೊದಲಿನಂತೆ ಮಾಡಬಲ್ಲ ಎನ್ನುತ್ತಾಳೆ. ಅಂತೆಯೇ ತಂಬೀರರು ಹದಿನೆಂಟು ಜಾತಿ, ನೂರೆಂಟು ಕುಲದವರನ್ನು ಒಂದೆಡೆ ಸೇರಿಸಿ ಕಾಲಚಿತ್ರನ ಇಚ್ಛೆಯಂತೆ ಭೂಮಿ, ಬೆಳ್ಳಿ ಬಂಗಾರ, ಹಣ, ದವಸ, ಧಾನ್ಯ ದನಕರು ಪಾತ್ರೆ ಪಗಡಗಳನ್ನು ಒಪ್ಪಿಸುತ್ತಾರೆ. ನಂತರ ಅಲ್ಲಿ ಸೇರಿದ ಸಮಸ್ತರನ್ನು ಉದ್ದೇಶಿಸಿ ಇನ್ನು ಮುಂದೆ ಈ ಹದಿನೆಂಟು ಜಾತಿ, ನೂರೆಂಟು ಕುಲದವರು ಮಾಡುವ ಆದಿ ಪೂಜೆಯನ್ನು ಕಾಲಚಿತ್ರ ಬಲಾಮಗನಿಗೆ ಸಲ್ಲಿಸಬೇಕು. ಮುಂಗಾರಿನ ಪೊನ್ನಾರು (ಹೊನ್ನಾರು) ಉಳುಮೆಯನ್ನು ಹಾಗೂ ಮುಂಗಾರು ಮಳೆಯಲ್ಲಿ ಬಿಟ್ಟ ಮೊದಲ ಬೂದಿ ಕುಂಬಳವನ್ನು ಕಾಲಚಿತ್ರ ಬಲಾಮಗನಿಗೆ ಅರ್ಪಿಸಬೇಕು ಎಂದು ಆಜ್ಞೆಯನ್ನು ಮಾಡುತ್ತಾರೆ. ಇದರಿಂದ ಸಂತೃಪ್ತಿಗೊಂಡ ಕಾಲಚಿತ್ರನು ಸೂರ್ಯ ಚಂದ್ರರ ಮೇಲೆ ಮಾಡಿದ್ದ ಕಾಲೇ ದಂಡವನ್ನು ಹಿಂತೆಗದುಕೊಳ್ಳುತ್ತಾನೆ. ಸೂರ್ಯ ಚಂದ್ರರು ಮತ್ತೆ ಮೊದಲಿನಂತೆ ಬೆಳಗಲು ಪ್ರಾರಂಭಿಸುತ್ತಾರೆ. ನಂತರ ಪ್ರಾಣಿ ಪಕ್ಷಿ ಕ್ರಿಮಿ ಕೀಟಗಳು ಮೊದಲಿನಂತೆ ತಮ್ಮ ಕೆಲಸದಲ್ಲಿ ನಿಂತರಾದವಂತೆ. ಇಲ್ಲಿ ಭೂಮಿ, ಭತ್ತದ ಬೀಜ, ದನ ಇವು ಬೇಸಾಯದ ಸಂಕೇತ. ಅಂದರೆ ಹಿಂದೆ ಸಮೃದ್ಧರಾದ ಕಾಡಿನಲ್ಲಿ ಕುಮರಿ ಬೇಸಾಯ ಕ್ರಮದ ಮೂಲಕ ವ್ಯವಸಾಯವನ್ನು ಮಾಡಿಕೊಂಡು ಬದುಕುತ್ತಿದ್ದ ಸಮುದಾಯ ಇದಾಗಿತ್ತು. ಆದರೆ ಕಾಲಾಂತರದಲ್ಲಿ ತಮ್ಮ ಭೂಮಿಯಲ್ಲಿ ತಾವೇ ಗುಲಾಮರಾಗಿ ಬದುಕಬೇಕಾದ ದುಃಸ್ಥಿತಿ ಎದುರಿಸಬೇಕಾಗಿ ಬಂದವರು ಇವರು. ಇಲ್ಲಿ ತಂಬೀರ ಭೂಮಾಲೀಕನಾಗಿರಬಹುದು, ಇಲ್ಲವೇ ರಾಜನಾಗಿರಬಹುದು. ಸಮೃದ್ಧ ಕಾಡಿನಲ್ಲಿ ಲಗ್ಗೆಯಿಟ್ಟು ಎಲ್ಲವನ್ನೂ ವಶಪಡಿಸಿಕೊಂಡ ಬಲಾಢ್ಯರು ಕಾಡಿನ ಮೇಲೆ

ತಮ್ಮ ಹಕ್ಕು ಸ್ಥಾಪಿಸಿಕೊಂಟು ಈ ಸಮುದಾಯವನ್ನೇ ಅಲ್ಲಿ ನಗಣ್ಯರನ್ನಾಗಿ ಮಾಡಿದ ಸಂಧರ್ಭದಲ್ಲಿ ಇವರಲ್ಲಿ ಒಬ್ಬ ತನ್ನ ಸಮುದಾಯ ಪರವಾಗಿ ಹೋರಾಡಿ ಪ್ರತಿಭಟಿಸಿ ಭೂಮಿಯನ್ನು ಪಡೆದಿರಬಹುದು ಕತೆಯೇ ಈ ಕಾಲಚಿತ್ರ ಬಲಾಮಗನ ಕತೆ. ಆತನೇ ಕಾಲಚಿತ್ರ ಬಲಾಮಗ ತಂಬೀರರಿಂದ ಅಪಮಾನಿತನಾಗಿ ಹಿಂತಿರುಗಿದ ಕಾಲಚಿತ್ರನು ತಮ್ಮ ಗುಂಪಿನೊಂದಿಗೆ ಸೇರಿ ಇತರರ ಕೃಷಿ ಬೆಳೆಗಳ ಮೇಲೆ ದಾಳಿ ಮಾಡಿ ಹಾನಿ ಮಾಡಿದ್ದಿರಬಹುದು ಮತ್ತು ಹಲವು ರೀತಿಯ ಉಪಟಳವನ್ನು ಕೊಟ್ಟಿರುವ ಕಾರಣದಿಂದ ಬೇಸತ್ತಾ ತಂಬೀರರು ಮತ್ತೆ ಕಾಲಚಿತ್ರನೊಡನೆ ಅವರ ಸಮುದಾಯವನ್ನೆಲ್ಲಾ ಕರೆದು ಕೃಷಿಗೆ ಬೇಕಾದ ಭೂಮಿ ಇತ್ಯಾದಿ ಕೊಟ್ಟು ಸಮಾಧಾನ ಪಡಿಸಿರಬಹುದು ಎಂಬುದು ಜನಪದರ ಊಹೆಯಾಗಿದೆ.

ಮತ್ತೊಂದು ಕತೆಯಲ್ಲಿ ತಂಬೀರರಿಂದ ಅವಮಾನಿತನಾದ ಕಾಲಚಿತ್ರನು ತನ್ನ ಮನೆಗೆ ಹಿಂತಿರುಗುತ್ತಾನೆ. ನಂತರ ತನ್ನ ಸಹಚರರೊಂದಿಗೆ ಕಾಡನ್ನು ಕಡಿದು ವ್ಯವಸಾಯ ಯೋಗ್ಯವನ್ನಾಗಿ ಮಾಡಿ ಅದನ್ನು ತನ್ನ ಸಮುದಾಯಕ್ಕೆಲ್ಲಾ ಹಂಚಿದನಂತೆ. ಈ ರೀತಿ ಭೂಮಿ ಪಡೆದ ಎರವರು ಸ್ವಾವಲಂಬಿಗಳಾಗಿ ಕೃಷಿ ಮಾಡುತ್ತಾ ಬದುಕಲು ಪ್ರಾರಂಭಿಸುತ್ತಾರೆ. ಆ ಕಾರಣದಿಂದ ಭೂಮಿಯಿಂದಲೂ ಸಕಲ ವಸ್ತುಗಳಿಂದಲೂ ವಂಚಿತರಾಗಿದ್ದ ಎರವರಿಗೆ ಭೂಮಿಯನ್ನು ಗೌರವವನ್ನೂ ದೊರಕಿಸಿಕೊಟ್ಟವನು ಎಂಬ ಕಾರಣಕ್ಕೆ ಭಕ್ತಿಯಿಂದ ಗೌರವದಿಂದ ಈತನಿಗೆ ಎರವರು ಇಂದಿಗೂ ನಡೆದುಕೊಳ್ಳುತ್ತಾರೆ. ಈತನನ್ನು ಸೂತಕದ ದೇವರು ಎಂದೂ ಕೂಡ ಕರೆಯುತ್ತಾರೆ. ಎರವ ಸಮುದಾಯಲ್ಲಿ ಯಾರಾದರೂ ಸತ್ತರೆ ತಿಥಿಯ ಸಮಯದಲ್ಲಿ ಈತನಿಗೆ ಎಡೆಯಿಟ್ಟು ಸೂತಕವನ್ನು ಕಳೆಯುತ್ತಾರೆ. ಹಾಗೆಯೇ ಬಾಣಂತಿ ಸೂತಕವನ್ನು ಕಳೆಯಲು ಮಗು ಹುಟ್ಟಿದ ಹನ್ನೊಂದನೆ ದಿನ ಮಾಂಸದ ಅಡುಗೆ ಮಾಡಿ ಹೂವು ಹಣ್ಣು ದೀಪ ಧೂಪ ಹಚ್ಚಿ ಕಾಲಚಿತ್ರ ಬಲಾಮಗನಿಗೆ ಎಡೆ ಇಟ್ಟು ಸೂಕ ಕಳೆಯುತ್ತಾರೆ.

**ಬೆಟ್ಟಕುರುಬರ ಪ್ರತಿರೋಧದ ಸ್ವರೂಪವಾಗಿ ಕುಂಡೆ ಹಬ್ಬ** : ದಕ್ಷಿಣ ಕೊಡಗಿನಲ್ಲಿ ಆಚರಿಸಲ್ಪಡುವ ಬುಡಕಟ್ಟುಗಳ ಒಂದು ವಿಶೇಷವಾದ ಹಬ್ಬ ಕುಂಡೆ ಹಬ್ಬ ಎಂದೇ ಪ್ರಸಿದ್ಧವಾದ ಬೇಡು ಹಬ್ಬ. ಈ ಹಬ್ಬವು ಮುಖ್ಯವಾಗಿ ಭದ್ರಕಾಳಿ ಹಾಗೂ ಅಯ್ಯಪ್ಪ ದೇವರಿಗೆ ಸಂಬಂದಿಸಿದ್ದು. ಆದರೆ ವರ್ಷಕ್ಕೊಮ್ಮೆ ಮಾಲಾವೃತಧಾರಿಗಳು ಪೂಜಿಸುವ ಕೇರಳದ ಅಯ್ಯಪ್ಪನಿಗೂ ಈ ಅಯ್ಯಪ್ಪನಿಗೂ ಯಾವುದೇ ಸಂಬಂಧವಿಲ್ಲ.

ಈ ಹಬ್ಬವನ್ನು ದಕ್ಷಿಣ ಕೊಡಗಿನ ಎಲ್ಲಾ ಬುಡಕಟ್ಟುಗಳು ಒಟ್ಟಾಗಿ ಸೇರಿ ಆಚರಿಸುತ್ತಾರೆ. ಮುಖ್ಯವಾಗಿ ಬೆಟ್ಟಕುರುಬರು, ಜೇನುಕುರುಬರು, ಎರವರು ಭಾಗವಹಿಸುತ್ತಾರೆ. ಬುಡಕಟ್ಟು

ಭಾಷೆಯಲ್ಲಿ ಕುಂಡಿ ಎಂದರೆ ಪೃಷ್ಠ ಎಂದು ಅರ್ಥ. ಬುಡಕಟ್ಟುಗಳಲ್ಲಿ ಈ ಹಬ್ಬವನ್ನು ಕುರಿತಂತೆ ಒಂದು ಸ್ವಾರಸ್ಯಕರವಾದ ಕತೆಯಿದೆ.

ಒಂದು ಬಾರಿ ಸ್ಥಳೀಯ ಮೇಲ್ಜಾತಿಯ ಭೂಮಾಲಿಕನಾದ ಅಯ್ಯಪ್ಪ ಎಂಬ ವ್ಯಕ್ತಿ ಬೇಟೆಯಾಡುವ ಸಲುವಾಗಿ ತನ್ನ ಸೇವಕ(ಗುಲಾಮ)ರಾದ ಬುಡಕಟ್ಟು ಯುವಕರೊಂದಿಗೆ ಕುದುರೆ ಹತ್ತಿ ಕಾಡಿಗೆ ಹೋಗುತ್ತಾನಂತೆ; ಆ ಸಮಯದಲ್ಲಿ ಬುಡಕಟ್ಟು ಹೆಣ್ಣು ಮಗಳಾದ ಭದ್ರಕಾಳಿಯನ್ನು ಕಾಡಿನಲ್ಲಿ ಭೇಟಿಯಾಗಿ ಅವಳ ಸೌಂದರ್ಯಕ್ಕೆ ಮಾರು ಹೋಗಿ ಅವಳೊಂದಿಗೆ ಕಾಡಿನಲ್ಲಿ ಮರೆಯಾಗುತ್ತಾನೆ. ಒಡೆಯನನ್ನು ಕಾಣದ ಅವನ ಜೊತೆಗಾರರು ಅವನನ್ನು ಕಾಡಿನಲ್ಲಿ ಹುಡುಕಿ ಹುಡುಕಿ ಬಸವಳಿಯುತ್ತಾರೆ. ಕೊನೆಗೆ ತನ್ನನ್ನು ಹುಡುಕಿಕೊಂಡು ಬಂದ ತನ್ನ ಜೊತೆಗಾರರನ್ನು ಕಂಡ ಒಡೆಯನು ಭದ್ರಕಾಳಿಯೊಂದಿಗೆ ಓಡಿ ಮರೆಯಾಗುತ್ತಾನೆ. ಆ ಸಮಯದಲ್ಲಿ ಅವನ ನಗ್ನ ಹಿಂಭಾಗವನ್ನು ಕಂಡವರು ತಮ್ಮ ಒಡೆಯನನ್ನು ಒಲಿಸಿಕೊಂಡು ತಮ್ಮನ್ನು ಕಾಡಿನಲ್ಲಿ ಅಲೆದಾಡಿಸುವಂತೆ ಮಾಡಿದ ಕಾರಣಕ್ಕಾಗಿ ಭದ್ರಕಾಳಿಯನ್ನು ಅವಾಚ್ಯವಾಗಿ ಬಯ್ಯಲು ಪ್ರಾರಂಭಿಸುತ್ತಾರೆ. ಬುಡಕಟ್ಟುಗಳ ಬಾಯಲ್ಲಿ ಹಾಗು ಸ್ಥಳೀಯರಲ್ಲಿ ಈ ಹಬ್ಬ ಇಂದಿಗೂ ಕುಂಡೆ ಹಬ್ಬ ಎಂದೇ ಪ್ರಸಿದ್ಧಿ. ಅದರ ನೆನಪಾಗಿ ಪ್ರತಿವರ್ಷದ ಮೇ ತಿಂಗಳಿನಲ್ಲಿ ಈ ಬಯ್ಗುಳ ಹಬ್ಬವನ್ನು ಆಚರಿಸುತ್ತಾರೆ. ಇದು ಪ್ರತೀತಿಯಲ್ಲಿರುವ ಒಂದು ಐತಿಹ್ಯ.

ಬೆಟ್ಟಕುರುಬರು ಬಿದಿರಿನ ವಸ್ತುಗಳನ್ನು ತಯಾರಿಸುವುದರಲ್ಲಿ ಸಹಜವಾಗಿ ನಿಪುಣರು. ಈ ಹಬ್ಬಕ್ಕೆ ಮುಖ್ಯವಾಗಿ ಬೇಕಾದ ಬಿದಿರಿನ ಕುದುರೆಯನ್ನು ತಯಾರಿಸಿ ಅದನ್ನು ತಮ್ಮ ಹಾಡಿಯ ಅಂಬಾಲದಲ್ಲಿ ಗಾಳಿ ಮಳೆಯಿಂದ ಸಂರಂಕ್ಷಿಸಿಟ್ಟಿರುತ್ತಾರೆ. ಪ್ರತಿ ವರ್ಷ ಕುಂಡೆ ಹಬ್ಬದಂದು ಅದನ್ನು ಹೊರತೆಗೆದು ಶುಭ್ರಗೊಳಿಸಿ ತಾವೂ ಸ್ನಾನ ಮಾಡಿ ಶುಭ್ರರಾಗಿ ದೇವಾಲಯಕ್ಕೆ ತೆಗೆದುಕೊಂಡು ಬರುತ್ತಾರೆ. ಅದಕ್ಕೆ ತಕ್ಕನಾದ ಸಿಂಗಾರವನ್ನೆಲ್ಲಾ ಮಾಡುತ್ತಾರೆ ಆ ಸಮಯದಲ್ಲಿ ಹರಕೆಯನ್ನು ಹೊತ್ತಂತ ಸ್ಥಳೀಯ ಭೂಮಾಲೀಕರಾದ ಕೊಡವರು ಮತ್ತು ಇತರೆ ಮೇಲ್ವರ್ಗದವರು ಬಿದಿರಿನ ಕುದುರೆಯನ್ನು ಏರಿ ವಾದ್ಯದ ಮೇಳಕ್ಕೆ ಕುಣಿಯುತ್ತಾರೆ. ಹಬ್ಬನ ನಂತರ ಮತ್ತೆ ಬೆಟ್ಟಕುರುಬರು ವಿಧಿವತ್ತಾಗಿ ಬಿದಿರಿನ ಕುದುರೆಯನ್ನು ತಮ್ಮ ಹಾಡಿಗೆ ತೆಗೆದುಕೊಂಡು ಹೋಗಿ ಅಂಬಾಲದಲ್ಲಿ ಮುಂದಿನ ವರ್ಷದ ಹಬ್ಬಕ್ಕಾಗಿ ಕಾಪಿಡುತ್ತಾರೆ.

ಈ ವಿಶೇಷವಾದ ಹಬ್ಬಕ್ಕೆ ಹಲವು ಆಯಾಮಗಳಿವೆ ಹಲವು ನಂಬಿಕೆಗಳಿವೆ, ಊಹೆಗಳಿವೆ,

1. ಕೊಡಗಿನ ಈ ಭಾಗದ ಬುಡಕಟ್ಟುಗಳು ಕೃಷಿ ಮತ್ತು ಕಾಫಿ ತೋಟದಲ್ಲಿ ಕೂಲಿಕಾರ್ಮಿಕರಾಗಿ ಜೀತಗಾರರಾಗಿ ಬದುಕುತ್ತಿದ್ದವರು ನಿರಂತರವಾದ ಬಡತನ, ಕಾಡಿನಿಂದ ಹೊರಬಂದು

ಎಲ್ಲವನ್ನೂ ಕಳೆದುಕೊಂಡ ನೋವು, ಅಸಹಾಯಕತೆಯಿಂದ ಬೇಸತ್ತ ಈ ಸಮುದಾಯಗಳು ಪ್ರತಿ ವರ್ಷ ನಡೆಯುವ ಈ ಹಬ್ಬದಲ್ಲಿ ಚಿತ್ರ ವಿಚಿತ್ರ ವೇಷ ಧರಿಸಿ ಕುಡಿದು ಅವಾಚ್ಯವಾಗಿ ತನ್ನ ಮೇಲಿನ ದೌರ್ಜನ್ಯಕ್ಕೆ ಕಾರಣರಾದವನ್ನೂ ಬಯ್ಯುವ ಮೂಲಕ ಸಂತೃಪ್ತಿಯನ್ನು ಪಡೆಯುತ್ತಾರೆ. ಅಂದು ಅವರನ್ನು ತಡೆಯುವವರು ಯಾರೂ ಇಲ್ಲ ಮೂರು ದಿನಗಳ ಕಾಲ ಈ ಹಬ್ಬ ನಡೆಯುತ್ತದೆ. ಹಬ್ಬ ಮುಗಿದ ಮಾರನೆಯ ದಿನ ಅವರ ಜೀವನ ಯಥಾಸ್ಥಿತಿಯಲ್ಲಿ ಮುಂದುವರೆಯುತ್ತದೆ.

2. ಬುಡಕಟ್ಟು ಹೆಣ್ಣು ಮಗಳಾದ ಭದ್ರಕಾಳಿಯ ಮೇಲೆ ಅಯ್ಯಪ್ಪ ದೌರ್ಜನ್ಯ ಎಸಗಿದ ಕಾರಣಕ್ಕಾಗಿ ಧಣಿಯನ್ನು ನೇರವಾಗಿ ಬಯ್ಯಲಾಗದ ಬುಡಕಟ್ಟುಗಳು ತಮ್ಮ ಹೆಣ್ಣು ಮಗಳನ್ನು ಬಯ್ಯುವ ನೆಪದಲ್ಲಿ ತಮ್ಮ ಕೋಪವನ್ನು ತೀರಿಸಿಕೊಳ್ಳುತ್ತಿರಬಹುದು ಎಂಬುದು ಒಂದು ಅಭಿಪ್ರಾಯ. ಏಕೆಂದರೆ ತಮ್ಮನ್ನು ಕಾಡಿನಲ್ಲಿ ಅಲೆದಾಡಿಸಲು ಕಾರಣಳಾದ ಭದ್ರಕಾಳಿಯ ಮೇಲೆ ಕೋಪವಿದ್ದಾಗ ಅವಳ ನೆನಪಿಗಾಗಿ ಪೂಜೆ ಸಲ್ಲಿಸುವ ಈ ಪರಿಪಾಟ ಹೇಗೆ ಪ್ರಾರಂಭವಾಯಿತು ಎಂಬುದು ಇಲ್ಲಿ ಪ್ರಶ್ನೆಯಾಗುತ್ತದೆ. ಇಲ್ಲಿ ಪ್ರತೀ ವರ್ಷ ಭದ್ರಕಾಳಿಗೆ ವಿಶೇಷ ಪೂಜೆ ಸಲ್ಲುತ್ತದೆ.

3. ಈ ಹಬ್ಬದ ಸಮಯದಲ್ಲಿ ಹೆಂಗಸರು ವೇಷ ಧರಿಸುವಂತಿಲ್ಲ. ಗಂಡಸರು ಹೆಣ್ಣು ಮಕ್ಕಳ ಒಳ ಉಡುಪುಗಳನ್ನು ಧರಿಸಿ. ಹೆಣ್ಣಿನ ನಗ್ನತೆಯನ್ನು ಪ್ರದರ್ಶಿಸುವ ಮೂಲಕ. ಹೆಣ್ಣಿನ ಅಂಗಾಂಗಳ ವರ್ಣನೆಯನ್ನು ಮಾಡುತ್ತಾರೆ. ಭದ್ರಕಾಳಿಯ ಮೇಲಿನ ಮೋಹದಿಂದ ಅವಳನ್ನು ಪಡೆಯುವ ಮಾಲಿಕನನ್ನು ಅಪಹಾಸ್ಯ ಮಾಡುತ್ತಾರೆ. ಮಾಲಿಕರ ಎದುರಿಗೆ ಈ ಸಮುದಾಯದ ಗಂಡಸರು ವೇಷ ಧರಿಸಿ ಆತನ ಅಂಗಾಂಗಗಳನ್ನು ವರ್ಣಿಸುವ ಮೂಲಕ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸುವಂತೆ ಈ ಹಬ್ಬ ನಮಗೆ ತೋರಿ ಬರುತ್ತದೆ. ವೇಷ ಧರಿಸಿದ ಬುಡಕಟ್ಟುಗಳಿಗೆ ಮೊದಲನೆ ಭಿಕ್ಷೆ ತಮ್ಮ ಒಡೆಯರ ಮನೆಯಿಂದಲೇ ಪ್ರಾರಂಭ. ಅಲ್ಲಿಂದ ಅವರು ಪಾಲಿಬೆಟ್ಟ, ಗೋಣಿಕೊಪ್ಪ, ತಿತಿಮತಿ, ಪೊನ್ನಂಪೇಟೆ ಭಾಗದಲ್ಲಿ ಮನೆ ಮನೆ ಪೇಟೆ ಸುತ್ತಿ ಹಣ ಅಥವಾ ಅಕ್ಕಿಯ ರೂಪದಲ್ಲಿ ಭಿಕ್ಷೆ ಸ್ವೀಕರಿಸಿ. ಕೊನೆಯ ದಿನ ಭದ್ರಕಾಳಿ ದೇವಾಲಯಕ್ಕೆ ತೆರಳುತ್ತಾರೆ. ಇಲ್ಲಿಯ ಭೂಮಾಲೀಕರು ಕೂಡ ಮೊದಲನೆ ಭಿಕ್ಷೆ ನೀಡುವುದರ ಮೂಲಕ ಉಚಿತ ರೀತಿಯಲ್ಲಿ ಅವರನ್ನು ಸತ್ಕರಿಸುತ್ತಾರೆ. ಅಂದು ಅವರಿಗೆ ಪೂರ್ತಿ ಸ್ವಾತಂತ್ರ್ಯವಿರುತ್ತದೆ.

**ಜೇನುಕುರುಬರಲ್ಲಿ ಪ್ರತಿರೋಧದ ಸ್ವರೂಪ ಬುಂಡೆ ಕರೆಯುವ ಆಚರಣೆ**

ಬುಂಡೆ ಕರೆಯುವುದು ಜೇನುಕುರುಬರ ಅತಿಮಾನುಶ ನಂಬಿಕೆಗಳ ಆಚರಣೆಗಳ ಭಾಗವಾಗಿದೆ. ಈ ಸಮುದಾಯದಲ್ಲಿ ಯಾರಿಗಾದರು ತೊಂದರೆ ಎದುರಾದರೆ ಮಾನಸಿಕ ಅಥವಾ ದೈಹಿಕ

ಅಸುಖ ಉಂಟಾದಾಗ, ಸಮುದಾಯಕ್ಕೆ ಏನಾದರೂ ಸಮಸ್ಯೆ ಉಂಟಾದಾಗ ಗುಡ್ಡಪ್ಪನನ್ನು ಕರೆಸಿ ಬುಂಡೆ ಆಡಿಸುವುದರ ಮೂಲಕ ತಮ್ಮ ಹಿರಿಯರ ಆತ್ಮಗಳನ್ನು ಕರೆಸಿ ನಡೆಸುವ ಸಂವಾದದ ರೂಪದ ಆಚರಣೆ.

ಬುಂಡೆ ಕರೆಸಬೇಕಾದರೆ ಅದಕ್ಕೆ ಅದರದ್ದೇ ಆದ ವಿಧಿ ನಿಯಮಗಳಿವೆ, ನಂಬಿಕೆಗಳಿವೆ, ಸಮುದಾಯವು ಅದನ್ನು ಬಹಳ ಗೌರವಿಸುತ್ತದೆ. ಇಂದಿಗೂ ಜೇನುಕುರುಬರ ಹಾಡಿಯಲ್ಲಿ ಯಾರಿಗಾದರೂ ಮೈ ಹುಷಾರಿಲ್ಲದಿದ್ದರೂ ಕೂಡ ಮೊದಲು ಗುಡ್ಡಪ್ಪನನ್ನು ಕರೆಯಿಸಿ ಬುಂಡೆ ಕರೆಯಿಸುತ್ತಾರೆ. ಗುಡ್ಡಪ್ಪ ಒಂದು ರೀತಿಯಲ್ಲಿ ಸಮುದಾಯದ ವೈದ್ಯನೂ ಆಗಿರುತ್ತಾನೆ. ಸಣ್ಣ ಪುಟ್ಟ ಕಾಯಿಲೆ ಅನಾರೋಗ್ಯವಾದರೆ ತಾನೇ ಹಸಿರೌಷಧಿಯನ್ನು ನೀಡಿ ವಾಸಿ ಮಾಡಬಲ್ಲಷ್ಟು ಗಿಡ ಮೂಲಿಕೆಗಳ ಪರಿಚಯ ಆತನಿಗಿರುತ್ತದೆ. ಒಂದು ವೇಳೆ ತನ್ನಿಂದ ಸಾಧ್ಯವಿಲ್ಲವಾದರೆ ಆತನೇ ಆಸ್ಪತ್ರೆಗೆ ಕರೆದೊಯ್ಯುವ ಸಲಹೆ ನೀಡುತ್ತಾನೆ.ಆತನಿಂದ ಅನುಮತಿ ದೊರೆತ ನಂತರವೇ ಅವರು ಆಸ್ಪತ್ರೆಗೆ ಕರೆದೊಯ್ಯುತ್ತಾರೆ.

ಅರಣ್ಯ ರಕ್ಷಣೆಯ ಹೆಸರಲ್ಲಿ ಕಾಡಿಗೆ ಲಗ್ಗೆ ಇಟ್ಟ ಕಾನೂನುಗಳು ಅರಣ್ಯ ರಕ್ಷಕರ ಹೆಸರಲ್ಲಿ ಅನಾಚಾರವನ್ನು ಎಸಗಿದ್ದವು. ಇವರನ್ನು ರಾತ್ರೋ ರಾತ್ರಿ ಕಾಡಿನಿಂದ ಹೊರಹೋಗುವಂತೆ ಬೆದರಿಸಲಾಯಿತು. ಕೊನೆಗೆ ಬಲವಂತವಾಗಿ ಹೊರದಬ್ಬಲಾಯಿತು. ಅಂಜಿಕೆ ಸ್ವಭಾವದ ಈ ಬುಡಕಟ್ಟುಗಳು ಭಯದಿಂದ ಕಾಡಿನಿಂದ ಹೊರ ಬಂದು ಕಾಡಂಚಿನಲ್ಲಿ ಬೀಡುಬಿಟ್ಟರು ಸ್ವಲ್ಪ ದಿನಗಳ ನಂತರ ಅಲ್ಲಿಗೂ ಬಂದ ಅರಣ್ಯ ಇಲಾಖೆ ಅಲ್ಲಿಂದಲೂ ಓಡಿಸುತ್ತಾರೆ ಹೀಗೆ ಮೂರು ನಾಲ್ಕು ಕಡೆ ತಮ್ಮ ವಾಸವನ್ನು ಬದಲಾಯಿಸಿಕೊಂಡು ಈಗ ಒಂದೆಡೆ ನೆಲೆ ನಿಂತಿದ್ದಾರೆ. ಯಾವುದೇ ಪರ್ಯಾಯ ವ್ಯವಸ್ಥೆ ಇಲ್ಲದೆ ಈ ರೀತಿ ಕಾಡಿನಿಂದ ಹೊರಹಾಕಲ್ಪಟ್ಟ ಈ ಸಮುದಾಯಗಳು ನಿರ್ಗತಿಕರಾಗಿ ಕಾಡಿನಿಂದ ನಾಡಿಗೆ ಬರುತ್ತಾರೆ. ಕಾಡಿನ ಒಳಗಡೆ ಪ್ರಕೃತಿಯ ಮದ್ಯೆ ಬದುಕುತ್ತಿದ್ದವರನ್ನು ಹೊರಹಾಕಿ ಅವರನ್ನು ಬಟಾಬಯಲಲ್ಲಿ ನಿಲ್ಲಿಸಲಾಯಿತು. ಕಾಡಿನಲ್ಲಿ ಹಸಿವನ್ನೇ ಕಂಡಿರದಿದ್ದ ಈ ಸಮುದಾಯಗಳು ಹಸಿವಿನಿಂದ ಅಪೌಷ್ಟಿಕತೆಯಿಂದ ನರಳುವಂತಾದರು ಕೆಲವರು ಪ್ರಾಣವನ್ನು ಬಿಟ್ಟರು. ಕೂಲಿ ಮಾಡಿ ಗೊತ್ತಿಲ್ಲದ ಈ ಸಮುದಾಯದ ಹೆಚ್ಚಿನವರು ಜೀತಕ್ಕೆ ಸಿಕ್ಕಿಬಿದ್ದರು. ಈ ಎಲ್ಲಾ ವಿಚಾರಗಳು ಅವರನ್ನು ಮಾನಸಿಕವಾಗಿ ದೈಹಿಕವಾಗಿ ಜರ್ಜರಿತರನ್ನಾಗಿಸಿತು. ಆ ಸಮಯದಲ್ಲಿ ಅವರ ಕಷ್ಟ ಸುಖಗಳನ್ನು ಹಂಚಿಕೊಳ್ಳಲು ಇದ್ದ ಏಕೈಕ ಆಸರೆಯೆಂದರೆ ತಮ್ಮ ಹಿರಿಯರ ಆತ್ಮಗಳು ಹಾಗು ತಮ್ಮ ದೈವಗಳು. ತಮ್ಮ ಹಿರಿಯರು ಸದಾ ತಮ್ಮ ಜೊತೆಗೆ ಇದ್ದು ನಮ್ಮನ್ನು ಕಾಪಾಡಬೇಕಾದವರು ನಮ್ಮನ್ನ ಹೀಗೆ ಸಂಕಷ್ಟಕ್ಕೆ

ಈಡುಮಾಡಿದರೆಂಬ ನೋವನ್ನು ತಮ್ಮ ದೈವಗಳ ಮೇಲೆ ಹೊರಿಸಿ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸುತ್ತಾರೆ. ಸಮುದಾಯದಲ್ಲಿ ಏನೇ ಸಮಸ್ಯೆಯಾದರು ಗುಡ್ಡನ ಮೂಲಕ ಬುಂಡೆ ಕರೆಸಿ ದೈವಗಳನ್ನು ಭೂಮಿಗೆ ಕರೆಸುತ್ತಾರೆ. ಗುಡ್ಡ ಬುಂಡೆ ಆಡಿಸುತ್ತಾ ಹಾಡನ್ನು ಹಾಡುತ್ತಿದ್ದರೆ ಹೆಂಗಸರು ಸೊಲ್ಲು ಹಾಕುತ್ತಾ ಆತನಿಗೆ ಸ್ಫೂರ್ತಿ ತುಂಬುತ್ತಾರೆ. ಈತನೇ ಶಮನ್ ಈತನ ಆವೇಶ ಹೆಚ್ಚಾದಂತೆ ಬುಂಡೆಯ ವೇಗವೂ ಹೆಚ್ಚಾಗುತ್ತದೆ. ಆತ ಅಲೌಕಿಕ ಲೋಕದೆಡೆಗೆ ಪಯಣಿಸಿ ಆತ್ಮವನ್ನು ಕರೆತರುತ್ತಾನೆ. ಆಗ ಅಲ್ಲಿ ಯಾರಿಗಾದರು ಮೈತುಂಬುತ್ತದೆ ಗುಡ್ಡ ಮತ್ತು ಇತರರು ಆ ದೈವಗಳೊಂದಿಗೆ ಮಾತುಕತೆಯನ್ನು ಪ್ರಾರಂಭಿಸುತ್ತಾರೆ. ತಮ್ಮ ಕಷ್ಟಗಳನ್ನು ಮನವರಿಕೆ ಮಾಡಿಕೊಂಡು ದೈವಗಳನ್ನು ಹೀನಾಮಾನವಾಗಿ ಬೈಯ್ಯಲು ಪ್ರಾರಂಭಿಸುತ್ತಾರೆ. ನಮ್ಮನ್ನೆಲ್ಲಾ ಕಾಪಾಡಬೇಕಾದ ನೀನು ಈ ರೀತಿ ನಡುನೀರಲ್ಲಿ ನಮ್ಮನ್ನು ಕೈಬಿಟ್ಟಿದ್ದೇಕೆ ಎಂದು ನಿಂದಿಸುತ್ತಾರೆ, ನಮ್ಮನ್ನು ಈ ಕಷ್ಟದಿಂದ ನೀನು ಪಾರುಮಾಡದಿದ್ದರೆ ನಿನಗೆ ಪೂಜೆಯನ್ನು ಕೊಡುವುದಿಲ್ಲ ಎಂದು ಮುನಿಸಿಕೊಲ್ಲುತ್ತಾರೆ, ಮತ್ತು ನಿನಗೆ ಧೂಪದ ಹೊಗೆಯ ಬದಲು ಮೆಣಸಿನ ಕಾಯಿ ಹೊಗೆ ಹಾಕುತ್ತೇವೆ ಎಂದು ಬೆದರಿಸುತ್ತಾರೆ. ತಮ್ಮ ನೋವು ಸಂಕಟಗಳನ್ನೆಲ್ಲಾ ಆ ದೈವದ ಮೇಲೆ ತೋರಿಸಿ ಹಗುರಾಗುತ್ತಾರೆ.

**ಎರವರ ಮೌಖಿಕ ಸಾಹಿತ್ಯದಲ್ಲಿ ಶೊಪಣೆಯ ಸ್ವರೂಪ**

ಎರವರು ತಮ್ಮ ಮೇಲಾಗುತ್ತಿರುವ ಶೋಷಣೆಯನ್ನು ಅರಿಯಲಾರದಷ್ಟು ಮುಗ್ದರು. ಇದು ಇಂದು ನೆನ್ನೆಯದ್ದಲ್ಲ ಅನಾದಿ ಕಾಲದಿಂದಲೂ ನಡೆದುಬಂದಿದೆ. ಹಲವು ರೀತಿಯಲ್ಲಿ ಶೊಷಣೆಗೆ, ದೌರ್ಜನ್ಯಕ್ಕೆ ಒಳಗಾಗುತ್ತಾ ಕೊನೆಗೆ ಇದು ನಮ್ಮ ಹಣೆ ಬರಹ ಎಂದು ಶೋಷಣೆಯನ್ನು ತಮ್ಮ ಬದುಕಿನ ಭಾಗವಾಗಿ ಅನುಭವಿಸುತ್ತಾ ಬಂದಿರವುದನ್ನು ನಾವು ಗಮನಿಸಬಹುದು. ಎರವರು ಬರಿ ಭೂಮಿಯಿಂದ ಮಾತ್ರ ವಂಚಿತರಲ್ಲ ಬದಲಿಗೆ, ವಿದ್ಯೆಯಿಂದ ತಾವು ವಂಚಿತರು ಎನ್ನುವುದಕ್ಕೆ ಪುರಾಣದ ಒಂದು ಕತೆಯನ್ನು ಉಧಾಹರಣೆಯನ್ನು ನೀಡುತ್ತಾರೆ.

ಎರವರ ದೇವಮಾನವರಾದ ಆರ್ಯೆ ಮತ್ತು ಬಾಣ್ಯೆಯರಿಗೆ ಒಂದು ದಿನ ರಾತ್ರಿ ಕನಸಿನಲ್ಲಿ ಓಲೆಮರವೊಂದು ಕಾಣಿಸಿಕೊಂಡು: ನನ್ನನ್ನು ನೀವು ಬೆಳೆಸಿದರೆ ನಾನು ನಾಡಿನ ಜನಗಳಿಗೆ ವಿದ್ಯೆಯನ್ನು ನೀಡುತ್ತೇನೆ ಎಂದು ಹೇಳಿತಂತೆ. ಅಂತೆಯೇ ಈ ದೇವಮಾನವರು ಓಲೆಮರವನ್ನು ಬೆಳೆಸಲು ನಿರ್ಧರಿಸುತ್ತಾರೆ. ಆದರೆ ಭೂಮಿಯೆಲ್ಲಾ ಕೆಸರಾಗಿದ್ದ ಕಾರಣ ಭೂಮಿಯನ್ನು ಗಟ್ಟಿ ಮಾಡಲು ಹುಲ್ಲು, ಬಿದಿರು, ಮೊದಲಾದ ಬೀಜಗಳನ್ನು ನೆಟ್ಟು ಭೂಮಿಯನ್ನು ಗಟ್ಟಿಗೊಳಿಸುತ್ತಾರೆ. ಮತ್ತು ಈ ಭೂಮಿ ಮೇಲೆ ಹಾವು, ಚೇಳು, ಪಶುಪಕ್ಷಿಗಳನ್ನು ಸೃಷ್ಟಿಸುತ್ತಾರೆ.

ನಂತರ ಈ ಗಟ್ಟಿಯಾದ ನೆಲದ ಮೇಲೆ ಓಲೆಗರಿಯ ಬೀಜಗಳನ್ನು ನೆಡುತ್ತಾರೆ. ನಂತರ ದೇಶ ಪರ್ಯಟನೆಗೆ ತೆರಳಿ ಆ ಓಲೆಗರಿಯ ಮರ ಬೆಳೆದು ದೊಡ್ಡದಾಗಿ ಓಲೆಗರಿ ಬಿಟ್ಟ ನಂತರ ತಿರುಗಿ ಬರುತ್ತಾರೆ. ಬಂದು ನೊಡಿದಾಗ ಓಲೆಗರಿಯ ಮರವು ಸಮೃದ್ದವಾಗಿ ಬೆಳೆದಿರುತ್ತದೆ. ಆದರೆ ಅಷ್ಟು ಎತ್ತರದಲ್ಲಿ ಬೆಳೆದ ಮರದಿಂದ ಓಲೆಗರಿಯನ್ನು ಕೀಳಲು ಸಾದ್ಯವಾಗದಿದ್ದಾಗ: ಆ ಮರದ ಎಲೆಗಳನ್ನು ಕೊಯ್ಯಲು ಓಲೆ ಮರ ಏರುವ "ತೀವ್‌ಚರಕುಟ್ಟಿ" ಎಂಬಾತನನ್ನು ಕರೆಯಿಸಿ ಓಲೆಮರದ ಎಲೆಗಳನ್ನು ಕೀಳುವಂತೆ ಕೇಳುತ್ತಾರೆ ಅವನ ಕೋರಿಕೆಯ ಮೇರೆಗೆ ಅವನಿಗೆ ಎಲೆ, ಅಡಿಕೆ, ಅಕ್ಕಿ, ಬೆಲ್ಲ, ತೆಂಗಿನಕಾಯಿ, ಬಾಳೆಹಣ್ಣು, ಒಂದು ಕೋಳಿ, ಕೈ ತುಂಬ ದಕ್ಷಿಣೆಯನ್ನು ನೀಡುತ್ತಾರೆ. ಆತ ಮರಕ್ಕೆ ಪೂಜಿಸಿ, ಪ್ರದಕ್ಷಿಣೆ ಹಾಕಿ ನಮಸ್ಕರಿಸುತ್ತಾನೆ. ನಂತರ ದೇವಮಾನವರನ್ನು ಉದ್ದೇಶಿಸಿ, ನಾನು ಮರವನು ಹತ್ತುವುದನ್ನು ನೀವ್ಯಾರು ನೋಡಬಾರದು ನೀವೆಲ್ಲಾ ಬೆನ್ನು ತಿರುಗಿಸಿ ನಿಲ್ಲಿ ಎಂದು ಹೇಳುತ್ತಾನೆ ಮತ್ತು ನಾನು ಓಲೆಗರಿಯನ್ನು ಕೆಳಗೆ ಹಾಕುವಾಗ ಅದು ನೇರವಾಗಿ ಬಿದ್ದರೆ ಅದು ನಿಡಚೇರಿ ತಂಬಿರ (ದೇವರು) ನಿಗೆ ಸೇರಬೇಕು ಅಂಕುಡೊಂಕಾಗಿ ಬಿದ್ದರೆ ಅದು ಕೋರೆಂಗಾಲದ ತಂಬೀರನಿಗೆ ಸೇರಬೇಕು, ತಿರುಗಾ ಮುರುಗಾ ಬಿದ್ದರೆ ಅದು ತಿರ್ಚಾಳೇರಿ ತಂಬೀರನಿಗೆ ಸೇರಕ್ಕದ್ದು. ಒಂದು ವೇಳೆ ನಾನು ಮೇಲಿನಿಂದ ಓಲೆಗರಿಗಳನ್ನು ಹಾಕುವಾಗ ನೀವು ಅದನ್ನು ಕೆಳಗೆ ಬೀಳದಂತೆ ಅಂಗೈ ಮುಂಗೈನಿಂದ ಹಿಡಿದರೆ ನಿಮಗೆ ಸೇರತಕ್ಕದ್ದು. ಒಂದು ವೇಲೆ ನಮ್ಮ ಕೈ ತಪ್ಪಿ ಕೆಳಗೆ ಬಿದ್ದರೆ ಅದು ಅಡಿಯರಿಗೆ(ಎರವರಿಗೆ) ಸೇರತಕ್ಕದ್ದು ಎಂದು ಷರತ್ತು ವಿಧಿಸುತ್ತಾನೆ, ಅಂತೆಯೇ ಅವರು ಬೆನ್ನು ತಿರುಗಿಸಿ ನಿಲ್ಲುತ್ತಾರೆ. ಮತ್ತು ಓಲೆಗರಿಗಳನ್ನು ಒಂದೂ ಕೆಳಗೆ ಬೀಳದಂತೆ ಅದನ್ನು ತಮ್ಮ ಅಂಗೈ ಮುಂಗೈಯಲ್ಲಿ ಹಿಡಿಯುತ್ತಾರೆ. ಷರತ್ತಿನಂತೆ ಒಲೆಗರಿಗಳನ್ನು ನಾಡಿನ ಕುಲದವರುಗಳಿಗೂ ಹದಿನೆಂಟು ಜಾತಿಗಳಿಗೂ, ನೂರೆಂಟು ಕುಲದವರಿಗೂ ಹಂಚುತ್ತಾರೆ. ಆದರೆ ಅಡಿಯನಿಗೆ ಓಲೆಗರಿ ಸಿಗುವುದಿಲ್ಲ. ಕೊನೆಗೆ ಓಲೆಗರಿ ಕೆಳಗೆ ಹಾಕುವಾಗ ಕೆಳಗೆ ಬಿದ್ದಿದ್ದ ಸಣ್ಣ ಪುಟ್ಟ ತರಗನ್ನೆಲ್ಲಾ ಒಗ್ಗೂಡಿಸಿ. ಸುಟ್ಟು ಬೂದಿ ಮಾಡಿ ಅದರ ಬೂದಿಯನ್ನು ಎರವರ ನಾಲಗೆ, ಎದೆ, ನೆತ್ತಿ ಮತ್ತು ಅಂಗೈ ಮುಂಗೈಗಳಿಗೆಲ್ಲಾ ಸವರುತ್ತಾರೆ. ಕೊನೆಗೆ ದೇವಮಾನವರು ಎಲ್ಲರನ್ನೂ ಪರೀಕ್ಷಿಸುವ ಸಲುವಾಗಿ ಓಲೆಗರಿಯನ್ನು ಓದಲು ಹೇಳುತ್ತಾರೆ ಆದರೆ ಯಾರಿಗೂ ಓದಲು ಸಾದ್ಯವಾಗುವುದಿಲ್ಲ. ಓಲೆಗರಿಯ ಬೂದಿಯನ್ನು ತನ್ನ ನಾಲಗೆಯಲ್ಲಿ ಎದೆಗೆ ಸವರಿದ್ದರಿಂದ ಎರವನು ಅದನ್ನು ಓದುತ್ತಾನೆ. ವಿದ್ಯೆ ಅವರ ಅಂತರಳದಲ್ಲಿ ಬೆರೆತು ಹೋಗಿದೆ ಅದು ಮೌಖಿಕ ಸಾಹಿತ್ಯವಾಗಿರಬಹುದು, ಕಾಡಿನ ಜ್ಞಾನವಾಗಿರಬಹುದು, ಇಂದಿಗೂ ಮೌಖಿಕ ಸಾಹಿತ್ಯವು ಅವರ ಅಂತಸತ್ವದಲ್ಲಿ ಬೆರೆತು ಹೋಗಿರುವುದರಿಂದಲೆ ಯಾವ ಅಕ್ಷರ ಜ್ಞಾನವಿಲ್ಲದಿದ್ದರೂ

ರಾತ್ರಿಯಿಡೀ ನಿರರ್ಗಳವಾಗಿ ಹಾಡುವ ಸಾಮರ್ಥ್ಯ ಎರವರಿಗಿದೆ. ಅವರ ಅಂಗೈ ಮಂಗೈ ನಲ್ಲಿ ಸವರಿದ ವಿದ್ಯೆ ಅವರ ದೈಹಿಕ ಸಾಮರ್ಥ್ಯದ್ದು. ಎಂತದ್ದೇ ಕಷ್ಟ ಕೆಲಸಗಳನ್ನು ಮಾಡಲು ಅವರು ಸಿದ್ದರು.

ಅಕ್ಷರಸ್ಥ ಸಮುದಾಯಗಳು ಸಮಾಜದಲ್ಲಿ ಮನ್ನಣೆಗೆ ಪಾತ್ರವಾಗುತ್ತಾ ಅವರ ಸಾಮಾಜಿಕ ಶೈಕ್ಷಣಿಕ ಆರ್ಥಿಕ ಸ್ಥಾನಮಾನಗಳು ಬದಲಗುತ್ತಿದ್ದನ್ನು ಗಮನಿಸಿದ ಎರವರು ತಮ್ಮ ಪರಿಸ್ಥಿತಿಗೆ ತಾವು ಅನಕ್ಷರಸ್ಥರಾಗಿರುವುದೇ ಕಾರಣ ಎಂಬ ಭಾವನೆ ಅವರ ಮನದಲ್ಲಿ ಆಳವಾಗಿ ಬೇರೂರಿದೆ. ನಮ್ಮ ದೈವಗಳೇ ನಮಗೆ ಮೋಸಮಾಡಿದವು ಎಂಬು ಹಲುಬುತ್ತಾರೆ.

ದುಡಿಮೆ ಎಂದರೆ ಆದಿವಾಸಿಗಳು ಕಾಡಿನ ಜೊತೆ ತಮ್ಮ ಸುತ್ತಲ ಪರಿಸರದ ಜೊತೆ ನಡೆಸುವ ಅನುಸಂಧಾನ. ಮನುಷ್ಯನ ಸಾಮಾಜಿಕ ಸಂಸ್ಥೆಗಳಾದ ಬೇಟೆ, ಪಶುಪಾಲನೆ ಮತ್ತು ಆದಿಮ ಕೃಷಿ ಹಂತಗಳಲ್ಲಿ ಅರಣ್ಯ ಬಳಕೆಯಾಗುತ್ತಿತ್ತು. ಆದರೆ ಇಂದಿನಂತೆ ಖಿಲಗೊಳ್ಳುವ ಸ್ವರೂಪದಲ್ಲಿ ಬಳಕೆಯಾಗುತ್ತಿರಲಿಲ್ಲ. ಆದಿಮಾನವ ಅಥವಾ ಇಂದಿನ ಆದಿವಾಸಿಗಳು ರೂಢಿಸಿಕೊಂಡಿದ್ದ ಕುಮ್ರಿ ಬೇಸಾಯ ಪದ್ಧತಿಯು ಅರಣ್ಯದ ಸಾವಯವತೆಯನ್ನು ನಾಶ ಮಾಡುವಂತದ್ದಲ್ಲ. ಬದಲಿಗೆ ಅರಣ್ಯವನ್ನು ಅದರ ಸಾವಯವತೆಯ ಜೊತೆಗೆ ಈ ಪದ್ಧತಿಯು ಪೋಷಿಸುತ್ತಿತ್ತು. ಅರಣ್ಯವಾಸಿ ಬುಡಕಟ್ಟುಗಳು ತಮ್ಮ ಜೀವನಕ್ಕಾಗಿ ಮೊದಲಿಗೆ ಕಾಡಿನ ಉತ್ಪನ್ನಗಳನ್ನು ಅವಲಂಬಿಸಿದ್ದರು. ಕಾಡಲ್ಲಿ ಸಿಗುವ ಗೆಡ್ಡೆ ಗೆಣಸು, ಸೊಪ್ಪುಗಳು, ಹಣ್ಣುಗಳಲ್ಲದೆ, ಮೀನು, ನಲ್ಲಿ, ಸಣ್ಣಪುಟ್ಟ ಪ್ರಾಣಿ ಪಕ್ಷಿಗಳ ಬೇಟೆ ಇವೇ ಅವರ ಬದುಕಿಗೆ ಆಧಾರವಾಗಿತ್ತು. ಆದರೂ ಈ ಎಲ್ಲಾ ಬುಡಕಟ್ಟುಗಳೂ ತಮ್ಮದೇ ಆದ ಭಿನ್ನ ಭಿನ್ನ ಕುಲಕಸುಬುಗಳನ್ನೂ ಕೂಡ ರೂಡಿಸಿಕೊಂಡಿದ್ದವರು. ಈ ಕುಲಕಸುಬುಗಳು ತಲತಲಾಂತರಗಳಿಂದ ಆ ಸಮುದಾಯಗಳ ಬದುಕಿನ ಭಾಗವಾಗಿದ್ದು ತಮ್ಮ ತಮ್ಮ ಕುಲವೃತ್ತಿಗಳಲ್ಲಿ ನೈಪುಣ್ಯತೆಯನ್ನು ಮೆರೆದಿದ್ದಾರೆ ಆದರೆ 1830ರಲ್ಲಿ ವಸಾಹತು ಆಡಳಿತವು ಮೊದಲಿಗೆ ಅರಣ್ಯ ನೀತಿಯೊಂದನ್ನು ರೂಪಿಸಿತು. ಅರಣ್ಯವನ್ನು ಯಾರು ಬಳಸಬೇಕು? ಅರಣ್ಯ ಯಾರ ಸುಪರ್ದಿಯಲ್ಲಿರಬೇಕು? ಅರಣ್ಯದ ಒಡೆತನ ಯಾರದ್ದು? ಎಂಬ ಪ್ರಶ್ನೆಗಳಿಗೆ ಈ ಅರಣ್ಯ ನೀತಿಯಲ್ಲಿ ಸ್ಪಷ್ಟ ಉತ್ತರಗಳಿದ್ದವು. 'ಈ ಹಂತದಲ್ಲಿ ಅರಣ್ಯದಲ್ಲಿನ ಬುಡಕಟ್ಟುಗಳು ವಸಾಹತು ಆಡಳಿತದ ಈ ಕ್ರಮದ ವಿರುದ್ಧ ಬಂಡೆದ್ದವು. ಅರಣ್ಯವನ್ನು ತಮ್ಮ ಬಂಡವಾಳದ ವಿಸ್ತರಣೆಯ ಭಾಗವಾಗಿ ಬಳಸುತ್ತಿದ್ದ ವಸಾಹತುಶಾಹಿ ಆಡಳಿತ ಸ್ಥಳೀಯ ಬುಡಕಟ್ಟುಗಳ ಪ್ರತಿರೋಧಗಳನ್ನು ಸೈನ್ಯದ ಮೂಲಕ ಹತ್ತಿಕ್ಕಿತು. ಸೈನ್ಯದ ಕಾರ್ಯಾಚರಣೆಗಳನ್ನು ನ್ಯಾಯಬದ್ಧಗೊಳಿಸಲು ಅರಣ್ಯ ಕಾಯ್ದೆಗಳು ರೂಪುಗೊಂಡವು. ಅಂದಿನಿಂದ ಸಮುದಾಯ ಮತ್ತು ಅರಣ್ಯಗಳ ನಡುವೆ ಶತಮಾನಗಳ ಕಾಲ ರೂಢಿಯಲ್ಲಿದ್ದ ಅವಿನಾಭಾವ ಸಂಬಂಧಗಳೂ ಕೊನೆಗೊಂಡವು. ಅರಣ್ಯ

ವಸಾಹತು ಆಡಳಿತದ ಖಾಸಗಿ ಆಸ್ತಿಯಾಯಿತು.

ಎರವರು–ಎರವರು ವ್ಯವಸಾಯಗಾರರಾಗಿದ್ದರು ಎಂಬುದಕ್ಕೆ ಬಹಳಷ್ಟು ಉದಾಹರಣೆಗಳು ಇವರ ಮೌಖಿಕ ಸಾಹಿತ್ಯದಲ್ಲಿ ದೊರಕುತ್ತವೆ. ಅದಕ್ಕೆ ಸಾಕ್ಷಿಯಾಗಿ ಇವರ ಓಲೆಪಾಟಿನಲ್ಲಿ ಅವರ ವ್ಯವಸಾಯದ ಕ್ರಮವನ್ನು ವಿವರಿಸಿದ್ದಾರೆ.

'ತೊಂಡನಾಟು ತೋಣಿಪರುವಳತಿ ಕೊಟ್ಟತೇರಿ ಅಕ್ಕವ್ವೆ
ಕುಡಾಂಬೆತೇರಿ ಬಾವು ಪೆಂಗವ್ವೆ, ಬರ್ಚಲು ಬಾವು ಅಕ್ಕವ್ವೆ
ಬರ್ಚಲು ಬಾವು ಪೆಂಗವ್ವೆ ತೇವಾಳತಿ ಅಮ್ಮೆ-ಮೂವಾಳತಿ ಅಮ್ಮೆರ'

ಹಿಂದೆ ಎರವರು ವ್ಯವಸಾಯಗಾರರಾಗಿದ್ದರು ಎಂಬುದಕ್ಕೆ ನಿದರ್ಶನವಾಗಿ ಮೇಟಿ ಕಂಬ ನೆಡುವ ಪದ್ಧತಿಯಿದೆ. ಈ ಮೇಟಿ ಕಂಬವನ್ನು ಕಣದಲ್ಲಿ ನೆಡುತ್ತಾರೆ. ಕಣ ಎಂದರೆ ಭತ್ತವನ್ನು ಒಟ್ಟುಹಾಕುವ ವಿಶಾಲವಾದ ಜಾಗ. ಇವರು ಮುಖ್ಯವಾಗಿ ವ್ಯವಸಾಯನ್ನು ಅವಲಂಬಿಸಿಕೊಂಡು ಬದುಕುತಿದ್ದವರು ಎಂಬುದು ನಮಗೆ ಇದರಿಂದ ತಿಳಿದು ಬರುತ್ತದೆ. ಜೇನುಕುರುಬರು– ಜೇನುಕುರುಬರು ಹೆಸರಿಗೆ ತಕ್ಕಂತೆ ಜೇನು ಕೊಯ್ಯುವುದರಲ್ಲಿ ಪರಿಣಿತರು. ಅವರ ಬದುಕಿನ ಆಧಾರವೇ ಜೇನು ಕೀಳುವುದು. ವಿವಿಧ ಬಗೆಯ ಜೇನುಗಳ ಪರಿಚಯದೊಂದಿಗೆ ಅವರ ವೃತ್ತಿ ಸಾಹಸವನ್ನು ವಿವರಿಸಲಾಗಿದೆ. ಜೊತೆಗೆ ಮಾವುತರಾಗಿ ಅವರ ಹೋರಾಟದ ಧೈರ್ಯದ ಪರಿಚಯವನ್ನು ಮಾಡಲಾಗಿದೆ. ಕಿರು ಬೇಟೆಯ ಪರಿಚಯವನ್ನು ಇಲ್ಲಿ ಮಾಡಲಾಗಿದೆ.

**ಬೆಟ್ಟಕುರುಬರು:** ಹಿಂದೆ ಇವರೂ ಕೂಡ ಸೀಮಿತ ಪ್ರದೇಶದಲ್ಲಿ ಕೆತ್ಲು ಬೇಸಾಯವನ್ನು ಅಳವಡಿಸಿಕೊಂಡು ರಾಗಿ, ಜೋಳ, ಕುಂಬಳ, ಸೋರೆ ಇತ್ಯಾದಿಗಳನ್ನು ಬೆಳೆಯುತ್ತಿದ್ದರು. ಪದ್ದತಿಯಂತೆ ವರ್ಷದ ಮೊದಲ ಬೀಜವನ್ನು ಬಿತ್ತಲು ಕೆಲವು ವಿಶೇಷ ನಿಯಮಗಳನ್ನು ಅನುಸರಿಸುತ್ತಾರೆ. ಅಂದು ಹಾಡಿಯ ಯಜಮಾನನನ್ನು ಮನೆಗೆ ಕರೆಯಿಸುತ್ತಾರೆ. ಈತನೇ ಮೊದಲ ಬೀಜ ಬಿತ್ತಬೇಕು ಎಂಬುದು ನಿಯಮ. ಬೆಟ್ಟಕುರುಬರು ಬಿದಿರಿನ ಕರಕುಶಲ ಕರ್ಮಿಗಳು ಬುಟ್ಟಿ, ಮೊರ ಮೊದಲಾದ ಹಲವಾರು ವಸ್ತುಗಳನ್ನು ತಯಾರಿಸಿ ಮಾರಾಟ ಮಾಡಿ ಬಂದ ಪುಡಿಗಾಸಿನಲ್ಲಿ ಜೀವನ ನಡೆಸುತ್ತಿದ್ದವರು.

**ಸೋಲಿಗರು:** ಸೋಲಿಗರು ಕಾಡಿನ ಉತ್ಪನ್ನಗಳಾದ ಗೆಡ್ಡೆ ಗೆಣಸು, ನಾರು ಬೇರುಗಳನ್ನು ಸಂಗ್ರಹಿಸಿ ಆಹಾರವಾಗಿ ಸೇವಿಸುತ್ತಿದ್ದವರು. ಸೋಲಿಗರ ಮುಖ್ಯ ಆಹಾರ ಗೆಣಸು. ಈ ಮಾತನ್ನು ಪುಷ್ಟೀಕರಿಸಲು ಬೇಕಾದ ಮಾಹಿತಿ ಅವರ ಸೃಷ್ಟಿ ಪುರಾಣದಲ್ಲಿ ಸಿಗುತ್ತದೆ. ಸೋಲಿಗರು ಸೋಲನ ಗೆಣಸನ್ನು ಆಹಾರವಾಗಿ ಬಳಸುವುದರಿಂದ ಅವರನ್ನು ಸೋಲಿಗರು ಎಂದು ಕರೆಯಲಾಗುತ್ತದೆ ಎಂಬುದು ಕತೆ. ಗೆಣಸು ಇವರ ಬದುಕಿನೊಂದಿಗೆ ಬೆಸೆದುಕೊಂಡಿದೆ. ಅವರ

ಪುರಾಣದ ಕತೆಗಳೂ ಕೂಡ ಇದನ್ನು ಸಮರ್ಥಿಸುತ್ತವೆ. ಕುಸುಮಾಲೆ ಮತ್ತು ಬಿಳಿಗಿರಿರಂಗನ ಪ್ರಣಯ ಪ್ರಸಂಗದಲ್ಲಿ ಕುಸುಮಾಲೆಯು ಬಿಳಿಗಿರಿರಂಗನನ್ನು ತನ್ನ ಅಕ್ಕಂದಿರೊಡನೆ ಕಾಡಿನಲ್ಲಿ ಗೆಣಸು ಅಗಿಯಲು ಹೋದಾಗ ಭೇಟಿಯಾಗುತ್ತಾಳಂತೆ. ಎಲ್ಲಾ ಅರಣ್ಯವಾಸಿ ಬುಡಕಟ್ಟುಗಳಂತೆ ಸೋಲಿಗರ ಬದುಕಿನಲ್ಲೂ ಕೂಡ ಬೇಟೆ ಬಹುಮುಖ್ಯ ಸ್ಥಾನವನ್ನು ಪಡೆದಿದೆ.

'ಹೋಗಾದೆ ಮೂರು ತಿಂಗಳು
ಬರುವಾದೆ ಮೂರು ತಿಂಗಳು
ಇರುವಾದೆ ಮೂರು ತಿಂಗಳು
ಮಡದಿ ಆರು ಮೂರು ಒಂಭತ್ತು ತಿಂಗಳು"

ಈ ಸಾಲುಗಳು ಸೋಲಿಗರ ಸುದೀರ್ಘ ಬೇಟೆಯ ಪರಿಚಯವನ್ನು ನಮಗೆ ಮಾಡಿಸುತ್ತದೆ.

**ಕುಡಿಯರು:** ಪೂಮಲೆ ಕುಡಿಯರು ಸೇಂದಿ ಇಳಿಸುವ ಕಸುಬನ್ನು ಅವಲಂಬಿಸಿದ್ದಾರೆ, ತೇನ್ ಮಲೆ ಕುಡಿಯರು ಹೆಸರೇ ಸೂಚಿಸುವಂತೆ ಜೇನು ಸಂಗ್ರಹ ಮತ್ತು ಮಾರಾಟವನ್ನು ತಮ್ಮ ಬದುಕಾಗಿಸಿಕೊಂಡಿದ್ದಾರೆ. ಅಡಿಕೆ ಕುಡಿಯರದು ಅಡಿಕೆ ಬೆಳೆದು ಮಾರಾಟ ಮಾಡುವುದೇ ಮುಖ್ಯ ಕಸುಬು. ಈ ರೀತಿ ವಿಭಿನ್ನ ಕುಲಕಸುಬನ್ನು ಹೊಂದಿದ್ದರೂ ಕೂಡ ಸಾಮಾನ್ಯವಾಗಿ ಕೊಡಗಿನಲ್ಲೆ ನೆಲೆಸಿರುವ ಕುಡಿಯರು ಸೇಂದಿ (ಬೊಳ್ಳೆಕಳ್ಳು) ಕಟ್ಟುವುದು ಮತ್ತು ಅದನ್ನು ಮಾರಾಟ ಮಾಡುವುದರ ಮೂಲಕ ತಮ್ಮ ಜೀವನ ನಿರ್ವಹಣೆ ಮಾಡುತ್ತಾರೆ. 'ಕುಡಿಯ' ಎಂಬ ಹೆಸರೇ ಸೂಚಿಸುವಂತೆ ಈ ಪದವು ಕುಡಿಯರ ಮೂಲ ವೃತ್ತಿಯೊಂದಿಗೆ ಸಂಬಂಧಿಸಿದೆ.

ಶ್ರಮಸಂಸ್ಕೃತಿಯ ಪ್ರತೀಕವಾದ ಈ ಬುಡಕಟ್ಟುಗಳು ತಮ್ಮ ದುಡಿಮೆಯೊಂದಿಗೆ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಆ ಮೂಲಕ ತಮ್ಮ ದುಡಿಮೆಗೆ ವಿಶೇಷವಾದ ಮನ್ನಣೆಯನ್ನು ದೊರಕಿಸಿಕೊಟ್ಟಿದ್ದಾರೆ. ಕಾಡನ್ನೇ ನಂಬಿ ಕಾಡಿನ ಭಾಗವಾಗಿದ್ದ ಈ ಸಮುದಾಯಗಳು ಎಂದೂ ಕಾಡನ್ನು ಬರಿದು ಮಾಡಬೇಕು ಎಂದಾಗಲಿ, ಕಾಡು ಕೇವಲ ತಮ್ಮದು ಮಾತ್ರ ಎಂದು ಆಲೋಚಿಸಲಿಲ್ಲ. ಕಾಡಿನಲ್ಲಿ ಇತರೆ ಸಹಜೀವಿಗಳೊಂದಿಗೆ ಸಹಬಾಳ್ವೆ ನಡೆಸುತ್ತಿದ್ದವರು ಹಾಗು ಕಾಡಿನ ಭಾಗವಾಗಿದ್ದವರು. ವಾಸ್ತವದಲ್ಲಿ ಬದುಕುತ್ತಿರುವ ಈ ಸಮುದಾಯಗಳು ನಿರ್ಲಿಪ್ತರಲ್ಲ. ಕಾಡು ಬದುಕಿನ ಜೀವನಾಡಿಯಾಗಿ ಉಳಿಯಬೇಕಾದರೆ ಕೆಲವು ನಿಯಮ ಕಟ್ಟುಪಾಡನ್ನು ಅಳವಡಿಸಿಕೊಳ್ಳಬೇಕು ಎಂಬ ಭವಿಷ್ಯದ ಕಾಳಜಿಯನ್ನು ಹೊಂದಿದ್ದವರು ಮತ್ತು ಅದನ್ನು ಬಹಳ ಶಿಸ್ತಾಗಿ ಪಾಲಿಸಿಕೊಂಡು ಬಂದವರು. ಈ ಎಲ್ಲಾ ನಿಯಮಗಳು ಸಮುದಾಯದಲ್ಲಿ ಅಂತರ್ಗತವಾಗಿದೆ. ಕುಮರಿ ಬೇಸಾಯ ಕಾಡನ್ನು ಅವಶ್ಯಕತೆಗಷ್ಟೆ ಉಪಯೋಗಿಸಬೇಕೇ ಹೊರತು

ಕೇವಲ ತನ್ನದಲ್ಲ ಎಂಬ ಮಹಾದರ್ಶವನ್ನು ಸಾರಿದರೆ. ಗೆಡ್ಡೆಗೆಣಸುಗಳ ಬೇರನ್ನು ಉಳಿಸುವುದು, ಗಬ್ಬದ ಪ್ರಾಣಿಗಳನ್ನು ಬೇಟೆಯಾಡಬಾರದು ಎಂಬ ವಿಚಾರಗಳು ಅತ್ಯಂತ ಸೂಕ್ಷ್ಮ ಸಂವೇದನೆಗಳ ಜೊತೆಗೆ ಬುಡಕಟ್ಟುಗಳ ದೂರದೃಷ್ಟಿಯನ್ನು ನಮ್ಮೆದುರು ತೆರೆದಿಡುತ್ತದೆ. ಕಾಡಿನಿಂದ ಹೊರಬಂದ ನಂತರ ಕೇವಲ ಈ ಸಮುದಾಯಗಳ ಬದುಕು ಮಾತ್ರವಲ್ಲ ಕಾಡಿನ ಪರಿಸ್ಥಿತಿಯೂ ಕೂಡ ಚಿಂತಾಜನಕವಾಗಿದೆ. ಕಾಡಿಗೆ ಪ್ರಾಣಿ ಪಕ್ಷಿಗಳು ಹೇಗೂ ಹಾಗೆ ಈ ಬುಡಕಟ್ಟುಗಳು ಕೂಡ ಶೋಭೆ.

**ಅಡಿಟಿಪ್ಪಣಿಗಳು**

1. ಪ್ರಭಾಕರ, ಎ.ಎಸ್., ಮಾತಂಗಾ ಘಟನೆ ಆದಿವಾಸಿಗಳ ಅಸ್ತಿತ್ವದ ಪ್ರಶ್ನೆ, ಪು.75, 2005.
2. ಅದೇ, ಪು.75, 2005.
3. ನೋಡಿ: Irfan Habib, The Agrarian System of Mughal India 1556-1707, Oxford University Press, 1999.
4. ಪ್ರಭಾಕರ ಎ.ಎಸ್., ಬುಡಕಟ್ಟು ಮೀಮಾಂಸೆ, ಪ್ರಸ್ತಾವನೆ, ಕರ್ನಾಟಕ ಬುಡಕಟ್ಟು ಸಚಿತ್ರ ಕೋಶ, ಪು.12, 2015.
5. ಪ್ರಭಾಕರ ಎ.ಎಸ್., ಮಾತಂಗಾ ಘಟನೆ ಆದಿವಾಸಿಗಳ ಅಸ್ತಿತ್ವದ ಪ್ರಶ್ನೆ, ಪು.75, 2005
6. ಅದೇ, ಪು.78, 2005.
7. Stephen Fuchs, At the Bottom of Indian Society, P 47, 1981.
8. ಹರೀಶ್ ಪಿ.ಎನ್., ಎರವರ ಸಂಸ್ಕೃತಿ, ಪು.66–67, 1993.
9. ಅದೇ, ಪು.68, 1993.
10. ಅದೇ, ಪು.66–67, 1993.
11. ನೌಮ್ ಇಯೋರಿಷ್, ಜೇನು ಮತ್ತು ಮಾನವ, ಅನುವಾದ: ಎಚ್.ಎಸ್.ಶ್ರೀಮತಿ, ಪು. 108, 1985.
12. ಮಧು ಗುಂಡ್ಲುಪೇಟೆ, ಕರ್ನಾಟಕ ಬುಡಕಟ್ಟು ಜನಾಂಗಗಳ ಅಭಿವೃದ್ಧಿ, ಪು.60, 2011.
13. ಚಂದ್ರು ಕಾಳೇನಹಳ್ಳಿ, ಸೋಲಿಗರ ಸಂಸ್ಕೃತಿ, ಪು.30, 2011.
14. ಕೇಶವನ್ ಪ್ರಸಾದ್ ಕೆ., ಮಲೆ ಮಾದೇಶ್ವರ ಕಾವ್ಯ, ಪು.150, 1997.

15. ಚಂದ್ರು ಕಾಳೇನಹಳ್ಳಿ, ಸೋಲಿಗರ ಸಂಸ್ಕೃತಿ, ಪು.239, 2011.

16. Morab S.G., The Soliga of Bilgiri Rangana Hills, P 35, 1977.

17. ಚಂದ್ರು ಕಾಳೇನಹಳ್ಳಿ, ಸೋಲಿಗರ ಸಂಸ್ಕೃತಿ, ಪು.98–99, 2011.

18. ಅದೇ, ಪು.229, 2011.

19. ಅದೇ, ಪು.237–238.

20. ರಮೇಶ್ ಕೆ.ಜಿ., ಮಲೆಕುಡಿಯ ಬುಡಕಟ್ಟು ಸಮುದಾಯದ ಕಳೆದ ಆರು ದಶಕಗಳ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ, ಪು.86, 2014.

## ಅಧ್ಯಾಯ: ಏಳು

# ಕೊಡಗಿನ ಬುಡಕಟ್ಟುಗಳ ದೈವಗಳು, ಆಚರಣೆಗಳು ಮತ್ತು ಮೌಖಿಕ ಸಾಹಿತ್ಯ

7.1. ಬುಡಕಟ್ಟು ದೈವಗಳು

7.2. ಎರವರ ದೈವಗಳು, ಆಚರಣೆಗಳು ಮತ್ತು ಮೌಖಿಕ ಸಾಹಿತ್ಯ

7.3. ಜೇನುಕುರುಬರ ದೈವಗಳು, ಆಚರಣೆಗಳು ಮತ್ತು ಮೌಖಿಕ ಸಾಹಿತ್ಯ

7.4. ಬೆಟ್ಟಕುರುಬರ ದೈವಗಳು, ಆಚರಣೆಗಳು ಮತ್ತು ಮೌಖಿಕ ಸಾಹಿತ್ಯ

7.5. ಸೋಲಿಗರ ದೈವಗಳು, ಆಚರಣೆಗಳು ಮತ್ತು ಮೌಖಿಕ ಸಾಹಿತ್ಯ

7.6. ಕುಡಿಯರ ದೈವಗಳು, ಆಚರಣೆಗಳು ಮತ್ತು ಮೌಖಿಕ ಸಾಹಿತ್ಯ

# ಅಧ್ಯಾಯ: ಏಳು

# ಕೊಡಗಿನ ಬುಡಕಟ್ಟುಗಳ ದೈವಗಳು, ಆಚರಣೆಗಳು ಮತ್ತು ಮೌಖಿಕ ಸಾಹಿತ್ಯ

## 7.1. ಬುಡಕಟ್ಟು ದೈವಗಳು

ಬುಡಕಟ್ಟು ಸಮುದಾಯದವರು ಪ್ರಕೃತಿ ಪೂಜಕರು. ಮಾನವನ ಅಳತೆಗೂ ಮೀರಿದ, ಆಲೋಚನೆಗೂ ವಿಸ್ತಾರವಾದ, ಅಂದಾಜಿಸಲೂ ಸಾಧ್ಯವಾಗದ ಪ್ರಕೃತಿಯ ನಿಗೂಢಶಕ್ತಿಗಳನ್ನು ದೈವಗಳಾಗಿ ಪರಿಗಣಿಸಿ ಮೂರ್ತ ಮತ್ತು ಅಮೂರ್ತ ರೂಪಗಳೆರಡರಲ್ಲೂ ಪೂಜಿಸುತ್ತಾ ಬಂದವರು. ಪ್ರಕೃತಿಯ ಭಾಗವಾದ ಕಲ್ಲು, ಮರ, ನದಿ, ಮಳೆ ಮೊದಲಾದವುಗಳನ್ನು ಭಕ್ತಿಯಿಂದ ಆರಾಧಿಸಿದವರು. ಹಾಗೆಯೇ ಪ್ರಾಣಿ ಪಕ್ಷಿಗಳನ್ನು ದೈವತ್ವಕ್ಕೆ ಏರಿಸಿದವರು. ಈ ರೀತಿ ಸಜೀವ ಮತ್ತು ನಿರ್ಜೀವ ವಸ್ತುಗಳನ್ನು ಆರಾಧಿಸುವ ಮೂಲಕ ಪ್ರಕೃತಿಗೆ ವಿಧೇಯರಾಗಿರುವವರು. ತೀರಿಹೋದ ತಮ್ಮ ಹಿರಿಯರ ಆತ್ಮಗಳು ಸದಾ ತಮ್ಮ ಬೆಂಗಾವಲಿಗಿದ್ದು ತಮ್ಮನ್ನು ಕಾಪಾಡುತ್ತಿರುತ್ತವೆ. ಅವರ ಕೃಪಾಕಟಾಕ್ಷ ತಮ್ಮ ಮೇಲಿದ್ದು ಅಗೋಚರವಾಗಿ ನಮ್ಮನ್ನು ಅವರು ಕಾಪಾಡುತ್ತಿರುತ್ತಾರೆ ಎಂಬುದು ಅವರ ನಂಬಿಕೆ. ಭೂಮಿಯ ಮೇಲೆ ನಡೆಯುವ ಸೃಷ್ಟಿಕಾರ್ಯ ಅವರಲ್ಲಿ ವಿಸ್ಮಯವನ್ನು ಮೂಡಿಸುವಂತೆಯೇ ಹೆಣ್ಣಿನ ಮಾತೃತ್ವದ ಕುರುಹುಗಳಾದ ಬಸಿರು ಬಾಣಂತನಗಳು ಅವರಿಗೆ ಆಶ್ಚರ್ಯವೆನಿಸಿವೆ. ಪ್ರಕೃತಿಯ ಫಲವಂತಿಕೆಯ ಸಂಕೇತವಾದ ಹೆಣ್ಣು ಒಂದು ಜೀವವಾಗಿ ಮತ್ತೊಂದು ಜೀವಕ್ಕೆ ಜನ್ಮ ಕೊಡುವ ಈ ಸೃಷ್ಟಿಕ್ರಿಯೆ ಅವರಿಗೆ ವಿಶಿಷ್ಟವೆನಿಸಿತು. ಅದಕ್ಕಾಗಿ ಹೆಣ್ಣಿಗೆ ವಿಶೇಷ ಸ್ಥಾನಮಾನ ನೀಡಿ ಗೌರವವನ್ನು ನೀಡಿದ್ದಾರೆ. ಮುಂದೆ ಅದು ಮಾತೃದೇವತೆಗಳ ಆರಾಧನೆಗೂ ಕಾರಣವಾಯಿತು. ಈ ದೇವರುಗಳಿಗೆ ಪೂಜೆ ಸಲ್ಲಿಸುವುದರ ಮೂಲಕ, ಬಲಿ ನೀಡುವುದರ ಮೂಲಕ ಸಂತೃಪ್ತಿಗೊಳಿಸಲು ವಿವಿಧ ಆಚರಣೆಗಳನ್ನು ರೂಢಿಸಿಕೊಂಡರು. ಬುಡಕಟ್ಟುಗಳ ದೈವಗಳು ಮನುಷ್ಯ ಸೃಷ್ಟಿ. ಈ ದೈವಗಳನ್ನು ಕಾಣಬೇಕಾದರೆ ಎಲ್ಲೋ ಹೋಗಿ

ದೇವಾಲಯಗಳನ್ನು ಹುಡುಕಿ ದರುಶನ ಪಡೆದು ಬರಬೇಕಾಗಿಲ್ಲ. ಇವರು ತಮ್ಮ ಆಚರಣೆಗಳ ಮೂಲಕ ನಂಬಿಕೆಗಳ ಮೂಲಕ ಆ ದೈವಗಳನ್ನು ತಾವಿದ್ದಲ್ಲಿಗೆ ಕರೆಯಿಸಿಕೊಳ್ಳುವರು. ಜೇನುಕುರುಬರಾದರೆ ಬುಂಡೆ ಕರೆಯುವ ಮೂಲಕ, ಬೆಟ್ಟಕುರುಬರಾದರೆ ಬಿಂಜೆ ಕರೆಯುವುದರ ಮೂಲಕ ತಾವು ಇದ್ದಲ್ಲೇ ದೇವರನ್ನು ಕರೆಯಿಸಿಕೊಳ್ಳುತ್ತಾರೆ. ಈ ದೇವರುಗಳು ತಮ್ಮ ನಂತರ ಹುಟ್ಟಿದವರು. ತಮ್ಮ ಅಜ್ಜಯ್ಯನಿಂದ ಈ ದೈವಗಳು ಸೃಷ್ಟಿಯಾದವು ಎಂಬುದು ಅವರ ನಂಬಿಕೆ. ಬೆಟ್ಟಕುರುಬರ ಬಿಂಜೆ ಪದ್ಯದಲ್ಲಿ ಹೇಳುವ ಪ್ರಕಾರ ಅಜ್ಜಯ್ಯ ಮೊದಲು ಹುಟ್ಟಿದ್ದು, ಅನಂತರ ಅವನು ದೇವರನ್ನು ಸೃಷ್ಟಿ ಮಾಡುತ್ತಾನೆ. ನೂರಾಳಪ್ಪನೆಂಬ ದೇವರ ಜೊತೆಯಲ್ಲಿ ಕೇರಳದಿಂದ ಬಂದವರು ನಮ್ಮ ಅಜ್ಜಯ್ಯ. ಈ ದೇವರ ಜೊತೆಗೆ ನಮ್ಮ ಪೂರ್ವಿಕರು ಹುಟ್ಟಿದವರು. ಆ ದೇವರುಗಳು ಕೇರಳದ ದೇವರಾದರೂ ಸರಿ, ತಮಿಳುನಾಡಿನ ದೇವರಾದರೂ ಸರಿ ತಾವಿದ್ದಲ್ಲಿಗೆ ಆ ದೈವಗಳನ್ನು ಕರೆಯಿಸಿಕೊಂಡು ತಮ್ಮ ಕಷ್ಟ ಸುಖ ಹಂಚಿಕೊಳ್ಳುತ್ತಾರೆ. ಅದರಿಂದ ವರ ಕೇಳಬಹುದು, ಪ್ರಶ್ನೆ ಮಾಡಬಹುದು ಪರಿಹಾರವನ್ನು ಪಡೆಯಬಹುದು, ಸಮಾಧಾನವನ್ನು ಹೊಂದಬಹುದು. ನಂತರ ಈ ವಿವಿಧ ಬುಡಕಟ್ಟುಗಳ ದೈವಗಳಿಗೆ ಸಂಬಂಧಿಸಿದ ಕತೆಗಳು, ಹಾಡುಗಳು ಹುಟ್ಟಿಕೊಂಡವು. ಇದನ್ನು ಖ್ಯಾತ ಚಿಂತಕ ಆಶಿಶ್‌ನಂದಿ ಹೀಗೆ ವಿವರಿಸುತ್ತಾರೆ. 'ನನಗೆ ದೇವರುಗಳನ್ನು ಸಮೀಪಿಸುವ ಇಷ್ಟವಿಲ್ಲದಿದ್ದರೂ ಒತ್ತಾಯದಿಂದ ಅವರೇ ನನ್ನ ಸಮೀಪಕ್ಕೆ ಬರುತ್ತಿದ್ದಾರೆ. ಈ ದೇವದೇವಿಯರು, ನಾನು ಹಾಗೆ ಹೇಳಬಹುದಾದರೆ, ಅನಿವಾರ್ಯ ತರ್ಕವೆಂಬಂತೆ ನಮ್ಮ ಬದುಕಿಗೆ ಬರುತ್ತಾರೆ. ಜಾಡ್ಯದಂತೆ ಈ ಬದುಕಿಗೆ ಅಂಟುತ್ತಾರೆ, ಆವರಿಸಿ ಆಕ್ರಮಿಸಿ ನಾವು ಬಯಸದಿದ್ದರೂ ನಮ್ಮ ಬದುಕಿನಾದ್ಯಂತ ವ್ಯಾಪಿಸುತ್ತಾರೆ. ಮೇಲ್ನೋಟಕ್ಕೆ ದೇವದೇವಿಯರನ್ನು ನಿರಾಕರಿಸುವಂತೆ ಕಾಣುವ ಧರ್ಮಗಳಲ್ಲೂ ಕೂಡಾ, ದೇವತೆಗಳಿಂದ ತುಂಬಿದ ಧರ್ಮಗಳಲ್ಲಿ ಕಾಣುವ ಕೆಲವು ರೂಢಿಗಳ ಮೂಲಕ, ದೇವದೇವಿಯರು ಪ್ರವೇಶ ಮಾಡುತ್ತಾರೆ. ಅತ್ಯಂತ ನಿಷ್ಠ ಏಕದೇವತಾವಾದಿ ಹಾಗೂ ಕಡು ಮೂರ್ತಿವಿರೋಧಿ ಧರ್ಮಗಳಲ್ಲೂ ಕೂಡ ದೇವತೆಗಳು ಇದ್ದಾರೆ. ದೇವರುಗಳು ನಮ್ಮ ಬದುಕನ್ನು ವ್ಯಾಪಿಸಿಕೊಂಡಿದ್ದಾರೆ ಎಂದು ಹೇಳಿದ್ದರ ಅರ್ಥವು ಒಬ್ಬ ಆಧುನಿಕಗೊಂಡ ನಗರೀಕೃತ ಸುಸಂಸ್ಕೃತ ವ್ಯಕ್ತಿಯು ಹೀಗೆ ಹೇಳುವುದಕ್ಕಿಂತ ಭಿನ್ನವಾದದ್ದು ಅಥವಾ ಒಬ್ಬ ವಿಚಾರವಾದಿಯು ದೇವರು ತನ್ನ ಭಕ್ತನ ಬದುಕನ್ನು ವ್ಯಾಪಿಸುವ ಪ್ರಕ್ರಿಯೆಯನ್ನು ಗ್ರಹಿಸುವುದಕ್ಕಿಂತ ವಿಭಿನ್ನವಾದದ್ದು. ನಾನು ಹೇಳುತ್ತಿರುವುದು ದೇವದೇವಿಯರು ಹೆಚ್ಚು ಕಮ್ಮಿ ಮನುಷ್ಯ ಅರೆಮನುಷ್ಯ ರೂಪಗಳಲ್ಲಿಯೇ ನಮ್ಮ ಬದುಕನ್ನು ಪ್ರವೇಶಿಸುತ್ತಾರೆ ಎನ್ನುವುದನ್ನು. ಪ್ರಪಂಚದ ಈ ಭಾಗದಲ್ಲಿ, ಅಂದರೆ ದಕ್ಷಿಣ ಏಶಿಯಾದಲ್ಲಿ, ದೇವರು ಮತ್ತು ಮನುಷ್ಯರು ಪರಸ್ಪರ ಅಷ್ಟೇನೂ ದೂರದವರಲ್ಲ. ಬೇರೆ ಹಲವು ಸಂಸ್ಕೃತಿಗಳಲ್ಲಿ ಕಾಣುವುದಕ್ಕಿಂತ ಭಿನ್ನವಾಗಿ ಇಲ್ಲಿ ದೇವರು ಮತ್ತು ಮಾನವರ ನಡುವೆ ಅಂತರ ಕಡಿಮೆ.

ಆದ್ದರಿಂದಲೇ ಇಲ್ಲಿ ಮನುಷ್ಯ ಕೆಲವೊಮ್ಮೆ ದೇವರನ್ನು ತನಗೆ ಬೇಕಾದಂತೆ ಬಣ್ಣಿಸಿಕೊಳ್ಳಲು ಸಾಧ್ಯ. ತಪಸ್ಸಿನ ಮೂಲಕ, ವಿವಿಧ ಆಚಾರಗಳ ಮೂಲಕ ಅಥವಾ ಕೆಲವೊಮ್ಮೆ ಅಧಿಕ ಶಕ್ತಿಯ ಬೇರೊಂದು ದೇವರನ್ನು ಒಲಿಸಿಕೊಳ್ಳುವ ಮೂಲಕ ಆತ ಇದನ್ನು ಸಾಧಿಸಿಕೊಳ್ಳಬಲ್ಲ. ಅರ್ಥಾತ್ ಮಾನವರು ಯಾವತ್ತೂ ದೇವರಿಗಿಂತ ಕೆಳಗಿನ ಸ್ತರದಲ್ಲೇ ಇರುವುದು ಅನಿವಾರ್ಯವೇನೂ ಅಲ್ಲ. ಅದ್ದರಿಂದ ಇಲ್ಲಿ ದೇವರು ಮತ್ತು ಮಾನವರ ನಡುವೆ ಬೃಹತ್ ಕಂದರವೇನೂ ಇಲ್ಲ. ದೇವದೇವಿಯರು ಅದರಲ್ಲೂ ವಾಮಮಾರ್ಗದ ದೇವದೇವಿಯರು ಆಯಾ ಕಾಲದ ಸಾಮಾಜಿಕ ಚಲನೆಗಳ ಮೇಲೆ ಬೆಳಕು ಚೆಲ್ಲುತ್ತಾರೆ. ಆಯಾ ಸಮಾಜ ಸಂಸ್ಕೃತಿಯ ಭಯ ಆತಂಕಗಳನ್ನು ಪ್ರತಿನಿಧಿಸುತ್ತಾರೆ. ಧರ್ಮಶಾಸ್ತ್ರಗಳನ್ನು ಎಷ್ಟೇ ಶಿಸ್ತಿನಿಂದ ವಿಶ್ಲೇಷಿಸಿದರೂ ಅಥವಾ ಉಚ್ಚ ಸಂಸ್ಕೃತಿಯ ದೇವತೆಗಳನ್ನು ಎಷ್ಟೇ ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದರೂ ದೊರಕದ ಒಳನೋಟಗಳು ನಮಗಿಲ್ಲಿ ಲಭ್ಯವಾಗುತ್ತವೆ. ದೇವದೇವಿಯರು ಈ ಜಗತ್ತೇನಿದೆ ಅದು, ಭೂತ ದೆವ್ವ ರಾಕ್ಷಸರ ಇನ್ನೊಂದು ಜಗತ್ತಿನೊಂದಿಗೆ ಪೂರ್ಣವಾಗಿ ಬೆಸೆದುಕೊಂಡಿದೆ. ಆ ಜಗತ್ತಿಲ್ಲದೇ ಈ ಜಗತ್ತು ಇಲ್ಲ ಎನ್ನುವಷ್ಟರಮಟ್ಟಿಗೆ ಅವುಗಳ ನಡುವೆ ಸಂಬಂಧವಿದೆ. ಇದನ್ನು ಸುರ ಅಸುರರ ಕಲ್ಪನೆಯೆನ್ನಬಹುದು. ಆದಿತ್ಯ ದೈತ್ಯರ ಕಲ್ಪನೆಯೆನ್ನಬಹುದು. ಒಟ್ಟಿನಲ್ಲಿ ದೇವತೆಗಳು ಆ ಇನ್ನೊಂದು ಜಗತ್ತಿನ ತಮ್ಮ ಪ್ರತಿದ್ವಂದ್ವಗಳೊಂದಿಗೆ ಸೇರದೇ ಸಂಪೂರ್ಣರಾಗುವುದಿಲ್ಲ. ಈ ಒಟ್ಟು ಜಗತ್ತನ್ನು ನೀವು ಬೇಕಾದರೆ ಉದ್ದ, ಅಗಲ, ಆಳಗಳಿರುವ ಒಂದು ಅವಕಾಶವೆಂದು ಕಲ್ಪಿಸಬಹುದು. ಈ ಅವಕಾಶದ ಒಂದರ್ಧದಲ್ಲಿ ದೇವದೇವಿಯರಿದ್ದಾರೆ. ಅವರಲ್ಲಿ ಮತ್ತೆ ಒಳ್ಳೆಯವರು ಕೆಟ್ಟವರು ಸದಾಚಾರದವರು ವಾಮಾಚಾರದವರು ಬೇರೆ ಬೇರೆ ಜಾಗಗಳಲ್ಲಿದ್ದಾರೆ. ಹಾಗೆಯೇ ಇನ್ನೊಂದು ಇಡಿಯ ಅರ್ಧದಲ್ಲಿ ಭೂತ ದೆವ್ವಗಳ ಜಗತ್ತಿದ್ದು ಅದು ಮೊದಲರ್ಧದೊಂದಿಗೆ ಬೇರ್ಪಡಿಸಲಾಗದಂತೆ ಬೆಸೆದುಕೊಂಡಿದೆ. ಹೀಗೆ ದೇವರು ಮತ್ತು ದಾನವರ ಜಗತ್ತಿನ ನಡುವೆ ಸೀಮಾರೇಖೆ ಮಸುಕಾಗಿರುವ ಕಾರಣದಿಂದಲೇ ನಮ್ಮ ಸಮಾಜದಲ್ಲಿ ಒಂದು ವಿಶಿಷ್ಟ ರೀತಿಯ ಸಹನೆ ಸಹಬಾಳ್ವೆಗಳು ಸಾಧ್ಯವಾಗಿವೆ.'[1] ಬುಡಕಟ್ಟು ಸಮುದಾಯಗಳ ಅಧ್ಯಾತ್ಮ ಮತ್ತು ಅನುಭಾವಗಳ ಮೂಲ ಸೆಲೆ ಇವರ ದೇವದೇವಿಯರೇ ಆಗಿದ್ದಾರೆ. ಹಾಗಾಗಿ ಆದಿವಾಸಿಗಳ ದೈವಗಳ ಆರಾಧನೆಯ ಅಧ್ಯಯನವೆಂದರೆ ಆದಿವಾಸಿಗಳ ತಿಳುವಳಿಕೆಯ ವಿವಿಧ ಧಾರೆಗಳ ಅಧ್ಯಯನವೇ ಆಗಿಬಿಡುತ್ತದೆ. ಬುಡಕಟ್ಟು ದೈವಗಳ ಕುರಿತು ವಿಶೇಷ ಅಧ್ಯಯನ ಮಾಡಿರುವ ಹಿ.ಚಿ. ಬೋರಲಿಂಗಯ್ಯನವರು ಬುಡಕಟ್ಟು ದೈವಗಳ ಹುಟ್ಟಿನ ಕುರಿತು ಹೀಗೆ ಅಭಿಪ್ರಾಯಪಡುತ್ತಾರೆ. 'ನಿರ್ದಿಷ್ಟ ದೇವರು ಅಥವಾ ನಿರ್ದಿಷ್ಟ ಧರ್ಮ ಉದಯಿಸುವ ಮೊದಲು ಮನುಷ್ಯ ನಿಸರ್ಗದ ಅನೇಕ ಸಚರಾಚರ ಪ್ರಾಣಿ ಸಮುದಾಯಗಳಲ್ಲಿ ತಾನೂ ಒಬ್ಬನಾಗಿ ಬದುಕುತ್ತಿದ್ದ. ಗುಂಪು ಗುಂಪುಗಳಲ್ಲಿ ವಾಸಿಸುತ್ತಿದ್ದ. ಅವರಿಗೆ, ತಮ್ಮ ತಮ್ಮ ಗುಂಪುಗಳ ಗುರುತು ಹೇಳಿಕೊಳ್ಳಲು

ಏನಾದರೂ ಆಧಾರ ಬೇಕಾಗಿತ್ತು. ಆಯಾ ಪ್ರದೇಶದಲ್ಲಿ ತಮ್ಮನ್ನು ಪ್ರಭಾವಿಸಿದ ಪ್ರಾಣಿ, ಸಸ್ಯ, ನದಿ, ಬೆಟ್ಟ ಅಥವಾ ವಸ್ತುವಿನ ಹೆಸರನ್ನು ತಮ್ಮ ತಮ್ಮ ಗುಂಪಿನ ಲಾಂಛನವನ್ನಾಗಿ ಅವರು ಇಟ್ಟುಕೊಂಡರು. ಮುಂದೆ ಇದೇ ಅವರ ಕುಲಚಿಹ್ನೆಯಾಯಿತು. ಒಂದು ಮಾತನ್ನು ಇಲ್ಲಿ ಗಮನಿಸಬೇಕು, ಕುಲಚಿಹ್ನೆ ಅವರನ್ನು ಅವರು ಗುರುತಿಸಿಕೊಳ್ಳುವ ಸಾಧನವಾಗಿತ್ತೇ ಹೊರತು, ದೈವವಾಗಿರಲಿಲ್ಲ. ಆದರೆ, ಬರಬರುತ್ತಾ ಆಯಾ ಗುಂಪುಗಳಲ್ಲಿ ಬಲಾಢ್ಯ ಮತ್ತು ದುರ್ಬಲ ಎಂಬ ಗುಂಪುಗಳಾದವು. ಒಂದು ಮತ್ತೊಂದನ್ನು ನಿಯಂತ್ರಿಸ ಬಯಸಿತು. ಸಮಾಜದಲ್ಲಿ ತನ್ನ ಸ್ಥಾನವನ್ನು ಮೇಲೇರಿಸಿಕೊಂಡ ಲಾಂಛನ ಇತರರೂ ಅನುಸರಿಸಬೇಕಾದ ಅಥವಾ ಗೌರವಿಸಬೇಕಾದ ಸಂಗತಿಯಾಯಿತು. ಹೀಗೆ ಗೌರವಿಸಲ್ಪಟ್ಟ ಲಾಂಛನವೇ ಮುಂದೆ ದೈವವಾಗಿ ರೂಪು ಪಡೆದಿರಬೇಕು[2] ಎನ್ನುತ್ತಾರೆ. ಒಟ್ಟಿನಲ್ಲಿ ಆದಿವಾಸಿಗಳಲ್ಲಿ ಮನುಷ್ಯ ಮತ್ತು ದೈವಗಳ ನಡುವೆ ಅಂತರಗಳಿಲ್ಲ. ಆದರೆ ಪರಸ್ಪರರ ನಡುವೆ ಅಪಾರ ಗೌರವಗಳಿವೆ. ಮನುಷ್ಯ ಮತ್ತು ದೈವಗಳೆರಡೂ ಆದಿವಾಸಿ ಸಮಾಜದಲ್ಲಿ ಒಬ್ಬರನ್ನೊಬ್ಬರು ಅವಲಂಬಿಸದವರು ಮತ್ತು ಲೌಕಿಕದ ಕಾರಣಕ್ಕಾಗಿ ಪರಸ್ಪರ ಮುಖಾಮುಖಿಯಾಗುತ್ತ ತಮ್ಮ ವಿಶಿಷ್ಟ ತಿಳುವಳಿಕೆಯನ್ನು ರೂಪಿಸುತ್ತಾ ಬಂದವರು. ಇನ್ನು ಕೊಡಗಿನ ಬುಡಕಟ್ಟುಗಳ ದೈವಗಳು ಅವರು ಮೌಖಿಕ ಸಾಹಿತ್ಯದಲ್ಲಿ ಹೇಗೆ ಚಿತ್ರಿಸಿಲ್ಪಟ್ಟಿದ್ದಾರೆ ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

ಕೊಡಗಿನ ಬುಡಕಟ್ಟು ಸಮುದಾಯದವರು ಪ್ರಾಂತ್ಯವಾರು ವಿಂಗಡಣೆಗೂ ಮುನ್ನ ಕೊಡಗು ಕೇರಳದ ಭಾಗದಲ್ಲಿ ಅಲೆಮಾರಿಗಳಾಗಿ ಬದುಕು ನಡೆಸುತ್ತಿದ್ದರು. ಈ ಸಂದರ್ಭದಲ್ಲಿ ಕೇರಳ ಮತ್ತು ಕೊಡಗಿನ ಕಾಡುಗಳು ಈ ಮೂಲ ನಿವಾಸಿಗಳ ಕೇಂದ್ರಸ್ಥಾನವಾಗಿತ್ತು. ಸಂಪ್ರದಾಯ, ನಿಯಮ, ನಂಬಿಕೆ, ಆಚರಣೆ, ದೇವರು ಮೊದಲಾದ ವಿಚಾರಗಳಲ್ಲಿ ಈ ಎರಡೂ ಪ್ರದೇಶಗಳ ನಡುವೆ ಬಹಳಷ್ಟು ಸಾಮ್ಯತೆಗಳಿರುವುದನ್ನು ನಾವು ಗಮನಿಸಬಹುದು.

## 7.2. ಎರವರ ದೈವಗಳು, ಆಚರಣೆಗಳು ಮತ್ತು ಮೌಖಿಕ ಸಾಹಿತ್ಯ

ಪಂಜರಿ ಎರವರು ತಮ್ಮ ಕುಲಗಳನ್ನು ಮಂಜು ಎಂದು ಕರೆಯುತ್ತಾರೆ. ಇವರಲ್ಲಿ ಮುಖ್ಯವಾಗಿ ಮೂರು ಮಂಜುಗಳಿವೆ ಮತ್ತು ಮೂರು ಮಂಜುಗಳಿಗೂ ಒಬ್ಬೊಬ್ಬ ದೇವರಿದ್ದಾರೆ. ಇವರನ್ನು ಕುಲದೇವತೆಗಳು ಎಂದು ಕರೆಯಬಹುದು. ಅವುಗಳೆಂದರೆ:

1. ಪಾಕತ್ತಯ್ಯ
2. ಪೂಕರಿಮಗೆ ಕರಿಯಪ್ಪೆ
3. ಕರಿಜಾತೆ ಮಾರಿಯಮ್ಮ

**2. ಪೂಕರಿಮಗೆ ಕರಿಯಪ್ಪ:** 'ತೊಂಡನಾಡಿನಲ್ಲಿ ಒಂದೆಡೆ ಮೂವರು ಅಕ್ಕ ತಂಗಿಯರು ಗಂಡಂದಿರೊಡನೆ ಸಂಸಾರ ಮಾಡುತ್ತಿದ್ದರು. ಅವರಿಗೆ ಒಟ್ಟು ಏಳು ಮಂದಿ ಹೆಣ್ಣು ಮಕ್ಕಳಾದರು. ಈ ಏಳು ಮಂದಿಯೇ ಪೂಕ್ಕಾರಿಗಳು. ಎಂದರೆ ಹೂವಿನ ತೋಟದವರು ಎಂದರ್ಥ. ಒಮ್ಮೆ ಅವರು ಹೂ ತೋಟ ಮಾಡಲು ನಿಶ್ಚಯಿಸಿಕೊಂಡು ಕಾಡುಮರಗಳನ್ನು ಕಡಿಸಿ ಸುಟ್ಟು, ಏಳು ಹೂತೋಟಗಳನ್ನು ಮಾಡಿ ಅಲ್ಲಿ ಗುಲಾಬಿ ಹೂಗಳನ್ನು ಬೆಳೆಸುತ್ತಾರೆ. ಆ ತೋಟದಲ್ಲಿ ಸಮೃದ್ಧವಾಗಿ ಹೂಗಳು ಅರಳುತ್ತವೆ. ಅವರು ಆ ಹೂಗಳನ್ನು ಕೊಯ್ದು ಏಳು ಮಾಲೆಗಳನ್ನು ಕಟ್ಟುತ್ತಾರೆ. ಅವುಗಳನ್ನು 'ಬಡಾಕಿಯೆಂಜ ಮಾಲೆತಾನತ್ತಿ' ಅಂದರೆ 'ಉತ್ತರವೆಂಬ ಮೂಲಸ್ಥಾನ'ದಲ್ಲಿ ಏಳು ಕುಕ್ಕೆಗಳಲ್ಲಿರಿಸಿ ಅಲ್ಲಿನ ಬೆಳ್ಳಿಯ ಸಿಂಹಾಸನದಲ್ಲಿ ಕುಳಿತರು. ಅಲ್ಲಿಂದ ಮಲಗುವ ಹಜಾರಕ್ಕೆ ಹೋಗಿ ಮಲಗಲು ಸಿದ್ಧವಾಗುವಾಗ ಏನೋ ಸರಪರ ಶಬ್ದ ಕೇಳಿ ಬಂತು. ಬಂದು ನೋಡಿದರೆ ಆ ಏಳು ಹೂಮಾಲೆಗಳ ನಡುವೆ ಒಂದು ಗಂಡು ಮಗು ಹುಟ್ಟಿತ್ತು. ಅದರಿಂದ ಈ ದೈವ "ಏವು ದಂಡೆ ಪೂದಂಡೆಲಿ, ಪುರಾಂದ ಪೂಕ್ಕರಿ ಮಗೆ ಕರಿಯಪ್ಪೆ; ಇವನೂ ಸಹ ಪಾಕತ್ತಯ್ಯನ ಹಾಗೆಯೇ ಹುಟ್ಟಿದಾಗಲೇ ಮಾತನಾಡಿ ಓದು, ಬರಹ ಹಾಡು ಕಲಿಯಬೇಕೆಂದು ಹಠ ಹಿಡಿದು ಕಲಿತು ಕಲಿತವರನ್ನೇ ಸೋಲಿಸಿದ. ವಿದ್ಯಾವಂತನಾಗಿ ಬಂದ ಮಗನಿಗೆ ಅವನ ತಾಯಂದಿರು ನಾಮಕರಣ, ಉಪನಯನ ಸಮಾರಂಭಗಳನ್ನು ಮಾಡಿದರು. ಇವರು ಬಡಾಕು ಮಂಜಿನ ದೈವ.'[5] ಹಾಗೆಯೇ ಪೂಕರಿಮಗೆ ಕರಿಯಪ್ಪನಿಗೆ ಪೂಜೆ ಮಾಡುವವನು ಬ್ರಾಹ್ಮಣರಂತೆ ಜನಿವಾರ ಧರಿಸಬೇಕು. ಹಾಗೆಯೇ ಹಲವು ನೇಮ ನಿಷ್ಠೆಗಳಿರಬೇಕು. ಇದು ವೈದಿಕಶಾಹಿಯ ಅನುಕರಣೆಯಾಗಿರಬಹುದು. ಇಲ್ಲಿ ತೆರೆ ಕಟ್ಟುವಾಗ ಮಾಂಸ, ಮದ್ಯ, ನಿಷೇಧ.

**3. ಕಾಳಪ್ಪ ಪರದಾದಿ:** 'ಬೀರಪಳ್ಳಿ ಎಂಬಲ್ಲಿ ಒಬ್ಬ ಬಲಿಷ್ಟ. ಅವನ ಬಳಿಯಲ್ಲಿ ಏಳು ಜೋಡಿ ಅಕ್ಕತಂಗಿಯರಿದ್ದರು. ಒಂದು ದಿನ ಅವರು ಉತ್ತರದ ಮೂಲಸ್ಥಾನವನ್ನು ಹಸುವಿನ ಸೆಗಣಿಯಿಂದ ಸಾರಿಸಿ ಶುದ್ಧ ಮಾಡಿದರು. ಅನಂತರ ಒನಕೆ, ಮೊರ, ಪೊರಕೆಗಳನ್ನು ಬಳಸಿ ಮಣ್ಣು ಕುಟ್ಟಿ ಅದಕ್ಕೆ ಮರಳು ಬೆರೆಸಿ ಆ ಜಾಗದಲ್ಲಿ ಹರಡಿ ಮರಳು ಹಾಗೂ ಹೂವುಗಳಲ್ಲಿ ಹಸೆಗಳನ್ನು ಬರೆದರು. ಅದರ ಮೇಲೆ ಒನಕೆ, ಮೊರ, ಪೊರಕೆಗಳನ್ನಿರಿದರು. ಈ ದಿವ್ಯ ಸಾಧನಗಳನ್ನು ಮುತ್ತುಲಾಕೆ, ಪೊಮ್ಮುರಾ, ಪೊನ್ನೂಜಲು ಎಂದು ಕರೆದಿದೆ. ಅವರ ತೆರೆಹಾಡು, ಅನಂತರ ಅಲ್ಲಿದ್ದ ಮಂಚದ ಮೇಲೆ ಕುಳಿತರು, ಆಗ ಅವರಿಗೆ ಮಗುವಿನ ಶಬ್ದ ಕೇಳಿ ಬಂತು. ಅದು ಅಳಲಾರಂಭಿಸಿತು ಆ ಮಗುವೇ ಕಾಳಪ್ಪ. ಅವನು ಸಹ ಹುಟ್ಟಿದೊಡನೆಯೆ ವಿದ್ಯೆ ಕಲಿಯ ಬಯಸಿದ. ಕಲಿತ, ಅವನಿಗೆ ನಾಮಕರಣ ಉಪನಯನ ಜರುಗಿತು. ಕಾಳಕೊಟ್ಟ ಚೆಮ್ಮದ ದೈವ ಇವನು. ಉಳಿದ ಚೆಮ್ಮದವರೂ ಇವನನ್ನು ಗೌರವಿಸುತ್ತಾರೆ.'[6] ಈ ಕತೆಗಳಲ್ಲಿ ಎರವರ

ಸಾಂಸ್ಕೃತಿಕ ನಾಯಕರ ಹುಟ್ಟೇ ಅತಿಮಾನುಷವಾದದ್ದು. ಜೊತೆಗೆ ಹುಟ್ಟುತ್ತಲೇ ಅವರು ಓದು ಅಕ್ಷರ ಬರೆಯಬಲ್ಲ ವಿದ್ಯಾವಂತರು. ಹೀಗೆ ವಿದ್ಯಾವಂತರಾಗಿ ಮುಖ್ಯವಾಹಿನಿಯ ಪಂಡಿತರನ್ನು ಮಣಿಸುವವರು. ಆದರೆ ಈ ಕಥೆಗಳಲ್ಲಿ ಬರುವ ಉಪನಯನ, ನಾಮಕರಣ, ವಿದ್ಯಾಭ್ಯಾಸ ಎಂಬ ಪದ್ಧತಿಗಳು ವೈದಿಕ ಆಚರಣೆಗಳಾಗಿವೆ. ಎರವರ ಹಲವು ಆಚರಣೆಗಳಲ್ಲಿ ವೈದಿಕತೆಯ ಆಚರಣೆಗಳು ಮತ್ತು ಪದಗಳು ಮತ್ತೆ ಮತ್ತೆ ಬರುವುದು ವಿಶೇಷ. ಎರವರು ಇತರೆ ಬುಡಕಟ್ಟುಗಳಿಗಿಂತ ಮೊದಲೆ ಊಳಿಗಮಾನ್ಯ ಸಮಾಜದ ಭಾಗವಾಗಿ ಹೋದ ಕಾರಣಕ್ಕಾಗಿ ಅವರು ವೈದಿಕ ಆಚರಣೆಗಳನ್ನು ಅನುಕರಿಸುವ ಅನಿವಾರ್ಯತೆ ಬಂದಂತಿದೆ. ತಮ್ಮ ಸುತ್ತಲಿನ ಸಮಾಜದಲ್ಲಿ ನಡೆಯುತ್ತಿದ್ದ ದೈವಿಕ ಆಚರಣೆಗಳಲ್ಲಿ ಬ್ರಾಹ್ಮಣ್ಯದ ಪ್ರಭಾವವನ್ನು ಗಮನಿಸಿ ಅದರಿಂದ ಪ್ರೇರೇಪಿತರಾಗಿ ತಾವು ಅದನ್ನು ರೂಢಿಸಿಕೊಂಡಿರಬಹುದು ಅಥವಾ ತಮ್ಮ ಕಟ್ಟುನಿಟ್ಟಿನ ನಂಬಿಕೆ ಆಚರಣೆಗಳನ್ನು ಹೊಂದಿರುವ ಈ ಸಮುದಾಯವು ಬ್ರಾಹ್ಮಣರನ್ನು ಅನುಕರಿಸುವ ಮೂಲಕ ತಾವು ಮೇಲರಿಮೆ ಹೊಂದುವ ಕಾರಣವೂ ಇರಬಹುದು.

ಕೊನೆಯದು ಕರಿಚಾತೆ ಮಾಳಿಯಮ್ಮೆ ಎಂಬ ಹೆಣ್ಣು ದೈವ. ಈಕೆ ಮೊದರ್ ಮಂಜಿನ(ಕುಲ) ದೈವ. ಎರವರು ಇವಳನ್ನು ಪೇಯಿ, ಭೂತಗಳ ಸಾಲಿಗೆ ಸೇರಿಸಿದ್ದಾರೆ. ಮೇಲಿನ ಮೂರು ದೈವಗಳ ತೆರೆಯನ್ನು(ವೇಷ) ಶುಭ ಸಮಾರಂಭದಲ್ಲಿ ಕಟ್ಟಿದರೆ ಈಕೆಯ ತೆರೆಯನ್ನು ಶುಭ ಸಂದರ್ಭದಲ್ಲಿ ಕಟ್ಟುವುದಿಲ್ಲ. ಎರವರು ಮಾತೃದೇವತಾರಾಧಕರು ಎಂಬುದಕ್ಕೆ ಹಲವು ಉದಾಹರಣೆಗಳನ್ನು ಈಗಾಗಲೆ ನಾವು ಗಮನಿಸಿದ್ದೇವೆ. ಹಾಗೆ ಇವರು ಮೂಲದಲ್ಲಿ ಮಾತೃ ದೇವತೆಯ ಆರಾಧಕರಾಗಿದ್ದವರು. ಸಮಾಜದಲ್ಲಿ ಪುರುಷರ ಪ್ರಾಬಲ್ಯ, ಅಧಿಕಾರ ಹೆಚ್ಚಾಗುತ್ತಿದ್ದಂತೆ ಪಿತೃದೇವತೆಗಳ ಆರಾಧನೆ ರೂಢಿಗೆ ಬಂದಿರಬಹುದು. ಅದರ ಪ್ರತೀಕವಾಗಿ ಸಮುದಾಯದ ಕಷ್ಟ, ಕಾರ್ಪಣ್ಯಗಳಲ್ಲಿ ಶಕ್ತಿಯ ರೂಪವಾದ ಮಾತೃದೇವತೆಯರನ್ನು ಆರಾಧಿಸಿದರೆ, ಹಬ್ಬ ಪೂಜೆಗಳಲ್ಲಿ ಮಾತ್ರ ಪಿತೃದೇವತೆಗಳ ಪೂಜೆ ನಡೆಯುತ್ತದೆ. ಇದು ಹೆಣ್ಣು ದೈವಕ್ಕಿರುವ ಅಗಾಧ ಸಾಮರ್ಥ್ಯವನ್ನು ಅದರ ಮೇಲಿರುವ ನಂಬಿಕೆಯನ್ನು ತಿಳಿಯಬಹುದು. ಹಾಗೆಯೇ ಹೆಣ್ಣು ಎಂಬ ಕಾರಣಕ್ಕೆ ಅವಳಿಗೆ ದೈವದ ಸ್ಥಾನಮಾನಗಳನ್ನು ನೀಡದೆ. ಪೇಯಿಯ ಸ್ಥಾನ ನೀಡಿರುವುದು ಪುರುಷಾಧಿಪತ್ಯದ ಕುರುಹುಗಳಾಗಿ ಕಂಡುಬರುತ್ತದೆ. ವಿವಿಧ ಸಂದರ್ಭದಲ್ಲಿ ಈ ದೇವತೆಗಳಿಗೆ ಬಲಿಯನ್ನೂ ಕೊಡಲಾಗುತ್ತದೆ. ಮುಖ್ಯವಾಗಿ ಜನನದ ಸಂದರ್ಭದಲ್ಲಿ ಮಗುವಿಗೆ ದೆವ್ವಗಳು ಕಾಟ ಕೊಡಬಾರದು ಎಂಬ ಕಾರಣಕ್ಕೆ ಈ ದೇವತೆಗೆ ಹುಂಜದ ಬಲಿ ನಿಡುವ ಪದ್ಧತಿ ಇವರಲ್ಲಿದೆ. ಎರವರು ಸಾಮಾನ್ಯವಾಗಿ ಮನೆಯಲ್ಲಿಯೇ ಹೆರಿಗೆಯನ್ನು ಮಾಡಿಸುತ್ತಾರೆ. ಪಂಜರಿ ಎರವರು ಸೂಲಗಿತ್ತಿಯನ್ನು ಬೇತೆಕಾರ್ತಿ ಎಂದೂ ಫಣಿ ಎರವರು ಈಚೆಕಾರತಿ ಎಂದೂ

ಕರೆಯುತ್ತಾರೆ. ಮಗು ಹುಟ್ಟಿದ ನಂತರ ಹೊಕ್ಕಳ ಬಾಯನ್ನು ಬಿದಿರಿನ ದಬ್ಬೆಯ ಸಹಾಯದಿಂದ ಕತ್ತರಿಸುತ್ತಾರೆ. ಮಗು ಹುಟ್ಟಿದ ಮೂರನೇ ದಿನ ಹುಂಜವನ್ನು ಬಲಿ ಕೊಡಲಾಗುತ್ತದೆ. ಬಲಿ ಕೊಡುವ ಮೊದಲು ಹುಂಜವನ್ನು ಮಗುವಿನ ತಲೆ ಮೇಲೆ ಹಿಡಿದು 'ಇಪ್ಪಿ ಮೇಲೆ ತಯ್ಯಾಟೆ

ಕುಟ್ಟುತ್ತು ಕರುಂಗಾಳಿಯಾಟೆ
ಏದೇ ಚಾವುಂಡಿ
ಬೀರೆ ಕಲ್ಲು ರುಚಿಯಾಟೆ ಕಣ್ಣು
ಬೆಟ್ಟಿಂದೆಲ ಬುಟ್ಟು
ನಾ ಕೊಂಜ ಕೋಯಿನ
ಚೋರೆ ಕುಟಂಚು
ಚಂತೋಚತಿ ಬುಡಾನು
ಇಂಜುಕು ಇಟ್ಟು ನಾಳಲಿ
ಕಳ್ಳು, ಕರಿತೀರಿ ಕಿಂಜ
ಬಾರೆ ಎನ್ನಾಯ

ಎಂದು ಹಾಡುತ್ತಾರೆ.'[7] ದೇವರು, ದೆವ್ವ, ಭೂತ, ಪ್ರೇತ ಯಾವುದೂ ಕೂಡ ಮಗುವಿಗೆ ತೊಂದರೆ ಕೊಡಬಾರದು ಎಂಬ ಕಾರಣಕ್ಕಾಗಿ ಈ ಆಚರಣೆಯನ್ನು ನಡೆಸುತ್ತಾರೆ. ಮುಂದಿನ ಎಂಟು ದಿನಗಳಲ್ಲಿ ಸಾರಾಯಿ, ಮಾಂಸ ಮೊದಲಾದವುಗಳನ್ನು ನೈವೇದ್ಯ ಮಾಡುತ್ತಾರೆ.

**ಪೇಯಿಬಳೆ:** ಪೇಯಿ ಎಂದರೆ ಎರವ ಭಾಷೆಯಲ್ಲಿ ದೆವ್ವ ಎಂದರ್ಥ. ಪೇಯಿ ಬಳೆ ಎಂದರೆ ದೆವ್ವದ ಬಳೆ. ಪೇಯಿ ಬಳೆ ಹಿತ್ತಾಳೆಯ ಬಳೆ. ಎರವರ ಸಾವು, ತಿಥಿ, ಕ್ಷುದ್ರ ಆಚರಣೆಗಳಲ್ಲಿ ಇದಕ್ಕೆ ವಿಶೇಷ ಸ್ಥಾನವಿದೆ. ಅಲ್ಲದೆ ಈ ಸಮುದಾಯದಲ್ಲಿ ಯಾರಿಗಾದರೂ ಪಂಚಾಯಿತಿ ಶಿಕ್ಷೆ ನೀಡಿದರೆ ಅವರು ದಂಡದ ರೂಪದಲ್ಲಿ ಈ ಬಳೆಯನ್ನು ನಿರ್ದಿಷ್ಟ ಸಂಖ್ಯೆಯಲ್ಲಿ ಒಪ್ಪಿಸಬೇಕಾಗುತ್ತದೆ. ಎರವರು ಮಾಟಮಂತ್ರಗಳನ್ನು ನಂಬುತ್ತಾರೆ ಮತ್ತು ಅದಕ್ಕೆ ಇವರು ಹೆದರುತ್ತಾರೆ ಕೂಡ. ತಾವು ಹೊಸದಾಗಿ ಕಟ್ಟಿದ ಮನೆಯೊಳಗೆ ಕೆಟ್ಟದಾಗಬಾರದು ಎಂಬ ಕಾರಣಕ್ಕೆ ಮುಂಬಾಗಿಲ ಮೇಲೆ ಈ ಹಿತ್ತಾಳೆ ಬಳೆಯನ್ನು ಕನ್ನೆಲಾಡಿಯಿಂದ ಮಂತ್ರಿಸಿ ಕಟ್ಟುತ್ತಾರೆ.

**ಎರವರ ಹಬ್ಬಗಳು:** ಎರವರಲ್ಲಿ ಹಬ್ಬದಂದು ತೆರೆ ಕಟ್ಟುವುದು ಒಂದು ಸಂಪ್ರದಾಯವಾಗಿದೆ. ಅದರಲ್ಲಿ ಮುಖ್ಯವಾಗಿ ಕುಳಿಯನಿಗೆ ತೆರೆ ಕಟ್ಟುತ್ತಾರೆ. ಕುಳಿಯ ಎಂದರೆ ಒಂದು ಕ್ಷುದ್ರದೇವತೆ. ತೆರೆ ಎಂದರೆ ಆಟ. ಭೂತ ಅಥವಾ ದೇವರ ವೇಷ ಧರಿಸಿ ಮೈಮೇಲೆ ಆವಾಹಿಸಿಕೊಂಡು ರಾತ್ರಿಯಿಡೀ ಕುಣಿಯುವುದನ್ನು ತೆರೆ ಕಟ್ಟುವುದು ಎಂದು ಕರೆಯುತ್ತಾರೆ. ಎಂದರೆ ಯಕ್ಷಗಾನ

ವೇಷಧಾರಿಗಳಂತೆ ಬಣ್ಣ ಬಣ್ಣದ ಬಟ್ಟೆ, ಅಲಂಕಾರ ಮಾಡಿಕೊಳ್ಳುವುದು. ಇದು ಪ್ರತಿ ವ್ಯಕ್ತಿಯ ಅಲಂಕಾರವು ನಿರ್ದಿಷ್ಟ ದೇವರ ಅಥವಾ ಭೂತವನ್ನು ಪ್ರತಿನಿಧಿಸುವಂತಿರುತ್ತದೆ. ಇದು ಕೇರಳದ ತೆರೆಯ ಅನುಕರಣೆಯಾಗಿದೆ. ಕೊಡಗಿನ 'ಕುಟ್ಟ' ಎಂಬ ಪ್ರದೇಶದಲ್ಲಿ ಈ ಜಾತ್ರೆ ಪ್ರತಿವರ್ಷ ನಡೆಸುತ್ತಾರೆ. ಈ ಸ್ಥಳವು ವಿರಾಜಪೇಟೆ ತಾಲೂಕಿನ ಕೊಡಗು ಮತ್ತು ಕೇರಳದ ಗಡಿಭಾಗವಾದಲ್ಲಿದೆ. ಸುಮಾರು 7 ದಿನಗಳ ಕಾಲ ಈ ಹಬ್ಬ ಜರುಗುತ್ತದೆ. ದೇವರಿಗೆ ನೈವೇದ್ಯ(ಎಡೆ) ಇಡುವ ಸಲುವಾಗಿ ಈ ಹಬ್ಬವನ್ನು ಬಹಳ ನೇಮ-ನಿಷ್ಠೆ ಶುಚಿಯಿಂದ ಮಾಡುತ್ತಾರೆ. ಹಿಂದೆ ಎರವರು ವ್ಯವಸಾಯಗಾರರಾಗಿದ್ದವರು. ಈ ಹಬ್ಬದ ಸಮಯದಲ್ಲಿ ತಾವೇ ಬೆಳೆದ ಭತ್ತವನ್ನು ನೈವೇದ್ಯಕ್ಕೆಂದು ಮೊದಲೇ ತೆಗೆದಿರಿಸಿರುತ್ತಾರೆ. ಮೊದಲನೇ ದಿನ ಅಂದು ಭತ್ತದ ಹುಲ್ಲಿನಲ್ಲಿ ಕಟ್ಟಿ ಇಟ್ಟಿದ್ದ ಭತ್ತದ ಮೂಟೆಯನ್ನು ಇಳಿಸುತ್ತಾರೆ. ಮೈಮೇಲೆ ದೇವರು ಬಂದಿರುವ ವ್ಯಕ್ತಿಯೊಬ್ಬ ಆ ಭತ್ತವನ್ನು ಕತ್ತಿಯಿಂದ 4 ಭಾಗ ಮಾಡುತ್ತಾನೆ. ಆ ಒಂದೊಂದು ಭಾಗವು ಒಂದೊಂದು ರೀತಿಯ ಕಾರ್ಯಕ್ಕೆ ಉಪಯೋಗಿಸಲ್ಪಡುತ್ತದೆ. ಅದರಲ್ಲಿ ಒಂದು ಭಾಗವನ್ನು ಅವಲಕ್ಕಿಗೆ, ಎರಡನೆಯದನ್ನು ಅನ್ನಕ್ಕೆ, ಮೂರನೆಯ ಭಾಗವನ್ನು ಒಟ್ಟಿಗೆ ಹಾಗೂ ನಾಲ್ಕನೆಯ ಭಾಗವನ್ನು ಅಕ್ಕಿಗೆ ಎಂದು ತೆಗೆದಿಡುತ್ತಾರೆ. ಎರಡನೆಯ ದಿನದಂದು ನೈವೇದ್ಯ ಸಿದ್ಧಪಡಿಸಲು ಮೀಸಲಿರುವವರು ಸ್ನಾನ ಮಾಡಿ, ಮಡಿ ಉಟ್ಟು ಸಿದ್ಧರಾಗುತ್ತಾರೆ. ಈ ಸಮಯದಲ್ಲಿ ಆ ವ್ಯಕ್ತಿ ಬಟ್ಟೆ ಧರಿಸುವಂತಿಲ್ಲ ಕಾಡು ಸೊಪ್ಪುಗಳನ್ನು ಮೈಗೆ ಕಟ್ಟಿಕೊಳ್ಳಬೇಕು, ಈ ಆಚರಣೆಯಲ್ಲಿ ಸೊಪ್ಪು ಕಟ್ಟಿಕೊಳ್ಳುವ ಮೂಲಕ ಎರವರ ಆದಿಮ ಸಂಪ್ರದಾಯವನ್ನು ಪಾಲಿಸಿಕೊಂಡು ಬರಲಾಗುತ್ತದೆ. ಬಾಯಿಯ ಎಂಜಲು ಕೂಡ ನೈವೇದ್ಯವನ್ನು ತಾಕಬಾರದು ಎಂಬ ಕಾರಣಕ್ಕೆ ಬಾಯಿಗೆ ಬಟ್ಟೆಯನ್ನು ಕಟ್ಟಿಕೊಳ್ಳುತ್ತಾರೆ. ಹೆಂಗಸರು ಉಪವಾಸವಿದ್ದು, ಬಾಯಿಗೆ ಬಟ್ಟೆ ಕಟ್ಟಿಕೊಂಡು ಆ ಭತ್ತವನ್ನು ಕುಟ್ಟಬೇಕು. ಬಹಳ ಮಡಿಯಿಂದ ಈ ಕಾರ್ಯವನ್ನು ಕೈಗೊಳ್ಳುತ್ತಾರೆ. ಈ ರೀತಿ ಸಿದ್ಧಪಡಿಸಿದ ಅವಲಕ್ಕಿಯಿಂದ ದೇವರಿಗೆ ವಿಶೇಷ ನೈವೇದ್ಯವನ್ನು ತಯಾರಿಸುತ್ತಾರೆ.

ಮೂರನೆಯ ದಿನದಂದು ಹಬ್ಬ ನಡೆಸಲು ನಿಗದಿಪಡಿಸಿದ ಜಾಗದಲ್ಲಿ ಒಂದು ದೊಡ್ಡ ಮರದ ಕೆಳಗೆ ಚಪ್ಪರ ಹಾಕುತ್ತಾರೆ. ದೇವರಿಗೆ ತೆರೆ ಕಟ್ಟಿರುವ ವ್ಯಕ್ತಿಗಳು ಚಪ್ಪರದ ಕೆಳಗೆ ಕುಣಿಯಲು ಪ್ರಾರಂಭಿಸುತ್ತಾರೆ. ನೆರೆದ ವ್ಯಕ್ತಿಗಳೂ ಕೂಡ ಈ ನೃತ್ಯದಲ್ಲಿ ಭಾಗವಹಿಸಬಹುದು. ಇದು 4 ದಿನಗಳ ಕಾಲ ನಡೆಯುತ್ತದೆ. 4ನೇ ದಿವಸ 'ಪನಾಲಿ' ಎಂದು ಕರೆಯುವ ವ್ಯಕ್ತಿ 24 ತಾಸು ನಿರಂತರವಾಗಿ ಹಾಡುತ್ತಾನೆ. ಕೊನೆಯ ಹಂತದಲ್ಲಿ ಅವನಿಗೆ ಮೈ ಮೇಲೆ ದೇವರು ಬರುತ್ತದೆ. ದೇವರು ಮೈಮೇಲೆ ಬಂದು ನಾನು ನಿಮ್ಮನ್ನು ಸಲಹುತ್ತೇನೆ ಎಂದು ಮಾತು ಕೊಟ್ಟು ಎಲ್ಲರನ್ನೂ ಹರಸುತ್ತದೆ. ಆ ಮಾತಿನಿಂದ ಸಮುದಾಯದವರು ಪ್ರಸನ್ನಚಿತ್ತರಾಗುತ್ತಾರೆ.

ಇನ್ನು ತಮ್ಮ ಎಲ್ಲ ಕಷ್ಟ ಕಾರ್ಪಣ್ಯಗಳಣ್ಣು ತಮ್ಮ ದೇವರೇ ಪರಿಹರಿಸುತ್ತಾರೆ ಎಂದು ಭಾವಿಸುತ್ತಾರೆ. ಪ್ರತೀ ಮನೆಯಿಂದ ಸಂಗ್ರಹಿಸಿದ ದವಸ ಧಾನ್ಯಗಳಿಂದ ಅಡುಗೆ ಮಾಡಿ ಊರವರೆಲ್ಲ ಸೇವಿಸುತ್ತಾರೆ. ವಿಶೇಷವಾಗಿ ತಯಾರಿಸಿದ ಅಕ್ಕಿ ನೈವೇದ್ಯವನ್ನು ದೇವರಿಗೆ ಅರ್ಪಿಸುತ್ತಾರೆ.

**ತೈಯಾಕೊಳು:** ಇದು ಕೇರಳ ಭಾಗದಲ್ಲಿ ವಾಸಿಸುವ ಎರವರ ಒಂದು ಪ್ರಚಲಿತ ಹಬ್ಬ. ಈ ಹಬ್ಬದಲ್ಲಿ ಪೂಜೆಯನ್ನು ನೆರವೇರಿಸಲು ಯಾವ ಹುಡುಗನಿಗೆ ಇದುವರೆಗೂ ದೇವರು ಮೈ ಮೇಲೆ ಬಂದಿರುವುದಿಲ್ಲವೋ ಅಂತಹ ಹುಡುಗನನ್ನು ಆಯ್ಕೆ ಮಾಡುತ್ತಾರೆ. ಹಬ್ಬದ ದಿನ ಎಲ್ಲರೂ ಸ್ನಾನ ಮಾಡಿ ಮನೆಯ ಮುಂದೆ ಶುಚಿಗೊಳಿಸಿ ಬಾಳೆಯ ಮರದ ತೊಗಲಿನಿಂದ ಪಟ್ಟಿಯನ್ನು ತಯಾರಿಸಿಕೊಂಡು ಆ ಪಟ್ಟಿಯಿಂದ ಒಂದು ಸಣ್ಣ ಮಂಟಪವನ್ನು ಸಿದ್ಧಪಡಿಸುತ್ತಾರೆ. ಆ ಮಂಟಪದ ಸುತ್ತ ತೆಂಗಿನಕಾಯಿ, ಅಕ್ಕಿ, ಎಲೆ, ಅಡಿಕೆಯನ್ನು ಇಟ್ಟು ಪೂಜಿಸುತ್ತಾರೆ. ಅವರಲ್ಲಿ ಒಬ್ಬ ಬ್ರಾಹ್ಮಣ ಪುರೋಹಿತನಂತೆ ವೇಷ ಧರಿಸಿ, ಬಾಳೆಯ ಪಟ್ಟಿಯೊಂದನ್ನು ಜನಿವಾರದಂತೆ ಧರಿಸಿರುತ್ತಾನೆ. ಪೂಜೆಯ ಮಧ್ಯೆ ಭೇದಿ ಪ್ರಾರಂಭವಾದಂತೆ ನಟಿಸುತ್ತಾ ಅಲ್ಲಿಂದ ಎದ್ದು  ಹೋಗುತ್ತಾನೆ. ಅನಂತರ 'ಚಿಮ್ಮಿ'ಯು ಪೂಜೆ ಮುಂದುವರಿಸುತ್ತಾನೆ. ಬ್ರಾಹ್ಮಣ ವೇಷಧಾರಿಯೂ ಆಗಾಗ ಬಂದು ಹೋಗುತ್ತಾ ಇರುತ್ತಾನೆ. ನಂತರ ಮೊದಲೇ ಆಯ್ಕೆ ಮಾಡಿದ ಹುಡುಗನನ್ನು ಕರೆದು ಅವನಿಂದಲೇ ಪೂಜೆ ಮಾಡಿಸುತ್ತಾರೆ. ಅವನ ತಲೆ ಮೇಲೆ ವಿವಿಧ ದೇವರ ಹೆಸರು ಹೇಳಿ ಅಕ್ಕಿ  ಹಾಕುತ್ತಾರೆ. ಆದರೆ ಕೊನೆಗೆ ಮೂಲದೇವರಿಗೆ 'ಕಾವಲಿಕುಚ್ಚಿಯು' ಹೆಸರು ಹೇಳಿ ಅವನ ತಲೆ ಮೇಲೆ ಅಕ್ಕಿ ಹಾಕಿದ ಕೂಡಲೆ ಅವನ ಮೈಮೇಲೆ ದೇವರು ಬರುತ್ತದೆ. ಅಲ್ಲಿಂದ ಪ್ರಾರಂಭವಾಗಿ ಅವನ ಬದುಕಿನ ಉದ್ದಕ್ಕೂ ಅವನ ಮೇಲೆ ದೇವರು ಆವಾಹನೆಯಾಗುತ್ತಲೇ ಇರುತ್ತದೆ. ಈ ಪ್ರಕ್ರಿಯೆ ಬೆಳಗ್ಗೆಯವರೆಗೂ ಮುಂದು ವರಿಯುತ್ತದೆ. ಇವು ಫಣಿ ಎರವರ ಆಚರಣೆಗಳು. ಇದು ಎರವರ ಮೂಲದಲ್ಲಿ ಅಂದರೆ ನಾಗರಿಕತೆಯ ಅವಶೇಷವೂ ಅರಿಯದೆ ಕಾಡುಮನುಷ್ಯನಾಗಿ ಬದುಕುತ್ತಿದ್ದಾಗ ಹುಟ್ಟಿರಬಹುದಾದ ಆಚರಣೆಯಾಗಿರಬಹುದು. ಬಟ್ಟೆ ಧರಿಸದೆ ಬರಿ ಕಾಡಿನ ಎಲೆಗಳನ್ನು ಧರಿಸಿ ಪೂಜೆಗೆ ಅಣಿ ಮಾಡುವುದು ಆದಿಮ ಬುಡಕಟ್ಟಿನ ಲಕ್ಷಣವಾಗಿದೆ. ಅದರ ಅನುಕರಣೆ ಈ ಹಬ್ಬದಲ್ಲಿ ಮಾಡುತ್ತಾರೆ. ನಾಗರಿಕತೆಯ ಪ್ರವೇಶವಾದಂತೆಯೇ ನಗ್ನತೆಯ ಅರಿವಾಗಿ ಬಟ್ಟೆಯನ್ನು ಧರಿಸುವ ಅವಸ್ಥಾಂತರ ವಾದರೂ ಕೂಡ ಇವರು ಮೂಲ ಆಚರಣೆಗೆ ಚ್ಯುತಿ ಬರದಂತೆ ಸೊಪ್ಪು ಕಟ್ಟಿಕೊಳ್ಳುವುದು ಆ ಹಬ್ಬದ ಪ್ರಾಚೀನತೆಯನ್ನು ಮತ್ತು ಅವರ ಸಂಪ್ರದಾಯನಿಷ್ಠತೆಯನ್ನು ಗಮನಿಸಬಹುದು. ಕಾಲಾಂತರಗಳು ಕಳೆದರೂ ಆಚರಣೆಗಳು ಇನ್ನೂ ಉಳಿದು ಬಂದಿರುವುದು ಎರವ ಬುಡಕಟ್ಟುಗಳ ಮೂಲದ ಬಗ್ಗೆ ಇರುವ ಅಚಲ ನಂಬಿಕೆಗೆ ಸಾಕ್ಷಿ. ನಂತರ ಬ್ರಾಹ್ಮಣನ ಪ್ರವೇಶ. ಯಾವುದೇ ದೇವರುಗಳು ಒಂದು ಇಡೀ ಸಮುದಾಯದ ಭಯ, ಭಕ್ತಿ ನಂಬಿಕೆಯನ್ನು ತನ್ನಲ್ಲಿ

ಕೇಂದ್ರೀಕರಿಸಿಕೊಂಡಿದೆ ಎಂದ ತಕ್ಷಣ ಆ ದೇವರ ಮೂಲಕ ಆ ಸಮುದಾಯವನ್ನು ತನ್ನ ಹಿಡಿತಕ್ಕೆ ತೆಗೆದುಕೊಳ್ಳುವ ಕ್ರಿಯೆ ವೈದಿಕ ಶಾಹಿಯ ತಂತ್ರ. ಅದರೆ ಸುಲಭವಾಗಿ ತನ್ನತನವನ್ನು ಬಿಟ್ಟುಕೊಡಲಾರದ ಈ ಬುಡಕಟ್ಟು ಸಮುದಾಯ ಆ ಪುರೋಹಿತನ ವೇಷ ಧರಿಸಿ ಅಣಕ ಮಾಡುವಂತೆ ಒಂದು ಪಾತ್ರವನ್ನು ಸೃಷ್ಟಿಸಿ ವೈದಿಕ ಶಾಹಿಯ ಈ ಆಕ್ರಮಣವನ್ನು ಹಂಗಿಸುತ್ತವೆ. ಕಡೆಗೂ ಪೂಜೆ ತಮ್ಮ ಎಣಿಕೆಯಂತೆಯೇ ನೆರವೇರಿಸಿ ತೃಪ್ತಿಪಡುತ್ತಾರೆ. ಬಹುಶಃ ಹೆಚ್ಚಿನ ದೇವರುಗಳು ಬುಡಕಟ್ಟು ಜನಪದ ದೇವರುಗಳು ವೈದಿಕಶಾಹಿಗೆ ಒಳಪಟ್ಟು ಬಯಲಲ್ಲಿದ್ದ ದೇವರುಗಳು ಇಂದು  ಗರ್ಭಗುಡಿ ಹೊಕ್ಕಿವೆ. ಗರ್ಭಗುಡಿಯ ಒಳಗೆ ಬ್ರಾಹ್ಮಣ ಹೊಕ್ಕು, ನಮ್ಮದೇ ದೇವರುಗಳನ್ನು ಬ್ರಾಹ್ಮಣರ ಮೂಲಕ ಪೂಜಿಸಿ ತೃಪ್ತಿ ಹೊಂದಬೇಕಾದ ಪರಿಸ್ಥಿತಿ ಸೃಷ್ಟಿಯಾಗಿದ್ದು ಇದಕ್ಕೆ ತಿರುಪತಿ ತಿಮ್ಮಪ್ಪ, ಬಿಳಿಗಿರಿರಂಗ ಇವರ್‍ಯಾರು ಹೊರತಾಗಿಲ್ಲ.

## 7.3. ಜೇನುಕುರುಬರ ದೈವ, ಆಚರಣೆಗಳು ಮತ್ತು ಅವರ ಮೌಖಿಕ ಸಾಹಿತ್ಯ

ಜೇನುಕುರುಬರು ಮುಖ್ಯವಾಗಿ ನಾಗರಹೊಳೆಯ ಮಾಸ್ತಮ್ಮ, ಕಟ್ಟೆಮನೆ ಅಜ್ಜಯ್ಯ, ಹಂದಿಗೆರೆ ಚೌಡಮ್ಮ, ಹಂದಿಗೆರೆ ಅಜ್ಜಯ್ಯ, ಅಮ್ಮಾಳೆ ಅಮ್ಮ ಮೊದಲಾದ ದೇವರನ್ನು ಪೂಜಿಸುತ್ತಾರೆ. ಅಮ್ಮಾಳೆ ದೇವರೆಂದರೆ ಆನೆ, ಕಾಡೆಮ್ಮೆಯನ್ನು ಕಾಟಿ ಬೆಟ್ಟದಯ್ಯ ಎನ್ನುತ್ತಾರೆ. ಇವರು ಜಮ್ಮದ ದೇವರುಗಳನ್ನು ವಿಶೇಷವಾಗಿ ಪೂಜಿಸುತ್ತಾರೆ

**1. ಮಾಸ್ತಿಗುಡಿ:** ಇದು ಕಾಕನಕೋಟೆಯಲ್ಲಿದೆ. ಈಗ ಇದು ಕಬಿನಿ ಜಲಾಶಯದಿಂದ ಮುಳುಗಡೆ ಯಾಗಿದೆ. ಆದ್ದರಿಂದ 1992ರಲ್ಲಿ ಬಳ್ಳೆಹಾಡಿಯ ಬಳಿ ಹೊಸದಾಗಿ ಮಾಸ್ತಿ ಗುಡಿಯನ್ನು ಸ್ಥಾಪಿಸಿ ಅಲ್ಲಿ ಈ ದೇವರನ್ನು ಪೂಜಿಸುತ್ತಾರೆ. ಈ ದೇವರಿಗೆ ಪ್ರತಿ ವರ್ಷ ಫೆಬ್ರವರಿ, ಮಾರ್ಚ್ ತಿಂಗಳಲ್ಲಿ ಜಾತ್ರೆ ನಡೆಯುತ್ತದೆ. ಉದ್ಬೂರು, ಗಂದತ್ತೂರು, ಕಾರಾಪುರ, ಎನ್. ಬೇಗೂರು ಮಗ್ಗೆ, ಮಳಲಿ, ಕೆ.ಆರ್.ಪುರ, ಹೊಸಳ್ಳಿ, ಹೊನ್ನಮ್ಮನ ಕಟ್ಟೆ, ಮೊದಲಾದ ಹಾಡಿಯ ಜನ ಈ ಜಾತ್ರೆಯಲ್ಲಿ ಸೇರುತ್ತಾರೆ. ಈ ದೇವರನ್ನು ಪೂಜಿಸುವುದರಿಂದ ಕಾಡಿನಲ್ಲಿ ಕಾಡುಪ್ರಾಣಿಗಳಿಂದ ತಮಗೆ ರಕ್ಷಣೆ ದೊರೆಯುತ್ತದೆ ಎಂಬುದು ಅವರ ನಂಬಿಕೆ. ಹಿಂದೆ ಮೈಸೂರು ಒಡೆಯರು ಖೆಡ್ಡಾ ಕಾರ್ಯಾಚರಣೆಗೆ ಮುನ್ನ ಈ ದೇವರಿಗೆ ಮೊದಲು ಪೂಜೆ ಸಲ್ಲಿಸುತ್ತಿದ್ದರಂತೆ.

**2. ಬಿಸಲ್ವಾಡಿ ಮಾರಮ್ಮ:** ಈ ದೇವಾಲಯವು ಸುಂಕದಕಟ್ಟೆ ಅರಣ್ಯದ ಬಳಿಯ ಬಿಸಲ್ವಾಡಿ ಎಂಬ ಕೆರೆಯ ಬಳಿಯಿದೆ. ಮಾರ್ಚ್ ಅಥವಾ ಏಪ್ರಿಲ್ ತಿಂಗಳಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. ಹಿಂದೆ ಈ ಜಾತ್ರೆಯಂದು ಆನೆಯ ಮೆರವಣಿಗೆಯನ್ನು ಕೂಡ ನಡೆಸುತ್ತಿದ್ದರಂತೆ.

**3. ಹೊಸಲೂರು ಮಾರಮ್ಮ ಮತ್ತು ಹೊಸಿಲ ಮಾರಿಯಮ್ಮ:** ಆನೆ ಚೌಕೂರು ಹಾಗೂ ಅಳಲೂರಿನ ನಡುವೆ ನಾಗರಹೊಳೆ ಅರಣ್ಯದ ಹೆದ್ದಾರಿಯ ಪಕ್ಕದಲ್ಲಿ ಈ ದೇವಾಲಯವಿದೆ.

ಪ್ರತಿ ವರ್ಷ ಏಪ್ರಿಲ್‌ನಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. ಕೊಡಗು ಮೈಸೂರು, ಹೆಚ್.ಡಿ.ಕೋಟೆ ಪಿರಿಯಾಪಟ್ಟಣಗಳಿಂದ ಅಂದು ಇಲ್ಲಿ ಎಲ್ಲ ವರ್ಗದ ಜಾತಿಯ ಜನ ಸೇರಿ ಕೋಳಿ, ಕುರಿ, ಹಂದಿ ಬಲಿ ಕೊಟ್ಟು ಪೂಜೆ ನೆರವೇರಿಸುತ್ತಾರೆ.

**4. ಆಂಜನೇಯ ಸ್ವಾಮಿ ದೇವಸ್ಥಾನ:** ಈ ದೇವಸ್ಥಾನ ಆನೆ ಚೌಕೂರಿನ ಬಳಿಯ ಬೇಗೂರಿನಲ್ಲಿದೆ. ಇದು ಸುಮಾರು ಸುಮಾರು 500 ವರ್ಷಗಳಷ್ಟು ಹಳೆಯದು. ಇಲ್ಲಿ ಆಂಜನೇಯ ಹಾಗೂ ಬುದ್ಧನ ಪ್ರತಿಮೆಗಳಿವೆ. ಬುಡಕಟ್ಟುಗಳು ಮತ್ತು ಕೊಡವರು ಪೂಜಿಸುತ್ತಾರೆ.

ಕಾಕನಕೋಟೆಯಲ್ಲಿರುವ 'ಮಾಸಾಲೆ ಒಡೆಯ'ನನ್ನು ಬುಡಕಟ್ಟುಗಳಲ್ಲೇ ಅತಿ ದೊಡ್ಡ ಶಕ್ತಿಶಾಲಿ ದೇವರು ಎಂದು ನಂಬುತ್ತಾರೆ. ಇಷ್ಟೇ ಅಲ್ಲದೆ ಕಚುವನಳ್ಳಿಯ ಅಯ್ಯಪ್ಪ ದೇವಾಲಯ, ನಾಗರಹೊಳೆಯ ಅಮ್ಮಾಳೆ ದೇವಾಲಯ, ಮಾರಮ್ಮ ದೇವಾಲಯ, ಕಲ್ಲಳ್ಳಿ ಗಣಪತಿ ಮತ್ತು ಅಯ್ಯಪ್ಪ ಸ್ವಾಮಿ ಮೊದಲಾದ ದೇವರನ್ನು ಪೂಜಿಸುತ್ತಾರೆ. ಇವರು ಪ್ರಕೃತಿಯ ಆರಾಧಕರು. ಮರ, ಗಿಡ, ಬಳ್ಳಿ, ಹಳ್ಳಿ, ತೊರೆ, ಪ್ರಾಣಿ, ಪಕ್ಷಿ ಕಲ್ಲು ಇವೇ ಅವರ ದೈವಗಳು. ನಮ್ಮ ಹಿರಿಯರೇ ಪ್ರಾಣಿ ಪಕ್ಷಿಗಳ ರೂಪದಲ್ಲಿರುವುದರಿಂದ ನಮಗೇನು ಮಾಡುವುದಿಲ್ಲ ಎಂಬ ನಂಬಿಕೆ ಇವರದು. ಒಂದು ವೇಳೆ ಯಾರಾದರೂ ಕಾಡುಪ್ರಾಣಿಗಳಿಂದ ಹತ್ಯೆಯಾದರೆ ತಾವು ಯಾವುದೋ ಹರಕೆಯನ್ನು ತೀರಿಸಿಲ್ಲ, ಅದಕ್ಕಾಗಿ ಬಲಿ ತೆಗೆದುಕೊಂಡಿದೆ ದೇವರು ಎಂದು ಭಾವಿಸುತ್ತಾರೆ.

ಬುಡಕಟ್ಟು ಸಮುದಾಯದವರು ಮರಗಳನ್ನು, ಪ್ರಾಣಿಗಳನ್ನು ತಮ್ಮ ಕುಲದೇವತೆಗಳನ್ನಾಗಿ ಪೂಜಿಸುತ್ತಾರೆ. ಉದಾ: ಆಲದ ಮರ, ಅರಳೀಮರ, ಬೇವಿನ ಮರ, ಬನ್ನಿಮರ, ಬಿಲ್ವಪತ್ರೆ, ತಾರೆಮರ ಅಂಕೋಲೆ, ಸಂಪಿಗೆ, ಅಶೋಕ, ದನ್ವಂತರಿ ಮರಗಳನ್ನು ಈ ಮರಗಳನ್ನು ತಮ್ಮದೆ ಆದ ಹೆಸರಿನಿಂದ ಕರೆಯುತ್ತಾರೆ. ಮತ್ತು ನಿರ್ದಿಷ್ಟ ಕುಲದವರು ತಮ್ಮ ಕುಲದೇವರಾದ ಪ್ರಾಣಿಗಳನ್ನು ಕೊಲ್ಲುವುದಿಲ್ಲ, ಮರಗಳನ್ನು ಕಡಿಯುವುದಿಲ್ಲ. ಆ ಮರ ಹತ್ತುವುದಿಲ್ಲ ಮತ್ತು ಸೌದೆಯನ್ನೂ ಕೂಡ ಉಪಯೋಗಿಸುವುದಿಲ್ಲ.[೮]

**ಬುಂಡೆ ಕರೆಯುವುದು:** ಜೇನುಕುರುಬರಿಗೂ ಬುಂಡೆಗೂ ಅವಿನಾಭಾವ ಸಂಬಂಧವಿದೆ. ಜೇನುಕುರುಬರ ಸೃಷ್ಟಿಪುರಾಣದಲ್ಲಿ ಈ ಸೋರೆ ಬುರುಡೆಯಿಂದಲೇ ಜೇನುಕುರುಬರ ಸೃಷ್ಟಿಯಾಯಿತು ಎಂಬುದಕ್ಕೆ ಸಂಬಂಧಿಸಿದ ಕತೆಗಳು ಕೂಡ ಇವೆ. ಜೇನುಕುರುಬರಲ್ಲಿ ಯಾರಾದರೂ ಸತ್ತರೆ ಸತ್ತ 12ನೇ ದಿನ ತಿಥಿ ಮಾಡುತ್ತಾರೆ. ವ್ಯಕ್ತಿ ಸತ್ತ 14ರಿಂದ 40ನೇ ದಿವಸದ ಒಳಗೆ ನೆರಳು ಕರೆಯುವ ಕ್ರಿಯೆಯನ್ನು ಆಚರಿಸುತ್ತಾರೆ. ಇದನ್ನು ಬುಂಡೆ ಕರೆಯುವುದು ಎಂದೂ ಕೂಡ ಕರೆಯುತ್ತಾರೆ. ಬುಂಡೆ ಕರೆಯುವ ವ್ಯಕ್ತಿಯನ್ನು ತಮ್ಮಡಿ ಎಂದು ಕರೆಯಲಾಗುತ್ತದೆ. ಈತನೇ

ಶಮನ್. ಜೇನುಕುರುಬರಲ್ಲಿ ಸ್ವರ್ಗ ಅಥವಾ ನರಕದ ಕಲ್ಪನೆ ಇಲ್ಲ. ಬದಲಿಗೆ ಯಾರಾದರೂ ಸತ್ತರೆ ಆ ವ್ಯಕ್ತಿ ಹೋಗಿ ಸೇರಬೇಕಾದುದು ಆದಿ ಅಯ್ಯ ಎಂದು ಕರೆಯುವ ತಮ್ಮ ಹಿರಿಯರ ಆತ್ಮಗಳ ಬಳಿಗೆ. ಆದರೆ ಅವರ ಆತ್ಮ ನೇರವಾಗಿ ಹಿರಿಯರ ಆತ್ಮದೊಂದಿಗೆ ಹೋಗಿ ಸೇರುವುದಿಲ್ಲ. ಬದಲಿಗೆ ಆ ಸಮಯದಲ್ಲಿ ನೆರಳು ಕಾಡು ಮೇಡು ಅಲೆಯುತ್ತಿರುತ್ತದೆ. ನಿರ್ದಿಷ್ಟವಾದ ಜಾಗ ಎಂಬುದು ಅದಕ್ಕಿರುವುದಿಲ್ಲ. ಅದು ಗಾಳಿಯಲ್ಲಿ ನೆರಳಾಗಿ ಸುತ್ತುತ್ತಿರುತ್ತದೆ. ಅದನ್ನು ಅವರ ಹಿರಿಯರ ಆತ್ಮದೊಂದಿಗೆ ತಲುಪಿಸಲು ಅವರ ಕುಟುಂಬದವರು ನೆರಳು ಕರೆಯುವ ಶಾಸ್ತ್ರ ಮಾಡಲೇಬೇಕು.

'ಏಳೂಗಟ್ಟೊಡೆದು ಆಕಾಶಗಟ್ಟೊಡೆದು
ಅಂತರ ಗಟ್ಟೊಡೆದು ಮಂಜಿನ ಕಟ್ಟೊಡೆದು
ಕಾಳಿಕಾದೇವಿ ಕಟ್ಟೊಡೆದು ಭೂಲೊಕದ
ಕಟ್ಟೊಡೆದು, ಕಟ್ಟೊಡೆದು ಮಟ್ಟೊಡೆದು'[9]

ಈ ಆತ್ಮ ಆದಿ ಅಯ್ಯನ ಬಳಿಗೆ ಹೋಗಿ ಸೇರುವುದು ಅಷ್ಟು ಸುಲಭವಲ್ಲ. ಅದು ಹಲವು ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಈ ಆದಿ ಅಯ್ಯ ಆತ್ಮಕ್ಕೆ ಹಲವಾರು ಪರೀಕ್ಷೆಗಳನ್ನು ಒಡ್ಡುತ್ತಾರೆ. ಉದಾಹರಣೆಗೆ ತೂತುಪಾತ್ರೆಯಲ್ಲಿ ನೀರು ತರಲು ಕಳಿಸುವುದು, ಏಳು ಎಡೆಯ ಸರ್ಪ ಬಿಡುವುದು ಇತ್ಯಾದಿ ಹಾಗೆಯೇ ಏಳು ಜನ ಮಾಸ್ತಿಯರು ಬಂದು ವಿಧವಿಧವಾಗಿ ಕಷ್ಟಗಳನ್ನು ಕೊಟ್ಟು ಕಾಡಿಸುತ್ತಾರೆ. ಅದನ್ನೆಲ್ಲ ಸಮರ್ಥವಾಗಿ ಎದುರಿಸಿ ಏಳು ಅಂತಸ್ತಿನ ಮನೆಗೆ ಹೋದರೆ ಬ್ರಹ್ಮ ಅವನ ಜೀವನದ ಎಲ್ಲ ವಿಚಾರಗಳನ್ನು ತನಿಖೆ ಮಾಡುತ್ತಾನೆ. 14ನೇ ದಿನ ಆ ನೆರಳನ್ನು ಬುಂಡೆ ಕರೆಯುವುದರ ಮೂಲಕ ಭೂಮಿಗೆ ಕರೆಸುತ್ತಾರೆ. ಆ ಸಂದರ್ಭದಲ್ಲಿ ಏಳು ಜನ ವೀರ ಮಾಸ್ತಿಯವರು ಆತ್ಮವನ್ನು ಭೂಲೋಕಕ್ಕೆ ಕಳಿಸುತ್ತಾರೆ. ಬುಂಡೆ ಕರೆಯುವ ಸಮಯದಲ್ಲಿ ಆ ಆತ್ಮ ಅವನಿಗಿಷ್ಟ ಬಂದ ಅವನ ಕುಟುಂಬದ ಯಾರ ಮೈಮೇಲಾದರೂ ಬರಬಹುದು. ಆ ರೀತಿ ಆವಾಹನೆಯಾದ ಆತ್ಮ ತಾನು ಸಾಯಲು ಕಾರಣವನ್ನು ತನ್ನ ಕಷ್ಟ ಇಷ್ಟಗಳನ್ನು ಮೈಮೇಲೆ ಬಂದವರ ಮೂಲಕ ಹೇಳಿಕೊಳ್ಳುತ್ತದೆ. ಆಗ ಅದಕ್ಕೆ ನಿಂಬೆಕಾಯಿ ಬಲಿ ನೀಡುತ್ತಾರೆ. ನಂತರ ಕಳಸವನ್ನು ಸಮಾಧಿ ಮೇಲೆ ಇಡುತ್ತಾರೆ. ಕೆಲವೊಮ್ಮೆ ಈ ನೆರಳನ್ನು ಅವರಿಗಾಗದ ಬೇರೆ ಆತ್ಮಗಳು ಹಾರಿಸಿಕೊಂಡು ಹೋಗಬಹುದು. ಆ ಸಂದರ್ಭದಲ್ಲಿ ಅವರನ್ನು ಮತ್ತೆ ಭೂಮಿಗೆ ಕರೆದುಕೊಂಡು ಬರುವುದು ಬಲು ಪ್ರಯಾಸದ ಕೆಲಸ. ದೊಡ್ಡ ಮಂಡಲ ರಚಿಸಿ ವಾಪಸು ಕರೆತರಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಹೇಳುವ ಈ ಕೆಳಗಿನ ಮಂತ್ರ ಹೇಳುತ್ತಾರೆ.

'ಆರು ಬಲೆ ತೂರು ಬಲೆ ಎಪ್ಪತ್ತೇಳು ಬಲೆ
ಆತಗಣ ಭೂತಗಣ
ತಪ್ಪಿತೊಡ್ರಿ ಬಂದಾದು ಉಂಟಾದ್ರೆ
ಎನ್ನ ಗುರುಪಾದದಲ್ಲಿ ನಿಲಬೇಕು
ಹಿಂದೆ ಬಂದ್ರೆ ಹಿಂದೆ ಕಟ್ಟು
ಮುಂದೆ ಬಂದ್ರೆ ಮುಂದೆ ಕಟ್ಟು
ನೆತ್ತಿ ಮೇಲೆ ನಾರಾಯಣ ಕಾವು
ಬೆನ್ನ ಮೇಲೆ ಬ್ರಹ್ಮದೇವ ಕಾವು
ಪಾರ್ವತಿ ಪರಮೇಶ್ವರರ ಕಾವು
ಮುಕ್ಕಣ್ಣೇಶ್ವರನ ಕಾವಲು'[10]

ಎಂದು ಹೇಳಿ ಕೋಳಿ ಕೊಯ್ದು, ಕಾಯಿ ಒಡೆದು, ಅಡಿಕೆ, ಬೀಡಿ, ಬೆಂಕಿಪೊಟ್ಟಣ, ಕೋಳಿಮೊಟ್ಟೆ, ನಿಂಬೆಕಾಯಿ, ಹಸಿಗೋಡು (ಅಡಿಕೆ), ತಗಡು ಇವನ್ನೆಲ್ಲ ಇಟ್ಟು ಆತ್ಮಗಳನ್ನು ವಾಪಾಸು ಗಾಳಿ ಮಾಡಿ ಹೆತ್ತಯ್ಯ ಮುತ್ತಯ್ದೀರ ಹತ್ತಿರ ಸುಖವಾಗಿಲು ಕಳುಹಿಸುತ್ತಾರೆ.

**ಬುಂಡೆ ತಯಾರಿಸುವ ವಿಧಾನ:** ಜೇನುಕುರುಬರು ಕಾಡಲ್ಲಿ ಬಿಡುವ ಕಹಿಸೋರೆ ಬುರುಡೆಯನ್ನು ತಂದು ತೊಳೆದು ಅದನ್ನು ಹಲವು ದಿನಗಳ ಕಾಲ ಬಿಸಿಲಿನಲ್ಲಿ ನಿರಂತರವಾಗಿ ಒಣಗಿಸುತ್ತಾರೆ. ನಂತರ ಅದರ ತುದಿಯಲ್ಲಿ ಸಣ್ಣ ರಂಧ್ರ ಮಾಡಿ ಅದರ ಒಳಗಿರುವ ತಿರುಳನ್ನೆಲ್ಲ ತೆಗೆಯುತ್ತಾರೆ. ನಂತರ ಗುಲಗಂಜಿ ಮರದ ಬೀಜಗಳನ್ನು ಕಪ್ಪಾಗುವವರೆಗೂ ಒಣಗಿಸುತ್ತಾರೆ. ಈ ಮರದ ಎಲೆಗಳನ್ನು ಕೂಳಂಗಿ ಎಲೆ ಎಂದು ಕರೆಯುತ್ತಾರೆ. ಅಮಾವಾಸ್ಯೆ ಅಥವ ಹುಣ್ಣಿಮೆಯ ದಿನ ಪೂಜೆ ಮಾಡಿ ಆ ಬೀಜಗಳನ್ನು ಬುಂಡೆಯೊಳಗೆ ಹಾಕುತ್ತಾರೆ. ಜೊತೆಗೆ ಆದಿ ಅಯ್ಯನನ್ನು ಪೂಜಿಸಿ ಅದರೊಳಗೆ ತುಂಬಿಸುತ್ತಾರೆ. ನಂತರ ಆ ರಂಧ್ರವನ್ನು ನೆಸರೆ ಎಂಬ ಜೇನಿನ ಮೇಣದಿಂದ ಮುಚ್ಚುತ್ತಾರೆ. ಆಗ ಅದು ವಿಶೇಷ ಶಕ್ತಿಯನ್ನು ಪಡೆದಿದೆ ಎಂದು ಅರ್ಥ. ಅಲ್ಲಿಗೆ ಆ ಬುಂಡೆ ಪೂಜೆಗೆ ಅರ್ಹವಾಯಿತು ಎಂದು ಲೆಕ್ಕ. ಬುಂಡೆಗೆ ಉದ್ದದ ಹಿಡಿಕೆಯಿರುತ್ತದೆ. ಅದನ್ನು ಹಿಡಿದು ಅಲ್ಲಾಡಿಸಿದರೆ ವಿಶಿಷ್ಟವಾದ ನಾದ ಹೊರಹೊಮ್ಮುತ್ತದೆ. ಆ ಬುಂಡೆಯನ್ನು ಆಡಿಸುತ್ತಿದ್ದರೆ ಅದರ ನಾದ ನಮ್ಮನ್ನು ಆದಿಮ ಲೋಕಕ್ಕೆ ಕರೆದೊಯ್ಯುತ್ತದೆ. ಇದರ ಶಬ್ದವು ಆಡಿಸುವವನಿಗೂ ಕೇಳುವವನಿಗೂ ಒಮ್ಮೆಲೆ ಆವೇಶವನ್ನು ಉತ್ಸಾಹವನ್ನು ಮೂಡಿಸುತ್ತದೆ. ಈ ಬುಂಡೆ ಒಡೆದಿರಬಾರದು ಮತ್ತು ಆಡಿಸುವಾಗ ಕರ್ಕಶ ಶಬ್ದ ಮಾಡುವಂತಿರ ಬಾರದು ಹಾಗೂ ವಡಕಲಾಗಿರಬಾರದು. ಹಾಗಿದ್ದರೆ ಅದು ಪೂಜೆಗೆ ಬಳಸುವಂತಿಲ್ಲ. ಇದನ್ನು ಆಡಿಸಿ ಆತ್ಮಗಳನ್ನು

ಕರೆಯುವ ಶಕ್ತಿ ಎಲ್ಲರಿಗೂ ಇರುವುದಿಲ್ಲ. 'ಗುಡ್ಡ' ಮಾತ್ರ ಇದನ್ನು ಆಡಿಸಿ ಏಳು ಲೋಕದ ಆಚೆಯಿರುವ ಆತ್ಮಗಳನ್ನು ಭೂಮಿಗೆ ಕರೆಯಬಲ್ಲ. ಆತನಿಗೆ ಮಾತ್ರ ಈ ವಿಶೇಷ ಶಕ್ತಿಯಿರುತ್ತದೆ. ಈ ಗುಡ್ಡ ಇದನ್ನು ಆಡಿಸುತ್ತಿದ್ದರೆ ಅಲ್ಲಿ ನೆರದಿರುವ ಯಾರ ಮೈಮೇಲಾದರೂ ಆತ್ಮ ಬರಬಹುದು. ಆಗ ಅದರೊಂದಿಗೆ ಗುಡ್ಡ ಸಂವಹನ ನಡೆಸುತ್ತಾನೆ.

**ಗುಡ್ಡ:** ಜೇನುಕುರುಬರಲ್ಲಿ ಬುಂಡೆ ಕರೆಯುವವರು ಸಾಮಾನ್ಯವಾಗಿ ಗಂಡಸರು. ಅಪರೂಪಕ್ಕೆ ಹೆಂಗಸರು ಕೂಡ ಬುಂಡೆ ಕರೆಯುತ್ತಾರೆ. ಗುಡ್ಡನ ಮೂಲಕ ಭೂತ, ಭವಿಷ್ಯ, ವರ್ತಮಾನದ ಎಲ್ಲ ಆಗುಹೋಗುಗಳನ್ನು ತಿಳಿಯಲಾಗುತ್ತದೆ. ಅಷ್ಟೇ ಅಲ್ಲದೆ ಹಾಡಿಯಲ್ಲಿ ಸಾಂಕ್ರಾಮಿಕ ಕಾಯಿಲೆಗಳು ಬರುವ ಮುನ್ಸೂಚನೆಯನ್ನು ತನ್ನ ಶಕ್ತಿಯಿಂದ ತಿಳಿದು ಅಂತಹ ಕಾಯಿಲೆ ಈಗಾಗಲೆ ಯಾರಿಗಾದರೂ ಬಂದಿದ್ದರೆ ಅಂತವರನ್ನು ಹಾಡಿಯಿಂದ ಹೊರಗೆ ಬೇರೆ ಗುಡಿಸಲಿನಲ್ಲಿ ಇರಿಸಲಾಗುತ್ತದೆ. ಆ ಕಾಯಿಲೆ ಮತ್ತಾರಿಗೂ ಹರಡಬಾರದೆಂಬುದು ಅದರ ಉದ್ದೇಶ. ಗುಡ್ಡ ಬುಂಡೆ ಆಡಿಸುತ್ತಿದ್ದರೆ ಬುಂಡೆ ಆಡಿಸುವಾಗ ನಿಧಾನವಾಗಿ ಪ್ರಾರಂಭವಾಗಿ ಅನಂತರ ವೇಗವನ್ನು ಪಡೆದುಕೊಳ್ಳುತ್ತದೆ. ವೇಗ ಹೆಚ್ಚಾದಂತೆ ಆವೇಶವೂ ಹೆಚ್ಚುತ್ತದೆ. ಆ ಸಂದರ್ಭದಲ್ಲಿ ಆತ್ಮ ಮತ್ತು ಪರಮಾತ್ಮನ ನಡುವೆ ಇವನ ಆತ್ಮವಿರುತ್ತದೆ. ಆತ್ಮ ಯಾರ ದೇಹಕ್ಕೆ ಬಂದು ಸೇರಿರುತ್ತದೆಯೋ ಬಂದ ಕೆಲಸ ಮುಗಿದ ನಂತರ ಮೈದುಂಬಿರುವ ವ್ಯಕ್ತಿಯ ದೇಹದಿಂದ ಆತ್ಮವನ್ನು ಬಿಡಿಸಿ ಕಳಿಸುವ ಸಾಮರ್ಥ್ಯವೂ ಕೂಡ ಈತನಿಗಿರಬೇಕಾಗುತ್ತದೆ. ಈ ಕ್ರಿಯೆ ಹಗಲು ರಾತ್ರಿ ನಿರಂತರವಾಗಿ ನಡೆಯುವುದರಿಂದ ಈತ ದೈಹಿಕವಾಗಿ ಮತ್ತು ಮಾನಸಿಕವಾಗಿ ಸದೃಢನಾಗಿರಬೇಕಾಗುತ್ತದೆ. ಆಗ ಮಾತ್ರ ಈ ಕ್ರಿಯೆಯನ್ನು ಯಶಸ್ವಿಯಾಗಿ ನಿಭಾಯಿಸಲು ಸಾಧ್ಯ. ಈತನಿಗೆ ತನ್ನ ಹಾಡಿ, ಸಮುದಾಯ, ಪ್ರಕೃತಿ, ಆತ್ಮ-ಪರಮಾತ್ಮ, ಲೋಕ-ಪರಲೋಕಗಳ ಸಂಪೂರ್ಣ ಜ್ಞಾನವಿರಬೇಕು. ಸಮುದಾಯದಲ್ಲಿ ಗೌರವ ಹಾಗು ಉತ್ತಮ ಬಾಂಧವ್ಯವಿರಬೇಕು. ಉತ್ತಮ ವಾಕ್ ಮತ್ತು ಸ್ಮರಣ ಶಕ್ತಿ ಹೊಂದಿರಬೇಕು. ಇಡೀ ಸಮುದಾಯ ಅತ್ಯಂತ ಭಯ, ಭಕ್ತಿಯಿಂದ ಈ ಕ್ರಿಯೆ ಯಲ್ಲಿ ಪಾಲ್ಗೊಳ್ಳುತ್ತದೆ. ಗುಡ್ಡರನ್ನು ಅವರ ಶಕ್ತಿ ಸಾಮರ್ಥ್ಯಕ್ಕೆ ಅನುಗುಣವಾಗಿ ಹಲವು ವಿಭಾಗ ಗಳಾಗಿ ಗುರುತಿಸಲಾಗಿದೆ.

**1. ಹಾಡಿಯ ಗುಡ್ಡ:** ಹಾಡಿಯ ಜನರಿಗೆ ಸಣ್ಣಪುಟ್ಟ ಕಷ್ಟ ಕಾರ್ಪಣ್ಯ, ಕಾಯಿಲೆ, ಕಸಾಲೆ ಎದುರಾದಾಗ ಅಥವಾ ಹಾಡಿಯಲ್ಲಿ ಕಳ್ಳತನವಾದರೆ, ಯಾರಾದರೂ ಮೋಸ ವಂಚನೆಗೆ ಒಳಗಾದರೆ ಹಾಡಿಯ ಗುಡ್ಡನನ್ನು ಕರೆಸಿ ಬುಂಡೆ ಆಡಿಸಿದರೆ ಆತನ ಶಕ್ತಿಯಿಂದ ಕಳ್ಳನನ್ನು ಪತ್ತೆ ಹಚ್ಚುವುದು, ಕಾಯಿಲೆಗೆ ಮದ್ದು ಮಂತ್ರಿಸಿ ಕೊಡುವುದು ಇತ್ಯಾದಿಗಳನ್ನು ಮಾಡಲಾಗುತ್ತದೆ.

**2. ನೆರಳು ಕರೆಯುವ ಗುಡ್ಡ:** ಹಾಡಿಯಲ್ಲಿ ಯಾರಾದರೂ ಸತ್ತರೆ. ಸತ್ತ ಹದಿನಾಲ್ಕನೆಯ ದಿನದಿಂದ ನಲವತ್ತನೇ ದಿನದ ಒಳಗೆ ನೆರಳನ್ನು ಕರೆಸಲಾಗುತ್ತದೆ. ಅಲ್ಲಿಯವರೆಗೂ ಆ ಆತ್ಮ ಬೆಟ್ಟ ಗುಡ್ಡಗಳಲ್ಲಿ ಅಲೆದಾಡುತ್ತಿರುತ್ತದೆ. ಅದನ್ನು ಆದಿ ಅಯ್ಯನ ಆತ್ಮದೊಂದಿಗೆ ಸೇರಿಸಬೇಕಾದರೆ ಬುಂಡೆ ಕರೆಯುವ ಕ್ರಿಯೆ ಜರುಗಿಸುವುದು ಅನಿವಾರ್ಯ. ಬುಂಡೆ ಕರೆಸಿದಾಗ ಆತ್ಮ ಭೂಮಿಗೆ ಬರುತ್ತದೆ. ಆಗ ಅದರೊಂದಿಗೆ ಮಾತುಕತೆ ನಡೆಯುತ್ತದೆ. ಅದರ ಆಸೆಗಳು, ಕಷ್ಟ, ದುಃಖಗಳನ್ನು ವಿಚಾರಿಸಲಾಗುತ್ತದೆ. ಅದರ ಸಾವಿಗೆ ಕಾರಣಗಳನ್ನು ತಿಳಿದು ನಂತರ ಅದನ್ನು ಆದಿ ಅಯ್ಯನ ಆತ್ಮದೊಂದಿಗೆ ಸೇರಿಸಲಾಗುತ್ತದೆ.

'ನೆತ್ತಿ ಮೇಲೆ ನಾರಾಯಣ ಕಾವು
ಬೆನ್ನಮೇಲೆ ಬ್ರಹ್ಮದೇವರ ಕಾವು
ಪಾರ್ವತಿ ಪರಮೇಶ್ವರರ ಕಾವು
ಮುಕ್ಕಣ್ಣೇಶ್ವರನ ಕಾವಲು'

ಎಂದು ಕೋಳಿ ಬಲಿ ನೀಡಿ ಸತ್ತ ವ್ಯಕ್ತಿಯ ಆತ್ಮವನ್ನು ಹೆತ್ತಯ್ಯ ಮುತ್ತಯ್ದೀರ ಬಳಿಗೆ ಕಳಿಸಿ ಕೊಡಲಾಗುತ್ತದೆ.

**3. ಜೇಟೆ ಒಡೆಯೋ ಗುಡ್ಡ:** ಮಾಟ ಮಂತ್ರ, ಗಾಳಿ ಸೇರಿದ್ದರೆ ಅದನ್ನು ಬಿಡಿಸುವ ಗುಡ್ಡ.

**4. ಚಿಲ್ಲು ಒಡೆಯೋ ಗುಡ್ಡ ಇತ್ಯಾದಿ:** ಮೈಮೇಲೆ ಸೇರಿರುವ ಗಾಳಿಯನ್ನು ಬಿಡಿಸುವ ಗುಡ್ಡ.

'ಮಾಟ್ಲ ಒಡೆಯುವ ಸಂದರ್ಭದಲ್ಲಿ ಹೇಳುವ ಮಂತ್ರ
ಯಲಗಟ್ಬೊಡೆದು
ತೊಲೆಗಟ್ಬೊಡೆದು
ಅಂತರಗಟ್ಬೊಡೆದು
ಆಕಾಶಗಟ್ಬೊಡೆದು
ಭೂಲೋಕ ಕಟ್ಬೊಡೆದು
ಮಾಯದ ಕಟ್ಬೊಡೆದು
ಬಸರೀರ ಕಟ್ಬೊಡೆದು
ಬಾಣ್ತೀರ ಕಟ್ಬೊಡೆದು
ನಮ್ಮ ವೈರಿ ಕಟ್ಬೊಡೆದು

ಅವರು ತುಂಬಿದ ಅರಿಕಟ್ಬೊಡೆದು...'[11] ಈ ರೀತಿ ಮಂತ್ರಗಳನ್ನು ಪಠಿಸುತ್ತಾ ರೋಗಿಯಲ್ಲಿ ಅತಿಮಾನುಷ ಕಲ್ಪನೆಯನ್ನು ಮೂಡಿಸಿ ಅವನಲ್ಲಿ ಆತ್ಮಸ್ಥೈರ್ಯವನ್ನು ಮೂಡಿಸಲಾಗುತ್ತದೆ.

ಸನ್ನಿವೇಶ, ಸಂದರ್ಭ, ಅನಿವಾರ್ಯತೆಗೆ ಅನುಗುಣವಾಗಿ ನಿರ್ದಿಷ್ಟ ಗುಡ್ಡರನ್ನು ಕರೆಸಿ ಪರಿಹಾರ ಪಡೆಯಲಾಗುತ್ತದೆ.

ಬುಡಕಟ್ಟುಗಳಲ್ಲಿ ಸಾವು ದೇಹಕ್ಕೆ ಹೊರತು ಆತ್ಮಕ್ಕಲ್ಲ. ಸತ್ತ ನಂತರ ಎಲ್ಲ ಮುಗಿಯಿತು ಎಂದು ಭಾವಿಸದೆ, ಸತ್ತ ನಂತರವೂ ಆತ್ಮದ ರೂಪದಲ್ಲಿ ತನ್ನ ಹಿರಿಯ ಆತ್ಮಗಳೊಂದಿಗೆ ಇರುವ ಅವಕಾಶವನ್ನು ಜೇನುಕುರುಬರು ಕಲ್ಪಿಸಿಕೊಟ್ಟಿದ್ದಾರೆ. ತನಗಿಷ್ಟ ಬಂದಾಗ ಬುಂಡೆ ಕರೆದು ಆ ಆತ್ಮವನ್ನು ಕರೆದು ಮಾತನಾಡುತ್ತಾ ಅವರು ತಮ್ಮ ಜೊತೆಗೆ ಇದ್ದಾರೆ ಎಂದು ಭಾವಿಸುತ್ತಾರೆ. ಈ ಆತ್ಮಗಳು ತಮ್ಮ ಕುಟುಂಬವನ್ನು ಕಾಪಾಡುತ್ತಿರುತ್ತವೆ ಎಂದು ನಂಬುತ್ತಾರೆ. ಇದು ನಿಜಕ್ಕೂ ವಿಶೇಷವಾದ ಆಚರಣೆಯಾಗಿದೆ.

**ಜೇನುಕುರುಬರಲ್ಲಿ ಬುಂಡೆ ಕರೆಯುವುದು**

ಶಮನಿಸಂ ಅನ್ನು ಹಿಂದೆ ಅತಿಮಾನುಷವಾದ, ಭೂತಪ್ರೇತಗಳನ್ನು ಆರಾಧಿಸುವ ಕ್ರಿಯೆ ಎಂದು ತಿಳಿಯಲಾಗಿತ್ತು. ಶಮನ್‌ರನ್ನು ಮಾಂತ್ರಿಕರು, ಮೂಢನಂಬಿಕೆಯ ಪ್ರಸಾರಕರು, ಹುಚ್ಚರೆಂದು ಕರೆಯಲಾಗುತ್ತಿತ್ತು. ಇದಕ್ಕೆ ಸುಮಾರು ಮೂವತ್ತು ಸಾವಿರ ವರ್ಷಗಳಿಗಿಂತಲೂ ಹಿಂದಿನ ಇತಿಹಾಸವಿದೆ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ. ಶಮನಿಸಂ ಪ್ರಪಂಚದ ಹಲವಾರು ದೇಶಗಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಆಸ್ಟ್ರೇಲಿಯಾ, ಸೈಬೀರಿಯ, ಮಲಯ, ಅಂಡಮಾನ್, ಭಾರತ, ಉತ್ತರ ಅಮೆರಿಕ, ಮಧ್ಯ ಮತ್ತು ದಕ್ಷಿಣ ಅಮೆರಿಕ, ಎಸ್ಕಿಮೋ, ರಷ್ಯಾ, ದಕ್ಷಿಣ ಅಫ್ರಿಕಾ ಮತ್ತು ಮಾಯನ್ ಸಂಸ್ಕೃತಿಯಲ್ಲಿ ಕಂಡುಬರುತ್ತದೆ. ಆದರೆ ಆ ಕುರಿತ ಮಾಹಿತಿ ನಮಗೆ ತಿಳಿಯುವುದು ಮರ್ಸಿಯ ಎಲಿಯೇಡ್‌ರ Shamanism: Archaic technique of Ecstasy (1951) ಕೃತಿಯಲ್ಲಿ. 'ಎಲಿಯೇಡ್‌ರ ಪ್ರಕಾರ ಶಮನಿಸಂ ಅಂದರೆ ಮೈದುಂಬುವಿಕೆಯ ಪರಾಕಾಷ್ಠೆಯನ್ನು ಮುಟ್ಟುವುದು. ಮೈದುಂಬುವಿಕೆಯ ಪರಾಕಾಷ್ಠೆಯೆಂದರೆ ವ್ಯಕ್ತಿ ತನ್ನ ವೈಯಕ್ತಿಕ ತನ್ನತನದಿಂದ ದೂರ ಸರಿದು ಬಿಡುಗಡೆ ಪಡೆಯುವ ಕ್ರಿಯೆ.'[12] ಈ ಕ್ರಿಯೆಯನ್ನು ಜೇನುಕುರುಬರು ಬುಂಡೆಕರೆಯುವುದು ಎಂದರೆ ಬೆಟ್ಟಕುರುಬರು ಬಿಂಜೆ ಕಳುವುಗ ಎಂದು ಕರೆಯುತ್ತಾರೆ. ಒಬ್ಬ ಶಮಣನು ಅನೇಕ ಪಾತ್ರವನ್ನು ವಹಿಸುತ್ತಾನೆ. ಆತ ವೈದ್ಯನಾಗುತ್ತಾನೆ, ಪುರೋಹಿತನಾಗುತ್ತಾನೆ. ದರ್ಶನಕಾರನಾಗುತ್ತಾನೆ, ಪುರಾಣಿಕನಾಗುತ್ತಾನೆ, ಕಲೆಗಾರ ಮತ್ತು ಮನೋವಿಜ್ಞಾನಿಯಾಗಿ ಬಹುಮುಖಿ ಯಾಗಿರುತ್ತಾನೆ.

ಈ ಶಮನನ ಪರಾಕಾಷ್ಠೆಯನ್ನು ಸ್ಥಿತಿಯನ್ನು 'ಪ್ರಜ್ಞಾಪರಿವರ್ತನ ಸ್ಥಿತಿ'(Altered state of Consciousness) ಎಲಿಯೆಡ್ ಅವರು ಇದನ್ನು ಅನುಭಾವ(Mystism) ಎಂದು ಕರೆಯುತ್ತಾರೆ. 'ನಾನು ಮತ್ತು ನನ್ನ ರೋಗಿಗಳು ಒಟ್ಟಿಗೆ 1000000 ವರ್ಷದ ಪುರಾತನರೊಡನೆ ಮಾತನಾಡು

ತ್ತೇವೆ'[13] ಯೂಂಗ್ ಒಂದು ಸಂಕೇತದ ಮೂಲಕ ಇದನ್ನು ವಿವರಿಸುತ್ತಾನೆ. ಅಂದರೆ ಹಾವು ತನ್ನ ಬಾಲವನ್ನು ತಾನೇ ನುಂಗಿಕೊಳ್ಳುವ ಕ್ರಿಯೆ. ಇದು ಭಾರತದ ಪುರಾತನ ಸಂಕೇತ. ಮನುಷ್ಯ ತನ್ನ ಗತವನ್ನು ತಾನೇ ಅವಲೋಕಿಸುವ ಒಂದು ಚಿಂತನೆ ಇದಾಗಿದೆ._'Because the unconscious is not just a reactive mirror reflection, but an independent, productive activity, its realm of experience is a self contained world, having its own reality of which we can only say that if effects us, as we effect it – precisely what we say about our experience of the outer world'[14]

ಬುಂಡೆ ಕರೆಯುವ ಕ್ರಿಯೆಯು ಸಮುದಾಯದ ಸ್ವಾಸ್ಥ್ಯ, ನಂಬಿಕೆ ಆತ್ಮಸ್ಥೈರ್ಯವನ್ನು ಮೂಡಿಸುವಲ್ಲಿ ಬಹಳ ಪರಿಣಾಮಕಾರಿಯಾಗಿದೆ. ತಮ್ಮ ಮೂಲವನ್ನು ಬಿಟ್ಟು ಪರಕೀಯ ಪ್ರದೇಶಕ್ಕೆ ಬಂದು ಬದುಕು ಕಟ್ಟಿಕೊಳ್ಳಬೇಕಾದ ಅನಿವಾರ್ಯತೆ ಎದುರಾದಾಗ ಈ ಸಮುದಾಯ ಅನುಭವಿಸಿದ ತಳಮಳ ಸಂಕಟ ನೋವು ಅನಾಥಪ್ರಜ್ಞೆ, ಪರಕೀಯ ಭಾವ ಹೇಳಲು ಸಾಧ್ಯ ಎಷ್ಟೋ ಜನರು ಈ ಸಂಕಟವನ್ನು ಅನುಭವಿಸಲಾಗದೆ ಮಾನಸಿಕವಾಗಿ ಅಸ್ವಸ್ಥರಾಗಿರುವ ಸ್ಥಿತಿ ನಮ್ಮ ಕಣ್ಣ ಮುಂದಿದೆ. ಈ ಅತಂತ್ರ ಸಮುದಾಯಕ್ಕೆ ಒಂದು ರೀತಿಯಲ್ಲಿ ದೈರ್ಯವನ್ನು ನಂಬಿಕೆಯನ್ನು ಮೂಡಿಸುವಲ್ಲಿ ಈ ಶಮಣರ ಪಾತ್ರ ಹಿರಿದು. ತಾವು ಲೋಕ ಮತ್ತು ಪರಲೋಕದ ನಡುವಿನ ಸೇತುವೆಯಾಗಿ ಆ ಸಮುದಾಯಕ್ಕೆ ಸ್ಥೈರ್ಯ ತುಂಬುವ ಕೆಲಸವನ್ನು ಇವರು ಮಾಡುತ್ತಾ ಬಂದಿದ್ದಾರೆ, ಸಮುದಾಯವು ಶಮಣರ ಮೂಲಕ ತಮ್ಮ ಹಿರಿಯರೊಡನೆ ತಮ್ಮ ಕಷ್ಟ ಸುಖಗಳನ್ನು ಹಂಚಿಕೊಳ್ಳುತ್ತಾರೆ. ಆ ಮೂಲಕ ತಾವು ನಿರಾಳರಾಗಲು ಪ್ರಯತಿಸುತ್ತಾರೆ. ತಮಗ ಕೇಡು ಉಂಟಾದಾಗ ಹಿರಿಯರ ಆತ್ಮಗಳನ್ನು ಆಹ್ವಾನಿಸಿ ತಮ್ಮ ನೋವುಗಳನ್ನು ವ್ಯಕ್ತಪಡಿಸಿ ನಿರಾಳತೆಯನ್ನು ಕಂಡುಕೊಳ್ಳುತ್ತಾರೆ. ಇಲ್ಲವಾದರೆ ಮಾನಸಿಕವಾಗಿ ಈ ಬುಡಕಟ್ಟು ಸಮುದಾಯಗಳು ತಮ್ಮ ಸ್ಥಿಮಿತವನ್ನು ಕಳೆದುಕೊಂಡು ತಾವು ಅನಾಥರಾಗುತ್ತಿದ್ದರು ಎಂಬ ಅಭಿಪ್ರಾಯವನ್ನು ಕ್ಷೀರಸಾಗರ ಅವರು ವ್ಯಕ್ತಪಡಿಸುತ್ತಾರೆ.

**ಕೊಂತ ಪೂಜೆ, ಜೇನುಕುರುಬರ ಸೃಷ್ಟಿ ಪೂಜೆ**

ಜೇನುಕುರುಬರ ನಂಬಿಕೆಯ ಪ್ರಕಾರ ವಸಂತ ಕಾಲದಲ್ಲಿ ಗಂಡು 'ಕೊಂತ' ಮತ್ತು ಹೆಣ್ಣು 'ಕೊಂತ' ಹುಟ್ಟಿದರಂತೆ. ಈ ಕ್ರಿಯೆ ನಡೆಯಲು ಸುಮಾರು 40 ದಿನಗಳು ಬೇಕಾಯಿತಂತೆ. ಆದ್ದರಿಂದ ವಸಂತಕಾಲದ 40 ದಿನಗಳು ಈ ಹಬ್ಬವನ್ನು ಇವರು ಆಚರಿಸುತ್ತಾರೆ. ಜೇನುಕುರುಬರು ವಸಂತಕಾಲದಲ್ಲಿ ಮರಗಿಡಗಳು ಚಿಗುರೊಡೆದಾಗ ಕೊಂತ ಪೂಜೆಗೆ ಸಮಯ ಕೂಡಿ ಬಂದಿತು ಎಂದು ತಿಳಿದು ನೀರು ಹರಿಯುವ ಕೆರೆ, ಹಳ್ಳ, ಕೊಳ್ಳ, ನದಿ, ಯಾವುದಾದರೂ ಜಾಗಕ್ಕೆ

ಹೋಗಿ ರಾತ್ರಿಯ ವೇಳೆ ಯಾರೂ ನಡೆದಾಡಿರದ ಜಾಗದಿಂದ ಮಣ್ಣನ್ನು ಹೊತ್ತು ಹಾಡಿಗೆ ಬರುತ್ತಾರೆ. ಹಾಡಿಯಲ್ಲಿ ಅಂದು ಗುಂಡಿ ಮಾಡಿರುತ್ತಾರೆ. ಆ ಗುಂಡಿಯಲ್ಲಿ ಆ ಮಣ್ಣನ್ನು ಇಡುತ್ತಾರೆ. ಅದನ್ನು ಎರಡು ಭಾಗ ಮಾಡಿ ಒಂದು ಗಂಡು ಒಂದು ಹೆಣ್ಣಿನ ಬೊಂಬೆಯನ್ನು ಆ ಮಣ್ಣಿನಿಂದ ತಯಾರಿಸುತ್ತಾರೆ. ಅದಕ್ಕೆ ಅರಿಶಿನ ಕುಂಕುಮ ಹಳದಿ ಹೂವುಗಳನ್ನಿಟ್ಟು ಶೃಂಗರಿಸುತ್ತಾರೆ. ಈಗಾಗಲೇ ಪೂಜೆ ನಡೆಯುವ ಜಾಗದಲ್ಲಿ ಚಪ್ಪರ ಹಾಕಿ, ಅದರ ಕೆಳಗೆ ಸೆಗಣಿ ಸಾರಿಸಿದ ಜಾಗಕ್ಕೆ ತಯಾರಿಸಿದ ಬೊಂಬೆಗಳನ್ನು ಗುಡ್ಡ ತೆಗೆದುಕೊಂಡು ಬರುತ್ತಾನೆ. ಚಪ್ಪರದ ಕೆಳಗಡೆ ಬಲಗಡೆ ಗಂಡು ಕೊಂತ, ಎಡಗಡೆ ಹೆಣ್ಣು ಕೊಂತದ ಮೂರ್ತಿಗಳನ್ನು ಕೂರಿಸಿ ಪೂಜೆ ಪುನಸ್ಕಾರ ಮಾಡಿ ಹಾಡು ಕುಣಿತದ ಮೂಲಕ ಸಂಭ್ರಮಿಸುತ್ತಾರೆ. ಇದು ವಿವಾಹದ ಆಚರಣೆಯಂತಿದ್ದು ಇಡೀ ಊರಿಗೆ ಸಂತಸವನ್ನು ತರುವಂತಿರುತ್ತದೆ. ಸತತ ಮೂವತ್ತು ದಿನಗಳ ಕಾಲ ಸಂಜೆ ಈ ಕಾರ್ಯಕ್ರಮ ಜರುಗುತ್ತದೆ. ಈ ರೀತಿ ಗೊಂಬೆಗಳನ್ನು ಸಿಂಗರಿಸುವಾಗ ಹೆಂಗಸರ ತಂಡವೊಂದು ಆ ಸಂದರ್ಭಕ್ಕೆ ಸರಿಯಾದ ಹಾಡುಗಳನ್ನು ಹಾಡುತ್ತಿದ್ದರೆ ಮತ್ತೊಂದು ಗುಂಪು 'ಸೊಲ್ಲು' ಹಾಕುತ್ತಾರೆ.

**ಕೊಂತ ಪೂಜೆ(ಸೃಷ್ಟಿಕ್ರಿಯೆ)ಯ 40ನೇ ದಿನ**

ಇದು ಪ್ರಮುಖವಾದ ದಿನವಾಗಿರುತ್ತದೆ. ಈ ದಿನ ಕೊಂತ ಪೂಜೆ ನಡೆಯುವ ಜಾಗದಲ್ಲಿ ಊರಿನ ಎಲ್ಲರೂ ಬಂದು ಸೇರುತ್ತಾರೆ. ಚಪ್ಪರದ ಕೆಳಗೆ ಕೂರುತ್ತಾರೆ. ಇವರು ಕೂರುವ ಜಾಗಗಳು ಕೂಡ ವಯಸ್ಸು, ಲಿಂಗ ಪದ್ಧತಿಗೆ ಅನುಗುಣವಾಗಿ ಪ್ರತ್ಯೇಕವಾಗಿರುತ್ತದೆ. ಅಂದು ಚಪ್ಪರದ ಕೆಳಗೆ ವೃತ್ತಾಕಾರವಾಗಿ ಕೂರುತ್ತಾರೆ. ಅಂದರೆ ಮಧ್ಯಭಾಗ ವೃತ್ತಾಕಾರವಾಗಿರುತ್ತದೆ ಸುತ್ತಲೂ ಜನರು ಕುಳಿತಿರುತ್ತಾರೆ. ಅವರು ಕೂರುವಾಗ ಅನುಸರಿಸುವ ನಿಯಮ ಈ ರೀತಿಯಿರುತ್ತದೆ. ಚಪ್ಪರದ ಕೆಳಗೆ ಗಂಡುಕೊಂತ ಹೆಣ್ಣು

ಈ ಸಮಯದಲ್ಲಿ ಹೆಂಗಸರು ಸುಶ್ರಾವ್ಯವಾಗಿ ಹಾಡುತ್ತಿರುತ್ತಾರೆ. ಇದಕ್ಕೆ ಯಾವುದೇ ಭಾಷೆಯಿರುವುದಿಲ್ಲ. ಕೇವಲ ರಾಗಬದ್ಧವಾಗಿರುತ್ತದೆ.

**ಕೊಂತಿ ಹಾಡು**

'ಕೊಂತೀಯ ಗುಡಿಗೆ ಎಂತವರೂ ಬಂದಲ್ಲದೆ
ಕೊಂತಿ ನಿನ ಪೂಜೆ ಕಲಿವಿಲ್ಲ ಕೋಣಣೆ ನಂದನಾವನವೆ ॥
ಉಚ್ಚೆಳ್ಳು ಹೂವಾ ನಮುಚ್ಚಣ್ಣಾ ಕೂಯಿ ತಂದ
ಉಚ್ಚೆಸ್ತ್ರು ಕ್ವಾಂತಿ ಮುಡಿಬಾರೋ




(ಕಿಕ್ಕೇರಿ ನಾರಾಯಣ ಅವರ ಪುಸ್ತಕದಿಂದ ಮೇಲಿನ ನಕ್ಷೆಯನ್ನು ಬಳಸಿಕೊಳ್ಳಲಾಗಿದೆ)

ಉಚ್ಚೆಸ್ರು ಕ್ವಾಂತಿ ಮುಡಿಬಾರೋ ಈ ಹೂವಾ
ಉಳ್ಳಿಯ ಹೂವಾ ನಮ ಉಳ್ಳಣ್ಣಾ ಕೂಯಿ ತಂದ
ಉಳ್ಳೆಸ್ರು ಕ್ವಾಂತಿ ಮುಡಿಬಾರೋ
ನಮ್ ಉಳ್ಳಣ್ಣ ತಂದಾವುನೇ
ಅಣ್ಣೆಯ ಹೂವಾ ನಮ್ ಅಣ್ಣಯ್ಯ ಕೂಯಿ ತಂದೋ..
ಅಣ್ಣೆಸ್ರು ಕ್ವಾಂತಿ ಮುಡಿಬಾರೋ
ನಮ್ ಅಣ್ಣಯ್ಯ ತಂದಾವುನೇ ಹೊಸಾ.. ಹೂವಾ..
ಮುತ್ತಿಯ ಹೂವಾ ನಮ್ ನಮುತ್ತಣ್ಣ ಕೂಯಿ ತಂದೋ..
ಮುತ್ತೆಸ್ರು ಕ್ವಾಂತಿ ಮುಡಿ ಬಾರೋ
ನಮ್ಮುತ್ತಣ್ಣ ತಂದಾವನೆ.. ಹೊಸ.. ಹೂವಾ..॥
ಹೊನ್ನೆಯಾ ಹೂವಾ ನಮ್ ಹೊನ್ನಣ್ಣ ಕೂಯಿ ತಂದೋ
ಹೊನ್ನೆಸ್ರು ಕ್ವಾಂತಿ ಮುಡಿಬಾರೋ
ನಮ್ ಹೊನ್ನಣ್ಣ ತಂದಾವುನೇ.. ಹೊಸಾ.. ಹೂವಾ...'[15]

ಹೀಗೆ ಹಾಡು ಮುಂದುವರಿಯುತ್ತಿದ್ದಂತೆ ಸುಮಾರು ಅರ್ಧ ಗಂಟೆಯ ನಂತರ ದೇವರ ಗುಡ್ಡನು ಅರೆ ಬೆತ್ತಲೆ(ಸಂಪೂರ್ಣ ಬೆತ್ತಲೆ)ಯಾಗಿದ್ದು ನಡುವಿಗೆ ಹಗ್ಗ ಕಟ್ಟಿರುತ್ತಾನೆ. ತೊಡೆಗಳ ಮಧ್ಯೆ ಒಂದು ಮರದ ತುಂಡನ್ನು(ಹೊಟ್ಟೆಯಿಂದ ಕೆಳಗೆ ಸೊಂಟಕ್ಕೆ ಕಟ್ಟಿಕೊಂಡಿರುತ್ತಾನೆ) ಇದು

ಶಿಶ್ನವನ್ನು ಸಂಕೇತಿಸುತ್ತದೆ. ಬೇವಿನ ಸೊಪ್ಪನ್ನು ಕೈಯಲ್ಲಿ ಹಿಡಿದಿರುತ್ತಾನೆ. ಆತನ ಪ್ರವೇಶದ ನಂತರ ಪ್ರತಿಮೆಯ ಬಳಿಗೆ ತೆರಳಿ ಬೇವಿನ ಸೊಪ್ಪಿನಿಂದ ನೇವರಿಸುತ್ತಾನೆ ನಂತರ ಆತನ ಭಂಗಿಗಳು ಸಂಭೋಗ ಕ್ರಿಯೆಯನ್ನು ಸಾಂಕೇತಿಕವಾಗಿ ತೋರಿಸುವಂತಿರುತ್ತದೆ.

ನಂತರದಲ್ಲಿ ಒಂದು ನಾಟಕದ ಅನಾವರಣವಾಗುತ್ತದೆ. ಮೊದಲಿಗೆ ಹುಲಿ ವೇಷಧಾರಿಯೊಬ್ಬ ಬಂದು ಹುಲಿಯಂತೆ ಹಾವಭಾವ ಆರ್ಭಟ ಪ್ರದರ್ಶಿಸಿದರೆ ಅದರ ಹಿಂದೆ ಗಂಡ ಹೆಂಡತಿ ಬರುತ್ತಾರೆ. ಹೆಂಡತಿಯ್ನು ಬಂಜೆ ಎಂದು ಗಂಡನೂ, ಗಂಡನನ್ನು ನಪುಂಸಕನೆಂದು ಹೆಂಡತಿಯೂ ಬಯ್ಯುತ್ತಾ ಹಾಸ್ಯದ ಹೊನಲು ಹರಿಸುತ್ತಾರೆ. ನಂತರದಲ್ಲಿ ಪ್ರೇಕ್ಷಕರೂ ಕೂಡ ಪಾತ್ರಧಾರಿಗಳಾಗುತ್ತಾ ಅಣಕುಧಾರಿಗಳಾಗಿ ಹಾಸ್ಯ ಮನರಂಜನೆಯ ಮೂಲಕ ಎಲ್ಲರನ್ನು ನಡೆಗಡಲು ತೇಲಿಸುತ್ತಾರೆ. ಕೊನೆಗೆ ದೇವರ ಗುಡ್ಡನೊಂದಿಗೆ ಊರವರೆಲ್ಲಾ ಸೇರಿ ಆ ಎರಡೂ ಮಣ್ಣಿನ ಪ್ರತಿಮೆಗಳನ್ನು ತೆಗೆದುಕೊಂಡು ಹೋಗಿ ಮತ್ತೆ ನೀರಿಗೆ ಬಿಡುತ್ತಾರೆ.

ಈ ಆಚರಣೆಯ ಸಂದರ್ಭದಲ್ಲಿ ಗಂಡು ಹೆಣ್ಣುಗಳ ನಡುವೆ ಯಾವುದೇ ವಯಸ್ಸಿನ ಭೇದವಾಗಲೀ, ಲಿಂಗಭೇದವಾಗಲೀ ಇಲ್ಲದೆ ಎಲ್ಲರೂ ಸೇರುತ್ತಾರೆ. ಇವರಷ್ಟೇ ಅಲ್ಲದೆ ಜೇನು ಕುರುಬರು ಚಿಕ್ಕಮ್ಮ, ದೊಡ್ಡಮ್ಮ, ಹಂದಿಗರಮ್ಮ, ಪಟಲದಮ್ಮ, ಪಿರಿಯಾಪಟ್ಟಣದಮ್ಮ, ಕಂಬದಮ್ಮ, ವೀರ ಮಾಸ್ತಿಯರು ಮೊದಲಾದ ದೈವಗಳನ್ನು ಪೂಜಿಸುತ್ತಾರೆ. ಅದರಲ್ಲಿ ಹೆಣ್ಣುದೈವಗಳದ್ದು ಹೆಚ್ಚಿನ ಪಾಲು.

### 7.4. ಬೆಟ್ಟಕುರುಬರ ದೈವ, ಆಚರಣೆಗಳು, ನಂಬಿಕೆಗಳು ಮತ್ತು ಮೌಖಿಕ ಸಾಹಿತ್ಯ

ಬೆಟ್ಟಕುರುಬರು ಬಹಳ ಸಂಪ್ರದಾಯಸ್ಥರು ಹಾಗೂ ನೇಮನಿಷ್ಠರು. ಇಂದಿಗೂ ದಕ್ಷಿಣ ಕೊಡಗಿನ ಹಲವಾರು ದೇವಾಲಯಗಳಲ್ಲಿ ಬೆಟ್ಟಕುರುಬರು ಪೂಜಾರಿಗಳಾಗಿದ್ದಾರೆ. ಹಾಗೆಯೇ ತಿತಿಮತಿಯ ದೇವರ ಪುರದಲ್ಲಿ ವರ್ಷಕ್ಕೊಮ್ಮೆ ಭದ್ರಕಾಳಿದೇವಿಯ ಹೆಸರಲ್ಲಿ ನಡೆಯುವ ಹಬ್ಬವಾದ ಕುಂಡೆ ಹಬ್ಬದ ಪ್ರಮುಖ ರೂವಾರಿಗಳೂ ಇವರೇ.

**ಕುಂಡೆ ಹಬ್ಬ:** ಕುಂಡೆ ಹಬ್ಬದ ಮತ್ತೊಂದು ಹೆಸರು ಬೇಡು ಹಬ್ಬ. ಕೊಡಗಿನ ತಿತಿಮತಿಯ ದೇವರಪುರದಲ್ಲಿರುವ ದೇವಸ್ಥಾನದಲ್ಲಿ ಈ ಹಬ್ಬ ನಡೆಯುತ್ತದೆ. ತಿತಿಮತಿ, ಪೊನ್ನಂಪೇಟೆ, ಪಾಲಿಬೆಟ್ಟ, ಗೋಣಿಕೊಪ್ಪ, ಈ ಹಬ್ಬದಂದು ದೇವಾಲಯದ ಸ್ವಚ್ಛತಾ ಕಾರ್ಯ ಇವರ ಜವಾಬ್ದಾರಿ. ಬೆಟ್ಟಕುರುಬರು ಬಿದಿರಿನ ಕರಕುಶಲ ವಸ್ತುಗಳನ್ನು ತಯಾರಿಸುವುದರಲ್ಲಿ ಪರಿಣತರು. ಇವರು ಬೇಡು ಹಬ್ಬದ ಸಲುವಾಗಿ ಬಿದಿರಿನ ಕುದುರೆಯನ್ನು ತಯಾರಿಸಿ ಅದನ್ನು ಬಹಳ

ಗೌರವ ಹಾಗೂ ಜತನದಿಂದ ಹಾಡಿಯ ತಮ್ಮ ಅಂಬಾಲದಲ್ಲಿ ಸಂರಕ್ಷಿಸಿಟ್ಟಿರುತ್ತಾರೆ. ವರ್ಷಕೊಮ್ಮೆ ಬೇಡು ಹಬ್ಬದಂದು ಅದನ್ನು ಹೊರತೆಗೆದು ಸ್ವಚ್ಛಗೊಳಿಸಿ ದೇವಾಲಯದ ಬಳಿಗೆ ತರುತ್ತಾರೆ. ಅದಕ್ಕೆ ಅಲಂಕಾರ ಮಾಡಿದ ನಂತರ ಹರಕೆ ಕಟ್ಟಿಕೊಂಡ ಕೊಡವರು ಮತ್ತು ಇತರ ಮೇಲ್ಜಾತಿಯವರು ಈ ಕುದುರೆಯ ಮೇಲೆ ಕುಳಿತು ನೃತ್ಯ ಮಾಡುತ್ತಾರೆ. ಆದರೆ ಈ ಕುದುರೆ ಏರುವ ಅಧಿಕಾರ ಮಾತ್ರ ಇವರಿಗಿಲ್ಲ. ಈ ಎಲ್ಲ ವಿಧಿ ವಿಧಾನಗಳಲ್ಲಿ ಬೆಟ್ಟಕುರುಬರಿಗೆ ವಿಶಿಷ್ಟ ಸ್ಥಾನಮಾನವಿದೆ.

ಬೆಟ್ಟಕುರುಬ ಆರಾಧ್ಯ ದೈವ 'ಅಣಪೆ ನೂರಾಲ್ ಒಡೆಯ', ಒಮ್ಮೆ ಬೆಟ್ಟಕುರುಬರು, ಅಣಪೆ ತೋಡಿನ ಬಳಿ ಒಂದು ಮರವನ್ನು ಕತ್ತರಿಸಿದಾಗ, ಆ ಮರದಿಂದ ರಕ್ತ ಸುರಿಯಲು ಪ್ರಾರಂಭಿಸಿತಂತೆ. ಅದನ್ನು ಕಂಡು ವಿಸ್ಮಯದಿಂದ ತನ್ನ ಒಡೆಯ ಇಲ್ಲಿ ನೆಲೆಸಿದ್ದಾನೆಂದು ಆ ಸ್ಥಳಕ್ಕೆ ಅಣಪೆನೂರಾಲ್ ಒಡೆಯ ಎಂದು ಹೆಸರಿಟ್ಟು ಪೂಜಿಸಲು ಪ್ರಾರಂಭಿಸುತ್ತಾರಂತೆ. ಈ ಎಲ್ಲ ಬುಡಕಟ್ಟುಗಳು ಕಾಡಿನೊಂದಿಗೆ, ವೃಕ್ಷಗಳೊಂದಿಗೆ ವಿಶಿಷ್ಟ ಭಾವನಾತ್ಮಕ ಸಂಬಂಧವನ್ನು ಹೊಂದಿದ್ದಾರೆ.

**ಮೊರ ಕರೆಯುವುದು: ಬಿಂಜೆ ಪಾಡುಗ**

ಬೆಟ್ಟಕುರುಬರಲ್ಲಿ ಯಾರಾದರೂ ಸತ್ತರೆ ಸಾವಿನ 9 ಅಥವಾ 12ನೇ ಅಥವಾ ಒಂದು ತಿಂಗಳ ಒಳಗಾಗಿ ಒಂದು ನಿರ್ದಿಷ್ಟ ದಿನ ಗೊತ್ತು ಮಾಡಿ ತಿಥಿಯನ್ನು ಆಚರಿಸುತ್ತಾರೆ. ಅಂದು ಸತ್ತವನ ಆತ್ಮವನ್ನು ಕರೆಯಲು ಮೊರ ಕರೆಯುವ ಆಚರಣೆಯನ್ನು ನಡೆಸುತ್ತಾರೆ. ಅಂದು ಸತ್ತ ವ್ಯಕ್ತಿಯ ಮನೆ ಶುದ್ಧಿ ಮಾಡಿ, ಆತ್ಮಕೆ ಸತ್ತ ಸ್ಥಳವನ್ನು ಸೆಗಣಿಯಿಂದ ಸಾರಿಸಿ ಶುಚಿಗೊಳಿಸುತ್ತಾರೆ. ಸತ್ತ ವ್ಯಕ್ತಿಗೆ ಇಷ್ಟದ ಅಡುಗೆ ಮಾಡಿ ಎಡೆ ಇಟ್ಟು ಬಾಗಿಲು ಹಾಕುತ್ತಾರೆ, ಯುವಕರು ಸಂಜೆ ಅಂಬಾಲದಲ್ಲಿ ಪ್ರತಿ ಮನೆಯಿಂದ ಸೌದೆ ತಂದು ಅಂಬಾಲದ ಬಳಿ ಬೆಂಕಿ ಹಾಕಿ ಅಂಬಾಲವನ್ನು ಸ್ವಚ್ಛಗೊಳಿಸಿ ಹಾಡಿಯ ಎಲ್ಲರನ್ನೂ ಆಮಂತ್ರಿಸುತ್ತಾರೆ. ಬಿಂಜೆ ಪಾಡುವ ಸಮಯದಲ್ಲಿ ಅಂಬಾಲದಲ್ಲಿ ತಮ್ಮ ಸ್ಥಾನಮಾನ, ಅರ್ಹತೆಗೆ ಅನುಗುಣವಾಗಿ ಕೂರುವ ವ್ಯವಸ್ಥೆ ಮಾಡಿರುತ್ತಾರೆ. ಅದಕ್ಕಾಗಿ ವಿಶೇಷ ವಿನ್ಯಾಸದಲ್ಲಿ ಚಾಪೆ ಹಾಕುತ್ತಾರೆ. ಹೆಂಗಸರು ಕೂರುವ ಜಾಗವನ್ನು ಅಜ್ಜಿ ಪಟ ಎಂದು ಕರೆಯುತ್ತಾರೆ. ಅಲ್ಲಿ ಒಂದು ಚಾಪೆ ಹಾಕುತ್ತಾರೆ. ದೇವರು ಕರೆಯವವರಿಗೆ ಒಂದು ಚಾಪೆ, ಯಜಮಾನನಿಗೆ ಒಂದು ಚಾಪೆಯಂತೆ ಮೂರು ಚಾಪೆಯನ್ನು ಹಾಕುತ್ತಾರೆ. ಅಂಬಾಲದ ಪೂರ್ವವನ್ನು ಮೂಸಂಬಾಲ ಎಂದೂ ಹಾಗೂ ಪಶ್ಚಿಮ ದಿಕ್ಕನ್ನು ಕೇರಂಬಾಲ ಎಂದು ಕರೆಯುತ್ತಾರೆ ಆ ಎರಡೂ ಕಡೆ ಬೆಂಕಿ ಹಾಕುತ್ತಾರೆ. ದೇವರು ಕರೆಯುವವರನ್ನು ಕ್ರಮವಾಗಿ ಹೀಗೆ ಕರೆಯಲಾಗುತ್ತದೆ.

1. ಬಿಜೆಕಾಳನ್,

2. ದೊಪ್ ಬಿಜೆಕಾಳನ್(ಪರಿಣತ ಹಿರಿಯರು),

3. ಅಡ್ ಬಿಜೆಕಾಳನ್ (ಇಬ್ಬರು ಸಹಾಯಕರು)

ಆ ಸಮಯದಲ್ಲಿ ದೇವರು ಬರುವವರು ಮಡಿ ಉಟ್ಟು ಬರುತ್ತಾರೆ. ದೊಪ್ ಬಿಜೆಕಾಳನ್ ಹಾಗು ಅಡ್ ಬಿಜೆಕಾಳನ್ ಬಿಂಜೆ ಪದ್ಯ ಹಾಡುತ್ತಾರೆ. ಇವರಿಗೆ ದೇವರು ಬರುತ್ತದೆ. ಆದರೆ ಅವರು ದೇವರೊಂದಿಗೆ ಸಂಭಾಷಣೆ ನಡೆಸುವಷ್ಟು ಸಮರ್ಥರಾಗಿರುವುದಿಲ್ಲ. ಅಡ್ ಬಿಜೆಕಾಳನ್‌ರವರಲ್ಲಿ ಒಬ್ಬ ಯುವಕ ಬಿಸಿನೀರು ಕಾಯಿಸುತ್ತಾನೆ. ಅಂಬಾಲದ ಮಾಡಿನಲ್ಲಿ ಬಲಭಾಗದಲ್ಲಿ ಮೇಲೆ ಬಿಂಜೆಮೊರ ಇಟ್ಟಿರುತ್ತಾರೆ ಅದಕ್ಕೆ 5–7 ಗೆಜ್ಜೆ ಕಟ್ಟಿರುತ್ತಾರೆ. ಆ ಸಮಯದಲ್ಲಿ ಅಜ್ಜಯ್ಯನ ಮತ್ತು ಕುಲದೇವರ ಹಾಡು ಹಾಡುತ್ತಾರೆ. ಅವರು ದೇವರ ಸ್ತುತಿ ಮಾಡುತ್ತಿದ್ದಂತೆ ಆವೇಶ ಬರುತ್ತದೆ. ಲೌಕಿಕ ಪ್ರಪಂಚದಿಂದ ಅಲೌಕಿಕ ಪ್ರಪಂಚದ ಕಡೆಗೆ ಅವರ ಆತ್ಮ ಚಲಿಸುತ್ತದೆ. ಅಡ್ ಬಿಜೆಕಾಳನ್ ಅಲ್ಲೇ ಕಾಯಿಸಿದ ಬಿಸಿನೀರಲ್ಲಿ ಮತ್ತೆ ಕೈಕಾಲು ತೊಳೆದುಕೊಂಡು ಕುಳಿತುಕೊಳ್ಳುತ್ತಾನೆ. ಆಗ ಅಜ್ಜಿಪಟದಲ್ಲಿ ಕೂರುವ ಮಹಿಳೆಯರನ್ನು 'ಪಾಡ್ಬಾರಜ್ಜೆ... ಪಾಡ್ಬಾರಕ್...' ಎಂದು ಅಂಬಾಲದಿಂದಲೇ ಮೂರು ಸಾರಿ ಕರೆಯುತ್ತಾರೆ. ಆಗ ಮಹಿಳೆಯರು ಬಂದು ಅಂಬಾಲದಲ್ಲಿ ತಮಗಾಗಿ ಮೀಸಲಿರಿಸಿದ ಅಜ್ಜಿಪಟದಲ್ಲಿ ಬಂದು ಕೂರುತ್ತಾರೆ. ಅಡ್‌ಬಿಜೆ ಕಾಳನ್ ಅಲ್ಲಿ ಇಟ್ಟಿರುವ ಹೊಸ ಪಂಚೆ, ಬಿಂಜೆ ಮೊರ ಇತ್ಯಾದಿಗೆ ಧೂಪದ ಆರತಿ ಎತ್ತುತ್ತಾನೆ. ಹಾಡು ಪ್ರಾರಂಭವಾಗುತ್ತದೆ. ಮೈಮೇಲೆ ಆತ್ಮದ ಆವಾಹನೆಯಾಗುತ್ತದೆ. ಪರಿಣಿತರು, ಹಿರಿಯರು ಬಂದ ಆತ್ಮದೊಂದಿಗೆ(ಅಜ್ಜಯ್ಯ) ಮಾತುಕತೆ ಪ್ರಾರಂಬಿಸುತ್ತಾರೆ. ಆವಾಹನೆಯಾದ ಅಜ್ಜಯ್ಯ/ಅಜ್ಜಿ ಯಾರ ಕುಲದವರು ಎಂಬುದನ್ನು ತಿಳಿದುಕೊಳ್ಳುತ್ತಾರೆ. ದೇವರು ಮತ್ತು ಆತ್ಮ ಕರೆಯುವಾಗ ಗುಡ್ಡನಿಗೆ ಆವಾಹನೆಯಾದ ದೇವರು ನಾನು ಇದ್ದೇನೆ ಎಂಬುದಕ್ಕೆ ಒಂದು ಗುರುತು ಹೇಳಿದರೆ ಅಂದು ಒಳ್ಳೆ ಬೇಟೆ ದೊರಕುತ್ತಿತ್ತು. ಗುಡ್ಡ ಹಾಡುತಿದ್ದರೆ ಅದಕ್ಕೆ ಹೆಂಗಸರು ಸೊಲ್ಲು ಹೇಳುತ್ತಾರೆ. ಗುಡ್ಡ ಹೇಳಿದ್ದನ್ನೇ ಮತ್ತೆ ವಿಶಿಷ್ಟವಾದ ದಾಟಿಯಲ್ಲಿ ಹಾಡುತ್ತಾರೆ.

ಆತ್ಮದೊಂದಿಗೆ ಸಂವಹನ ನಡೆಸುವಾಗ ಅನಿವಾರ್ಯ ಸಂದರ್ಭದಲ್ಲಿ ಮಹಿಳೆಯರು ದೇವರನ್ನು ಪ್ರಶ್ನಿಸಬಹುದು. ಗಂಡಸರ ಮಾತುಕತೆ ದಿಕ್ಕು ತಪ್ಪುವ ಸಮಯದಲ್ಲಿ ಮಹಿಳೆಯರು ಮಾತಿನ ಮಧ್ಯೆ ಪ್ರವೇಶಿಸಹುದು. ಒಂದು ವೇಳೆ ಗುಡ್ಡ ಹೇಳಿದ್ದನ್ನು ಜನರು ಸರಿಯಾಗಿ ಅರ್ಥ ಮಾಡಿಕೊಳ್ಳುತ್ತಿಲ್ಲ ಎಂದಾದಾಗ ಮಹಿಳೆಯರು ಭಾಗಿಯಾಗಬಹುದು. ಅಂಬಾಲದಲ್ಲಿರುವ ಕಂಬವನ್ನು ಕಾನಿಕಂಬ ಎಂದು ಕರೆಯುತ್ತಾರೆ. ಈ ಕಾನಿ ಕಂಬದ ಬಳಿ ಕುಳಿತಿರುವವರು ರಾತ್ರಿ ನಡೆದ

ಮಾತುಕತೆಯನ್ನು ಬೆಳಗ್ಗೆ ಹಾಡಿಯ ಎಲ್ಲರಿಗೂ ಅಂಬಾಲದಲ್ಲಿ ವರದಿ ಕೊಡಬೇಕು ಈ ಜವಾಬ್ದಾರಿ ಕೋಲಿರ್ ಮಗೆ ಕುಲದವರದು. ಕಾನಿ ಕಂಬದ ಬಳಿ ಇವರಲ್ಲದೆ ಸೊಗುಂಬ್ ಮಗೆ, ಕೂಗೂರ್ ಮಗೆ ಇತ್ಯಾದಿ ಕುಲದವರು ಕೂರಬಹುದು. ಇವರ ಜವಾಬ್ದಾರಿ ಎಂದರೆ ಬಿಂಜೆ ಕರೆಯುವ ಸಮಯದಲ್ಲಿ ನಡೆದ ವಿಷಯವನ್ನು ಉರಿನ ಎಲ್ಲರಿಗೂ ಮರುದಿನ ತಿಳಿಸುವುದು. ಬೆಟ್ಟಕುರುಬರು ತಾವು ತಪ್ಪು ತೀರಿಸುವವರಿದ್ದರೆ, ಪೂಜೆ ನೀಡುವುದಿದ್ದರೆ ನಾವು ದೇವರ ಬಳಿ ಹೋಗುವುದಿಲ್ಲ. ದೇವರನ್ನೇ ನಮ್ಮ ಬಳಿ ಕರೆಯಿಸಿಕೊಳ್ಳುತ್ತೇವೆ ಎನ್ನುತ್ತಾರೆ.

ಬಿಂಜೆ ಕರೆಯುವಾಗ ಹಾಡುವ ಪದ್ಯ

'ನೇಂದೋ ನೇಂದೋ ನೇಂದ್ಯೆ ನೇಂದಮ್ಮ ಸಿರಿದೆಮ್ಮೆ
ನೇಂದೋ ನೇಂದೋ ನೇಂದ್ಯೆ ನೇಂದಮ್ಮ ಸಿರಿದೆಮ್ಮೆ
ಪಾಂಬು ಪೊಲೆ ಚಾಡಿ ಬಾರೊ ನೆಂದೋ
ನೇಂದೋ ನೇಂದೋ ನೇಂದ್ಯೆ ನೇಂದಮ್ಮ ಸಿರಿದೆಮ್ಮೆ
ಗೋಮಿ ಪೊಲೆಗುಡುಗಿ ಬಾರೋ ನೇಂದ್ಯೆ ನೆಂದಮ್ಮೆ
ನೇಂದೋ ನೇಂದೋ ನೇಂದ್ಯೆ ನೇಂದಮ್ಮ ಸಿರಿದೆಮ್ಮೆ
ಬೊರೆ ಪೋಲೆ ಲೆಗ್ಗಿ ಬಾರೋ...ನೆಂದೋ'[16]

ಬೆಟ್ಟಕುರುಬರು ಸ್ಮಶಾನವನ್ನು 'ಸುಡುಗುಣಿ' ಎಂದು ಕರೆಯುತ್ತಾರೆ. ಸ್ಮಶಾನ ಬೆಟ್ಟಕುರುಬರ ಪವಿತ್ರ ಸ್ಥಳವಾಗಿದೆ. ಇದು ಪಾರಂಪರಿಕವಾಗಿ ಆ ನಿರ್ದಿಷ್ಟ ಸಮುದಾಯಕ್ಕೆ ಸಂಬಂಧಿಸಿದ್ದಾಗಿರುತ್ತದೆ. ಸಮುದಾಯದ ಪೂರ್ವಜರ, ಹಿರಿಯರ ಆತ್ಮಗಳು ನೆಲೆಸಿರುವ ಜಾಗವಿದು ಎಂದು ನಂಬುತ್ತಾರೆ. ಅದು ತಮ್ಮ ದೈವಗಳ ವಾಸಸ್ಥಳವಿದ್ದಂತೆ. ಆದರೆ ವರ್ಷಕ್ಕೊಮ್ಮೆ ತಮ್ಮ ಪೂರ್ವಿಕರಿಗೆ ಪೂಜೆ ಮಾಡಬೇಕೆಂದಿದ್ದರೆ, ಎಡೆ ಕೊಡಬೇಕು ಎಂದಾಗ ಸ್ಮಶಾನಕ್ಕೆ ಹೋಗಬೇಕಾಗಿಲ್ಲ. ಬಿಂಜೆ ಕರೆಯುವುದರ ಮೂಲಕ ತಾವಿದ್ದಲ್ಲೇ ಕರೆಯಿಸಿಕೊಳ್ಳುತ್ತಾರೆ. ಈ ರೀತಿ ಕರೆಸಿದ ದೈವಗಳೊಡನೆ ನಡೆಸುವ ಸಂಭಾಷಣೆ ಇವರಿಗೆ ಆತ್ಮಸ್ಥೈರ್ಯವನ್ನು ನೀಡುತ್ತದೆ. ರೋಗಿಗಳಾದರೆ ದೈವಗಳು ನೀಡುವ ಅಭಯವು ಮನೋಬಲವನ್ನು ಹೆಚ್ಚಿಸುತ್ತದೆ. ಈ ದೈವಗಳನ್ನು ಕುರಿತಂತೆ ಹಬ್ಬಗಳು, ಜಾತ್ರೆಗಳು ಕೂಡ ನಡೆಯುತ್ತವೆ.

ಹಿರಿಯರನ್ನು ಆವಾಹಿಸುವ ಈ ಕ್ರಿಯೆಗೆ ಜೇನುಕುರುಬರು 'ಬುಂಡೆ ಕರೆಯುವುದು' ಎಂದರೆ ಬೆಟ್ಟಕುರುಬರು 'ಮೊರ ಕರೆಯುವುದು' ಅಥವ 'ಬಿಂಜೆ ಕಳುವುಗ' ಎಂದು ಕರೆಯುತ್ತಾರೆ. ಬೆಟ್ಟಕುರುಬರು ಈ ಸಂದರ್ಭದಲ್ಲಿ ಬಿದಿರಿನಿಂದ ತಯಾರಿಸಿದ ಸಣ್ಣ ವಿಶೇಷವಾದ ಮೊರವನ್ನು ಬಳಸುತ್ತಾರೆ. ಜೇನುಕುರುಬರು ಬುಂಡೆ ಕರೆಯುವಾಗ ಸೋರೆ ಬುರುಡೆಯನ್ನು ಬಳಸಿದರೆ

ಬೆಟ್ಟಕುರುಬರು ಈ ವಿಶೇಷವಾದ ಮೊರವನ್ನು ಉಪಯೋಗಿಸುತ್ತಾರೆ. ಆ ಸಣ್ಣ ಮೊರಕ್ಕೆ ಗೆಜ್ಜೆ ಮಣಿ ಕಟ್ಟಿ ಹೆಣೆದಿರುತ್ತಾರೆ. ಈ ಮೊರವು ಬಹಳ ಮುಖ್ಯವಾದದ್ದು ಹಾಗೂ ಪವಿತ್ರವಾದದ್ದು. ಇದರ ಮೂಲಕ ದೈವದ ಆವಾಹನೆಯಾಗುತ್ತದೆ. ಇದನ್ನು ದೇವರನ್ನು ಕರೆಯಲು ಮಾತ್ರ ಉಪಯೋಗಿಸುತ್ತಾರೆ. ಹಾಡಿಯ ಚಾವಡಿ ಅಥವಾ ತಮ್ಮಡಿಯ ಮನೆಯ ಬಳಿ ಸ್ವಲ್ಪ ಜಾಗವನ್ನು ಸಗಣಿಯಿಂದ ಸಾರಿಸಿ ಬೂದಿಯಿಂದ ಒಂದು ವೃತ್ತವನ್ನು ರಚಿಸುತ್ತಾರೆ. ಆ ವೃತ್ತದ ಒಳಗೆ ಮಂದಲಿಗೆ ಹಾಕಿ, ಅದರ ಮೇಲೆ ಬಟ್ಟೆ ಹಾಸಿ, ಅದರ ಮೇಲೆ ತೆಂಗಿನಕಾಯಿ, ಬಾಳೆಹಣ್ಣು, ಹೂವು, ಊದುಬತ್ತಿ ಹಚ್ಚುತ್ತಾರೆ, ಗಂಧದ ಚಕ್ಕೆಯಿಂದ ಧೂಪ ಹಾಕುತ್ತಾರೆ. ವೀಳ್ಯದೆಲೆ, ಅಡಿಕೆ, ಹೊಗೆಸೊಪ್ಪು ಹಾಗೂ ಸ್ಥಳೀಯವಾದ ಮದ್ಯವನ್ನು ಇಟ್ಟು ತಮ್ಮಡಿಯು ಮೊರವನ್ನು ಅಲ್ಲಾಡಿಸುತ್ತ ಹಾಡಿನ ಮೂಲಕ ಸತ್ತ ಆತ್ಮವನ್ನು ಕರೆಯುತ್ತಾರೆ. ಆ ಹಾಡಿಗೆ ನೆರೆದ ಜನರೆಲ್ಲ ಧ್ವನಿ ಸೇರಿಸುತ್ತಾರೆ. ಸ್ತ್ರೀಯರು ರಾಗಬದ್ಧವಾಗಿ ಹಾಡತೊಡಗುತ್ತಾರೆ. ಈ ಕ್ರಿಯೆ ನಿಧಾನವಾಗಿ ಪ್ರಾರಂಭವಾಗಿ ಅನಂತರ ವೇಗವನ್ನು ಪಡೆದುಕೊಳ್ಳುತ್ತದೆ. ತಮ್ಮಡಿಯು ಆವೇಶಕ್ಕೆ ಒಳಗಾದಾಗ ಸತ್ತ ವ್ಯಕ್ತಿಯ ಆತ್ಮ ತಮ್ಮಡಿಯ ದೇಹವನ್ನು ಪ್ರವೇಶಿಸುತ್ತದೆ. ಆ ಆತ್ಮ ತಮ್ಮಡಿಯ ಮೂಲಕ ಮಾತನಾಡಲು ಪ್ರಾರಂಭಿಸುತ್ತದೆ. ಈ ರೀತಿ ಆತ್ಮದೊಂದಿಗೆ ಮಾತುಕತೆ ನಡೆಯುತ್ತದೆ. ನಂತರ ನೆರೆದವರು ಕೇಳಿದ ಪ್ರಶ್ನೆಗೆ ತಮ್ಮಡಿಯ ಮೈಮೇಲಿರುವ ಆತ್ಮ ಉತ್ತರಿಸುತ್ತದೆ. ಈ ಸಂದರ್ಭದಲ್ಲಿ ಪ್ರತಿ ಹಂತವು ಶಾಸ್ತ್ರೋಕ್ತವಾಗಿ ನಡೆಯುತ್ತದೆ. ಸ್ವಲ್ಪಕಾಲದ ನಂತರ ಆತ್ಮವು ದೇಹವನ್ನು ಬಿಟ್ಟು ಹೊರಟು ಹೋಗುತ್ತದೆ. ಸಮುದಾಯದಲ್ಲಿ ಯಾರಿಗಾದರೂ ತೊಂದರೆ ತಾಪತ್ರಯ ಆದಾಗ, ಜ್ವರ ಬಂದರೆ ಕಾಯಿಲೆ ಕಸಾಲೆ ಆದಾಗ, ಹೆರಿಗೆಯಲ್ಲಿ ತೊಂದರೆಯಾದಾಗ ಆತ್ಮವನ್ನು ಆಹ್ವಾನಿಸಿ ಈ ರೀತಿ ಪರಿಹಾರ ಪಡೆದುಕೊಳ್ಳುತ್ತಾರೆ. ಆತ್ಮವು ಮೈಯಿಳಿದ ನಂತರ ತಮ್ಮಡಿಯು ಪೂಜೆಗೆ ಇಟ್ಟಿದ್ದ ಮದ್ಯವನ್ನು ಸೇವಿಸುತ್ತಾನೆ. ಎಲೆ ಅಡಿಕೆಯನ್ನು ನೆರೆದಿದ್ದವರೆಲ್ಲ ಹಂಚಿಕೊಳ್ಳುತ್ತಾರೆ.

ಬುಡಕಟ್ಟುಗಳು ಮುಖ್ಯವಾಗಿ ಮಾತೃದೇವತಾರಾಧಕರು ಅವರ ಪೂಜೆಯ ಬಹುಪಾಲು ಸಲ್ಲುವುದು ಹೆಣ್ಣುದೇವತೆಗಳಿಗೆ. ಆದಿಮದ ಈ ಪೂಜೆಯ ಕ್ರಮವನ್ನು ಇಂದಿಗೂ ಇವರು ಕಾಪಾಡಿಕೊಂಡು ಬಂದಿದ್ದಾರೆ. ಈ ಮಧ್ಯೆ ಹಲವು ಶಿಷ್ಟ ದೇವರುಗಳು ಇವರ ಬದುಕನ್ನು ಪ್ರವೇಶಿಸಿದ್ದರೂ ಕೂಡ ಮಾತೃದೇವತೆಗಳಾದ ಮಾರಿಯಮ್ಮ, ಕುಟ್ಟದ ಕರುಂಗಾಲಿಯರು ಇನ್ನೂ ಕೂಡ ಇವರ ಮನದಲ್ಲಿ ಆಳದಲ್ಲಿ ಭಕ್ತಿಭಾವಗಳನ್ನು, ಭಯವನ್ನು, ಗೌರವವನ್ನು, ನಂಬಿಕೆಯನ್ನು ಉಳಿಸಿಕೊಂಡಿದ್ದಾರೆ. ಈ ಕುಟ್ಟದ ಜಾತ್ರೆ ನಡೆಯುವ ಸ್ಥಳಕ್ಕೆ ಸಂಬಂಧಿಸಿದಂತೆ ಒಂದು ಕತೆಯು ಚಾಲ್ತಿಯಲ್ಲಿದೆ. 'ಒಂದಾನೊಂದು ಕಾಲದಲ್ಲಿ ಬೆಟ್ಟಕುರುಬ ಸಮುದಾಯದ ಕೆಲವು ಹೆಂಗಸರು ಒಂದುಗೂಡಿ ಆ ಜಾಗದಲ್ಲಿ ಬೆಳೆದಿದ್ದ ಬಹಳ ದಪ್ಪನಾದ ಒಂದು ನೊರೆಗೆಡ್ಡೆಯನ್ನು ಅಗೆದು

ತುಂಡರಿಸಿ ಮನೆಗೆ ಒಯ್ಯುವ ಕೆಲಸದಲ್ಲಿ ಮಗ್ನರಾಗಿದ್ದರು. ನೊರೆ ದಪ್ಪವಾಗಿ, ಆಳವಾಗಿ ಬೆಳೆಯುವ ರುಚಿಕರವೂ ಪುಷ್ಟಿಕರವೂ ಆದ ಒಂದು ಗೆಡ್ಡೆ. ಇದು ಇಲ್ಲಿನ ಆದಿವಾಸಿ ಸಮುದಾಯಗಳ ಪ್ರೀತಿಯ ಆಹಾರ ವಸ್ತು. ಗಡ್ಡೆ ಆಳಕ್ಕೆ ಬೆಳೆದಿತ್ತು. ಗಡ್ಡೆಯ ಬಹುಪಾಲನ್ನು ಅಗೆದು ಗೂಡೆಗಳಿಗೆ ತುಂಬಿಕೊಂಡ ಆ ಹೆಂಗಸರು ಬಳಿಯಲ್ಲೇ ಇದ್ದ ತಮ್ಮ ಮನೆಗಳಿಗೆ ಹೋದರು. ಒಬ್ಬಳು ಮಾತ್ರ ಕೆಳಭಾಗದ ಗಡ್ಡೆ ಅಗೆಯುತ್ತ ಅಲ್ಲಿದ್ದಳು. ಆ ಹೆಂಗಸರು ತಮ್ಮ ಹೊರೆಯನ್ನು ಮನೆಗೆ ಸಾಗಿಸಿ, ತಮ್ಮ ಗೆಳತಿಯನ್ನು ಕೂಡಿಕೊಂಡು ಗೆಡ್ಡೆ ಅಗೆದು ಮುಗಿಸಲೆಂದು ಆ ಜಾಗಕ್ಕೆ ಧಾವಿಸಿದರು. ಆದರೆ ಗೆಡ್ಡೆಯನ್ನು ಅಗೆದಿದ್ದ ಜಾಗಕ್ಕೆ ಮಣ್ಣು ಕುಸಿದು, ಅವರ ಗೆಳತಿ ಮಣ್ಣಲ್ಲಿ ಹುಗಿದುಹೋಗಿದ್ದಳು. ಅವಳ ದಟ್ಟವಾದ ಕಪ್ಪು ಕೇಶರಾಶಿ ಮಾತ್ರ ಮೇಲೆ ಕಾಣಿಸುತಿತ್ತು. ಅವಳೇ ಕುಟ್ಟದ ಕರುಂಗಾಲಿ.'[17] ಈ ದೈವವನ್ನು ಬಹಳ ಭಯ ಭಕ್ತಿಯಿಂದ ಈ ಭಾಗದ ಎಲ್ಲ ಆದಿವಾಸಿ ಸಮುದಾಯಗಳು ಮತ್ತು ಇತರೆ ಸಮುದಾಯದವರು ಕೂಡ ಆರಾಧಿಸಿಕೊಂಡು ಬರುತ್ತಿದ್ದಾರೆ. ವರ್ಷಕ್ಕೊಮ್ಮೆ ಕುಟ್ಟದಲ್ಲಿ ಜಾತ್ರೆಯು ಕೂಡ ನಡೆಯುತ್ತದೆ. ಆದರೆ ಇಲ್ಲಿನ ಜಾತ್ರೆಯ ಮುಖ್ಯ ರೂವಾರಿಗಳು ಆ ಭಾಗದ ಲಿಂಗಾಯತರು ಎಂಬುದು ವಿಶೇಷ. ಕ್ಷುದ್ರದೇವತೆಯಾದ, ರಕ್ತತರ್ಪಣವನ್ನು ಅಪೇಕ್ಷಿಸುವ ಕುಟ್ಟದ ಕರುಂಗಾಲಿಗೂ ಪ್ರಾಣಿಬಲಿಯನ್ನು ವಿರೋಧಿಸುವ ಲಿಂಗಾಯತರಿಗೂ ಎಲ್ಲಿಯ ಸಂಬಂಧ ಎಂಬುದನ್ನು ಆ ದೇವಾಲಯದ ರೂವಾರಿಗಳನ್ನು ವಿಚಾರಿಸಿದಾಗ, ತಮ್ಮ ಹಿರಿಯರು ಹೆಚ್.ಡಿ.ಕೋಟೆ ಭಾಗದಿಂದ ಕೊಡಗಿಗೆ ವಲಸೆ ಬಂದ ಸಂದರ್ಭದಲ್ಲಿ ಆ ದೇವತೆಯೇ ತಮ್ಮ ಹಿರಿಯರಿಗೆ ಒಪ್ಪಿಸಿದ ಜವಾಬ್ದಾರಿ ಇದು ಎಂದು ಹೇಳುತ್ತಾರೆ.

ಬೆಟ್ಟಕುರುಬರು ಬಹಳ ಸಂಪ್ರದಾಯಸ್ಥರು ಹಾಗೂ ನೇಮ ನಿಷ್ಠರು. ಇಂದಿಗೂ ದಕ್ಷಿಣ ಕೊಡಗಿನ ಹಲವಾರು ದೇವಾಲಯಗಳಲ್ಲಿ ಇವರೇ ಪೂಜಾರಿಗಳು. ಕುಟ್ಟದ ಕರುಂಗಾಲಿ. ಭದ್ರಕಾಳಿ, ಕಮಟೆ ಬಸವೇಶ್ವರ, ದೇವರ ಕಾಡುಗಳಲ್ಲಿ ನೆಲೆಸಿರುವ ಚಾಮುಂಡಿ ಈ ಮೊದಲಾದ ದೇವರುಗಳನ್ನು ಆರಾಧಿಸುತ್ತಾರೆ. ಹೆಚ್.ಡಿ.ಕೋಟೆಯ ಭಾಗದಲ್ಲಿರುವ ಬೆಟ್ಟಕುರುಬರು ಪೂಜಿಸುವ ದೇವರುಗಳು ಕೇರಳದಿಂದ ಬಂದು ಈ ಭಾಗದಲ್ಲಿ ನೆಲೆಸಿದವರು ಎನ್ನುತ್ತಾರೆ. ಕರುಂಗಾಲಿ ಅಥವಾ ಕಿರುಂಗಾಲಿಯು ಬೆಟ್ಟಕುರುಬರು ಆರಾಧಿಸುವ ಮುಖ್ಯ ಹೆಣ್ಣುದೇವತೆ. ಗಾಳಿ ಎಂದರೆ ಕಾಳಿ ಎಂದರ್ಥ. ಏಳು ಜನ ಆದಿಶಕ್ತಿಯರಲ್ಲಿ ಈಕೆ ಕೊನೆಯವಳಾದ್ದರಿಂದ ಕಿರುಂಗಾಲಿ ಎಂದು ಈಕೆಯನ್ನು ಕರೆಯುತ್ತಾರೆ. 'ಒಮ್ಮೆ ಸರ್ಕಲ್ ಮಗೆ ಅಜ್ಜಯ್ಯ ಬಿದಿರಿನ ಬುಟ್ಟಿ ಮಾಡುತ್ತಾ ಕುಳಿತ್ತಿದ್ದಾಗ ಕರುಂಗಾಲಿ ಚಿಕ್ಕ ಮಗುವಿನ ರೂಪದಲ್ಲಿ ಬಂದು ಅಜ್ಜಯ್ಯನ ತೊಡೆಯ ಮೇಲೆ ಬಂದು ಕುಳಿತಿತಂತೆ. ಆಗ ಅಜ್ಜಯ್ಯ ಆಶ್ಚರ್ಯದಿಂದ ಈ ನಿರ್ಜನ ಪ್ರದೇಶ

ದಲ್ಲಿ ಈ ಮಗು ಎಲ್ಲಿಂದ ಬಂತು ಎಂದು ಯೋಚಿಸಿ ಆ ಮಗುವನ್ನು 'ನೀನು ಯಾರು? ಎಲ್ಲಿಂದ ಬಂದಿದ್ದೀಯ? ಎಂದು ಕೇಳಿದಾಗ ಆ ಮಗು "ನಾವು 7 ಜನ ಅಕ್ಕ ತಂಗಿಯರು ಕೇರಳದಿಂದ ಬರುತ್ತಿದ್ದೇವೆ. ನಾವು ಆದಿಶಕ್ತಿಯ ಪ್ರತಿರೂಪ. ನನಗೆ ಇಲ್ಲಿ ನೆಲೆ ನಿಲ್ಲಲು ನೀವು ಅವಕಾಶ ನೀಡಿದರೆ ನಾನು ನಿಮ್ಮನ್ನು ಸದಾಕಾಲ ಕಾಪಾಡುತ್ತೇನೆ ಎಂದಿತಂತೆ. ನನಗೆ ನೀವು ಧೂಪ ದೀಪದಿಂದ ಆರಾಧಿಸಿ ಕೋಳಿ ಬಲಿ ನೀಡಬೇಕು ಎಂಬ ಆಶಯವನ್ನು ವ್ಯಕ್ತಪಡಿಸಿದಳಂತೆ. ಅದಕ್ಕೆ ಅಜ್ಜಯ್ಯ ಒಪ್ಪಿಗೆ ನೀಡಿದ ನಂತರ ಕುಟ್ಟದಲ್ಲಿ ಕರುಂಗಾಲಿ ನೆಲೆ ನಿಂತಳಂತೆ. ಕೊಟ್ಟ ಮಾತಿನಂತೆ ಕರುಂಗಾಲಿಗೆ ವರ್ಷಕ್ಕೊಮ್ಮೆ ಜಾತ್ರೆ ಏರ್ಪಡಿಸಲಾಗುತ್ತದೆ. ಸರ್ಕಲ್ ಮಗೆ, ನಾಣ್ಚಿ ಮಗೆ, ಬೊಂಡ್ಗೊಗ್ಗಟ್ಟ ಮಗೆ, ತೋಪಟ್‌ಮಗೆಯವರು ಇಲ್ಲಿಗೆ ನಡೆದುಕೊಳ್ಳುತ್ತಾರೆ. ಕುಟ್ಟದಲ್ಲಿ ಪ್ರತಿ ವರ್ಷ ನಡೆಯುವ ಜಾತ್ರೆಯಲ್ಲಿ ಕುಳಿಯ, ಕಿರುಂಗಾಲಿ, ಭದ್ರಕಾಳಿ ದೇವರುಗಳಿಗೆ ತೆರೆ ಕಟ್ಟುತ್ತಾರೆ. ಈ ಸಮಯದಲ್ಲಿ ಬೆಟ್ಟಕುರುಬರು ಕಣಗಿಲೆ ಮರದ ಬಳಿ ಡೋಲು ಮತ್ತು ಅಡ್ಡಕೊಳಲು ನುಡಿಸುತ್ತಾ ಸುತ್ತುತ್ತಾ ಕುಣಿಯುತ್ತಾರೆ. ಅಲ್ಲಿಗೆ ಎಲ್ಲ ದೇವರುಗಳ ಕೋಲ ಕಟ್ಟಿದವರು ಬಂದು ನೃತ್ಯ ಮಾಡುತ್ತಾರೆ.

**ಬೆಟ್ಟಕುರುಬರಲ್ಲಿ ಮಠಗಳು:** 12ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಸಾಮಾಜಿಕ ಕ್ರಾಂತಿ ನಡೆದಾಗ ಅದರ ಪ್ರಭಾವಕ್ಕೆ ಒಳಗಾಗಿ ಕೊಡಗು ಮತ್ತು ಹೆಚ್.ಡಿ. ಕೋಟೆಯ ಭಾಗಗಳಲ್ಲಿ ಬೆಟ್ಟಕುರುಬರ ಸುಮಾರು ಹನ್ನೆರಡು ಮಠಗಳು ಅಸ್ತಿತ್ವಕ್ಕೆ ಬಂದವಂತೆ. ಸಾಮಾಜಿಕ ಕ್ರಾಂತಿಯ ಪ್ರಭಾವಕ್ಕೆ ಸಿಲುಕಿದ ಬೆಟ್ಟಕುರುಬರು ತಾವೂ ಕೂಡ ವೀರಶೈವ ಧರ್ಮದ ಪ್ರಭಾವಕ್ಕೆ ಒಳಗಾಗಿದ್ದರು ಎಂಬುದಕ್ಕೆ ಸಾಕ್ಷಿ ಇವರ ಬಿಂಜೆ ಪದ್ಯದಲ್ಲಿ ದೊರೆಯುತ್ತದೆ. ಬೆಟ್ಟಕುರುಬರ ಬಿಂಜೆ ಪದ್ಯದಲ್ಲಿ ಈ ಮಠಗಳ ಹೆಸರುಗಳು ಉಲ್ಲೇಖವಾಗಿವೆ. ಹಿಂದೆ ಬೆಟ್ಟಕುರುಬರು ಈ ಮಠಗಳಿಗೆ ತಮ್ಮ ಮಕ್ಕಳನ್ನು ಶಿಷ್ಯರನ್ನಾಗಿ ಸೇರಿಸಿ ಸಕಲ ವಿದ್ಯೆಗಳನ್ನು ಕಲಿಸಲಾಗುತ್ತಿತ್ತಂತೆ. ಆದರೆ ಕಾಲಾನಂತರದಲ್ಲಿ ವೀರಶೈವದ ಪ್ರಭಾವ ಶಿಥಿಲವಾಗಿ ಈ ಮಠಗಳ ಪರಂಪರೆಯು ಕಣ್ಮರೆಯಾಗಿರಬಹುದು. ಆದರೆ ಇದಕ್ಕೆ ಕಾರಣ ಅಸ್ಪಷ್ಟ. ಮಾಂಸಾಹಾರ ವರ್ಜನೆ, ಮಠದ ಕಟುನಿಟ್ಟಿನ ಪಾಲನೆ, ಮಠದ ನಿರ್ವಹಣೆ, ಜಾತಿ ಜಾತಿಗಳ ನಡುವಿನ ಸಮಾನ ಭಾವ, ದೇಣಿಗೆ ಈ ಎಲ್ಲವೂ ಕೂಡ ಮಠದಿಂದ ಇವರು ದೂರ ಸರಿಯಲು ಕಾರಣವಾಗಿರಬಹುದು. ಇಷ್ಟೆಲ್ಲ ಪ್ರಭಾವಗಳ ನಡುವೆ ಇವರು ತಮ್ಮ ಆದಿಮ ಸಂಸ್ಕೃತಿಗೆ ಧಕ್ಕೆ ಬಾರದಂತೆ ಇಂದಿಗೂ ಕಾಪಾಡಿಕೊಂಡು ಬಂದಿದ್ದಾರೆ. ಈ ಮಠಗಳಿಗೆ ಸಂಬಂಧಿಸಿದಂತೆ ಒಂದು ಕತೆಯೂ ಕೂಡ ಪ್ರಚಲಿತದಲ್ಲಿದೆ.

'ಗುರುಭೌತ್‌ನ್ ಎಂಬ ಮಹಾಪುರುಷ ನಾಣ್ಚಿ ಮಠದ ಮುಖ್ಯಸ್ಥ. ಈತ ತಾನು ಸಾಕಿದ

ಹಸುಗಳಿಗೆ ಚಾವಂಡಿ(ಚಾಮುಂಡಿ), ಪಂಜುರ್ಲಿ, ಕುಳಿನ್(ಗುಳಿಕ), ಕಿರುಂಗಾಲಿ, ಭದ್ರಕಾಳಿ, ಮೇರಾವೋ(ಮಾರಿ) ಇತ್ಯಾದಿ ಹೆಸರನ್ನು ಇಟ್ಟಿದ್ದನಂತೆ. ಈ ಮಠದಲ್ಲಿ ಆ ಕಾಲದಲ್ಲಿ ಅಪಾರ ಪ್ರಮಾಣದ ಆಸ್ತಿಯಿತ್ತಂತೆ(ಇಲ್ಲಿ ಆಸ್ತಿಯೆಂದರೆ ಅಪಾರ ಸಂಖ್ಯೆಯಲ್ಲಿದ್ದ ಗೋವುಗಳಾಗಿರಬಹುದು). ಒಮ್ಮೆ ಮಠದ ಆಸ್ತಿಯನ್ನು ಕದಿಯಲು ಚಾಮುಂಡಿ, ಗುಳಿಕ, ಪಂಜುರ್ಲಿ, ಕಿರುಂಗಾಲಿ, ಭದ್ರಕಾಳಿ ಮೊದಲಾದ ದೇವರುಗಳು ಬಂದು ಮಠದ ಬಳಿ ಹೊಂಚು ಹಾಕಿಕೊಂಡು ಕಾಯುತ್ತಿದ್ದರಂತೆ. ಸಂಜೆಯಾಗುತ್ತಿದ್ದಂತೆ 'ಗುರುಭೌತಪ್ಪನ್' ತನ್ನ ಶಿಷ್ಯನನ್ನು ಕರೆದು ಚಾವಂಡಿ, ಪಂಜುರ್ಲಿ, ಕಿರುಂಗಾಲಿ, ಭದ್ರಕಾಳಿ, ಕುಳಿನ್ ಎಲ್ಲರನ್ನೂ ಕಟ್ಟಿ ಹಾಕಿದ್ದೀಯ ಎಂದು ಕೇಳಿದಾಗ, ಶಿಷ್ಯ ಹೌದು ಎಲ್ಲರನ್ನೂ ಕಟ್ಟಿ ಹಾಕಿದ್ದೀನಿ ಎಂದನಂತೆ. ಇದನ್ನು ಕೇಳಿದ ಈ ದೇವತೆಗಳಿಗೆ ಆಶ್ಚರ್ಯವಾಗುತ್ತದೆ. ಅಂದರೆ ನಾವು ಕದಿಯಲು ಬಂದ ವಿಷಯ ಗುರುಭೌತಪ್ಪನಿಗೆ ತಿಳಿದಿದೆ. ಮಹಾನ್ ಮಾಯಕಾರನಾದ ಈತ ತನ್ನ ಶಿಷ್ಯನ ಮೂಲಕ ಮಾಯದಿಂದಲೇ ತಮ್ಮನ್ನು ಬಂಧಿಸಿರಬೇಕು ಎಂದು ಭಾವಿಸಿ ಹೆದರಿ ಓಡಲು ಪ್ರಾರಂಭಿಸುತ್ತಾರಂತೆ. ಹಾಗೆ ಓಡುವಾಗ ತರಗೆಲೆಗಳ ಶಬ್ದವಾದುದನ್ನು ಕೇಳಿ ಗುರುಭೌತಪ್ಪ ಅದೇನೆಂದು ತಿಳಿಯಲು ತಿರುಗಿ ನೋಡಿದಾಗ ಯಾರೋ ಓಡಿ ಹೋಗುತ್ತಿದ್ದುದು ಕಾಣಿಸುತ್ತದೆ. ಆಗ ಕೈಗೆ ಸಿಕ್ಕಿದ ದೊಣ್ಣೆಯಿಂದ ಅವರೆಡೆಗೆ ಬೀಸಿದನಂತೆ. ಎಲ್ಲರಿಗಿಂತ ಕಿರಿಯವಳಾದ ಕಿರುಂಗಾಲಿಯು ಜೋರಾಗಿ ಓಡಿ ಹೋಗಲಾಗದೆ ಕೊನೆಯಲ್ಲಿ ನಿಧಾನಕ್ಕೆ ಓಡುತ್ತಿದ್ದವಳ ಕಾಲಿಗೆ ದೊಣ್ಣೆಯ ಏಟು ಬೀಳುತ್ತದೆಯಂತೆ. ಏಟು ತಿಂದು ನೋವಿನಿಂದ ಕುಂಟುತ್ತಾ ಕುಂಟುತ್ತಾ ಕರುಂಗಾಲಿ ಓಡಲು ಪ್ರಾರಂಭಿಸುತ್ತಾಳಂತೆ.' ಈ ಪ್ರಸಂಗವನ್ನು ಕುಟ್ಟದ ಜಾತ್ರೆಯಲ್ಲಿ ತೆರೆ ಕಟ್ಟಿದ ವೇಷಧಾರಿಗಳು ಅನುಕರಣೆ ಮಾಡುತ್ತಾರೆ.

## 7.5. ಸೋಲಿಗರ ದೈವ ಆಚರಣೆಗಳು, ನಂಬಿಕೆಗಳು ಮತ್ತು ಮೌಖಿಕ ಸಾಹಿತ್ಯ

ಸೋಲಿಗರು ಪ್ರಕೃತಿಯ ಆರಾಧಕರು. ಇವರು ಮುಖ್ಯವಾಗಿ ದೊಡ್ಡ ಸಂಪಿಗೆ, ಚಿಕ್ಕ ಸಂಪಿಗೆ, ಬಿಳಿಗಿರಿ ರಂಗನಾಥಸ್ವಾಮಿ, ಕ್ಯಾತೆ ದೇವರು, ಜಡೆಸ್ವಾಮಿ, ಮೂಡಲಗಿರಿಯಯ್ಯ, ತಿಮ್ಮರಾಯನನ್ನು ಪೂಜಿಸುತ್ತಾರೆ. ಮುತ್ತುಗದ ಮರದ ಚೌಡಮ್ಮ, ಮಂಟಳ್ಳಿ ದೇವಸ್ಥಾನದ ಕಾಡು ಬಸಪ್ಪ, ಜಡೇ ಸ್ವಾಮಿ, ದೊಡ್ಡ ಸಂಪಿಗೆ, ಮಾದೇಶ್ವರ, ಬಿಳಿಗಿರಿ ರಂಗಸ್ವಾಮಿ, ಮುಲ್ಕಿ ಬೆಟ್ಟದಲ್ಲಿರುವ ಮಲಾರಮ್ಮ, ಮಾಸ್ತಮ್ಮ, ಬಸವನಕಟ್ಟೆ, ಮಾರಮ್ಮ, ಕೆಬ್ಬೆಪಾಳ್ಯದ ಮಾರಮ್ಮ, ಹಿಮವದ್ ಗೋಪಾಲಸ್ವಾಮಿ ಬೆಟ್ಟ, ಎನ್. ಬೇಗೂರಿನ ಮಾದೇಶ್ವರ, ಹೆಕ್ಕನಬೆಟ್ಟದಲ್ಲಿರುವ ಮಾರಿಗುಡಿ(ಪಾರ್ವತಿ ಮಠ), ರಾಂಪುರದ ಬಳಿ ಎಂ.ಎ.ಗುಡಿ, ಮೊದಲಾದ ದೇವರನ್ನು ಪೂಜಿಸುತ್ತಾರೆ. ಇವರು ಪ್ರಕೃತಿಯ ಭಾಗವಾದ ಪ್ರಾಣಿ, ಪಕ್ಷಿ, ಮರ, ಗಿಡ, ಕಲ್ಲು ಪ್ರತಿಯೊಂದೂ ಕೂಡ ದೈವದ ಸ್ವರೂಪ ಎಂದು ತಿಳಿಯುತ್ತಾರೆ. ಇವರು ಆನೆಯನ್ನು 'ಅಮ್ಮಾಳೆ' ದೇವರೆಂದು,

ಕಾಡೆಮ್ಮೆಯನ್ನು ಕಾಟಿ ಬೆಟ್ಟದಯ್ಯ ಎಂದು ಭಾವಿಸಿ ಪೂಜಿಸುತ್ತಾರೆ. ಕಾಡಿನಲ್ಲಿರುವ ಹುಲಿಯನ್ನು ಹಾಗೂ ಹುಲಿಯ ಹೆಜ್ಜೆಯನ್ನು ಮಲೆ ಮಾದೇಶ್ವರನ ವಾಹನ ಎಂದು ಪರಿಗಣಿಸುತ್ತಾರೆ. ದೊಡ್ಡ ಸಂಪಿಗೆ ಸೋಲಿಗರ ಮುಖ್ಯ ದೇವರು. ದೊಡ್ಡ ಸಂಪಿಗೆಯ ಮರಕ್ಕೆ ನೂರಾರು ವರ್ಷಗಳ ಇತಿಹಾಸವಿದ್ದು, ಆದಿಮ ಬುಡಕಟ್ಟು ಆರಾಧನೆಯ ಪ್ರತೀಕವಾಗಿ ಪ್ರತಿ ವರ್ಷ ಹಬ್ಬವನ್ನು ನಡೆಸುತ್ತಾರೆ. ನಾಗಾರಾಧಾನೆಯ ಸಂಕೇತವಾಗಿ ಹುತ್ತವನ್ನು ಪೂಜಿಸುತ್ತಾರೆ.

**ಪ್ರಕೃತಿಯೊಂದಿಗಿನ ಬಾಂಧವ್ಯದ ಹಬ್ಬ:** ಸೋಲಿಗರು ವ್ಯವಸಾಯವನ್ನೇ ನಂಬಿಕೊಂಡಿರುವವರು. ಇವರು ಆಚರಿಸುವ ಹಬ್ಬಗಳಲ್ಲಿ ಹೆಚ್ಚಿನವು ವ್ಯವಸಾಯಕ್ಕೆ ಸಂಬಂಧಿಸಿದ ಹಬ್ಬಗಳೇ ಆಗಿವೆ. ಅದರಲ್ಲಿ ಮುಖ್ಯವಾದವುಗಳೆಂದರೆ;

1. ಹೊಸರಾಗಿ ಹಬ್ಬ
2. ರೊಟ್ಟಿಹಬ್ಬ
3. ಮುನಿಮಾಡುವುದು

**1. ಹೊಸರಾಗಿ ಹಬ್ಬ:** ಹೊಸರಾಗಿ ಹಬ್ಬವನ್ನು ಡಿಸೆಂಬರ್ ಅಥವಾ ಜನವರಿ ತಿಂಗಳಲ್ಲಿ ಆಚರಿಸುತ್ತಾರೆ. ಈ ಹಬ್ಬದಂದು ಮನೆಯಲ್ಲಿ ಎಲ್ಲರೂ ಸ್ನಾನ ಮಾಡಿ ಹೊಸ ಬಟ್ಟೆ ಧರಿಸಿ ಮನೆಯನ್ನು ಸಾರಿಸಿ ಶುದ್ಧಗೊಳಿಸಿ ಸಂಜೆ ಅಡುಗೆ ಮಾಡುತ್ತಾರೆ. ಮನೆಯ ಹಿರಿಯರು ಅಂದು ಬೆಳಗಿನಿಂದ ಪೂಜೆ ಮುಗಿಯುವವರೆಗೂ ಉಪವಾಸವಿರುತ್ತಾರೆ. ಆ ದಿನ ತಾವು ತಮ್ಮ ಹೊಲದಲ್ಲಿ ಹೊಸದಾಗಿ ಬೆಳೆದ ರಾಗಿಯಿಂದ ಮುದ್ದೆ ತಯಾರಿಸುತ್ತಾರೆ. ಇದೇ ಅವತ್ತಿನ ವಿಶೇಷ. ಜೊತೆಗೆ ಅನ್ನ, ಸಾರು, ತರಕಾರಿಯ ಪಲ್ಯ, ಪಾಯಸ ಮಾಡುತ್ತಾರೆ ಅದಕ್ಕೆ ತಾವೇ ಬೆಳೆದ ತರಕಾರಿ ಸೊಪ್ಪುಗಳನ್ನು ಬಳಸುತ್ತಾರೆ. ಅಂದು ಐದು ಕುಲದ ಹಿರಿಯರನ್ನು ಊಟಕ್ಕೆ ಕರೆದು ಮನೆಯಲ್ಲಿ ಒಂದೆಡೆ ಬಾಳೆ ಎಲೆ ಹಾಕಿ ಚೊಂಬಿನಿಂದ ಕಳಸ ಮಾಡಿ ಅದಕ್ಕೆ ಹೂ, ಗಂಧ, ನಾಮ ಹಚ್ಚಿ ಪೂಜಿಸುತ್ತಾರೆ. ಮೊದಲ ಪೂಜೆಯನ್ನು ಮನೆಯ ಹಿರಿಯರು ನೆರವೇರಿಸುತ್ತಾರೆ. ನಂತರ ಉಳಿದವರು ಪೂಜೆ ಮಾಡುತ್ತಾರೆ. ಆನಂತರ ಎಲ್ಲರೂ ಸೇರಿ ಊಟ ಮಾಡುತ್ತಾರೆ. ಇದು ಸಮುದಾಯವು ಆಚರಿಸುವ ಸಾಮೂಹಿಕ ಆಚರಣೆಯಲ್ಲ. ಬದಲಿಗೆ ತಾವು ಬೆಳೆದ ಮೊದಲ ಬೆಳೆಗೆ ತಮ್ಮ ಮನೆಯಲ್ಲಿ ತಾವು ಸಲ್ಲಿಸುವ ಗೌರವ. ತಮಗೆ ಬೆಳೆ ಕರುಣಿಸಿದ ಕೃತಜ್ಞತಾ ಭಾವದಿಂದ ತಮ್ಮ ದೇವರಿಗೆ ನೈವೇದ್ಯವನ್ನು ಸಲ್ಲಿಸಲು ಆಚರಿಸುವ ಹಬ್ಬ. ಈ ಹಬ್ಬವನ್ನು ಪ್ರತಿ ಕುಟುಂಬದವರೂ ಪ್ರತ್ಯೇಕವಾಗಿ ಆಚರಿಸುತ್ತಾರೆ.

**2. ರೊಟ್ಟಿ ಹಬ್ಬ:** ಸೋಲಿಗರು ಪ್ರತಿ ವರ್ಷ ಸುಗ್ಗಿಯ ಸಮಯದಲ್ಲಿ ಸಾಮೂಹಿಕವಾಗಿ

ಆಚರಿಸುವ ಹಬ್ಬವೇ ರೊಟ್ಟಿಹಬ್ಬ. ಜನವರಿ ತಿಂಗಳಲ್ಲಿ ಈ ಹಬ್ಬವನ್ನು ಪೋಡಿನಲ್ಲಿರುವ ದೇವಾಲಯದ ಮುಂದೆ ಆಚರಿಸುತ್ತಾರೆ. ಹುಣ್ಣಿಮೆ ರಾತ್ರಿಯಲ್ಲಿ ಬೆಳೆದ ಪೈರನ್ನು ಒಕ್ಕಣೆ ಮಾಡಿ ಮನೆ ತುಂಬಿಸುವ ಸಮಯದಲ್ಲಿ ಆಚರಿಸುವ ಹಬ್ಬ ಇದಾಗಿದೆ. ಹಬ್ಬವನ್ನು ಆಚರಿಸಲು ದಿನವನ್ನು ನಿಗದಿಪಡಿಸಲು ಪೋಡಿನ ಯಜಮಾನ, ಕೋಲುಕಾರ, ಚಲುವಾದಿ ಇತರ ಎಲ್ಲರೂ ಒಂದು ದಿನ ಒಂದೆಡೆ ಸೇರುತ್ತಾರೆ. ಪೋಡಿನ ಎಲ್ಲರಿಗೂ ಸಮ್ಮತವಾದ ಒಂದು ದಿನವನ್ನು ಆಯ್ಕೆ ಮಾಡಿ ಹಬ್ಬ ಮಾಡಲು ತೀರ್ಮಾನಿಸುತ್ತಾರೆ. ಅದಕ್ಕಾಗಿ ಪ್ರತಿ ಮನೆಯಿಂದ ಹಣ ಮತ್ತು ರಾಗಿ ಸಂಗ್ರಹಿಸುತ್ತಾರೆ.

ರೊಟ್ಟಿ ಹಬ್ಬವನ್ನು ಸೋಲಿಗರು ಸುಗ್ಗಿಯ ಸಂಭ್ರಮಾಚಾರಣೆಯ ಸಲುವಾಗಿ ಆಚರಿಸುತ್ತಾರೆ. ಈ ಹಬ್ಬವನ್ನು ಸೋಲಿಗರ ಭಾಷೆಯಲ್ಲಿ 'ರೊಟ್ಟಿಯ ಪರ್ವ' ಎಂದೂ ಕೂಡ ಕರೆಯುತ್ತಾರೆ. ಪರ್ವ ಎಂದರೆ ಹಬ್ಬ ಎಂದರ್ಥ. ಸೋಲಿಗರು ತಮ್ಮ ಹೊಲದಲ್ಲಿ ಬಿತ್ತಿದ ರಾಗಿ, ಜೋಳ ಮೊದಲಾದವನ್ನು ಆನೆ, ಕಾಡುಹಂದಿ, ಕಾಡೆಮ್ಮೆ, ಮೊದಲಾದ ಪ್ರಾಣಿಗಳಿಂದ ರಕ್ಷಿಸಲು ಹೊಲದಲ್ಲೆ ಅಟ್ಟಣಿಗೆಗಳನ್ನು ನಿರ್ಮಿಸಿಕೊಂಡು ಕಾಯುತ್ತಾರೆ. ಬೆಳೆಯನ್ನು ಕಟಾವು ಮಾಡಿದ ನಂತರ ಬೆಳೆದ ಮೊದಲನೇ ಬೆಳೆಯನ್ನು ದೇವರಿಗೆ ಅರ್ಪಿಸುವುದರ ಮೂಲಕ ತಮ್ಮ ಕೃಜ್ಞತೆಗಳನ್ನು ಸಲ್ಲಿಸುವುದೇ ಈ ಹಬ್ಬದ ಹಿಂದಿನ ಉದ್ದೇಶ. ಈ ಹಬ್ಬದ ತಯಾರಿ ಹಿಂದಿನ ದಿನದಿಂದಲೇ ಪ್ರಾರಂಭವಾಗುತ್ತದೆ. ಪೋಡಿನ ಪಕ್ಕದಲ್ಲಿಯೇ ಇರುವ ದೇವಾಲಯದಲ್ಲಿ ಹಬ್ಬ ನಡೆಸುತ್ತಾರೆ. ಮುಖ್ಯವಾಗಿ ಜಡೆಸ್ವಾಮಿ, ಬಸವೇಶ್ವರ, ದೊಡ್ಡಸಂಪಿಗೆ ಈ ಮೊದಲಾದ ದೇವರನ್ನು ಪೂಜಿಸುತ್ತಾರೆ. ಅಂದು ದೇವಾಲಯವನ್ನು ಸಿಂಗರಿಸಿ ಪೂಜೆಗೆ ಅಣಿಮಾಡಲಾಗುತ್ತದೆ. ಹಬ್ಬದ ದಿನ ತಮ್ಮಡಿ ಉಪವಾಸವಿರುತ್ತಾನೆ. ಇವರು ಪೂಜಾರಿಯನ್ನು ತಮ್ಮಡಿ ಎಂದು ಕರೆಯುತ್ತಾರೆ. ಹಬ್ಬದಂದು ಸ್ನಾನ ಮಾಡಿ ಮಡಿ ಉಟ್ಟು ಹಬ್ಬ ನಡೆಯುವ ದೇವಸ್ಥಾನಕ್ಕೆ ಬಂದು ದೇವರಿಗೆ ಹಾಗೂ ಹೊಸದಾಗಿ ನಿರ್ಮಿಸಿದ ಒಲೆಗೆ ಪೂಜಿಸುತ್ತಾನೆ. ಅಂದು ಆ ಒಲೆಗೆ ದೊಡ್ಡ ದೊಡ್ಡ ಸೌದೆ ಹಾಕಿ ಬೆಂಕಿ ಹಾಕಿ ದೊಡ್ಡ ಕೆಂಡದ ರಾಶಿಯನ್ನು ಮಾಡುತ್ತಾರೆ. ಪ್ರತಿಯೊಂದು ಕುಲದವರು ಬೇರೆ ಬೇರೆ ದೇವರಿಗೆ ಪೂಜೆ ಸಲ್ಲಿಸುತ್ತಾರೆ. ಹಬ್ಬಕ್ಕಾಗಿ ಮನೆಮನೆಗಳಿಂದ ಮೊದಲೇ ಸಂಗ್ರಹಿಸಿದ ರಾಗಿಯನ್ನು ಹಿಟ್ಟು ಮಾಡಿಕೊಂಡಿರುತ್ತಾರೆ. ಪೂಜೆಯಲ್ಲಿ ತೊಡಗಿರುವ ಗಂಡಸರು ರಾಗಿ ಹಿಟ್ಟನ್ನು ಕಲೆಸಿ ಅಗಲವಾದ ಮುತ್ತುಗದ ಎಲೆಯ ಮೇಲೆ ರಾಗಿ ರೊಟ್ಟಿ ತಟ್ಟಿ ಅದರ ಮೇಲೆ ಮತ್ತೊಂದು ಎಲೆ ಇಟ್ಟು ಕೆಂಡಕ್ಕೆ ಹಾಕಿ ರೊಟ್ಟಿ ಸುಡುತ್ತಾರೆ. ಹೀಗೆ ಸುಮಾರು 400–450 ರೊಟ್ಟಿ ಸುಟ್ಟು ತಾವೇ ಬೆಳೆದ ಕುಂಬಳಕಾಯಿ, ಕಾಡಿನ ಹಲಸು ಇತ್ಯಾದಿಗಳಿಂದ ಪಲ್ಯ ಮಾಡುತ್ತಾರೆ. ಅನ್ನ, ಸಾರು, ಪಾಯಸ ಮಾಡಿ ಮೊದಲಿಗೆ ದೇವರಿಗೆ ಎಡೆಯಿಟ್ಟು ಒಳ್ಳೆಯ

ಮಳೆ ಬೆಳೆ ಬರಲಿ ಮತ್ತು ಕಾಡುಪ್ರಾಣಿಗಳಿಂದ ತೊಂದರೆಯಾಗದಿರಲಿ ಎಂದು ಪ್ರಾರ್ಥಿಸುತ್ತಾರೆ. ತಮ್ಮಡಿ ದೇವಸ್ಥಾನದಲ್ಲಿ ದೇವರ ಎದುರು ಐದು ಬಾಳೆ ಎಲೆ ಹಾಕಿ ಐದರಲ್ಲೂ ರೊಟ್ಟಿ ಪಲ್ಯ ಹಾಕಿ ಎಡೆ ಇಟ್ಟು ಪೂಜಿಸುತ್ತಾರೆ. ನಂತರ ದೇವರು ಎಡೆ ಸ್ವೀಕರಿಸುತ್ತಾರೆ ಎಂದು ಭಾವಿಸಿ ಎಲ್ಲರೂ ಬೇರೆ ಕಡೆ ಮುಖ ಮಾಡಿ ನಿಲ್ಲುತ್ತಾರೆ. ಆಗ ಅಲ್ಲಿ ಯಾರದಾದರೂ ಮೈಮೇಲೆ ದೇವರು ಬರುತ್ತದೆ. ಆ ದೇವರಲ್ಲಿ ತಮ್ಮ ಕಷ್ಟ, ಸುಖ, ಮಳೆ, ಬೆಳೆಯ ಕುರಿತು ಬೇಡಿಕೊಳ್ಳುತ್ತಾರೆ. ನಂತರ ಪೋಡಿನ ಎಲ್ಲರೂ ದೇವಾಲಯದ ಮುಂದಿನ ಮೈದಾನದಲ್ಲಿ ಸಾಲಾಗಿ ಊಟಕ್ಕೆ ಕೂರುತ್ತಾರೆ. ಗಂಡು ಹೆಣ್ಣು ಪ್ರತ್ಯೇಕ ಸಾಲಿನಲ್ಲಿ ಕೂರುತ್ತಾರೆ. ಎಲ್ಲರಿಗೂ ರೊಟ್ಟಿ ಮತ್ತು ಪಲ್ಯ ಅನ್ನ ಸಾರು ಪಾಯಸ ಬಡಿಸುತ್ತಾರೆ. ಅನಂತರ ನೆರೆದವರೆಲ್ಲ ಪ್ರಸಾದದ ರೂಪದಲ್ಲಿ ರೊಟ್ಟಿಯನ್ನು ಸೇವಿಸುತ್ತಾರೆ. ಊಟ ಮಾಡಿ ತಮ್ಮ ತಮ್ಮ ಮನೆಗಳಿಗೆ ಹಿಂತಿರುಗುತ್ತಾರೆ. ಇದು ಆ ದಿನ ಬೆಳಗ್ಗೆ ನಡೆಯುವ ಆಚರಣೆಗಳು. ಅದೇ ದಿನ ರಾತ್ರಿ ತಮ್ಮಡಿಯ ಮನೆಯಲ್ಲಿ ಪೂಜೆ ನಡೆಯುತ್ತದೆ. ರಾತ್ರಿ ಇಡೀ ನಡೆಯುವ ಈ ಪೂಜೆಯಲ್ಲಿ ಹೆಂಗಸರು ಸೊಲ್ಲು ಹಾಕುತ್ತಾ ಬೆಳಗಿನ ಜಾವದವರೆಗೂ ಕುಳಿತಿರುತ್ತಾರೆ. ಇತ್ತ ತಮ್ಮಡಿಯ ಮನೆ ಮುಂದೆ ಹಾಕಿರುವ ಚಪ್ಪರ ದಡಿಯಲ್ಲಿ ಡೋಲು ಬಾರಿಸುತ್ತಾ ವೃತ್ತಾಕಾರವಾಗಿ ಗಂಡಸರು 'ಗೋರುಖಾನ' ನೃತ್ಯವನ್ನು ನಡೆಸಿ ಕುಣಿದು ಕುಪ್ಪಳಿಸುತ್ತಾರೆ. ಇದರಲ್ಲಿ ವಯಸ್ಸಿಗೆ ಬರದ ಸಣ್ಣ ವಯಸ್ಸಿನ ಹೆಣ್ಣುಮಕ್ಕಳು ಭಾಗವಹಿಸುತ್ತಾರೆ. ಇಲ್ಲಿ ಯುವಕ ಯುವತಿಯರು ತಮಗೆ ಇಷ್ಟವಾಗುವ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶವಿರುತ್ತದೆ. ತಮ್ಮ ಕುಲದ ಅರಿವು ಪ್ರತಿಯೊಬ್ಬರಿಗೂ ಇರುವುದರಿಂದ ನಿಯಮ ಮೀರಿ ಆಯ್ಕೆ ಇಲ್ಲಿ ನಡೆಯುವುದಿಲ್ಲ.

'ಗೋರು ಗೋರುಕ ಗೋರುಕನಾ
ಗೋರು ಗೋರುಕ ಗೋರುಕನಾ
ಚಪ್ಪಾರ ಕಂಬಾ ತಾಳೀನಲ್ಲಿ
ತಪ್ಪಾದೆ ಬರಲೋ ನಾಳಿಗೆಲೋ
ಹಕ್ಕಿ ಮಲ್ಲಿಗೆ ಹೂವಾದಲ್ಲೋ
ದೇವರ ಮಂಡೇಲಿ ಮೆರೆದಾ ಅದಲ್ಲೋ
ಸುತ್ತು ಮಲ್ಲಿಗೆ ಹೂವಾದಲ್ಲೋ
ದೇವರ ಮಂಡೇಲಿ ಮೆರದಾದಲ್ಲೋ
ಹಾಲ ಮಲ್ಲಿಗೆ ಹೂವಾದಲ್ಲೋ
ಅಲರ ಮಂಡೇಲಿ ಮೆರೆದಾದಲ್ಲೊ

ಇಂಬಿ ಹೂವಿನ ದುಂಡುಮಾಲೆ

ಸ್ವಾಮಿ ಕತ್ತಿನ ಓಲಾಡಿದೋ'[18]

**3. ಮುನಿ ಹಬ್ಬ:** ಇದನ್ನು ಮುನಿ ಮಾಡುವುದು ಎಂದೂ ಸಹ ಕರೆಯುತ್ತಾರೆ. ಸೋಲಿಗರು ತಮ್ಮ ತಮ್ಮ ಹೊಲದಲ್ಲಿ ಜಡೆಮುನಿ ನೆಲೆಸಿರುತ್ತಾನೆ ಎಂದು ನಂಬುತ್ತಾರೆ. ರಾತ್ರಿ ವೇಳೆ ಧಾನ್ಯ ರಕ್ಷಣೆಗೆ ಹೋದವರು ಹೊಲದಲ್ಲಿ ಮಲಗಿದ್ದಾಗ ಕನಸಿನಲ್ಲಿ ಯಾವುದಾದರೂ ರೂಪದಲ್ಲಿ ಈ ಮುನಿ ಇರುವುದು ಗೋಚರಿಸುತ್ತದೆ. ಆಗ ಮನೆಯ ಎಲ್ಲರೂ ಜಮೀನಿಗೆ ಹೋಗಿ ಕೋಳಿ, ಕುರಿ ಬಲಿ ಕೊಟ್ಟು ಅಲ್ಲಿಯೇ ಅಡುಗೆ ಮಾಡಿ ದೇವರಿಗೆ ಎಡೆಯಿಟ್ಟು ಊಟ ಮಾಡಿ ಹಿಂತಿರುಗುತ್ತಾರೆ. ಹೀಗೆ ಜಡೆ ಮುನಿಯನ್ನು ಸಂತೃಪ್ತಿಗೊಳಿಸುತ್ತಾರೆ.

ಮುನಿದೇವರು ಗಡ್ಡ ಬಿಟ್ಟುಕೊಂಡು ಕಾಲಿಗೆ ಕೈಗೆ ಜಂಗು ಹಾಕಿಕೊಂಡು, ಕೈಯಲ್ಲಿ ತ್ರಿಶೂಲ ಹಿಡಿದುಕೊಂಡು, ತಲೆ ಕೂದಲನ್ನು ಉದ್ದವಾಗಿ ಬೆಳೆಸಿಕೊಂಡು, ತಮ್ಮ ಕೃಷಿ ಭೂಮಿಯಲ್ಲಿ ತಿರುಗಾಡುತ್ತಿರುತ್ತಾನೆ. ಅದು ನಮ್ಮ ಗಮನಕ್ಕೆ ಬಂದ ನಂತರ ಆ ದೇವರಿಗೆ ಅದು ಇರುವಂತಹ ಭೂಮಿಯಲ್ಲೇ ಬಲಿ ನೀಡಿ ಎಡೆ ಇಡಬೇಕು ಎಂದು ಜನ ಈ ಪೂಜೆ ಯನ್ನು ತಮ್ಮ ಹೊಲದಲ್ಲೇ ನಡೆಸುತ್ತಾರೆ. ಇವಲ್ಲದೆ ಮಾತೃದೇವತೆಯ ಆರಾಧಕರಾದ ಈ ಸಮುದಾಯವು ಮಾತೃದೇವತೆಗಳ ಆರಾಧನೆಯನ್ನು ಮಾಡುವ ಸಲುವಾಗಿ ಹಬ್ಬಗಳನ್ನು ಆಚರಿಸುತ್ತಾರೆ.

**ಮಾರಿ ಹಬ್ಬ:** ಈ ಹಬ್ಬ ಮಾತೃದೇವತೆಯ ಪೂಜೆಯ ಸಂಕೇತವಾಗಿದೆ. ಹಬ್ಬ ನಿಗದಿಯಾದ ಹದಿನೈದು ದಿನಗಳ ಮೊದಲೇ ಈ ಪೂಜೆ ಪ್ರಾರಂಭವಾಗುತ್ತದೆ. ಹಬ್ಬದಂದು ಎರಡಾಗಿ ಕವಲು ಒಡೆದಿರುವ ಆಲದ ಅಥವಾ ಹತ್ತಿ ಮರದ ಕೊಂಬೆಯನ್ನು ತಂದು ಪೂಜಿಸುತ್ತಾರೆ. ಆಲದ ಮರ ಹಾಗು ಹತ್ತಿಯ ಮರವನ್ನು ದೈವೀಕತೆಯ ಸಂಕೇತವಾಗಿ ಸೋಲಿಗರು ಭಾವಿಸುತ್ತಾರೆ. ಮೊದಲನೇ ದಿನ ಊರಿನ ಜನರೆಲ್ಲ ಸೇರಿ ತಮ್ಮಡಿಯೊಂದಿಗೆ ಮೂರು ಕವಲು ಇರುವ ಮರದ ಬಳಿಗೆ ಬರುತ್ತಾರೆ. ಐದು ಕುಲದ ಮುತ್ತೈದೆಯರು ಮಂಗಳಾರತಿಯನ್ನು ತರುತ್ತಾರೆ. ಮದ್ದಳೆ, ತಮಟೆಯೊಂದಿಗೆ ನಿರ್ದಿಷ್ಟ ಮರದ ಬಳಿ ಬಂದು ಆ ಮರದ ಬುಡದಲ್ಲಿ ಪೂಜೆ ಸಲ್ಲಿಸಿ ಮೂರು ಕವಲಿನ ಕೊಂಬೆ ಕಡಿದು ಅದನ್ನು ಅಲ್ಲಿಯೇ ಮರದ ಕೆಳಗೆ ಎಲ್ಲಾದರೂ ಮರೆಯಲ್ಲಿಟ್ಟು ವಾಪಸು ಬರುತ್ತಾರೆ. ಅದೇ ದಿನ ಮತ್ತೆ ತಮ್ಮಡಿ ಒಬ್ಬನೇ ಹೋಗಿ ಬಚ್ಚಿಟ್ಟಿದ್ದ ಕವೆಗಳನ್ನು ಬೇರೊಂದು ಕಡೆ ಮರೆ ಮಾಡಿ ಬರುತ್ತಾನೆ. ನಂತರ ಎಲ್ಲರೂ ವಾದ್ಯಗಳೊಂದಿಗೆ ತೆರಳಿ ಕವೆಯನ್ನು ತಂದು ಮಾರಿ ಗುಡಿಯ ಮುಂದೆ ನೆಡುತ್ತಾರೆ. ನಂತರ ಮೂರು ಕಂಬದ ಮಧ್ಯೆ ಬೆಂಕಿ ಹಾಕಿ ಪೂಜೆ ಮಾಡಿ ತಮ್ಮಡಿ ಎಲ್ಲರಿಗೂ ತೀರ್ಥ ಪ್ರಸಾದ ನೀಡುತ್ತಾನೆ.

ರಾತ್ರಿಯಲ್ಲಿ ಎಲ್ಲರೂ ಸೇರಿ ಹಾಡುಗಳನ್ನು ಹಾಡುತ್ತ ಕುಣಿಯುತ್ತಾರೆ. ಮನೆಗೆ ತಲಾ ಒಬ್ಬರಂತೆ ಕಡ್ಡಾಯವಾಗಿ ಬರಲೇಬೇಕು. ಈ ರೀತಿ ಹನ್ನೊಂದು ದಿನಗಳವರೆಗೆ ಈ ಹಾಡು ಕುಣಿತ ನಡೆಯುತ್ತದೆ. ಹನ್ನೆರಡನೇ ದಿನ ತಮ್ಮಡಿ ಮಾರಿ ಗುಡಿ ಗುಡಿಸಿ, ಸಾರಿಸಿ, ದೇವರನ್ನು ಶುಚಿಗೊಳಿಸಿ, ಪೂಜೆಗೆ ಅಣಿಗೊಳಿಸುತ್ತಾನೆ. ಅಂದು ಪ್ರತಿ ಮನೆಯಿಂದ ತಂಬಿಟ್ಟು ಮಾಡಿ ತರುತ್ತಾರೆ. ಬೆಲ್ಲ, ಅಕ್ಕಿ, ಕಡಲೆಯನ್ನು ಸೇರಿಸಿ ಮಾಡಿದ ಹಿಟ್ಟಿನಿಂದ ಚೌಕಾಕಾರವಾಗಿ ಅರ್ಧ ಅಡಿ ಎತ್ತರದ ಮೂರು ತಂಬಿಟ್ಟನ್ನು ಮಾಡಿ ಅದಕ್ಕೆ ಕಣಗಿಲೆ, ಬೇವಿನ ಎಲೆಗಳಿಂದ ಅಲಂಕರಿಸಿ, ತಟ್ಟೆಯಲ್ಲಿಟ್ಟು ಹಣತೆ, ಊದುಬತ್ತಿ ಹಚ್ಚಿ ದೇವಾಲಯಕ್ಕೆ ತಂದು ದೇವರ ಮುಂದೆ ಇಡುವರು. ಆ ಸಂದರ್ಭದಲ್ಲಿ ಕುರಿ ಅಥವಾ ಆಡಿನ ಬಲಿ ನೀಡುತ್ತಾರೆ. ನಂತರ ಮಾಂಸದ ಅಡುಗೆ ಮಾಡಿ ತಳಿಗೆ(ಎಡೆ)ಯಿಟ್ಟು ಅಲ್ಲಿಯೇ ಊಟ ಮಾಡಿ ಹಿಮ್ಮೇಳ ತಾಳದೊಂದಿಗೆ ಬೆಂಕಿಯ ಸುತ್ತ ಕುಣಿಯುತ್ತಾರೆ.

**ಮಾರಮ್ಮನ ಹಾಡು**

'ಮಾದೇಸರನ ತಂಗೆ ಶಿವಗಣರ
ಬುಟ್ಟುಮಕೆ ಮಾದಪ್ನ ಬೆಟ್ಟಕ್ಕೆ
ಮಂಜುಕವುದಾವೋ
ಮಾರಿಗುಡಿ ಮುಂದೆ ಮಾರಿಗುಡಿ ಮುಂದೆ
ನೂರೊಂದು ಇಂಬಿಗಿಡ ಹಾಕಿ
ಕಳ್ಳರು ಕುಯ್ವಾಗ ಕಶುಗಾಯಿ
ತಾನೆದ್ದು ಬೆಳೆಯೋದು ತನುವಣ್ಣ'[19]

ಈ ಸಮುದಾಯಗಳು ಮಾರಮ್ಮನನ್ನು ತಲೆಮಾರುಗಳಿಂದ ಪೂಜಿಸಿಕೊಂಡು ಬಂದವರು. ಅಲೆಮಾರಿಗಳಾಗಿದ್ದವರು ಕೃಷಿಯಲ್ಲಿ ತೊಡಗಿಕೊಂಡ ನಂತರ ಭೂಮಿಯ ಫಲವಂತಿಕೆಯ ಸಂಕೇತವಾಗಿ ಮಾರಿ ಹಬ್ಬದ ದಿನ ಬಲಿ ಚೆಲ್ಲುವ ಸಂಪ್ರದಾಯವಿದೆ. ವ್ಯವಸಾಯದಿಂದ ಪಶುಪಾಲನೆಗೆ ಬದಲಾದಾದ ನಂತರ ಕ್ಯಾತ ದೇವರನ್ನು(ಶಿವ) ಪೂಜಿಸಲು ಪ್ರಾರಂಭಿಸಿದರು.

1. **ಸಂಕಮ್ಮನ ಹಬ್ಬ** : ಮಾದೇಶ್ವರನ ವರಪ್ರಸಾದದಿಂದ ಮಕ್ಕಳನ್ನು ಪಡೆದ ಸೋಲಿಗರ ಸಂಕಮ್ಮ ಅನಂತರ ಸೋಲಿಗರ ಪೂಜೆಗೆ ಅರ್ಹಳಾಗುತ್ತಾಳೆ. ಮಾದೇಶ್ವರ ಮತ್ತು ಸಂಕಮ್ಮನಿಂದ ಜನಿಸಿದ ಕಾರಯ್ಯ ಮತ್ತು ಬಿಲ್ಲಯ್ಯರು ಸೋಲಿಗರ ಮೂಲಪುರುಷರಾದರು. ಆ ಸಮುದಾಯವನ್ನು ಉನ್ನತಿಗೆ ತಂದರು. ಆ ಕಾರಣದಿಂದ ಪ್ರತಿ ವರ್ಷ ಸಂಕಮ್ಮಳ ಹೆಸರಲ್ಲಿ ಹಬ್ಬವನ್ನು ಆಚರಿಸು ತ್ತಾರೆ. ದ್ರಾವಿಡ ಜನಾಂಗಕ್ಕೆ ಸೇರಿದ ಈ ಬುಡಕಟ್ಟುಗಳು ಮಾತೃದೇವತೆಯ ಆರಾಧಕರು.

ಈಗಲೂ ಮಾದೇಶ್ವರ, ಸಂಕಮ್ಮ, ಕಾರಯ್ಯ, ಬಿಲ್ಲಯ್ಯರನ್ನು ಪೂಜಿಸುತ್ತಾರೆ.

ಬುಡಕಟ್ಟುಗಳು ತಮ್ಮ ದೈವದ ಜೊತೆ ಸಂಬಂಧವನ್ನು ಹೊಂದಿರುತ್ತವೆ. ದೈವಗಳು ತಮ್ಮ ಬದುಕಿನ ಭಾಗ ಎಂದು ಭಾವಿಸುವ ಈ ಸಮುದಾಯವು ತಮ್ಮ ಕಷ್ಟ ಸುಖ ನೋವು ನಲಿವುಗಳಲ್ಲಿ ದೈವಗಳು ಜೊತೆಗಿರಬೇಕು, ಆಗಷ್ಟೆ ನಮ್ಮ ಕಷ್ಟಗಳು ದೇವರಿಗೆ ಅರ್ಥವಾಗಲು ಸಾಧ್ಯ ಎಂದು ಬೇಟೆಗೂ ಕೂಡ ತಮ್ಮ ದೈವಗಳನ್ನು ಜೊತೆಗೆ ಕರೆದೊಯ್ಯುತ್ತಾರೆ. ಸೋಲಿಗರ ಬೇಟೆಗೆ ಸಂಬಂಧಿಸಿದ ವಿವರಗಳನ್ನು ನಾವು ಸಂಕಮ್ಮನ ಸಾಲಿನಲ್ಲಿ ಗಮನಿಸಬಹುದು. ಸೋಲಿಗರ ಬೇಟೆ ಸುದೀರ್ಘವಾದದ್ದು. ಆರು ಮೂರು ಒಂಬತ್ತು ತಿಂಗಳಷ್ಟು ದೀರ್ಘವಾದದ್ದು. ಅದನ್ನು ಕುಲದ ಬೇಟೆ ಎಂದು ಕರೆಯುತ್ತಾರೆ. ವರ್ಷಕ್ಕೊಮ್ಮೆ ಬೇಟೆ ಮಾಡುತ್ತಾರೆ. ಈ ಬೇಟೆ ಸಾಮುದಾಯಿಕವಾಗಿದ್ದು ತಮ್ಮ ಬೇಟೆಯನ್ನು ಒಂದೆಡೆ ಒಟ್ಟುಗೂಡಿಸಿ ಅದನ್ನು ಪೋಡಿಗೆ ತಂದು ಅದನ್ನು ಎಲ್ಲರೂ ಸಮಾನವಾಗಿ ಹಂಚಿಕೊಳ್ಳುತ್ತಾರೆ.

ಬೇಟೆಗೆ ಹೋಗಿರುವಾಗ ಅಲ್ಲಿ ಏನೂ ಅನಾಹುತವಾಗಬಾರದು ಎಂಬ ಕಾರಣಕ್ಕೇ ತಮ್ಮ ಮೂಲಪುರುಷನಾದ ಕಾರಯ್ಯನನ್ನು ಬೇಟೆಗೆ ಕರೆದುಕೊಂಡು ಹೋಗುತ್ತಾರೆ. ಸುಮ್ಮನೆ ಕರೆದುಕೊಂಡು ಹೋಗುವುದಿಲ್ಲ. ಬದಲಿಗೆ ಆತನಿಗೂ ಕೆಲಸವನ್ನು ಕೂಡ ಕೊಡುತ್ತಾರೆ. ತಮ್ಮ ಸಹಚರರೊಂದಿಗೆ ಮಾತನಾಡುವಂತೆ ಬೇಟೆಗೆ ಸಂಬಂಧಿಸಿದಂತೆ ನೀನು ಕೊಡಲಿ ಎತ್ತಿಕೊಂಡು ಬಾ ಎಂದು ಆದೇಶವನ್ನು ನೀಡುತ್ತಾರೆ.

'ಕಾರಾನಾ ಕರೆಯೋ ಕಾರಯ್ಯ
ಸೊಪ್ಪಿನರಕೆ ಕಾರಾನಾ ॥ಪ॥
ಮೊಳದುದ್ದ ಕೊಡಲಿ ಹೆಗಲಿಗೆ ಹೂಡಿ
ಹೋಗಿ ಬಾರೋ ಕಾರಾ
ಮೊಜ್ಜನುಕೊತ್ತಾಯ್ತು
ಜೇನಿನ ಹುಳು ಸಾಧಿಸಿಕೊಂಡು ಬತ್ತದೆ
ನೋಡಿ ಬಾರೋ ಕಾರಾ
ಮೊಜ್ಜಕೊತ್ತಾಯ್ತು
ಮಲಕಿಟ್ಟಲೇರಾನೇ
ಮಲೆಸಾಲು ಸೀಮೆಯ ನೋಡಾನೆ
ಮಂಜುಮಳೆ ಹೊತ್ತಲ್ಲಿ

ಹೊಂಚುಬೇಟೆ ಹೋಗಾನೇ'[20]

ಸೋಲಿಗರು ತಮ್ಮ ದೈವಗಳೊಡನೆ ಹೊಂದಿರುವ ಅನ್ಯೋನ್ಯ ಸಂಬಂಧವನ್ನು ಈ ಹಾಡು ತಿಳಿಸುತ್ತದೆ.

**ಬಿಳಿಗಿರಿರಂಗ ಕುಸುಮಾಲೆ:** ಒಮ್ಮೆ ಅಲಮೇಲು ಮಂಗಮ್ಮ ಅಭ್ಯಂಜನ ಸ್ನಾನ ಮಾಡುವ ಸಲುವಾಗಿ ಸೀಗೇಕಾಯಿ ಬೇಕೆಂದು ತನ್ನ ಪತಿಯಾದ ವೆಂಕಟೇಶ್ವರನನ್ನು ಕೇಳುತ್ತಾಳೆ. ಪತ್ನಿಯ ಕೋರಿಕೆ ಈಡೇರಿಸುವ ಸಲುವಾಗಿ ವೆಂಕಟೇಶ್ವರನು ಶ್ವೇತಾದ್ರಿಯ ಅರಣ್ಯಕ್ಕೆ ಬರುತ್ತಾನೆ. ಅಲ್ಲಿ ಸೋಲಿಗರ ಕುಸಮಾಲೆ(ಪುಸುಮಾಲೆ)ಯನ್ನು ನೋಡಿ, ಮನಸೋತು ಅವಳನ್ನು ಮದುವೆಯಾಗುತ್ತಾನೆ ಎಂಬುದು ಕತೆ.

'ಸೋಲಿಗರ ಬೊಮ್ಮೆಗೌಡನಿಗೆ ಚಿಕ್ಕರಂಗಿ, ದೊಡ್ಡರಂಗಿ, ಚಿಕ್ಕ ಕಾಡಿ, ಮರಕಾಡಿ, ಕೇತಕ್ಕ, ಕುಸುಮಾಲೆ ಎಂಬ ಆರು ಜನ ಹೆಣ್ಣುಮಕ್ಕಳು. ಅದರಲ್ಲಿ ಕುಸುಮಾಲೆ ಅತ್ಯಂತ ಸುಂದರಿ. ಅವಳ ಸೌಂದರ್ಯವನ್ನು ಒಮ್ಮೆ ನೋಡಿದ ಬಿಳಿಗಿರಿರಂಗನಾಥ ದಾಸಯ್ಯನ ವೇಷ ಧರಿಸಿ ಭಿಕ್ಷೆ ಕೇಳುವ ನೆಪದಲ್ಲಿ ಬೊಮ್ಮೇಗೌಡನ ಮನೆಗೆ ಬಂದು ಕುಸುಮಾಲೆಯನ್ನು ತಾನು ಮೆಚ್ಚಿರುವುದಾಗಿಯೂ ಅವಳನ್ನು ಮದುವೆ ಮಾಡಿಕೊಡುವಂತೆ ಕೇಳಿಕೊಳ್ಳುತ್ತಾನೆ. ಅದಕ್ಕೆ ಬೊಮ್ಮೇಗೌಡ ಮೊದಲು ಭಿಕ್ಷೆ ಬೇಡುವುದನ್ನು ಬಿಟ್ಟು 'ಗೇದು ತಿನ್ನು ಬಾ' ಎಂದು ಕಂಬಳಕ್ಕೆ ಕರೆದನಂತೆ ಇದನ್ನು ಕೇಳಿ ಕೋಪಗೊಂಡ ರಂಗನಾಥ, ದೇವೇಂದ್ರನಿಗೆ ಹೇಳಿ ಆ ಊರಿಗೆ ಮಳೆಯಾಗದಂತೆ ಮಾಡಿದ. ಮಳೆಯಿಲ್ಲದ ಕಾರಣ ಬೆಳೆಯೂ ಇಲ್ಲವಾಗಿ ಆಹಾರಕ್ಕಾಗಿ ಪರಿತಪಿಸುವಂತಹ ಪರಿಸ್ಥಿತಿ ನಿರ್ಮಾಣ ವಾಗುತ್ತದೆ. ಆಗ ಮನೆಯಲ್ಲಿ ಇದ್ದುದನ್ನು ಮಾರಿ ಬದುಕಬೇಕಾದ ಅನಿವಾರ್ಯತೆ ಉಂಟಾಯಿತು. ಬೊಮ್ಮೇಗೌಡನು ತನ್ನ ಮನೆಯಲ್ಲಿದ್ದ ಎಲ್ಲ ಒಡವೆಗಳನ್ನು ತೆಗೆದುಕೊಂಡು ಪಟ್ಟಣಕ್ಕೆ ಮಾರಲು ಹೋಗುತ್ತಾನೆ. ದಾರಿಯಲ್ಲಿ ಬರುತ್ತಿರುವಾಗ ರಂಗನಾಥನು 'ಊಳಗಿ'ಯವರ ವೇಷದಲ್ಲಿ ಬಂದು ಬೊಮ್ಮೇಗೌಡ ಒಡವೆಗಳನ್ನು ಕದ್ದು ತಂದಿದ್ದಾನೆಂದು ಆರೋಪಿಸಿ ಯಳಂದೂರು ಚಾವಡಿಗೆ ಬಾ ಎಂದು ಕರೆಯುತ್ತಾನೆ. ಆಗ ಬೊಮ್ಮೇಗೌಡನು ತನ್ನ ಬಳಿಯಿದ್ದ ಒಡವೆಗಳನ್ನು ಉಳಿಗಿಯ ವೇಷದಲ್ಲಿದ್ದ ರಂಗನಾಥನಿಗೆ ಒಪ್ಪಿಸಿ ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರ್ಷ ಆಯಸ್ಸು ಎಂದುಕೊಂಡು ಅಲ್ಲಿಂದ ಬರಿಗೈಯಲ್ಲಿ ಹಣವೂ ಇಲ್ಲದೆ ಒಡವೆಯೂ ಇಲ್ಲದೆ ದವಸ ಧಾನ್ಯಗಳೂ ಇಲ್ಲದೆ ವಾಪಸು ಮನೆಗೆ ಬರುತ್ತಾನೆ.

ಕೊನೆಗೆ ಹಸಿವನ್ನು ತಾಳಲಾರದ ಬೊಮ್ಮೇಗೌಡನ ಆರು ಜನ ಹೆಣ್ಣುಮಕ್ಕಳು ಕಾಡಿನಲ್ಲಿ

ಏನಾದರೂ ಅಳಿದುಳಿದ ಗೆಡ್ಡೆಯೋ, ಗೆಣಸೋ, ಬಿದಿರಕ್ಕಿಯೋ ಸಿಗುವುದೇನೋ ಎಂದು ಹುಡುಕುತ್ತಾ ಕಾಡಿಗೆ ಬರುತ್ತಾರೆ. ಆಹಾರವಿಲ್ಲದೆ ಸೊರಗಿ ಕಾಡಿನಲ್ಲಿ ಅಲೆಯುತ್ತಿದ್ದ ಆ ಹೆಣ್ಣು ಮಕ್ಕಳ ಸ್ಥಿತಿಯನ್ನು ಕಂಡು ಮರುಕಗೊಂಡ ರಂಗನಾಥ ಅವರ ಹಸಿವೆಲ್ಲ ಹಿಂಗಿಹೋಗಲಿ ಎಂದು ಹರಸಿದ ಕೂಡಲೆ ಅವರ ಹಸಿವು ಬಾಯಾರಿಕೆ ಹಿಂಗಿಹೋದವು. ಹೊಸ ಲವಲವಿಕೆಯಿಂದ ಸೌದೆಯನ್ನಾದರೂ ತೆಗೆದುಕೊಂಡು ಹೋಗೋಣ ಎಂದುಕೊಳ್ಳುವಷ್ಟರಲ್ಲಿ ರಂಗನಾಥ ಅರಣ್ಯ ಕಾವಲುಗಾರನ ರೂಪದಲ್ಲಿ ಅವರ ಎದುರಿಗೆ ಬರುತ್ತಾನೆ. ಅವನನ್ನು ಕಂಡು ಹೆದರಿ ಹೆಣ್ಣು ಮಕ್ಕಳು ದಿಕ್ಕಾಪಾಲಾಗಿ ಓಡತೊಡಗುತ್ತಾರೆ. ಆಗ ಕುಸುಮಾಲೆಯು ಓಡುತ್ತಾ ಸೋಮರಸದ ಕೆರೆಯ ಬಳಿ ಬರುತ್ತಾಳೆ. ನೋಡಿದರೆ ಆಶ್ಚರ್ಯ. ಬರಗಾಲದಲ್ಲೂ ಕೆರೆ ತುಂಬಿ ಕಣ್ಮನ ಸೆಳೆಯುವಂತಿದೆ. ಸುತ್ತಲೂ ಕಣ್ಣಾಡಿಸಿದಳು. ಎಲ್ಲೆಲ್ಲೂ ಗೆಣಸು. ಆಶ್ಚರ್ಯಗೊಂಡ ಕುಸುಮಾಲೆ ಇದೆಲ್ಲ ರಂಗನಾಥನ ಲೀಲೆ ಎಂದು ತಿಳಿಯದೆ ಕಕ್ಕೆ ದಸಿಯಿಂದ ಗೆಣಸನ್ನು ಅಗೆಯಲು ಪ್ರಾರಂಭಿಸುತ್ತಾಳೆ. ನೋಡುತ್ತಾಳೆ ಗೆಣಸಿನ ರಾಶಿಯೇ ಎದುರಿಗಿದೆ ಅದನ್ನೆಲ್ಲ ಒಟ್ಟುಗೂಡಿಸಿ ಒಂದು ದೊಡ್ಡ ಗೆಣಸಿನ ಹೊರೆಯನ್ನು ಕಟ್ಟುತ್ತಾಳೆ. ಆದರೆ ಅಷ್ಟು ದೊಡ್ಡ ಹೊರೆಯನ್ನು ತನಗೊಬ್ಬಳಿಗೆ ತಲೆ ಮೇಲೆ ಹೊರಿಸಿಕೊಳ್ಳಲು ಸಾಧ್ಯವಿಲ್ಲದಾಗ ಅಲ್ಲಿಗೆ ರಂಗನಾಥನು ಒಬ್ಬ ವಯಸ್ಸಾದ ದಾಸಯ್ಯನ ರೂಪದಲ್ಲಿ ಅಲ್ಲಿ ಕಾಣಿಸಿಕೊಳ್ಳುತ್ತಾನೆ. ಮೈಯೆಲ್ಲ ಕಜ್ಜಿ ಹಿಡಿದು ವಿರೂಪವಾಗಿದ್ದ ಆ ಮುದುಕನನ್ನು ಹೊರೆ ಹೊರೆಸಿಕೊಡೆಂದು ಕುಸುಮಾಲೆ ಕೇಳುತ್ತಾಳೆ. ಅದಕ್ಕೆ ಆತ ನನ್ನ ಕೈ ಹಿಡಿದರೆ ಹೊರಿಸಿಕೊಡುತ್ತೇನೆ ಎನ್ನುತ್ತಾನೆ. ಇದರಿಂದ ಕೋಪಗೊಂಡ ಕುಸುಮಾಲೆ ಇವನ ಸಹಾಯವೇ ತನಗೆ ಬೇಡೆಂದು ದೊಡ್ಡ ಹೊರೆಯನ್ನು ಬಿಚ್ಚಿ ಚಿಕ್ಕ ಹೊರೆಯನ್ನು ಕಟ್ಟುತ್ತಾಳೆ. ಅದನ್ನು ತಾನೇ ತಲೆ ಮೇಲೆ ಹೊತ್ತು ಸಾಗುವಾಗ ತನ್ನ ಮಾಯಾ ಶಕ್ತಿಯಿಂದ ಆ ಹೊರೆಯನ್ನು ಕೆಳಗೆ ಬೀಳಿಸುತ್ತಾನೆ. ಒಡನೆಯೇ ಜೋರಾಗಿ ಮಳೆ ಬರುವಂತೆ ಮಾಡುತ್ತಾನೆ. ಅಲ್ಲಿ ತನ್ನ ಮಾಯಾಶಕ್ತಿಯಿಂದ ಗುಡಾರವನ್ನು ಸೃಷ್ಟಿಸಿ ತಾನು ಅದರೊಳಗೆ ಹೋಗಿ ಮಳೆಯಾಶ್ರಯಕ್ಕಾಗಿ ಕುಸುಮಾಲೆಯನ್ನು ಒಳಗೆ ಕರೆಯುತ್ತಾನೆ. ವಿಧಿಯಿಲ್ಲದೆ ಆಕೆ ಆ ಗುಡಾರದ ಒಳಗೆ ಹೋಗುತ್ತಾಳೆ. ಅಲ್ಲಿ ಅವಳ ಸೌಂದರ್ಯವನ್ನು ನೋಡಿ ರಂಗನಾಥ ಸಂಮೋಹಿತನಾಗುತ್ತಾನೆ. ಕೊನೆಗೆ ಮನೆಯವರ ಹಸಿವನ್ನು ನೆನೆದು ಕುಸುಮಾಲೆ ಆ ವೃದ್ಧನಿಂದ ಹೊರೆ ಹೊರೆಸಿಕೊಳ್ಳಲು ಒಪ್ಪುತ್ತಾಳೆ. ಆಗ ರಂಗನಾಥ ತನ್ನ ನಿಜ ರೂಪ ತೋರಿಸಿ ಎಲ್ಲ ವಿಷಯವನ್ನು ಅವಳಿಗೆ ತಿಳಿಸುತ್ತಾನೆ ಮತ್ತು ಮುದುಕನ ವೇಷ ಧರಿಸುತ್ತಾನೆ. ಗೆಣಸಿನ ಹೊರೆ ಹೊತ್ತು ಇಬ್ಬರೂ ಪೋಡಿಗೆ ಬರುತ್ತಾರೆ. ನಂತರ ರಾತ್ರಿ ಇಲ್ಲೇ ತನಗೆ ಆಶ್ರಯ ನೀಡಿರೆಂದು ಬೊಮ್ಮೇಗೌಡನನ್ನು ಕೇಳಿ ಆತನ ಒಪ್ಪಿಗೆಯಂತೆ ಅಲ್ಲೇ ಉಳಿಯುತ್ತಾನೆ.

ಕಾಡಿನಿಂದ ತಂದ ಗೆಣಸನ್ನು ಶುದ್ಧ ಮಾಡಿ ಹೆಣ್ಣುಮಕ್ಕಳು ಬೇಯಿಸುತ್ತಿದ್ದಾಗ ಮುದುಕನ ವೇಷಧಾರಿ ರಂಗನಾಥ ಕುಸುಮಾಲೆಯ ಬಳಿಗೆ ನಿಧಾನಕ್ಕೆ ತೆವಳಿಕೊಂಡು ಹೋಗಿ ಅವಳನ್ನು ಚಿವುಟುತ್ತಾನೆ. ಇದನ್ನು ನೋಡಿ ಗಾಬರಿಗೊಂಡ ಉಳಿದ ಹೆಣ್ಣುಮಕ್ಕಳು ಬೊಮ್ಮೇಗೌಡನಿಗೆ ದೂರು ನೀಡುತ್ತಾರೆ. ಬೊಮ್ಮೇಗೌಡ ಮುದುಕನನ್ನು ಒಂದು ಕೋಣೆಗೆ ಹಾಕಿ ಬೀಗ ಹಾಕಿಸಿ ಕುಲದವರನ್ನೆಲ್ಲ ಪಂಚಾಯ್ತಿಗೆ ಕೂಡಿಸಿ ಊರವರನ್ನೆಲ್ಲ ಸೇರಿಸಿ ರಂಗನಾಥನನ್ನು ಕೂಡಿ ಹಾಕಿದ ಕೋಣೆಯ ಬಾಗಿಲು ತೆಗೆದಾಗ ಮುದುಕನ ಬದಲಿಗೆ ಸುಂದರವಾದ ಶ್ರೀ ರಂಗನಾಥ ಕಾಣಿಸಿಕೊಳ್ಳುತ್ತಾನೆ. ಸೋಲಿಗರೆಲ್ಲ ಅದನ್ನು ನೋಡಿ ಆಶ್ಚರ್ಯ ಚಕಿತರಾಗಿ ಅವನ ಕಾಲಿಗೆ ಬಿದ್ದು ಕುಸುಮಾಲೆಯನ್ನು ಮದುವೆ ಮಾಡಿಕೊಡುತ್ತಾರೆ'.

## 7.6. ಕುಡಿಯರ ದೈವಗಳ ಆಚರಣೆಗಳು ಮತ್ತು ಮೌಖಿಕ ಸಾಹಿತ್ಯ

ಕುಡಿಯರು ಸೃಷ್ಟಿಯ ವಿಸ್ಮಯವನ್ನು ಬಲ್ಲವರು. ಶಿವ ಪಾರ್ವತಿಯರನ್ನು ತಮ್ಮ ಸೃಷ್ಟಿಕರ್ತರು ಎಂದು ನಂಬುವ ಕುಡಿಯರು ತಮ್ಮ ಕಷ್ಟ ಸುಖ ನೋವು ನಲಿವುಗಳಿಗೆ ಪ್ರತಿಯೊಂದಕ್ಕೂ ಧಾರ್ಮಿಕ ಲೇಪನವನ್ನು ಹಚ್ಚಿ ನೋಡುತ್ತಾರೆ. ಪ್ರಕೃತಿಯ ಆರಾಧಕರಾಗಿದ್ದ ಕುಡಿಯರು ಇಂದು ವೈದಿಕ ದೇವರುಗಳನ್ನು ಆರಾಧಿಸುತ್ತಿರುವುದನ್ನು ನಾವು ಕಾಣಬಹುದಾಗಿದೆ. ಪಾಡಿ ಇಗ್ಗುತಪ್ಪ, ಪಾಲೂರಪ್ಪ, ಮಲೆ ತಂಬಿರನ್, ಪನ್ನಂಗಾಲತಮ್ಮೆ, ಬೈತೂರಪ್ಪನನ್ನು ಕುಡಿಯರು ಮುಖ್ಯವಾಗಿ ಪೂಜಿಸುತ್ತಾರೆ. ಅಲ್ಲದೆ ಸುಬ್ರಹ್ಮಣ್ಯಸ್ವಾಮಿ, ಮಂಜುನಾಥ ಅಲ್ಲದೆ ಕಲ್ಲೂಟಿ, ಪಾಷಾಣಮೂರ್ತಿಯನ್ನು ಪೂಜಿಸುತ್ತಾರೆ. ಕೊಡಗಿನ ಮೂಲ ನಿವಾಸಿಗಳು ಎಂದು ಹೇಳುವ ಹಾಗೂ ಕೊಡವ ಭಾಷೆಯನ್ನು ಮನೆಮಾತಾಗಿ ಬಳಸುವ ಕೊಡಗಿನ ಹದಿನೆಂಟು ಉಪ ಪಂಗಡಗಳೂ ಕೂಡ ಈ ದೇವರುಗಳನ್ನು ಪೂಜಿಸುತ್ತಾರೆ. ಕುಡಿಯರು ಪೂಜಿಸುವ ಈ ಎಲ್ಲ ದೇವರುಗಳು ಮುಖ್ಯವಾಗಿ ಕೇರಳದಿಂದ ಬಂದು ಕೊಡಗಿನಲ್ಲಿ ನೆಲೆಸಿರುವ ದೇವರುಗಳು.

ಪ್ರಕೃತಿಯ ಸೃಷ್ಟಿಯಾದ ಕಲ್ಲು, ಮರ ಗಿಡ, ಮಳೆ ಕಾಡು ಬೆಟ್ಟಗಳನ್ನು ದೇವರೆಂದು ಕರೆದವರು, ಇವರು ಮೂರ್ತಿಪೂಜಕರಲ್ಲ. ಆದರೆ ಇಂದು ಅಮೂರ್ತವಾಗಿದ್ದ ಅವರ ದೇವರುಗಳು ಮೂರ್ತವಾಗಿವೆ. ಸೀಮಿತ ಸಂಖ್ಯೆಯಲ್ಲಿದ್ದ ಇವರ ದೇವರುಗಳು ಗಣನೀಯ ಸಂಖ್ಯೆಯಲ್ಲಿ ಹೆಚ್ಚಾಗಿದೆ. ತಮ್ಮ ಸುತ್ತಮುತ್ತಲಿನ ಇತರೆ ಮೇಲ್ಜಾತಿಗಳ ದೈವಗಳ ಪ್ರಭಾವ ಮತ್ತು ಅನಿವಾರ್ಯತೆ ಇದಕ್ಕೆ ಕಾರಣವಿರಬಹುದು. ಆ ಮೂಲಕ ತಾವು ಮೇಲ್ವರ್ಗದವರಿಗೆ ಸರಿ ಸಮಾನರು ಎಂಬ ಭಾವನೆಯನ್ನು ಇತರರಿಗೆ ಮೂಡಿಸುವುದು ಅವರ ಆಶಯವಾಗಿರಬಹುದು. ಅವರ ಸುಪ್ತ ಪ್ರಜ್ಞೆಯಲ್ಲಿ ತಾವು ಮೇಲ್ಜಾತಿಗಳಿಗೆ ಸರಿಸಮಾನರಾಗಿ ಬದುಕಬೇಕು ಎಂಬ ಹಂಬಲವೂ

ಇರಬಹುದು. ಇಂದು ಈ ಸಮುದಾಯವು ಆರಾಧಿಸುವ ಬಹುಪಾಲು ದೇವರುಗಳು ಸ್ಥಳೀಯ ಮೇಲ್ಜಾತಿ ಹಾಗೂ ಮೇಲ್ವರ್ಗದವರ ದೇವರುಗಳಾಗಿವೆ.

**ದೈವಗಳು**

ಇಗ್ಗುತಪ್ಪ ಕೊಡಗಿನ ಬಹುಸಂಖ್ಯಾತರಿಂದ ಆರಾಧಿಸಲ್ಪಡುವ ದೈವವಾಗಿದೆ. ಅದರಲ್ಲೂ ಮುಖ್ಯವಾಗಿ ಭೂಮಿಯನ್ನು ಹೊಂದಿರುವ ಪ್ರಬಲ ವರ್ಗಗಳು ಪೂಜಿಸುವ ಕೊಡಗಿನ ಮುಖ್ಯ ದೇವರುಗಳಲ್ಲಿ ಒಂದಾಗಿದೆ. ಈ ದೇವರಿಗೆ ಸಂಬಂಧಿಸಿದ ಹಬ್ಬದ ಆಚರಣೆಗಳಲ್ಲಿ ಎಲ್ಲ ಪ್ರಬಲ ವರ್ಗಗಳು ಅನಾದಿ ಕಾಲದಿಂದಲೂ ಒಂದೊಂದು ನಿಗದಿಪಡಿಸಿದ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಅಂತೆಯೇ ಕುಡಿಯರಿಗೂ ಒಂದು ಸೇವೆಯನ್ನು ಸಲ್ಲಿಸುವ ಸ್ಥಾನವಿದೆ. ಇಗ್ಗುತಪ್ಪನ ಕತೆಯಲ್ಲಿ ಹೇಳಿರುವಂತೆ ತನ್ನ ಹಾಗೂ ತನ್ನ ಸೋದರಿ ಪನ್ನಂಗಾಲ ತಮ್ಮೆಯ ಸೇವೆಯನ್ನು ನಿರ್ದಿಷ್ಟ ಜಾತಿಯವರು, ನಿರ್ದಿಷ್ಟ ಮನೆತನದವರೇ ಮಾಡಬೇಕೆಂದು ಹೇಳಿದ್ದಾನೆ ಎಂಬುದಕ್ಕೆ ಕುಡಿಯರ ಮೌಖಿಕ ಸಾಹಿತ್ಯವಾದ 'ಕುಡಿಯ ಪದವು' ಪುಷ್ಟಿಯನ್ನು ಒದಗಿಸುತ್ತದೆ. ಇದನ್ನು ದೇವರಿಗೆ ನಡೆದುಕೊಳ್ಳುವುದು ಎಂದು ಕರೆಯಲಾಗುತ್ತದೆ. ಕುಡಿಯ ಪದದಲ್ಲಿ ಸೇವೆ ಸಲ್ಲಿಸಬೇಕಾದ ಪ್ರತಿಯೊಂದು ಜಾತಿಯವರನ್ನು ಕುರಿತು ಈ ರೀತಿ ಉಲ್ಲೇಖಿಸಲಾಗಿದೆ. 'ಹೆಬ್ಬಾರ ತಂತ್ರಿಯೂ; ಪಾಡಿಲ್ ಪರದನೂ; ಅಮ್ಮಂಗೇರಿ ಕಣಿಯನು; ಬಲ್ಲತ್ತೆ ಮಲೆಯನೂ; ಕುಂಡುಮಲೆ ಕುಡಿಯನು; ಕಂಡಿಮಕ್ಕಿ ಪಾಲೆಯೂ; ಪಟ್ಟುನೂರು ಬಣ್ಣನು; ಚರ್ಮಂಗಾಲ ಪಣಿಕ್ಕನೂ; ಅರೆಜವೆ ಕಾಪಾಳನೂ; ಕುಟ್ಟಂಜೆಟ್ಟಿ ಪೊಲೆಯನೂ; ಪನ್ನಂಗಾಲ ತಮ್ಮೆಯ ಸೇವೆಗೆ ನಿಲ್ಲತಕ್ಕದೆಂದು ಇಗ್ಗುತಪ್ಪ ದೇವರು ಕಟ್ಟು ಮಾಡಿದ. ಅದರಂತೆ ಪ್ರತಿ ವರುಷ ನಡೆಯುವ 'ಕೋಲುಂದರೆಯ' ವೇಳೆಗೆ 'ಕುಂಡು ಮಲೆ' ಕುಡಿಯನು ಹಬ್ಬಕ್ಕೆ ಅವಶ್ಯಕವಾದಷ್ಟು ಸೇಂದಿಯನ್ನು ಒದಗಿಸತಕ್ಕದ್ದು, ಹಾಗೆಯೇ ಪನ್ನಂಗಾಲತಮ್ಮೆಯ ಹಬ್ಬಕ್ಕೆ 'ಮೊದಕರವ' ಕೊಡಲು ಬಾಧ್ಯಸ್ಥನಾದನು".[20] ಅಲ್ಲದೆ 'ಬೆಟ್ಟತ್ತೂರಿನ ಪೂವತ್ತಮಾರು' ದೇವರ ಭಂಡಾರವು ಕುಡಿಯರ ಮನೆಯಲ್ಲಿಯೇ ಇರುವುದು ಇವರ ಧಾರ್ಮಿಕ ಸ್ಥಾನಮಾನಗಳಿಗೆ ಸಾಕ್ಷಿಯಾಗಿದೆ.

**ಕುಡಿಯರ ದೈವಗಳು, ಹಬ್ಬಗಳು, ಆಚರಣೆಗಳು**

**ಕುಲದೇವತಾರಾಧನೆ:** ಇವರಲ್ಲಿ ಕುಲದೇವರುಗಳಿಗೆ ಬಹುಮುಖ್ಯ ಸ್ಥಾನವಿದೆ ಹಾಗೂ ಅದನ್ನು ಪೂಜಿಸಲು ಪ್ರತ್ಯೇಕ ಪೂಜಾರಿಯೂ ಇದ್ದಾರೆ. ಇವರ ಮುಖ್ಯವಾದ ದೇವರುಗಳೆಂದರೆ ಮಲೆ ಬೀರ, ಅಜ್ಜಪ್ಪ, ತಮ್ಮಚ್ಚ, ಚಾಂಡಿ, ಪಾಷಾಣಮೂರ್ತಿ, ವಿಷ್ಣುಮೂರ್ತಿ ಮೊದಲಾದವು.

**ಕುಲದೇವತೆಗಳು**: ಮಲೆತಮ್ಮಚ್ಚ, ಮಲೆಬೀರ, ಅಜ್ಜಪ್ಪ, ಚಾಂಡಿ(ಚಾಮುಂಡಿ)

**ಮನೆದೇವರುಗಳು:** ಪಾಷಾಣಮೂರ್ತಿ, ವಿಷ್ಣುಮೂರ್ತಿ, ಅಯ್ಯಪ್ಪ ಸ್ವಾಮಿ, ಸುಬ್ರಹ್ಮಣ್ಯ, ಇಗ್ಗುತಪ್ಪ, ಕಾವೇರಮ್ಮ, ಬೈತೂರಪ್ಪ, ಮಂಜುನಾಥ.

**ಕುಲದೈವಗಳು**

ಇದು ಹಿರಿಯರ ಕಾಲದಿಂದಲೂ ಆಚರಿಸಿಕೊಂಡು ಆರಾಧಿಸಿಕೊಂಡು ಬರುತ್ತಿರುವ ದೇವರುಗಳು. ಉದಾಹರಣೆಗೆ ಮಲೆತಮ್ಮಚ್ಚ, ಮಲೆಬೀರ, ಮೊದಲಾದವು. ಇವರು ಮೂಲದೇವರು ಗಳು. ಅನಾದಿಕಾಲದಲ್ಲಿ ಬೆಟ್ಟದ ಮೇಲೆ ಕಾಡುಪ್ರಾಣಿಗಳ ನಡುವೆ ವಾಸ ಮಾಡಬೇಕಾದ ಸಂದರ್ಭದಲ್ಲಿ ತಮ್ಮ ಕುಲದೇವರುಗಳು ತಮ್ಮನ್ನು ಆಪತ್ತಿನಿಂದ ರಕ್ಷಿಸಿಕೊಂಡು ಬಂದಿವೆ ಎಂದು ನಂಬುತ್ತಾರೆ. ವರ್ಷಕ್ಕೊಮ್ಮೆ ಕಾಡಿನ ಒಳಗೆ ನಿರ್ದಿಷ್ಟ ಸ್ಥಳದಲ್ಲಿ ಹೋಗಿ ಅಲ್ಲಿಯೇ ಎಲ್ಲರೂ ಸೇರಿ ಪೂಜೆ ನಡೆಸುತ್ತಾರೆ. ದೇವರು ಹಿಂದೆ ನೆಲೆ ನಿಂತ ಸ್ಥಳವೇ ಹಬ್ಬ ನಡೆಯುವ ಸ್ಥಳ.

**ಮಲೆತಮ್ಮಚ್ಚ**

ಮಲೆತಮ್ಮಚ್ಚ ಎಂಬುದು ಕುಡಿಯರ ಮುಖ್ಯವಾದ ದೈವ ಹಾಗೂ ಇದು ಇವರ ಬೇಟೆ ದೇವರು ಕೂಡ ಹೌದು. ಮಲೆ ಎಂದರೆ ಬೆಟ್ಟ, ತಮ್ಮಚ್ಚ ಎಂದರೆ ಆ ಬೆಟ್ಟದಲ್ಲಿರುವ ದೇವರ ಹೆಸರು. ಈ ದೇವರಿಗೆ ಯಾವುದೇ ರೂಪವಿಲ್ಲ. ಹಲಸು ಅಥವಾ ಮಾವಿನ ಮರದ ಕೆಳಗ ಕಲ್ಲುಗಳನ್ನು ತ್ರಿಶೂಲವನ್ನು ನೆಟ್ಟು ಅದನ್ನು ಮಲೆತಮ್ಮಚ್ಚನೆಂದು ಪೂಜಿಸುತ್ತಾರೆ. ಇದರ ಪಕ್ಕದಲ್ಲಿ ಬೇಟೆಯ ಪರಿಕರಗಳಾದ ಬಿಲ್ಲು ಬಾಣಗಳಿರುತ್ತವೆ. ಬೇಟೆಗೆ ಹೋಗುವ ಮೊದಲು ತಮಗೆ ಒಳ್ಳೆಯ ಬೇಟೆ ಸಿಗಲೆಂದೂ, ಕಾಡುಪ್ರಾಣಿಗಳಿಂದ ತಮ್ಮನ್ನು ರಕ್ಷಿಸಬೇಕೆಂದು, ತಮಗೆ ಏನೂ ಕೆಡುಕಾಗಬಾರದೆಂದು ಮಲೆತಮ್ಮಚ್ಚನನ್ನು ಪ್ರಾರ್ಥಿಸಿ ಬೇಟೆಗೆ ಹೋಗುತ್ತಾರೆ. ಬೇಟೆಯಾಡಿ ಬಂದ ನಂತರ ಮಲೆತಮ್ಮಚ್ಚನಿಗೆ ನೈವೇದ್ಯದ ರೂಪದಲ್ಲಿ ತಾವು ಬೇಟೆಯಾಡಿದ ಪಾಲನ್ನು ಸಲ್ಲಿಸುತ್ತಾರೆ. ಕೆಲವೊಂದು ಕಡೆಗಳಲ್ಲಿ ವರ್ಷಕ್ಕೊಮ್ಮೆ ಹಂದಿ ಅಥವಾ ಕೋಳಿಯನ್ನು ಬಲಿ ನೀಡಿ ಮಲೆತಮ್ಮಚ್ಚನಿಗೆ ವಿಶೇಷ ಪೂಜೆ ಸಲ್ಲಿಸುವ ಪರಿಪಾಟವಿದೆ. ಕಾಡಿನಲ್ಲಿ ಕಾಡು ಪ್ರಾಣಿಗಳಿಂದಾಗಲೀ, ಇನ್ನಿತರ ವಿಪತ್ತುಗಳಿಂದ ಮಲೆ ತಮ್ಮಚ್ಚನೇ ತಮ್ಮನ್ನು ಕಾಪಾಡುತ್ತಾನೆ ಎಂಬುದು ಕುಡಿಯರ ನಂಬಿಕೆ. ದಟ್ಟವಾದ ದುರ್ಗಮವಾದ ಕಾಡಿನ ಬೆಟ್ಟದಲ್ಲಿ ಹೆಜ್ಜೇನು ಹೇರಳವಾಗಿ ದೊರೆಯುತ್ತದೆ. ಅಂತಹ ಹೆಜ್ಜೇನು ದೊರೆಯುವ ಕಾಡುಗಳನ್ನು 'ತೇನ್‌ಮಲೆ' ಎಂದು ಕರೆಯುತ್ತಾರೆ. ಅಲ್ಲಿ ವಾಸಿಸುವ ಕುಡಿಯರನ್ನು 'ತೇನ್‌ಮಲೆ' ಕುಡಿಯರು ಎಂದು ಕರೆಯುತ್ತಾರೆ. ತೇನ್=ಜೇನು, ಮಲೆ=ಬೆಟ್ಟ. ಹೆಂಡ ಇಳಿಸುವ ಕಾಯಕದಂತೆ ಜೇನುಬೇಟೆಯೂ ಕೂಡ ಅವರ ಮುಖ್ಯ ಕಸುಬಾಗಿದೆ. ಜೇನುಬೇಟೆಗೆ ಹೋಗುವಾಗಲು ಮರ ಹತ್ತುವಾಗ ಜೇನು

ಕೊಯ್ಯುವಾಗ ಯಾವುದೇ ಆಪತ್ತು ಎದುರಾಗದಿರಲಿ ಎಂದು ಮಲೆತಮ್ಮಚ್ಚನನ್ನು ಪೂಜಿಸುವುದರಿಂದ ಅವರಲ್ಲಿ ಆತ್ಮವಿಶ್ವಾಸ ಹೆಚ್ಚಾಗುತ್ತದೆ. ದೇವರೇ ತಮ್ಮೊಡನೆ ಇದ್ದಾನೆ ಎಂಬ ನಂಬಿಕೆ ಎಂತಹ ವಿಪತ್ತು ಎದುರಾದಾಗಲೂ ಧೈರ್ಯದಿಂದಿರಲು ಅವರನ್ನು ಪ್ರೇರೇಪಿಸುತ್ತದೆ. ಮಾನಸಿಕ ದೃಢತೆಯನ್ನು ನೀಡುತ್ತದೆ.

**ಮಲೆತಮ್ಮಚ್ಚನಿಂದ ಏಲಕ್ಕಿ**

ಹಲಸು ಅಥವಾ ಮಾವಿನ ಮರದಲ್ಲಿ ಈ ಮಲೆತಮ್ಮಚ್ಚ ನೆಲೆಸಿರುತ್ತಾನೆ ಎಂಬುದು ಇವರ ನಂಬಿಕೆ. ಈ ಮರದ ಕೊಂಬೆಗಳು ಮರದ ಕಾಂಡಕ್ಕೆ ಸೇರುವ ಜಾಗದಲ್ಲಿ ಸ್ವಲ್ಪ ಭಾಗ ಕತ್ತಿಯಿಂದ ಕೆತ್ತಿ ಆ ಜಾಗದಲ್ಲಿ ಒಂದು ಅಗಲವಾದ ಕಲ್ಲನ್ನು ಇಟ್ಟುಬಿಡುತ್ತಿದ್ದರು. ಆ ಕಲ್ಲಿನಲ್ಲಿ ಮಲೆತಮ್ಮಚ್ಚನ ಆವಾಹನೆಯಾಗಿ ಮಲೆತಮ್ಮಚ್ಚನು ಸುತ್ತಲೂ ಏಲಕ್ಕಿಯನ್ನು ಎಸೆಯುತ್ತಿದ್ದನಂತೆ. ಆದ್ದರಿಂದ ಅಂತಹ ಕಾಡುಗಳಲ್ಲಿ ಏಲಕ್ಕಿ ಯಥೇಚ್ಛವಾಗಿ ಬೆಳೆಯುತ್ತದ ಎಂದು ಕುಡಿಯರು ನಂಬುತ್ತಾರೆ. ಮಲೆತಮ್ಮಚ್ಚ ಕುಡಿಯರಿಗೆಲ್ಲ ಏಲಕ್ಕಿಯನ್ನು ಉಪಯೋಗಿಸಲು ಅನುಮತಿ ನೀಡಿದನಂತೆ. ಆದ್ದರಿಂದ ಏಲಕ್ಕಿ ತಮ್ಮ ಮೂಲಕ ಇಡೀ ನಾಡಿಗೆ ಪರಿಚಯವಾಯಿತು ಎಂದು ಹೇಳುತ್ತಾರೆ. ಇವರು ಕಾಡಿನಲ್ಲಿ ನೈಸರ್ಗಿಕವಾಗಿ ಬೆಳೆಯುವ ಏಲಕ್ಕಿಯನ್ನು ತಂದು ಮಾರಾಟ ಮಾಡಿ ತಮ್ಮ ಜೀವನಕ್ಕೆ ಬಳಸಿಕೊಳ್ಳುತ್ತಾರೆ.

**ಮಲೆತಮ್ಮಚ್ಚನ ಪೂಜೆಯ ವಿಧಾನ:** ವರ್ಷಕ್ಕೊಮ್ಮೆ ಮಲೆತಮ್ಮಚ್ಚನಿಗೆ ಪೂಜೆ ನೆರವೇರಿಸುತ್ತಾರೆ. ಈ ಪೂಜೆಯನ್ನು ತಮ್ಮ ಕುಟುಂಬದಲ್ಲಿ ಹಿರಿಯರಾದವರ ಮನೆಯಲ್ಲಿ ನೆರವೇರಿಸುತ್ತಾರೆ. ಈ ಮನೆಯಲ್ಲಿಯೇ ದೇವರ ಆಭರಣ ಭಂಡಾರ ಹರಕೆ ಹಣ ಎಲ್ಲ ಇರುತ್ತದೆ ಮತ್ತು ಬಹಳ ಪವಿತ್ರವಾದ ವಸ್ತುಗಳಾಗಿರುತ್ತವೆ. ಹಬ್ಬಕ್ಕೆ 8–12 ದಿನವಿರುವಿರುವಾಗ ಹಬ್ಬವನ್ನು ನೆರವೇರಿಸುವವರ ಮನೆಯವರಲ್ಲಿ ಒಬ್ಬರು ಪೂಜಾರಿಯಾಗುತ್ತಾರೆ. ಹಾಗೆ ನೇಮಕವಾದ ವ್ಯಕ್ತಿ ಬಹಳ ನೇಮ ನಿಷ್ಠೆಯಿಂದ ಇರಬೇಕಾಗುತ್ತದೆ. ತಾವು ಮನೆಯಲ್ಲಿ ಬೆಳೆದ ಹಸಿಬಾಳೆ ಗೊನೆಯನ್ನು ಕಡಿದು ತಮ್ಮ ಕುಟುಂಬಸ್ಥರಲ್ಲಿ ಹಿರಿಯರ ಮನೆಯ ದೇವರ ಕೋಣೆಗೆ ತಂದು ಬಾಳೆಗೊನೆ ಮುಚ್ಚಿ ಕಟ್ಟುತ್ತಾರೆ. ಹಬ್ಬ ನಿಗದಿಯಾಗುವುದಕ್ಕೆ ಇದು ಸೂಚನೆ. ಇದನ್ನು 'ಹಬ್ಬಕ್ಕೆ ಕಟ್ಟು ಬೀಳುವುದು' ಎಂದು ಕರೆಯಲಾಗುತ್ತದೆ.

ಹಬ್ಬಕ್ಕೆ ಮೂರು ದಿನ ಇರುವಂತೆ ದೇವರ ಸಾಮಗ್ರಿಗಳನ್ನು ಬಾಳೆಗೊನೆಯನ್ನು ಆಹಾರ ಪದಾರ್ಥವನ್ನು ತೆಗೆದುಕೊಂಡು ಮಲೆತಮ್ಮಚ್ಚನ ವಾಸಸ್ಥಾನಕ್ಕೆ ಹೋಗುತ್ತಾರೆ. ಇದು ಸಾಮಾನ್ಯವಾಗಿ ಅರಣ್ಯದ ಒಳಗಡೆಯಿರುತ್ತದೆ. ಉದಾಹರಣೆಗೆ ಮಡಿಕೇರಿಯ ಗಾಳಿಬೀಡು ಅರಣ್ಯದೊಳಗೆ

ಮಲೆತಮ್ಮಚ್ಚದೇವರ ಸನ್ನಿಧಾನವಿದೆ. ಅಂತಹ ನಿರ್ದಿಷ್ಟ ಸ್ಥಳವನ್ನು ಮೊದಲೇ ಸ್ವಚ್ಛಗೊಳಿಸಿ ಅಲ್ಲಿ ಚಪ್ಪರ ಹಾಕಿ. ಅಲಂಕಾರ ಮಾಡಿರುತ್ತಾರೆ. ದೇವರ ಪೂಜಾಸಾಮಗ್ರಿಗಳಾದ ಕತ್ತಿ, ಕೋಲು, ಶೂಲ ಎಲ್ಲವನ್ನು ಸ್ವಚ್ಛಗೊಳಿಸಿ ಈಗಾಗಲೇ ಹಣ್ಣಾಗಿರುವ ಬಾಳೆಗೊನೆಯನ್ನು (ನೆಲ್ಲಕ್ಕಿ) ದೇವರ ಮುಂದೆ ಇಟ್ಟು ನೆರೆದವರಿಗೆ ಸ್ವಲ್ಪ ಅಕ್ಕಿ ಕೊಡುತ್ತಾರೆ. ಪೂಜೆ ನಡೆಯುತ್ತಿದ್ದಂತೆ ಪೂಜಾರಿಗೆ ದೇವರು ಬರುತ್ತದೆ. ಎಲ್ಲರೂ ತಮ್ಮ ಕಷ್ಟಗಳನ್ನು ಹೇಳಿಕೊಂಡು ದೇವರನ್ನು ಪರಿಹಾರ ಕೇಳಿ ತೃಪ್ತಿ ಪಡುತ್ತಾರೆ. ದೇವರು ಬಂದಾಗ ಕೈಯಲ್ಲಿದ್ದ ಅಕ್ಕಿಯನ್ನು ದೇವರು ಬಂದಿರುವ ಪೂಜಾರಿಯ ತಲೆಯ ಮೇಲೆ ಎಲ್ಲರೂ ಹಾಕುತ್ತಾರೆ. ನಂತರ ಎಲ್ಲರೂ ಬಾಳೆ ಹಣ್ಣಿನ ಪ್ರಸಾದವನ್ನು ಸೇವಿಸುತ್ತಾರೆ.

**ಬಲಿ ನೀಡುವುದು:** ಪ್ರತಿ ವರ್ಷದಲ್ಲಿ ಒಂದೊಂದು ಮನೆಯವರು ಹರಕೆ ಕಟ್ಟಿಕೊಂಡು ಪೂಜೆಯನ್ನು ಒಪ್ಪಿಕೊಂಡ ಪ್ರಕಾರ ಕೋಳಿ ಅಥವಾ ಹಂದಿಯನ್ನು ಬಲಿ ನೀಡಬೇಕಾಗುತ್ತದೆ. ಇದನ್ನು ಮುಖ್ಯವಾಗಿ ಪೂಮಲೆ ಕುಡಿಯರು ಮಾಡುತ್ತಾರೆ. ಹರಕೆ ಹೊತ್ತಿದ್ದ ಇತರರು ಕೂಡ ಬಲಿ ನೀಡಬಹುದು. ಪೂಜೆ ನಡೆಯುವ ಸ್ಥಳದಿಂದ ಬಹಳಷ್ಟು ದೂರದಲ್ಲಿ ಬಲಿಯನ್ನು ನೀಡಲಾಗುತ್ತದೆ. ಅಲ್ಲಿಗೆ ಪೂಜಾರಿ, ಬಲಿ ನೀಡುವ ಕುಟುಂಬಸ್ಥರು, ಇತರರು ಕಾಲ್ನಡಿಗೆಯಲ್ಲಿ ತೆರಳಿ ಮೊದಲು ಪೂಜೆ ಮಾಡುತ್ತಾರೆ. ಮೈಮೇಲೆ ದೇವರು ಬಂದ ಪೂಜಾರಿಯು ಹರಕೆಯ ಪ್ರಾಣಿಗಳ ಮೇಲೆ ಅಕ್ಕಿಕಾಳುಗಳನ್ನು ಹಾಕುವ ಮೂಲಕ ಅವುಗಳ ಸಮ್ಮತಿಯನ್ನು ಪಡೆಯುತ್ತಾನೆ. ಅನಂತರ ಪೂಜೆ ಪುನಸ್ಕಾರ ನೆರವೇರಿಸಿ ಪ್ರಾಣಿಗಳನ್ನು ಕತ್ತರಿಸಿ ಪೂಜಾರಿಯು ಹಂದಿಯ ರಕ್ತವನ್ನು ಕುಡಿಯುತ್ತಾನೆ. ಇದನ್ನು ಬೇರೆ ಯಾರೂ ನೋಡುವಂತಿಲ್ಲ. ನಂತರ ಹಂದಿಯ ಮಾಂಸವನ್ನು ಎರಡು ಪಾಲು ಮಾಡುತ್ತಾರೆ. ಅದರಲ್ಲಿ ಒಂದು ಪಾಲನ್ನು ಪೂಜೆಗೆ ನೈವೇದ್ಯ ಮಾಡುತ್ತಾರೆ. ಈ ಬಲಿ ಕೊಡುವ ಸಂದರ್ಭದಲ್ಲಿ ಹೆಣ್ಣುಮಕ್ಕಳಿಗೆ ಪ್ರವೇಶವಿಲ್ಲ. ಹಂದಿಯ ಮಾಂಸದ ನೈವೇದ್ಯವನ್ನು ದೇವರಿಗೆ ಎಡೆಯಿಟ್ಟು ಉಳಿದ ಮಾಂಸದ ಪದಾರ್ಥವನ್ನು ಪ್ರಸಾದದ ರೂಪದಲ್ಲಿ ಎಲ್ಲರೂ ಅಲ್ಲಿಯೇ ಸೇವಿಸುತ್ತಾರೆ. ಉಳಿದ ಎರಡನೆಯ ಪಾಲನ್ನು ಅಲ್ಲಿ ಪ್ರಸಾದದ ರೂಪದಲ್ಲಿ ಮಾರಾಟ ಮಾಡುತ್ತಾರೆ. ಅಂದು ಊಟದೊಂದಿಗೆ ರಾತ್ರಿ ಕಳ್ಳನ್ನು(ಸೇಂದಿಯನ್ನು) ಸೇವಿಸುತ್ತಾರೆ. ಸೇರಿದ ಗಂಡು ಹೆಣ್ಣುಗಳೆಲ್ಲ ಕಳ್ಳು ಸೇವಿಸಿ ಊಟ ಮಾಡುತ್ತಾರೆ. ರಾತ್ರಿ ಭಂಡಾರದ ಹಣವನ್ನು ಎಣಿಸಿ ಕುಟುಂಬಸ್ಥರಿಗೆ ಅದನ್ನು ಸಾಲವೆಂದು ನೀಡುತ್ತಾರೆ. ರಾತ್ರಿ ದುಡಿಯೊಂದಿಗೆ ಬಾಲೋಪಾಟ್ ಹಾಡುತ್ತಾ ಅಲ್ಲಿಯೇ ಮಲಗಿ ಮರುದಿನ ಅವರವರ ಮನೆಗೆ ತೆರಳುತ್ತಾರೆ.

**ಮನೆದೇವರ ಪೂಜೆ:** ವರ್ಷಕ್ಕೊಮ್ಮೆ ಪ್ರತಿ ಮನೆಯವರು ತಮ್ಮ ತಮ್ಮ ಮನೆದೇವರುಗಳಿಗಾಗಿ ಪೂಜೆಯನ್ನು ನೆರವೇರಿಸುತ್ತಾರೆ. ಮುಖ್ಯವಾಗಿ ಪಾಷಾಣಮೂರ್ತಿ, ವಿಷ್ಣುಮೂರ್ತಿ, ಅಯ್ಯಪ್ಪಸ್ವಾಮಿ, ಸುಬ್ರಹ್ಮಣ್ಯಸ್ವಾಮಿ, ಮಂಜುನಾಥಸ್ವಾಮಿ, ಇಗ್ಗುತಪ್ಪ, ಕಾವೇರಿ ಮಾತೆಗೆ ಇವರು ಪೂಜೆಯನ್ನು ಸಲ್ಲಿಸುತ್ತಾರೆ. ಪ್ರತಿ ಮನೆತನಕ್ಕೂ ಒಂದೊಂದು ಮನೆದೇವರುಗಳು ಇರುತ್ತಾರೆ. ಆಯಾ ಮನೆತನದವರು ತಮ್ಮ ತಮ್ಮ ಮನೆದೇವರುಗಳಿಗಾಗಿ ಈ ಪೂಜೆ ಆಯೋಜಿಸುತ್ತಾರೆ. ರಕ್ತ ಬಲಿ ನೀಡುವುದರ ಮೂಲಕ ತಮ್ಮ ಮನೆದೇವರನ್ನು ತೃಪ್ತಿಪಡಿಸಲಾಗುತ್ತದೆ. ಆದರೆ ಇಲ್ಲಿ ಕೋಳಿಯನ್ನು ಮಾತ್ರ ಬಲಿ ನೀಡುತ್ತಾರೆ, ಹಂದಿಯನ್ನಲ್ಲ. ಇಲ್ಲಿಯೂ ಕೂಡ ಪ್ರತಿ ಮನೆಯಲ್ಲಿ ಪೂಜೆ ಮಾಡಲು ಒಬ್ಬ ವ್ಯಕ್ತಿಯನ್ನು ನೇಮಿಸಲಾಗಿರುತ್ತದೆ. ಈತ ಪೂಜಾರಿಯಂತೆ ನೇಮನಿಷ್ಠೆಯಿಂದ ಎಲ್ಲ ಕೆಲಸ ನಿರ್ವಹಿಸುತ್ತಾನೆ. ಈತ ಹಬ್ಬವನ್ನು ನಿಗದಿಪಡಿಸಿದ್ದ 8–12 ದಿನ ಮೊದಲು ಮಡಿಯುಟ್ಟು ತಾವು ಮನೆಯಲ್ಲಿ ಬೆಳೆದ ಕಾಯಿ ಬಾಳೆಗೊನೆ ಕಡಿದು ತಂದು ದೇವರಿಗೆ ಪ್ರಾರ್ಥಿಸುತ್ತಾ ಬಾಳೆಗೊನೆ ಮುಚ್ಚಿ ದೇವರ ಕೋಣೆಯಲ್ಲಿ ಮಾಡಿಗೆ ಕಟ್ಟುತ್ತಾನೆ. ಇದು ಪೂಜೆಗೆ ಮುನ್ನುಡಿಯಿದ್ದಂತೆ. ಪೂಜೆ ಮುಗಿಯುವವರೆಗೂ ಬಹಳ ನೇಮನಿಷ್ಠೆಯಿಂದ ಈತ ಇರಬೇಕಾಗುತ್ತದೆ.

ಪೂಜೆಯ ದಿನ ಮಡಿಯುಟ್ಟು ಪೂಜಾರಿಯು ಸ್ವತಃ ತಾನೇ ಪೂಜೆಗೆ ಬೇಕಾದ ಅನ್ನ, ಸಾಂಬಾರು, ರೊಟ್ಟಿ ತಯಾರಿಸಿ ದೇವರಿಗೆ ಮೀದಿ(ಎಡೆ) ಹಾಕುತ್ತಾನೆ. ನಂತರ ಕೋಳಿಯನ್ನು ತಂದು ದೇವರ ಮುಂದೆ ಪ್ರಾರ್ಥಿಸಿ ಅದನ್ನು ದೇವರ ಎದುರಿಗೆ ಕತ್ತರಿಸಿ ಅದರ ತಲೆಯನ್ನು ದೇವರ ಮುಂದೆ ಇಟ್ಟು ಅದರ ರಕ್ತವನ್ನು ಎಡೆಯ ಮೇಲೆ ಬೀಳುವಂತೆ ಮಾಡುತ್ತಾನೆ. ದೇಹದ ಭಾಗವನ್ನು ಮನೆಯಿಂದ ಹೊರತಂದು ಬಿಸಾಡುತ್ತಾರೆ. ನಂತರ ಮನೆಯವರು ಹಾಗೆ ಬಿಸಾಡಿದ ಕೋಳಿಯನ್ನು ತಂದು ಪ್ರಸಾದವೆಂದು ಭಾವಿಸಿ ಅಡುಗೆ ಮಾಡುತ್ತಾನೆ. ಆಗ ಮನೆಯಲ್ಲಿರುವ ಪ್ರತಿಯೊಬ್ಬರು ಎಡೆ ಹಾಕಬೇಕಾಗುತ್ತದೆ. ಮಾಡಿದ ಅಡುಗೆಯನ್ನು ಸ್ವಲ್ಪ ಸ್ವಲ್ಪ ಎಡೆಯಿಟ್ಟು ಸಾರಾಯಿಯನ್ನು ಜೊತೆಗೆ ಇಡುತ್ತಾರೆ. ಎಲ್ಲರೂ ಸೇರಿ ಎಡೆಯನ್ನು, ದೀಪ, ನೀರು ಸಾರಾಯಿಯನ್ನು ಹೊರಗೆ ತಂದು ಇಡುತ್ತಾರೆ. ಪೂಜಾರಿಯ ಇದನ್ನೆಲ್ಲಾ ಮುಂದೆ ನಿಂತು ನೆರವೇರಿಸುತ್ತಾನೆ. ಎಲ್ಲರಿಗೂ ಕೈಗೆ ಸ್ವಲ್ಪ ಅಕ್ಕಿ ನೀಡಿ ಎಡೆಯನ್ನು ಸ್ವೀಕರಿಸುವಂತೆ ಪ್ರಾರ್ಥಿಸಿ ಅಕ್ಕಿ ಹಾಕಿ ಬೆನ್ನು ತಿರುಗಿಸಿ ನಿಲ್ಲುತ್ತಾರೆ. ಅಂದರೆ ನೈವೇದ್ಯ ಸ್ವೀಕರಿಸಲು ಬರುವುದನ್ನು ನೋಡಬಾರದು ಎಂಬುದು ನಿಯಮ. ಮಹಿಳೆಯರಿಗೆ ಈ ಕ್ರಿಯಾವಿಧಿಗಳಲ್ಲಿ ಪಾಲ್ಗೊಳ್ಳುವ ಅವಕಾಶವಿಲ್ಲ. ಈ ಎಲ್ಲ ಪೂಜಾವಿಧಿಗಳನ್ನು ಗಂಡಸರೇ ನಡೆಸುತ್ತಾರೆ. ಅನಂತರ ಮನೆಯಲ್ಲಿ ಎಲ್ಲರೂ ಸಾರಾಯಿಯೊಂದಿಗೆ ನೈವೇದ್ಯ ಸ್ವೀಕರಿಸುತ್ತಾರೆ. ಪೂಜಾರಿಗೆ ದೇವರ ಕೋಣೆಯಲ್ಲಿ ಊಟ ಬಡಿಸಲಾಗುತ್ತದೆ.

**ಇಗ್ಗುತಪ್ಪ ಪೂಜೆ(ಹಬ್ಬ):** ಇಗ್ಗುತಪ್ಪ ಕೇರಳದಿಂದ ತನ್ನ ಸಹೋದರರು ಹಾಗೂ ಸಹೋದರಿಯಾದ ಪನ್ನಂಗಾಲ ತಮ್ಮೆಯೊಂದಿಗೆ ಕೊಡಗಿಗೆ ಬರುತ್ತಿರುವಾಗ ದಾರಿಯಲ್ಲಿ ಎಲ್ಲರಿಗೂ ದಾಹವಾಗುತ್ತದೆ. ಆ ಸಂದರ್ಭದಲ್ಲಿ ಅಲ್ಲಿದ್ದ ಕೋಲಿಂದಮಲೆಯಲ್ಲಿ ವಾಸವಿದ್ದ ಕುಂಡುಮಲೆ ಒಕ್ಕದ ಕುಡಿಯನ ಬಳಿ ನೀರು ಕೇಳುತ್ತಾರೆ. ಆಗ ಅವರು ತಮ್ಮ ಮನೆಯಲ್ಲಿದ್ದ ಕಳ್ಳನ್ನು ಬಿದಿರಿನ ಕೊಳವೆಯಲ್ಲಿ ನೀಡುತ್ತಾರೆ. ಆದರೆ ಅಣ್ಣಂದಿರಾರೂ ಅದನ್ನು ಕುಡಿಯುವುದಿಲ್ಲ. ಬದಲಿಗೆ ಕುಡಿದಂತೆ ನಟಿಸುತ್ತಾರೆ. ಇದರ ಅರಿವಿಲ್ಲದ ತಂಗಿ ಕಳ್ಳು ತುಂಬಾ ರುಚಿಯಾಗಿದೆ ಎಂದುಕೊಂಡು ಮನಸಾರೆ ಕುಡಿಯುತ್ತಾಳೆ. ಇದನ್ನೇ ನೆಪ ಮಾಡಿಕೊಂಡ ಅಣ್ಣಂದಿರು ತಂಗಿಯನ್ನು ನೀನು ಹೆಣ್ಣಾಗಿ ಕಳ್ಳು ಕುಡಿದಿದ್ದೀಯ. ಇನ್ನು ಮೇಲೆ ನೀನು ನಮಗೆ ಸರಿಸಮಾನಳಲ್ಲ. ನೀನು ದೈವದ ಸ್ಥಾನ ಪಡೆಯಲು ಅರ್ಹಳಲ್ಲ. ನೀನು ಸಾಮಾನ್ಯ ಮನುಷ್ಯರಂತೆ ನೀನು ಕೀಳಾಗಿದ್ದೀಯ. ಆದ್ದರಿಂದ ನೀನು ನಮಗೆ ಸರಿಸಮಾನಳಾದ ಸ್ಥಾನವನ್ನು ಕಳೆದುಕೊಂಡಿದ್ದೀಯ. ಇಂದಿನಿಂದ ನಿನ್ನನ್ನು ಕೆಳಜಾತಿಯವರು ಮಾತ್ರ ಪೂಜಿಸುವಂತಾಗಲಿ ಎಂದು ಶಾಪ ನೀಡುತ್ತಾರೆ. ನಂತರ ತಮಗೆ ಕಳ್ಳು ನೀಡಿದ ಕುಂಡುಮಲೆ ಕುಡಿಯರಿಗೆ 'ನಾವು ಮಾನವ ರೂಪದಲ್ಲಿರುವ ದೇವರುಗಳು, ಪ್ರತಿ ವರ್ಷ ನಡೆಯುವ ಹಬ್ಬದಲ್ಲಿ ನೀವೇ ನಮಗೆ ಸೇಂದಿ ಒಪ್ಪಿಸಬೇಕು' ಎಂದು ಆಜ್ಞಾಪಿಸುತ್ತಾರಂತೆ. ಅಂತೆಯೇ ಪ್ರತಿ ವರ್ಷ ಇಗ್ಗುತಪ್ಪ ಹಬ್ಬದಲ್ಲಿ ಕುಂಡುಮಲೆ ಕುಡಿಯರು ಬಿದಿರಿನ ಕೊಳವೆಯಲ್ಲಿ ನಿಯಮದಂತೆ ಸೇಂದಿ ತಂದು ಒಪ್ಪಿಸುವ ಪರಿಪಾಟವನ್ನು ಪಾಲಿಸುತ್ತಾರೆ. ಪನ್ನಂಗಾಲ ತಮ್ಮೆ ಕೊಡಗಿನ ಒಬ್ಬ ಪ್ರಸಿದ್ಧ ದೇವತೆ. ಮುಖ್ಯವಾಗಿ ಕೆಳವರ್ಗದ ಜನ ಇವರನ್ನು ಪೂಜಿಸುತ್ತಾರೆ. ಇಗ್ಗುತಪ್ಪನ ದೇವಾಲಯದಲ್ಲಿ ಬ್ರಾಹ್ಮಣರು ಪೂಜಾರಿಗಳಾಗಿದ್ದರೆ, ಕೊಡವರ ಮೇಲ್ವಿಚಾರಣೆಯಲ್ಲಿ ಈ ಪೂಜೆ ನಡೆಯುತ್ತದೆ. ಇಗ್ಗುತಪ್ಪ ಎಂದರೆ ಕೇಳಿದ್ದನ್ನು ಕೊಡುವ ದೇವರು ಎಂದರ್ಥ. ಹಾಗೆ ಮಳೆಯನ್ನು ಕರುಣಿಸುವ ದೇವರು ಎಂದೂ ಕೂಡ ನಂಬುತ್ತಾರೆ.. ಕೊಡಗಿನಲ್ಲಿ ಬೆಳೆದ ಬೆಳೆಯ ಮೊದಲ ಕಟಾವು ಆದ ತಕ್ಷಣ ಇಗ್ಗುತಪ್ಪನಿಗೆ ದೇವಾಲಯದಲ್ಲಿ ಪೂಜೆ ನಡೆಯುತ್ತದೆ. ಕೊಡಗಿನಲ್ಲಿ ಪೂಜಿಸಲಾಗುವ ಹೆಚ್ಚಿನ ದೇವರುಗಳು ಕೇರಳದಿಂದ ಬಂದವು ಹಾಗೂ ಈ ದೇವರುಗಳ ಮುಖ್ಯ ದೇವಸ್ಥಾನಗಳು ಕೇರಳದಲ್ಲಿಯೇ ಇದೆ. ಆದ್ದರಿಂದ ಕೊಡಗಿನವರು ಕೇರಳಕ್ಕೆ ಹೋಗಿ ಪೂಜಿಸುವ ಪರಿಪಾಟವನ್ನು ಇನ್ನೂ ಇಟ್ಟುಕೊಂಡಿದ್ದಾರೆ.

**ಪನ್ನಂಗಾಲ ತಮ್ಮೆ ದೇವಿಯ ಹಬ್ಬ:** ಇಗ್ಗುತಪ್ಪನ ಕಥೆಯಲ್ಲಿ ಬರುವ ವಿವರಣೆಯಂತೆಯೇ ಕುಡಿಯರು ನೀಡಿದ ಸೇಂದಿಯನ್ನು ಕುಡಿದಳು ಎಂಬ ಕಾರಣಕ್ಕೆ ಅಣ್ಣಂದಿರಿಂದ ಬಹಿಷ್ಕೃತಳಾದ ಪನ್ನಾಂಗಾಲ ತಮ್ಮೆಯು ಅಣ್ಣಂದಿರಿಗೆ ಸಮಾನವಾದ ದೈವತ್ವವನ್ನು ಕಳೆದುಕೊಳ್ಳುತ್ತಾಳೆ.

ಇಗ್ಗುತಪ್ಪನು 'ನಾವು ಬ್ರಾಹ್ಮಣ ಕುಲ ದೈವ ಮಾನವರು ನೀನು ಈ ಸಾರಾಯಿ (ಬೊಳ್ಳೆಕಳ್ಳು) ಕುಡಿದು ಮೈಲಿಗೆ ಮಾಡಿಕೊಂಡಿರುವೆ. ಹಾಗಾಗಿ ನೀನು ನಮ್ಮ ಬ್ರಾಹ್ಮಣ ದೈವ ಕುಲಕ್ಕೆ ಸೇರಲು ಅನರ್ಹಳು'[22] ಎಂದು ಹೇಳಿ ಬ್ರಾಹ್ಮಣ ಜಾತಿಯಿಂದ ಅವಳನ್ನು ಬಹಿಷ್ಕರಿಸಿ ಇನ್ನು ಮುಂದೆ ನೀನು ದಲಿತವರ್ಗದವರಿಂದ ಮಾತ್ರ ಪೂಜಿಸಲ್ಪಡುತ್ತೀಯ ಎಂದು ಹೇಳಿ ಕೋಲಿಂದ ಮನೆಯವರಿಗೆ 'ನಮ್ಮ ತಂಗಿಯನ್ನು ನಿಮಗೆ ನೀಡುತ್ತೇವೆ ಇವಳೇ ನಿಮ್ಮ ಆರಾಧ್ಯ ದೇವತೆ, ಅವಳ ಇಷ್ಟಕಷ್ಟಗಳನ್ನು ನೀವು ಪೂರೈಸಬೇಕು. ಅವಳ ಪೂಜೆಗೆ, ಹಬ್ಬಕ್ಕೆ ಅವಳಿಗೆ ಇಷ್ಟವಾದ ಈ ಪಂಚಾಮೃತವನ್ನು ತಪ್ಪದೇ ನೀಡಬೇಕು. ಅವಳು ನೆಲೆ ನಿಂತ ಸ್ಥಾನಕ್ಕೆ ನಿಮ್ಮ ಹಕ್ಕುದಾರಿಕೆ ಇದೆ'[23] ಎಂದು ಅವಳನ್ನು ಅಲ್ಲಿಯೇ ಬಿಟ್ಟು ಮುಂದೆ ಸಾಗುತ್ತಾರೆ. ಅದೇ ಜಾಗದಲ್ಲಿ ಪನ್ನಾಂಗಾಲ ತಮ್ಮೆ ನೆಲೆ ನಿಲ್ಲುತ್ತಾಳೆ. ಅಂದಿನಿಂದ ಪ್ರತಿವರ್ಷ ಕೋಲಿಂದ ಮಲೆಯವರು ಪನ್ನಾಂಗಾಲ ತಮ್ಮೆಯ ಹಬ್ಬದಲ್ಲಿ ಬಿದಿರಿನ ಕೊಳವೆಯಲ್ಲಿ ಸೇಂದಿ(ಬೊಳ್ಳೆಕಳ್ಳನ್ನು) ಯನ್ನು ಒಪ್ಪಿಸುತ್ತಾ ಬರುತ್ತಿದ್ದಾರೆ.

**ಕರಿಚಾಮುಂಡಿ ಹಬ್ಬ:** ತೇಮಲೆ ಕುಡಿಯರ ಮನೆದೇವರಾದ ಕರಿಚಾಮುಂಡಿ ದೇವಿಯ ದೇವಾಲಯವಿದೆ. ಕರಿಕೆ ಗ್ರಾಮದ ಎಳ್ಳುಕುಚ್ಚಿ ಎಂಬ ಸ್ಥಳದಿಂದ ಸುಮಾರು 7 ಕಿ.ಮೀ. ದೂರದ ಮಂಡೆಸ್ಥಾನ ಕಾಲೋನಿಯ ಹತ್ತಿರದ ಕೆರೆ ಕಾಲೋನಿ, ಕೊಳಂಗೆರೆ ಕಾಲೋನಿ, ಮಂಡೆಸ್ಥಾನ ಮತ್ತು ಕುಂಡತ್ತಿಕಾನ ಕಾಲೋನಿಯವರು ಈಕೆಯನ್ನು ಪೂಜಿಸುತ್ತಾ ಬಂದಿದ್ದಾರೆ. ತೇಮಲೆ ಕುಡಿಯರು ಪ್ರತಿ ವರ್ಷ ಜನವರಿ 13–14(ಮಕರ ಸಂಕ್ರಮಣ) ದಿನದಂದು ವಿಶೇಷ ಪೂಜೆ ಸಲ್ಲಿಸುತ್ತಾರೆ. ತೇಮಲೆ ಕುಡಿಯರ ಚೆರಿಗಂಡನ್(ಪೂಜಾರಿಯು)ಈ ಪೂಜೆಯನ್ನು ನೆರವೇರಿಸುತ್ತಾನೆ.

ಈ ಪೂಜೆಗೆ ತೇಮಲೆ ಕುಡಿಯರ ಗಂಡಸರ ಮೈಮೇಲೆ ದೇವಿ ಆವಾಹನೆಯಾಗುತ್ತಾಳೆ. ಪ್ರತಿ ವರ್ಷದಂದು ಹಬ್ಬನ ದಿನ 13ನೇ ತಾರೀಕಿನ ಹಿಂದಿನ ದಿನವೇ ದೇವಾಲಯವನ್ನು ಶುಚಿಗೊಳಿಸಿ ಕೊಂಡಕ್ಕೆ ಸೌದೆಯನ್ನು ತಯಾರಿಸುತ್ತಾರೆ. ರಾತ್ರಿ ಚೆರಿಗಂಡನ್ ಪೂಜಾರಿಯು ಪೊಟ್ಟ ದೇವರಿಗೆ ಪೂಜೆ ನಡೆಸುತ್ತಾರೆ. ದೇವರು ಬರುವ ನಾಲ್ಕು ಮಂದಿ ಮಿಂದು ಮಡಿಯುಟ್ಟು ಹೊಸಬಟ್ಟೆ ಧರಿಸಿ ಬಂದಿರುತ್ತಾರೆ. ಈ ಹಬ್ಬದಲ್ಲಿ ಪ್ರತಿ ಮನೆಗೆ ಒಬ್ಬರಂತೆ ಉಪವಾಸವಿದ್ದು ಹೊಸಬಟ್ಟೆ ಧರಿಸಿಯೇ ಬರಬೇಕು ಎಂಬುದು ನಿಯಮ. ಅದರಂತೆ ಎಲ್ಲರೂ ನೆರೆದಿರುತ್ತಾರೆ. ಮೈಮೇಲೆ ದೇವರು ಬಂದ ವ್ಯಕ್ತಿ ಕೊಂಡವನ್ನು ತುಳಿಯುತ್ತಾ ನಿಧಾನವಾಗಿ ದೇವರ ಬಳಿ ತೆರಳುತ್ತಾನೆ. ಪೊಟ್ಟ ದೇವರು ಮೈಮೇಲೆ ಬಂದವರು ಬೆಂಕಿಯ ಕೆಂಡವನ್ನು ಕೈಯನ್ನು ಹಿಡಿದು ಅದನ್ನು ತಂದು ಚೆರಿಗಂಡನಿಗೆ ನೀಡುತ್ತಾರೆ. ಅದನ್ನು ಸ್ವೀಕರಿಸಿದ ಪೂಜಾರಿ ಮತ್ತೆ

ಅದನ್ನು ಬೆಂಕಿಗೆ ಹಾಕುತ್ತಾನೆ. ಪೂಜೆ ಮುಗಿಸಿ ಕೆಲವರು ಮನೆಗೆ ತೆರಳುತ್ತಾರೆ. ಕೆಲವರು ರಾತ್ರಿ ಅಲ್ಲಿಯೇ ತಂಗಿ ಬೆಳಗಿನ ಪೂಜೆಯಲ್ಲಿ ಪಾಲ್ಗೊಳ್ಳುತ್ತಾರೆ. ಹರಕೆಯನ್ನು ಕಟ್ಟಿಕೊಂಡವರು ತಮ್ಮ ಶಕ್ತ್ಯಾನುಸಾರ ಕೋಳಿ ಹಂದಿ ತಂದಿರುತ್ತಾರೆ ಅದನ್ನು ಬಲಿ ನೀಡುತ್ತಾರೆ. ದೇವಸ್ಥಾನದಲ್ಲಿ ಸಿದ್ಧಪಡಿಸಿದ ಪ್ರಸಾದವನ್ನು ಸ್ವೀಕರಿಸಿ ತಮ್ಮ ತಮ್ಮ ಮನೆಗೆ ತೆರಳುತ್ತಾರೆ.

**ಆಟಿ ಅಮಾವಾಸೆ:** ಕೊಡಗಿನಲ್ಲಿ ಆಷಾಢ ಮಾಸವನ್ನು 'ಆಟಿ ಮಾಸ' ಎಂದು ಕರೆಯುತ್ತಾರೆ. ಆಷಾಢ ಮಾಸ ಪ್ರಾರಂಭವಾದ 18ನೇ ದಿನ ಆಟಿ ಪೂಜೆ ಮಾಡುತ್ತಾರೆ. ಅಂದು ಆಟಿ ಅಮವಾಸ್ಯೆಯ ದಿನ ಬೆಳಿಗ್ಗೆ ಒಂದು ವಿಶೇಷವಾದ ತೊಗಟೆಯನ್ನು ತಂದು ಅದರ ರಸವನ್ನು ಕುಡಿಯುತ್ತಾರೆ. ಈ ಮರದ ರಸಕ್ಕೆ ವಿಶೇಷವಾದ ಔಷಧೀಯ ಗುಣವಿದ್ದು ಆ ದಿನ ಅದಕ್ಕೆ ಎಲ್ಲ ರೀತಿಯ ಶಕ್ತಿ ಬರುತ್ತದೆ. ಅಂದು ಅದರಲ್ಲಿ ವಿಶಿಷ್ಟ ಔಷಧಿಯ ಗುಣಗಳು ಬಂದು ಸೇರುತ್ತವೆ ಎಂದು ನಂಬುತ್ತಾರೆ. ಮನೆಯಲ್ಲಿರುವ ಪ್ರತಿಯೊಬ್ಬರೂ ಖಾಲಿ ಹೊಟ್ಟೆಯಲ್ಲಿ ಬೆಳಿಗ್ಗೆ ಅದನ್ನು ಸೇವಿಸುತ್ತಾರೆ. ಬರೀ ಹೊಟ್ಟೆಯಲ್ಲಿ ಕುಡಿದರೆ ಮಾತ್ರ ಅದು ದೇಹಕ್ಕೆ ಉಪಯುಕ್ತ ಎಂದು ನಂಬುತ್ತಾರೆ. ಕಲ್ಲುಟ್ಟಿಗೂ ಗುಳಿಗೆ ಭೂತಕ್ಕೆ ನೈವೇದ್ಯವಿಟ್ಟು ರಾತ್ರಿ ಮಾಂಸದಡುಗೆ ಮಾಡಿ ಸೇವಿಸುತ್ತಾರೆ.

**ಕೊಲ್ಲಿಮಲೆ ದೇವರು :** ಕೊಲ್ಲಿಮಲೆ ಎಂಬುದು ಒಂದು ಬೆಟ್ಟದ ಹೆಸರು. ಆ ಬೆಟ್ಟದ ಭಾಗದಲ್ಲಿ ವಾಸಿಸುವ ಕುಡಿಯರನ್ನು ಕೊಲ್ಲಿಮಲೆ ಕುಡಿಯರು ಎನ್ನುತ್ತಾರೆ. ಇಲ್ಲಿನ ಮುಖ್ಯ ಪೂಜಾರಿಗಳು ಕುಡಿಯರೇ ಆಗಿರುತ್ತಾರೆ. ಈ ದೇವರ ಮೂಲಸ್ಥಾನವು ಅರೆಕಲ್ಲು ಅಯ್ಯಪ್ಪ ದೇವರ ಸನ್ನಿಧಾನದಲ್ಲಿದೆ. ಈ ಕುಡಿಯರೆಲ್ಲ ವರ್ಷಂಪ್ರತಿ ನಡೆಯುವ ಅರೆಕಲ್ಲು ಅಯ್ಯಪ್ಪಸ್ವಾಮಿಯ ಉತ್ಸವದಲ್ಲಿ ಭಾಗವಹಿಸಲೇ ಬೇಕಾಗುತ್ತದೆ. ಕೊಲ್ಲಿಮಲೆ ದೇವರ ಪೂಜಾರಿಗೆ ಬಿಳಿಯ ಕುಪ್ಪಚಾಲೆ ತೊಡಿಸಿ ಸಾಂಪ್ರದಾಯಿಕವಾಗಿ ಅಯ್ಯಪ್ಪನ ಮುಂದೆ ನಿಲ್ಲಿಸುತ್ತಾರೆ. ಅಲ್ಲಿ ಪೂಜೆ ಸಲ್ಲಿಸುತ್ತಿದ್ದಂತೆ ಆ ಪೂಜಾರಿಯ ಮೈಮೇಲೆ ಕೊಲ್ಲಿ ಮಲೆದೇವರ ಆವಾಹನೆಯಾಗುತ್ತದೆ ನಂತರ ಅಲ್ಲಿ ನೆರೆದಿರುವ ಪ್ರತಿಯೊಬ್ಬರಿಗೂ ಒಂದೊಂದು ದೇವರುಗಳು ಆವಾಹನೆಯಾಗಿ ಅವರೆಲ್ಲ ಕುಣಿಯಲು ಪ್ರಾರಂಭಿಸುತ್ತಾರೆ. ಇದು ಸುಮಾರು ಮಧ್ಯರಾತ್ರಿಯವರೆಗೆ ಜರುಗುತ್ತದೆ. ಅಂದು ಮಹಿಳೆಯರು ಕೂಡ ಸಾಂಪ್ರದಾಯಿಕ ಸೀರೆ ಉಟ್ಟು ಪೂಜೆಯಲ್ಲಿ ಭಾಗವಹಿಸುತ್ತಾರೆ. ಆದರೆ ಅಯ್ಯಪ್ಪನ ಸನ್ನಿಧಿಯಲ್ಲಿ ಸ್ತ್ರೀಯರಿಗೆ ನಿಷೇಧವಿದೆ. ಸಾವಿರಾರು ಸಂಖ್ಯೆಯಲ್ಲಿ ಅಂದು ಭಕ್ತರು ಭಾಗವಹಿಸುತ್ತಾರೆ. ಈ ಅಯ್ಯಪ್ಪನ ಬಳಿ ತಮ್ಮ ಕಷ್ಟಗಳನ್ನು ಹೇಳಿಕೊಂಡರೆ ಶೀಘ್ರವೇ ಪರಿಹಾರವಾಗುತ್ತದೆ ಎಂದು ನಂಬುತ್ತಾರೆ. ರಾತ್ರಿಯಿಡೀ ವಿವಿಧ ದೇವರ ಉತ್ಸವ ತೆರೆಗಳು ಜರುಗುತ್ತವೆ. ರಾತ್ರಿ ಪ್ರಸಾದವನ್ನು ಸ್ವೀಕರಿಸಿ ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳುತ್ತಾರೆ.

**ದೇವರಕಾಡು ಅಯ್ಯಪ್ಪನಿಗೆ ಪೂಜೆ:** ಪ್ರತಿ ಗ್ರಾಮದವರು ಕಡ್ಡಾಯವಾಗಿ ಬನದೇವತೆಯ ಪೂಜೆಯನ್ನು ಮಾಡುತ್ತಾರೆ. ದೇವಾಲಯದಲ್ಲಿ ಅರೆಕಲ್ಲು ಅಯ್ಯಪ್ಪನಿಗೆ ಪೂಜೆ ಸಲ್ಲಿಸಿದ ನಂತರ ಪೂಜಾರಿಗಳು ಹರಕೆ ಹೊತ್ತವರು ಊರಿನವರೆಲ್ಲ ಮುಖ್ಯಸ್ಥರೆಲ್ಲ ಸೇರಿ ಅರೆಕಲ್ಲು ಅಯ್ಯಪ್ಪನ ಮೂಲಸ್ಥಾನವಾದ ಸಂಪಾಜೆಯ ಬಳಿ ಇರುವ ಅರೆಕಲ್ಲು ಗ್ರಾಮದ ಬಳಿಯಿರುವ ದೇವರ ಬನಕ್ಕೆ ತೆರಳುತ್ತಾರೆ. ಅಲ್ಲಿ ಮೂಲಸ್ಥಾನವನ್ನು ಪೂಜಿಸಿ ಬಲಿ ನೀಡಿ ತಿರುಗಿ ದೇವಾಲಯಕ್ಕೆ ಬಂದು ಮಧ್ಯಾಹ್ನದ ಊಟವನ್ನು ದೇವಸ್ಥಾನದಲ್ಲಿ ಪ್ರಸಾದದ ರೂಪದಲ್ಲಿ ಸೇವಿಸಿ ಹಿಂತಿರುಗುತ್ತಾರೆ. ಅಡಿಕೆ ಹಾಳೆಯಲ್ಲಿ ಪ್ರಸಾದವನ್ನು ಸೇವಿಸುತ್ತಾರೆ.

**ಅರೆಕಲ್ಲು ಅಯ್ಯಪ್ಪಸ್ವಾಮಿ ಪೂಜೆ:** ಸಂಪಾಜೆ ಗ್ರಾಮದ ಅರೆಕಲ್ಲು ಗ್ರಾಮದಲ್ಲಿ ಅಯ್ಯಪ್ಪಸ್ವಾಮಿ, ಮಲೆದೇವರು ಹಾಗೂ ಮಲೆತಮ್ಮಚ್ಚದೇವರ ದೇವಾಲಯಗಳಿವೆ. ಅಕ್ಟೋಬರ್ 17ರ ತುಲಾ ಸಂಕ್ರಮಣದಂದು ಪ್ರತಿ ವರ್ಷ ಎಲ್ಲರೂ ಸೇರಿ ಅಂಗಳವನ್ನು ಸ್ವಚ್ಛಗೊಳಿಸಿ ಪೂಜೆ ನಡೆಸುತ್ತಾರೆ. ಈ ಪ್ರದೇಶವು ಅರಣ್ಯದ ಮಧ್ಯಭಾಗದಲ್ಲಿದ್ದು, ಅಡಿಕೆ ಕುಡಿಯರ ವಾಸಸ್ಥಾನದಲ್ಲಿದೆ. ತೇಮಲೆ ಕುಡಿಯರು, ಪೂಮಲೆ ಕುಡಿಯರು, ಅಡಿಕೆ ಕುಡಿಯರು, ಗೌಡರು, ಕೊಡವರು ಹಾಗೂ ಇತರೆ ಸಮುದಾಯದವರು ಇದರಲ್ಲಿ ಮುಖ್ಯವಾಗಿ ಭಾಗವಹಿಸುತ್ತಾರೆ.

ಗಾಳಿಬೀಡಿನ ಪೂಮಲೆ ಕುಡಿಯರು ಮಾತ್ರ ಇಲ್ಲಿ ಪೂಜೆ ನಡೆಸುತ್ತಾರೆ. ಈ ದೇವಾಲಯದಲ್ಲಿ ಕುಡಿಯರು ಮುಖ್ಯ ತಕ್ಕರು ಹಾಗೂ ಪಾಂಡೀರ ಕುಟುಂಬದವರು ದೇವತಕ್ಕರು, ತಕ್ಕರು ಎಂದರೆ ಮುಖ್ಯಸ್ಥರು ಎಂದರ್ಥ. ಈ ದೇವರ ಭಂಡಾರವು ಗಾಳಿಬೀಡಿನ ಪೂಮಲೆ ಕುಡಿಯರಲ್ಲಿದೆ. ಹಬ್ಬದಂದು ಊರಿನ ಮುಖ್ಯಸ್ಥರು, ತಕ್ಕರು, ಊರವರೆಲ್ಲಾ ಸೇರಿ ಮಿಂದು ಶುಭ್ರರಾಗಿ ಕುಡಿಯರ ಬಳಿಯಿರುವ ಭಂಡಾರವನ್ನು ದೇವಾಲಯಕ್ಕೆ ತೆಗೆದುಕೊಂಡು ಬರುತ್ತಾರೆ. ನವೆಂಬರ್ ಮತ್ತು ಡಿಸೆಂಬರ್ ಸಂಕ್ರಮಣದಂದು ತಪ್ಪಡಕ ಈಶ್ವರ ದೇವಾಲಯದ ಬಾಗಿಲು ತೆರೆಯುತ್ತಾರೆ. ಪ್ರತಿ ವರ್ಷ ಮಾರ್ಚ್ 14ರಂದು ಸಂಕ್ರಮಣದ ಪೂಜೆ ವಿಶೇಷವಾಗಿ ಜರುಗುತ್ತದೆ. ಅಂದು ಜನರು ಮಡಿಯುಟ್ಟು ದೇವಾಲಯವನ್ನು ಪ್ರವೇಶಿಸಬೇಕಾಗುತ್ತದೆ. ಅಡಿಕೆ ಕುಡಿಯರು ಅರಿಶಿನ ಬಣ್ಣದ ಪಂಚೆ ಶಲ್ಯ ಧರಿಸಿರುತ್ತಾರೆ. ದೇವತಾಕಾರ್ಯ ನಡೆಸುವ ಕುಡಿಯರು ಮೇಲಂಗಿಯನ್ನು ಧರಿಸುವಂತಿಲ್ಲ ಮತ್ತು ಇವರೇ ಅಯ್ಯಪ್ಪ ದೇವರ ಪೂಜಾರಿಗಳು ಉಳಿದ ದೇವರುಗಳಿಗೆ ಗೌಡರು, ಕೊಡವರು ಪೂಜಾರಿಗಳಾಗಿರುತ್ತಾರೆ. ಹಿಂದೆ ಹೇಳಿದಂತೆ ಕೊಲ್ಲಿಮಲೆ ಕುಡಿಯರು ಕುಪ್ಪಚಾಲೆ ಧರಿಸಿ ಬರುತ್ತಾರೆ ಮೊದಲ ಪೂಜೆ ಅಯ್ಯಪ್ಪನಿಗೆ ಕುಡಿಯರಿಂದ ನೆರವೇರುತ್ತದೆ. ಆ ಸಮಯದಲ್ಲಿ ಪೂಜಾರಿಗೆ ದೇವರು ಮೈಮೇಲೆ ಬರುತ್ತಾನೆ. ಅನಂತರ ಉಳಿದ ಪೂಜಾರಿಗಳ

ಮೈಮೇಲೆ ದೇವರ ಆವಾಹನೆಯಾಗುತ್ತದೆ. 10-15 ಜನರ ಮೈಮೇಲೆ ಒಮ್ಮೆಲೆ ದೇವರು ಬಂದು ಸಾಮೂಹಿಕವಾಗಿ ನರ್ತಿಸಲು ಪ್ರಾರಂಭಿಸುತ್ತಾರೆ.

**ತಪ್ಪಡಕ:** ತಪ್ಪು ದಂಡ ಕಟ್ಟುವುದನ್ನು ತಪ್ಪಡಕ ಎನ್ನುತ್ತಾರೆ. ಹರಕೆ ಸಲ್ಲಿಸುವ ಸಮಯದಲ್ಲಿ, ಯಾರಿಗಾದರೂ ಕಾಯಿಲೆ ಬಂದಾಗ ಇಲ್ಲವೇ ಒಳ್ಳೆಯ ಕೆಲಸಕ್ಕೆ ಹೊರಡುವಾಗ ತಪ್ಪಡಕವನ್ನು ದೇವರಿಗೆ ಕಟ್ಟುತ್ತಾರೆ. ಇದನ್ನು "ದೊಡ್ಡಮನೆ" ದೇವರ ನೆಲೆಯಲ್ಲಿ ಕಟ್ಟುತ್ತಾರೆ. ತಪ್ಪಡಕ– ತಪ್ಪನ್ನು ಸರಿಮಾಡುವುದು ಎಂದರ್ಥ. ಯಾವುದೇ ಮುಖ್ಯ ಕೆಲಸಕ್ಕೆ ತೊಡಗುವ ಮೊದಲು ಮುಂದೆ ನಮ್ಮಿಂದ ಯಾವುದೇ ಅಪಚಾರ ಎಸಗಿದರೆ ಅದನ್ನು ಕ್ಷಮಿಸು ಎಂಬಂತೆ ಕಾರ್ಯದ ಆರಂಭದಲ್ಲಿಯೇ ತಪ್ಪಿಗೆ ಕಾಣಿಕೆ ಕಟ್ಟುವುದು ಇದರ ಉದ್ದೇಶ. ಇದೊಂದು ವಿಶಿಷ್ಟವಾದ ಆಚರಣೆಯಾಗಿದ್ದು ತಮ್ಮ ದೇವರುಗಳ ಮೇಲಿರುವ ಅಪಾರ ಭಯ, ಭಕ್ತಿಯನ್ನು ಪ್ರದರ್ಶಿಸುತ್ತದೆ.

**ಹಿರಿಯರ ಆತ್ಮಗಳ ಪೂಜೆ:** ಬುಡಕಟ್ಟು ಸಮುದಾಯಗಳು ದೇವರಿಗಿಂತಲೂ ಅಪಾರವಾದ ನಂಬಿಕೆಯನ್ನು ನಿಷ್ಠೆಯನ್ನು ತಮ್ಮ ಹಿರಿಯರ ಆತ್ಮಗಳ ಮೇಲೆ ಹೊಂದಿವೆ. ದೇವರು ನಮ್ಮ ಕೈ ಬಿಟ್ಟರೂ ನಮ್ಮ ಹಿರಿಯರ ಆತ್ಮಗಳು ನಮ್ಮನ್ನು ಕೈಬಿಡುವುದಿಲ್ಲ. ಅವು ಸದಾ ನಮ್ಮ ಜೊತೆಯಲ್ಲಿದ್ದು ನಮ್ಮನ್ನು ಕಾಪಾಡುತ್ತಿರುತ್ತವೆ ಎಂದು ನಂಬುತ್ತಾರೆ. ಆದರೆ ಕಾಲಕಾಲಕ್ಕೆ ನಾವು ಅವರಿಗೆ ಬಲಿ ನೀಡಿ ಎಡೆಯಿಟ್ಟು ತೃಪ್ತಿಪಡಿಸಬೇಕು, ಇಲ್ಲವಾದರೇ ಅವರೇ ನಮಗೆ ತೊಂದರೆ ಕೊಡುತ್ತಾರೆ ಎಂಬುದು ಅವರ ನಂಬಿಕೆ. ಒಂದು ನಿಶ್ಚಿತ ದಿನದಂದು ತಮ್ಮ ಹಿರಿಯರನ್ನು ಒರಟೊರಟಾಗಿ ಬಿಡಿಸಿದ ಚಿತ್ರವನ್ನು ಹಾಗೂ ಅವರು ಉಪಯೋಗಿಸುತ್ತಿದ್ದ ಕತ್ತಿ ಮೊದಲಾದ ವಸ್ತುಗಳನ್ನು ತೋಟದ ಬಳಿ ಯಾವುದಾದರೂ ಮರದ ಬುಡದಲ್ಲಿಟ್ಟು ಪೂಜಿಸುತ್ತಾರೆ. ಪೂಜೆಯಂದು ಕೋಳಿಯನ್ನು ಬಲಿ ನೀಡುತ್ತಾರೆ. ಅನ್ನ ಕೋಳಿಸಾರು ಸೇಂದಿಯನ್ನು ಮರದ ಬುಡದಲ್ಲಿ ಇಟ್ಟು ಹಿರಿಯರ ಆತ್ಮಗಳನ್ನು ನೈವೇದ್ಯ ಸ್ವೀಕರಿಸುವಂತೆ ಕರೆಯುತ್ತಾರೆ. ನಂತರ ತಾವು ಪ್ರಸಾದವನ್ನು ಸ್ವೀಕರಿಸುತ್ತಾರೆ. ಗಂಡು ಆತ್ಮಗಳಿಗಿಂತಲೂ ಹೆಣ್ಣು ಆತ್ಮಗಳ ಬಗ್ಗೆ ವಿಶೇಷ ಭಯ ಭಕ್ತಿ ಹೊಂದಿರುತ್ತಾರೆ. ಪ್ರತಿ ವರ್ಷ ಕೈಮಡದಲ್ಲಿ ಕೋಳಿಯನ್ನು ಬಲಿ ನೀಡುತ್ತಾರೆ.

**ಪೂಜಾರಿ:** ಕುಡಿಯರಲ್ಲಿ ಒಬ್ಬನೇ ವ್ಯಕ್ತಿ ಎಲ್ಲ ದೇವರಿಗೂ ಪೂಜಾರಿಯಾಗಲು ಸಾಧ್ಯವಿಲ್ಲ. ಒಂದೊಂದು ದೇವರಿಗೂ ಒಬ್ಬೊಬ್ಬ ಪ್ರತ್ಯೇಕ ಪೂಜಾರಿ ನಿಗದಿಯಾಗಿರುತ್ತಾರೆ. ನಿರ್ದಿಷ್ಟ ದೇವರ ಹಬ್ಬದಲ್ಲಿ ಆ ದೇವರಿಗೆ ಮೀಸಲಿಟ್ಟ ವ್ಯಕ್ತಿ ಪೂಜೆಯನ್ನು ಮಾಡಬೇಕಾಗುತ್ತದೆ. ಪೂಜೆಯನ್ನು ನಿಗದಿಪಡಿಸಿದ ಒಂದು ವಾರ ಮೊದಲಿನಿಂದ ಪೂಜಾರಿಯು ನೇಮನಿಷ್ಠನಾಗಿರಬೇಕು ಮಾಂಸ, ಮೈಥುನ, ಬೇಟೆ, ಮರಗಿಡ ಕಡಿಯುವುದು, ಮೊದಲಾದವುಗಳು ಈತನಿಗೆ ನಿಷಿದ್ಧ. ಈತ ಹಬ್ಬ ನಡೆಯುವವರೆಗೂ ಮನೆಯಿಂದ ಹೊರಗೆ ಪ್ರತ್ಯೇಕವಾಗಿ ವಾಸವಿರಬೇಕು. ತನ್ನ

ಊಟ ಉಪಾಹಾರ ತಾನೇ ತಯಾರಿಸಬೇಕು. ಪೂಜಾರಿಯ ಮನೆಯವರು ಕೂಡ ಬಹಳ ನೇಮನಿಷ್ಠೆಯಿಂದಿರಬೇಕು. ಹಬ್ಬದಂದು ದೇವರ ಕೋಣೆಯನ್ನು ಸ್ವಚ್ಛಗೊಳಿಸುವುದು, ದೇವರ ವಸ್ತುಗಳನ್ನು ಶುಚಿಗೊಳಿಸಿ ಪೂಜೆಗೆ ತಯಾರಿ ಮಾಡುವುದು, ನೈವೇದ್ಯ ತಯಾರಿಸುವುದು ಈತನ ಜವಾಬ್ದಾರಿ. ಪೂಜಾರಿ ಹಬ್ಬದಂದು ಸ್ನಾನ ಮಾಡಿ ಮಡಿಯುಟ್ಟು ಬಿಳಿ ಅಥವಾ ಕೆಂಪು ಬಣ್ಣದ ಅಂಗಿ ಹಾಗೂ ಶಲ್ಯ ಧರಿಸಿರಬೇಕು. ಈತ ಮೇಲಂಗಿ ಧರಿಸುವಂತಿಲ್ಲ. ದೇವರಕೋಣೆಯಲ್ಲಿ ಮೂರು ಕಾಲು(ಮುಕ್ಕಾಲು) ಮರದ ಕುರ್ಚಿಯ ಮೇಲೆ ತಾಮ್ರದ ತಟ್ಟೆಯಲ್ಲಿ ಅಕ್ಕಿ ಹಾಕಿ ಅದರ ಮೇಲೆ ಮಣ್ಣಿನ ದೀಪ ಇಟ್ಟು ಪೂಜಿಸಿ ದೇವರ ಮುಂದೆ ಕಡಿದ ಹಣ್ಣಿನ ಬಾಳೆಗೊನೆ ಇಡುತ್ತಾನೆ. ಮೊದಲು ತಾನು ದೇವರಿಗೆ ಪೂಜಿಸುತ್ತಾನೆ. ಹಿರಿಯರು ಮನೆದೇವರಿಗೆ ಪೂಜೆ ಸಲ್ಲಿಸುತ್ತಾರೆ. ಆ ಸಮಯದಲ್ಲಿ ಅಲ್ಲಿ ನೆರೆದಿರುವ ಯಾರ ಮೇಲಾದರೂ ದೇವರ ಆವಾಹನೆಯಾಗುತ್ತದೆ. ದೇವರ ಬಳಿ ತಮ್ಮ ಕಷ್ಟ ನೋವುಗಳಿಗೆ ಪರಿಹಾರವನ್ನು ಕೇಳಿಕೊಳ್ಳುತ್ತಾರೆ.

**ಕೈಲ್ ಮುಹೂರ್ತ:** 'ಕೈಲ್' ಎಂದರೆ ಆಯುಧ, ಮುಹೂರ್ತ ಎಂದರೆ ಸಮಯ. ಅಂದರೆ ಆಯುಧಗಳನ್ನು ಪೂಜಿಸುವ ಸಮಯ ಎಂದು ಅರ್ಥೈಸಬಹುದು. ಕುಡಿಯರು ಮಳೆಗಾಲದಲ್ಲಿ ಕೃಷಿ ಕಾಯಕದಲ್ಲಿ ನಿರತರಾಗಿದ್ದಾಗ ಬೇಟೆಗೆ ವಿರಾಮ ನೀಡಲಾಗಿರುತ್ತದೆ. ಅಂತಹ ಸಮಯದಲ್ಲಿ ತಮ್ಮ ಬೇಟೆಗೆ, ಇನ್ನಿತರ ಚಟುವಟಿಕೆಗಳಿಗೆ ಸಂಬಂಧಿಸಿದ ಆಯುಧಗಳನ್ನು ಕನ್ನಿಕೊಂಬರೆಯಲ್ಲಿ ತೆಗೆದಿಡುತ್ತಾರೆ. ಅನಂತರ ಗದ್ದೆಯ ಕೆಲಸ ಮುಗಿದ ಮೇಲೆ ಆ ಆಯುಧಗಳನ್ನು ಇಳಿಸಿ ತೊಳೆದು ಒರೆಸಿ ಶುಭ್ರಗೊಳಿಸುತ್ತಾರೆ. ಅವುಗಳನ್ನು ಕನ್ನಿಕೊಂಬರೆ ಅಥವಾ ನೆಲ್ಲಕ್ಕಿ ನಡುಬಾಡೆಯಲ್ಲಿಟ್ಟು ಹೂವುಗಳಿಂದ ಅಲಂಕರಿಸಿ ಧೂಪ ಹಾಕಿ ದೀಪ ಹಚ್ಚುತ್ತಾರೆ. ನಂತರ ಅವುಗಳನ್ನು ಬಳಸಲು ಪ್ರಾರಂಭಿಸುತ್ತಾರೆ. ಅದಕ್ಕಾಗಿ ಈ ಹಬ್ಬವನ್ನು ಆಚರಿಸುತ್ತಾರೆ.

**ನಾಳಂಬು:** ಕೈಲ್ ಮುಹೂರ್ತದ ದಿನ ಬೆಳಿಗ್ಗೆ ಜ್ಯೋತಿಷಿಗಳು ನಿಶ್ಚಯಿಸಿದ ವ್ಯಕ್ತಿಯು ನಿಶ್ಚಿತ ಸಮಯದಲ್ಲಿ ನಿಶ್ಚಿತ ಗಿಡವೊಂದರಿಂದ ಬೆರಳು ಗಾತ್ರದ ಗೇಣುದ್ದದ ಮೂರು ಕಡ್ಡಿಗಳನ್ನು ತಂದು ಒಂದು ಕಡ್ಡಿಯ ಒಂದು ಕಡೆ ಚೂಪಾಗಿ ಬಾಣದಂತೆ ಸವರುತ್ತಾರೆ. ಅದರ ಇನ್ನೊಂದು ತುದಿಗೆ ನೇರಳೆ ಎಲೆಗಳನ್ನು ಗರಿಯಂತೆ ಕಟ್ಟುತ್ತಾರೆ. ಇದು ಬಾಣದಂತಿರುತ್ತದೆ. ಸೂರ್ಯೋದಯಕ್ಕೆ ಮೊದಲು ಅದನ್ನು ಯಾವುದಾದರೂ ಹಾಲು ಒಸರುವ ಮರಕ್ಕೆ ಚುಚ್ಚಿ ಬರುತ್ತಾರೆ. ಕೈಲ್ ಮುಹೂರ್ತದ ಹಿಂದಿನ ದಿನ ಕೋವಿ, ಕತ್ತಿ, ಕೊಡಲಿ, ಗುದ್ದಲಿ, ಮೊದಲಾದ ಬೇಟೆಗೆ ಹಾಗೂ ವ್ಯವಸಾಯಕ್ಕೆ ಸಂಬಂಧಿಸಿದ ಆಯುಧ ಪರಿಕರಗಳನ್ನು ತೆಗೆದು ಶುಭ್ರಗೊಳಿಸಿ ಹೂವು, ಕುಂಕುಮ ಹಚ್ಚಿ ಧೂಪ, ಊದುಬತ್ತಿಗಳಲ್ಲಿ ಪೂಜಿಸುತ್ತಾರೆ. ಕೈಲ್ ಮುಹೂರ್ತದಂದು ಹಂದಿಯನ್ನು

ಕಡಿದು ಊರವರು ಮತ್ತು ಮನೆಯವರು ಪಾಲು ಮಾಡಿಕೊಂಡು ಹಬ್ಬದಡಿಗೆ ಮಾಡಿ ಉಂಡು ನೆಂಟರಿಷ್ಟರೊಂದಿಗೆ ಸಂಭ್ರಮಿಸುತ್ತಾರೆ. ಅಂದು ಕುಡಿತ, ಕುಣಿತಗಳೂ ಇರುತ್ತವೆ. ಇದನ್ನು ನಾಳಂಬು ಎಂದು ಕರೆಯುತ್ತಾರೆ.

**ಪಾಷಾಣಮೂರ್ತಿ:** ಮಲೆಕುಡಿಯರು ಬಹಳ ಭಯ ಭಕ್ತಿಯಿಂದ ಪೂಜಿಸುವ ಮತ್ತೊಂದು ದೇವರು ಪಾಷಾಣಮೂರ್ತಿ. ಇದು ಬಹಳ ಉಗ್ರವಾದ ದೇವತೆ ಎಂದು ಬಹಳ ನೇಮ ನಿಷ್ಠೆಯಿಂದ ಪೂಜಿಸುತ್ತಾರೆ. ಕುಡಿಯರು ತಮ್ಮ ಎಲ್ಲ ಶುಭ ಅಶುಭ ಕಾರ್ಯಗಳಲ್ಲಿ ಈ ದೇವತೆಗೆ ಎಡೆ(ಮೀದಿ) ಇಡುತ್ತಾರೆ. ಈ ದೇವರು ಕೆಲವೇ ಮುಖ್ಯ ಹಬ್ಬಗಳಲ್ಲಿ ನಿರ್ದಿಷ್ಟ ವ್ಯಕ್ತಿಯ ಮೈಮೇಲೆ ಬರುತ್ತದೆ. ಆಗ ಭಕ್ತರು ತಮ್ಮ ಕಷ್ಟ ಸುಖಗಳನ್ನು ನಿವೇದಿಸಿಕೊಂಡು ಅಭಯವನ್ನು ಪಡೆಯುತ್ತಾರೆ. ಪಾಷಾಣಮೂರ್ತಿ ಮೈಮೇಲೆ ಬಂದ ವ್ಯಕ್ತಿಯು ಈ ಸಂದರ್ಭದಲ್ಲಿ ಮಳೆಯಾಳಂ ಭಾಷೆಯಲ್ಲಿ ಮಾತನಾಡಲು ಪ್ರಾರಂಭಿಸುತ್ತಾನೆ. ಈ ದೇವರಿಗೆ ಸಂಬಂಧಿಸಿದಂತೆ ಒಂದು ಕತೆ ಪ್ರಚಲಿತದಲ್ಲಿದೆ. 'ಹಿಂದೆ ಆರು ಜನ ಅಣ್ಣಂದಿರಿಗೆ ಒಬ್ಬಳು ಸುಂದರವಾದ ತಂಗಿಯಿದ್ದಳಂತೆ. ಅವಳನ್ನು ಕಂಡು ಮೋಹಿಸಿದ ಕುಡಿಯರ ಮೂಲಪುರುಷ - ಅವಳನ್ನು ಮದುವೆಯಾಗುವ ಇಚ್ಛೆಯನ್ನು ಅವಳ ಅಣ್ಣಂದಿರಲ್ಲಿ ವ್ಯಕ್ತಪಡಿಸಿದಾಗ ಅವರು ಅವನಿಗೆ ತಮ್ಮ ತಂಗಿಯನ್ನು ಮದುವೆ ಮಾಡಲು ಒಪ್ಪುವುದಿಲ್ಲ. ಆಗ ಆತ ಆ ಆರು ಜನ ಅಣ್ಣಂದಿರನ್ನು ಕೊಂದು ಆಕೆಯನ್ನು ಅಪಹರಿಸಿಕೊಂಡು ಹೋಗಿ ಮದುವೆಯಾಗುತ್ತಾನೆ. ಆದ್ದರಿಂದ ಹಾಗೆ ಕರೆದುಕೊಂಡು ಬಂದ ಮಲಯಾಳದ ಹುಡುಗಿಯೇ ಈ ಪಾಷಾಣಾಮೂರ್ತಿ ದೇವಿಯಾಗಿರ ಬಹುದು' ಎಂದು ಕುಡಿಯರು ನಂಬುತ್ತಾರೆ. ಈಗಲೂ ಕುಡಿಯರು ಮದುವೆಯ ಸಂದರ್ಭದಲ್ಲಿ ಬಾಳೆ ಕಂಬವನ್ನು ಸಾಲಾಗಿ ನಿಲ್ಲಿಸಿ ಕಡಿಯುತ್ತಾರೆ. ಇದು ಏಳು ಜನ ಅಣ್ಣಂದಿರನ್ನು ಕೊಂದ ಸಾಂಕೇತವಾಗಿರಬಹುದು. ಕುಡಿಯರು ತಮ್ಮ ಪ್ರತಿ ಆಚರಣೆಗಳಲ್ಲಿ ಕೊಡವರನ್ನು ಅನುಸರಿಸುವುದನ್ನು ನಾವು ಗಮನಿಸಬಹುದು. ಅಂತೆಯೇ ಕೊಡವರು ತಮ್ಮ ಕ್ಷತ್ರಿಯ ಧರ್ಮದ ಆಚರಣೆಯಂತೆ ಮದುವೆಯಲ್ಲಿ ಬಾಳೆ ಕಂಬವನ್ನು ಕತ್ತರಿಸುವ ಆಚರಣೆಯನ್ನು ಕುಡಿಯರೂ ಕೂಡ ಅನುಸರಿಸುತ್ತಿರಬಹುದು ಎಂದು ಊಹಿಸಬಹುದು. ಒಟ್ಟಿನಲ್ಲಿ ಇಡೀ ಕೊಡಗಿನಲ್ಲಿ ಹೆಚ್ಚಿನ ಸಮುದಾಯವರು ಈ ದೇವಿಯನ್ನು ಬಹಳ ಭಯ, ಭಕ್ತಿಯಿಂದ ಆಚರಿಸುತ್ತಾರೆ.

**ಇಗ್ಗುತಪ್ಪನ ಕಥೆ:** ಇಗ್ಗುತಪ್ಪನನ್ನು ಮಳೆ ದೇವರು, ಕೃಷಿ ದೇವರು ಎಂದೆಲ್ಲಾ ಕರೆಯುತ್ತಾರೆ. ಇಗ್ಗುತಪ್ಪನಿಗೆ ಸಂಬಂಧಿಸಿದ ಒಂದು ಪೌರಾಣಿಕ ಕತೆಯು ನಡಿಕೇರಿಯಂಡ ಚಿಣ್ಣಪ್ಪನವರ ಪಟ್ಟೋಲೆ ಪಳಮೆಯಲ್ಲಿ ದೊರೆಯುತ್ತದೆ. ಪಟ್ಟೋಲೆ ಪಳಮೆಯಲ್ಲಿ 'ಎವ್ವ ಮಕ್ಕಡ ದೇಬುವಡ

ಪಾಟ್' ಎಂಬ ಹಾಡಿನಲ್ಲಿ ಈ ಕತೆಯ ರೂಪ ಹೀಗಿದೆ. 'ಕೇರಳದಲ್ಲಿ ದೇವರ ಮಾಯೆಯಿಂದ ಸುವರ್ಣ ಶಂಖವೊಂದರಿಂದ ಆರು ಮಂದಿ ಗಂಡುಮಕ್ಕಳಾದ ಕಾಂಞರಾಟಪ್ಪ, ತಿರಚಂಬರಪ್ಪ, ಬೇಂದ್ರುಕೋಲ, ಇಗ್ಗುತಪ್ಪ, ಪಾಲೂರಪ್ಪ, ತಿರುನೆಲ್ಲಿ ಪೆಮ್ಮಯ್ಯ ಮತ್ತು ತಂಗಿ ತಂಗಮ್ಮ (ಪನ್ನಂಗಾಲ ತಮ್ಮೆ) ಜನಿಸುತ್ತಾರೆ. ಇವರೆಲ್ಲರೂ ಕಣ್ಣಾನೂರಿನ ಸಮೀಪಕ್ಕೆ ಬಂದು ತಮಗೆ ಅನುಕೂಲವೆನಿಸಿದ ಕ್ಷೇತ್ರಗಳಲ್ಲಿ ನೆಲೆ ನಿಲ್ಲುತ್ತಾರೆ. ಆದರೆ ಇಗ್ಗುತಪ್ಪ, ಪಾಲೂರಪ್ಪ, ತಿರುನೆಲ್ಲಿ ಪೆಮ್ಮಯ್ಯ ಮಾತ್ರ ಕೇರಳದಲ್ಲಿ ಸರಿಯಾದ ನೆಲೆ ಕಾಣದೆ ಕೊಡಗಿಗೆ ಬಂದು ಬಾಣವನ್ನು ಬಿಡುತ್ತಾರೆ. ಆ ಬಾಣ ನಾಟಿದ ಜಾಗದಲ್ಲಿ ತಮ್ಮ ನೆಲೆಯನ್ನು ಸ್ಥಾಪಿಸುತ್ತಾರೆ. ಹಾಗೆಯೇ ಒಬ್ಬೊಬ್ಬರು ಒಂದೊಂದು ಕಡೆ ನೆಲೆಸಿದರು ಎನ್ನಲಾಗುತ್ತದೆ. ಪಾಲೂರಿನಲ್ಲಿ ಪಾಲೂರಪ್ಪನೆಂದೂ ತಿರುನೆಲ್ಲಿಯಲ್ಲಿ ತಿರುನೆಲ್ಲಿ ಪೆಮ್ಮಯ್ಯ ಎಂಬ ಹೆಸರಿನಲ್ಲಿ ಅಲ್ಲಿಯೇ ನೆಲೆಸಿದರು. ತಂಗಿಯ ಬಾಣವು ಯವಕಪಾಡಿಯ ಪನ್ನಂಗಾಲ ಎಂಬ ಸ್ಥಳದಲ್ಲಿ ಬಿದ್ದ ಕಾರಣ ಅವಳು ಅಲ್ಲಿ ಪನ್ನಂಗಾಲ ತಮ್ಮೆ ಎಂಬ ಹೆಸರಿನಲ್ಲಿ ನೆಲೆ ನಿಂತಳು' ಎಂಬುದು ಪೌರಾಣಿಕ ಹಿನ್ನೆಲೆಯ ಕತೆಯಾಗಿದೆ.'[24] ಈ ಕತೆಯಲ್ಲಿ ಆ ದೇವರುಗಳ ಜನನ, ಅವತಾರ, ಪ್ರಯಾಣ ಪವಾಡ ನೆಲೆಸಿದ ಸ್ಥಳಗಳ ವಿವರವಿದೆ. ಕುಳಿಯ ಎಂಬುದು ಶಕ್ತಿದೇವತೆ ಗುಳಿಗ ಅಥವಾ ಕುಳಿಯ ಎಂದೂ ಕೂಡ ಈ ದೈವವನ್ನು ಕರೆಯುತ್ತಾರೆ. ಈ ದೇವರನ್ನು ಕಲ್ಲಿನ ರೂಪದಲ್ಲಿ ಆರಾಧಿಸುತ್ತಾರೆ. ಶನಿದೇವರ ಮಗ ಎಂದು ಈ ದೇವರನ್ನು ಕರೆಯುತ್ತಾರೆ. ಕುಳಿಯ ಗೋವುಗಳ ರಕ್ಷಕನಾಗಿದ್ದು ಪ್ರತಿ ವರ್ಷ ನಿರ್ದಿಷ್ಟ ತಿಂಗಳ ಮಂಗಳವಾರ ಅಥವಾ ಶುಕ್ರವಾರದಂದು ಕುಳಿಯನಿಗೆ ಪೂಜೆ ಸಲ್ಲಿಸಿ ಕೋಳಿ ಬಲಿ ನೀಡುತ್ತಾರೆ. 'ಪಾಲೆ' ಎಂಬ ಜನಾಂಗ ಈ ಸಮಯದಲ್ಲಿ ಕೋಲವನ್ನು ಕಟ್ಟುತ್ತಾರೆ. ಗುಳಿಗನಿಗೆ ಸಾವು ನೋವು ನೀಡುವ ಶಕ್ತಿ ಇರುವುದರಿಂದ ಭಯ ಭಕ್ತಿಯಿಂದ ಈ ದೇವರನ್ನು ಪೂಜಿಸುತ್ತಾರೆ.

**ಮಲೆಬೀರ:** ಕೊಡವರಲ್ಲಿ ಬೇಟೆಯಲ್ಲಿ ಪ್ರಾಣಿಗಳೊಂದಿಗೆ ಕಾದಾಡಿ ಅಥವಾ ಶತ್ರುಗಳ ವಿರುದ್ಧ ಹೋರಾಡಿ ವೀರಮರಣ ಹೊಂದಿದವರನ್ನು ಕುಡಿಬೀರ ಎಂದು ಕರೆಯುತ್ತಾರೆ. ಇವರನ್ನು ಕಲ್ಲಿನ ಮೂರ್ತಿ ರೂಪದಲ್ಲಿ ಆರಾಧಿಸುತ್ತಾರೆ. ಅದರಂತೆ ಕುಡಿಯರಲ್ಲಿ ಈ ರೀತಿ ಹೋರಾಟ ಪ್ರಾಣತೆತ್ತ ಧೀರ ವ್ಯಕ್ತಿಯನ್ನು ಮಲೆಬೀರ ಎಂದು ಕರೆದಿರಬಹುದು. ಬೇಟೆಗೆ ಹೋಗುವ ಮೊದಲು ಮತ್ತು ಬೇಟೆಯಿಂದ ಹಿಂತಿರುಗಿದಾಗ ಈ ದೈವಕ್ಕೆ ಪೂಜೆ ಸಲ್ಲಿಸುತ್ತಾರೆ. ಇದರಿಂದ ಬೇಟೆಯ ಸಮಯದಲ್ಲಿ ನಮಗೆ ರಕ್ಷಣೆ ದೊರೆಯುತ್ತದೆ ಎಂಬುದು ಇವರ ನಂಬಿಕೆ.

ಬುಡಕಟ್ಟುಗಳು ಪ್ರಕೃತಿ ಪೂಜಕರು. ಮಾನವನ ಅಳತೆಗೂ ಮೀರಿದ, ಆಲೋಚನೆಗೂ ವಿಸ್ತಾರವಾದ, ಅಂದಾಜಿಸಲೂ ಸಾಧ್ಯವಾಗದ ಪ್ರಕೃತಿಯ ನಿಗೂಢ ಶಕ್ತಿಯನ್ನು ದೈವಗಳಾಗಿ

ಪರಿಗಣಿಸಿ ಮೂರ್ತ ಮತ್ತು ಅಮೂರ್ತ ರೂಪಗಳೆರಡರಲ್ಲೂ ಪೂಜಿಸುತ್ತಾ ಬಂದವರು. ಪ್ರಕೃತಿಯ ಭಾಗವಾದ ಕಲ್ಲು, ಮರ, ನದಿ, ಮಳೆ ಮೊದಲಾದವುಗಳನ್ನು ಭಕ್ತಿಯಿಂದ ಆರಾಧಿಸಿದವರು. ಹಾಗೆಯೇ ಪ್ರಾಣಿ ಪಕ್ಷಿಗಳನ್ನು ದೈವತ್ವಕ್ಕೆ ಏರಿಸಿದವರು, ಜೇನುಕುರುಬರಾದರೆ ಬುಂಡೆ ಕರೆಯುವ ಮೂಲಕ, ಬೆಟ್ಟಕುರುಬರಾದರೆ ಬಿಂಜೆ ಕರೆಯುವುದರ ಮೂಲಕ ತಾವು ಇದ್ದಲ್ಲೇ ದೇವರನ್ನು ಕರೆಯಿಸಿಕೊಳ್ಳುತ್ತಾರೆ. ಈ ದೇವರುಗಳು ತಮ್ಮ ನಂತರ ಹುಟ್ಟಿದವರು ತಮ್ಮ ಅಜ್ಜಯ್ಯನಿಂದ ಈ ದೈವಗಳು ಸೃಷ್ಟಿಯಾದವರು ಎಂಬುದು ಅವರ ನಂಬಿಕೆ. ಬೆಟ್ಟಕುರುಬರ ಬಿಂಜೆ ಪದ್ಯದಲ್ಲಿ ಹೇಳುವ ಪ್ರಕಾರ ಅಜ್ಜಯ್ಯ ಮೊದಲು ಹುಟ್ಟಿದ್ದು ಅನಂತರ ಅವನು ದೇವರನ್ನು ಸೃಷ್ಟಿ ಮಾಡುತ್ತಾನೆ. ನೂರಾಳಪ್ಪನೆಂಬ ದೇವರ ಜೊತೆಯಲ್ಲಿ ಕೇರಳದಿಂದ ಬಂದವರು ನಮ್ಮ ಅಜ್ಜಯ್ಯ. ಈ ದೇವರ ಜೊತೆಗೆ ನಮ್ಮ ಪೂರ್ವಿಕರು ಹುಟ್ಟಿದವರು ಎನ್ನುತ್ತಾರೆ.

ಪಂಜರಿ ಎರವರು ತಮ್ಮ ಕುಲಗಳನ್ನು ಮಂಜು ಎಂದು ಕರೆಯುತ್ತಾರೆ. ಇವರಲ್ಲಿ ಮುಖ್ಯವಾಗಿ ಮೂರು ಮಂಜುಗಳಿವೆ ಮತ್ತು ಮೂರು ಮಂಜುಗಳಿಗೂ ಒಬ್ಬೊಬ್ಬ ದೇವರಿದ್ದಾರೆ. ಇವರನ್ನು ಕುಲದೇವತೆಗಳು ಎಂದು ಕರೆಯಬಹುದು. ಅವುಗಳೆಂದರೆ:

1. ಪಾಕತ್ತಯ್ಯ
2. ಪೂಕರಿಮಗೆ ಕರಿಯಪ್ಪೆ
3. ಕರಿಚಾತೆ ಮಾರಿಯಮ್ಮ ಈ ಎಲ್ಲಾ ದೈವಗಳ ಹುಟ್ಟು ಮತ್ತು ಬೆಳವಣಿಗೆಯನ್ನು ಕುರಿತು ಚರ್ಚಿಸಲಾಗಿದೆ.

**ಜೇನುಕುರುಬರು:** ಜೇನುಕುರುಬರು ಮುಖ್ಯವಾಗಿ ನಾಗರಹೊಳೆಯ ಮಾಸ್ತಮ್ಮ, ಕಟ್ಟೆಮನೆ ಅಜ್ಜಯ್ಯ, ಹಂದಿಗೆರೆ ಚೌಡಮ್ಮ, ಹಂದಿಗೆರೆ ಅಜ್ಜಯ್ಯ, ಅಮ್ಮಾಳೆ ಅಮ್ಮ ಮೊದಲಾದ ದೇವರನ್ನು ಪುಜಿಸುತ್ತಾರೆ. ಈ ಬುಡಕಟ್ಟುಗಳು ಮರಗಳನ್ನು, ಪ್ರಾಣಿಗಳನ್ನು ತಮ್ಮ ಕುಲದೇವತೆಗಳನ್ನಾಗಿ ಪೂಜಿಸುತ್ತಾರೆ. ಉದಾ: ಆಲದ ಮರ, ಅರಳೀಮರ, ಬೇವಿನ ಮರ, ಬನ್ನಿಮರ, ಬಿಲ್ವ ಪತ್ರೆ, ತಾರೆಮರ ಅಂಕೋಲೆ, ಸಂಪಿಗೆ, ಅಶೋಕ, ದನ್ವಂತರಿ ಮರಗಳನ್ನು ಈ ಮರಗಳನ್ನು ತಮ್ಮದೆ ಆದ ಹೆಸರಿನಿಂದ ಕರೆಯುತ್ತಾರೆ. ಮತ್ತು ನಿರ್ದಿಷ್ಟ ಕುಲದವರು ತಮ್ಮ ಕುಲದೇವರಾದ ಪ್ರಾಣಿಗಳನ್ನು ಕೊಲ್ಲುವುದಿಲ್ಲ, ಮರಗಳನ್ನು ಕಡಿಯುವುದಿಲ್ಲ. ಆ ಮರ ಹತ್ತುವುದಿಲ್ಲ ಮತ್ತು ಸೌದೆಯನ್ನೂ ಕೂಡ ಉಪಯೋಗಿಸುವುದಿಲ್ಲಎಂಬ ಆದರ್ಶಗಳನ್ನು ಪಾಲಿಸುತ್ತಾರೆ.

ಬುಂಡೆ ಕರೆಯುವುದು ಎಂಬ ವಿಶಿಷ್ಟ ಆಚರಣೆಯನ್ನು ಜೇನುಕುರುಬರು ಆಚರಿಸುತ್ತರೆ. ಇವರಲ್ಲಿ ಬುಂಡೆ ಕರೆಯುವ ವ್ಯಕ್ತಿಯನ್ನು ತಮ್ಮಡಿ ಎಂದು ಕರೆಯಲಾಗುತ್ತದೆ. ಈತನೇ ಶಮನ್. ಜೇನುಕರುಬರಲ್ಲಿ ಸ್ವರ್ಗ ಅಥವಾ ನರಕದ ಕಲ್ಪನೆ ಇಲ್ಲ. ಬದಲಿಗೆ ಯಾರಾದರೂ

ಸತ್ತರೆ ಆ ವ್ಯಕ್ತಿ ಹೋಗಿ ಸೇರಬೇಕಾದುದು ಆದಿ ಅಯ್ಯ ಎಂದು ಕರೆಯುವ ತಮ್ಮ ಹಿರಿಯರ ಆತ್ಮಗಳ ಬಳಿಗೆ. ಆದರೆ ಅವರ ಆತ್ಮ ನೇರವಾಗಿ ಹಿರಿಯರ ಆತ್ಮದೊಂದಿಗೆ ಹೋಗಿ ಸೇರುವುದಿಲ್ಲ ಬದಲಿಗೆ ಆ ಸಮಯದಲ್ಲಿ ನೆರಳು ಕಾಡು ಮೇಡು ಅಲೆಯುತ್ತಿರುತ್ತದೆ. ನಿರ್ದಿಷ್ಟವಾದ ಜಾಗ ಎಂಬುದು ಅದಕ್ಕಿರುವುದಿಲ್ಲ. ಅದು ಗಾಳಿಯಲ್ಲಿ ನೆರಳಾಗಿ ಸುತ್ತುತ್ತಿರುತ್ತದೆ. ಅದನ್ನು ಅವರ ಹಿರಿಯರ ಆತ್ಮದೊಂದಿಗೆ ತಲುಪಿಸಲು ಅವರ ಕುಟುಂಬದವರು ನೆರಳು ಕರೆಯುವ ಶಾಸ್ತ್ರ ಮಾಡಲೇಬೇಕು. ಬುಂಡೆ ಕರೆಯುವ ಶಾಸ್ತ್ರ, ಶಮನ್, ಕೊಂತ ಪೂಜೆ. ಬುಂಡೆ ತಯಾರಿಕೆ ಈ ಎಲ್ಲದರ ಸಂಕ್ಷಿಪ್ತ ವಿವರಗಳು ಈ ಭಾಗದಲ್ಲಿದೆ.

**ಬೆಟ್ಟಕುರುಬರು:** ಬುಡಕಟ್ಟುಗಳು ಮುಖ್ಯವಾಗಿ ಮಾತೃದೇವತಾರಾಧಕರು ಅವರ ಪೂಜೆಯ ಬಹುಪಾಲು ಸಲ್ಲುವುದು ಹೆಣ್ಣುದೇವತೆಗಳಿಗೆ. ಆದಿಮದ ಈ ಪೂಜನಿಯ ಕ್ರಮವನ್ನು ಇಂದಿಗೂ ಇವರು ಕಾಪಾಡಿಕೊಂಡು ಬಂದಿದ್ದಾರೆ. ಈ ಮಧ್ಯೆ ಹಲವು ಶಿಷ್ಟ ದೇವರುಗಳು ಇವರ ಬದುಕನ್ನು ಪ್ರವೇಶಿಸಿದ್ದರು ಕೂಡ ಮಾತೃ ದೇವತೆಗಳಾದ ಮಾರಿಯಮ್ಮ, ಕುಟ್ಟದ ಕರುಂಗಾಲಿಯರು ಇನ್ನೂ ಕೂಡ ಇವರ ಮನದ ಆಳದಲ್ಲಿ ಭಕ್ತಿಭಾವಗಳನ್ನು, ಭಯವನ್ನು, ಗೌರವವನ್ನು, ನಂಬಿಕೆಯನ್ನು ಉಳಿಸಿಕೊಂಡಿದ್ದಾರೆ. ಹಿರಿಯರನ್ನು ಆವಾಹಿಸುವ ಕ್ರಿಯೆಗೆ ಜೇನುಕುರುಬರು 'ಬುಂಡೆ ಕರೆಯುವುದು' ಎಂದರೆ ಬೆಟ್ಟಕುರುಬರು 'ಮೊರ ಕರೆಯುವುದು' ಅಥವ 'ಬಿಂಜೆ ಕಳುವುಗ' ಎಂದು ಕರೆಯುತ್ತಾರೆ. ಜೇನುಕುರುಬರು ಬುಂಡೆ ಕರೆಯುವಾಗ ಸೋರೆ ಬುರುಡೆಯನ್ನು ಬಳಸಿದರೆ ಬೆಟ್ಟಕುರುಬರು ಈ ವಿಶೇಷವಾದ ಮೊರವನ್ನು ಉಪಯೋಗಿಸುತ್ತಾರೆ. ಆ ಸಣ್ಣ ಮೊರಕ್ಕೆ ಗೆಜ್ಜೆ ಮಣಿ ಕಟ್ಟಿ ಹೆಣೆದಿರುತ್ತಾರೆ. ಈ ಮೊರವು ಬಹಳ ಮುಖ್ಯವಾದದ್ದು ಹಾಗೂ ಪವಿತ್ರವಾದದ್ದು. ಇದರ ಮೂಲಕ ದೈವದ ಆವಾಹನೆಯಾಗುತ್ತದೆ. ಇದನ್ನು ದೇವರನ್ನು ಕರೆಯಲು ಮಾತ್ರ ಉಪಯೋಗಿಸುತ್ತಾರೆ.

ಸಾಮಾಜಿಕ ಕ್ರಾಂತಿಯ ಪ್ರಭಾವಕ್ಕೆ ಸಿಲುಕಿದ ಬೆಟ್ಟಕುರುಬರು ತಾವೂ ಕೂಡ ವೀರಶೈವ ಧರ್ಮದ ಪ್ರಭಾವಕ್ಕೆ ಒಳಗಾಗಿದ್ದರು ಎಂಬುದಕ್ಕೆ ಸಾಕ್ಷಿ ಇವರ ಬಿಂಜೆ ಪದ್ಯದಲ್ಲಿ ದೊರೆಯುತ್ತದೆ. ಬೆಟ್ಟಕುರುಬರ ಬಿಂಜೆ ಪದ್ಯದಲ್ಲಿ ಈ ಮಠಗಳ ಹೆಸರುಗಳು ಉಲ್ಲೇಖವಾಗಿವೆ. ಹಿಂದೆ ಬೆಟ್ಟಕುರುಬರು ಈ ಮಠಗಳಿಗೆ ತಮ್ಮ ಮಕ್ಕಳನ್ನು ಶಿಷ್ಯರನ್ನಾಗಿ ಸೇರಿಸಿ ಸಕಲ ವಿದ್ಯೆಗಳನ್ನು ಕಲಿಸಲಾಗುತ್ತಿತಂತೆ. ಆದರೆ ಕಾಲಾನಂತರದಲ್ಲಿ ವೀರಶೈವದ ಪ್ರಭಾವ ಶಿಥಿಲವಾಗಿ ಈ ಮಠಗಳ ಪರಂಪರೆಯು ಕಣ್ಮರೆಯಾಗಿರಬಹುದು. ಆದರೆ ಇದಕ್ಕೆ ಕಾರಣ ಅಸ್ಪಷ್ಟ.

**ಸೋಲಿಗರು:** ಇವರು ಪ್ರಕೃತಿಯ ಭಾಗವಾದ ಪ್ರಾಣಿ, ಪಕ್ಷಿ, ಮರ, ಗಿಡ, ಕಲ್ಲು ಪ್ರತಿಯೊಂದೂ ಕೂಡ ದೈವದ ಸ್ವರೂಪ ಎಂದು ತಿಳಿಯುತ್ತಾರೆ. ಇವರು ಆನೆಯನ್ನು 'ಅಮ್ಮಾಳೆ' ದೇವರೆಂದು, ಕಾಡೆಮ್ಮೆಯನ್ನು ಕಾಟಿ ಬೆಟ್ಟದಯ್ಯ ಎಂದು ಭಾವಿಸಿ ಪೂಜಿಸುತ್ತಾರೆ. ಕಾಡಿನಲ್ಲಿರುವ ಹುಲಿಯನ್ನು

ಹಾಗೂ ಹುಲಿಯ ಹೆಜ್ಜೆಯನ್ನು ಮಲೆ ಮಾದೇಶ್ವರನ ವಾಹನ ಎಂದು ಪರಿಗಣಿಸುತ್ತಾರೆ. ದೊಡ್ಡ ಸಂಪಿಗೆ ಸೋಲಿಗರ ಮುಖ್ಯ ದೇವರು. ದೊಡ್ಡ ಸಂಪಿಗೆಯ ಮರಕ್ಕೆ ನೂರಾರು ವರ್ಷಗಳ ಇತಿಹಾಸವಿದ್ದು, ಆದಿಮ ಬುಡಕಟ್ಟು ಆರಾಧನೆಯ ಪ್ರತೀಕವಾಗಿ ಪ್ರತೀ ವರ್ಷ ಹಬ್ಬವನ್ನು ನಡೆಸುತ್ತಾರೆ. ನಾಗಾರಾಧಾನೆಯ ಸಂಕೇತವಾಗಿ ಹುತ್ತವನ್ನು ಪೂಜಿಸುತ್ತಾರೆ.

ರೊಟ್ಟಿಹಬ್ಬ, ಹೊಸರಾಗಿ ಹಬ್ಬ, ಮುನಿ ಮಾಡುವುದು, ದೊಡ್ಡ ಸಂಪಿಗೆ ಹಬ್ಬ, ಸಂಕಮ್ಮನ ಹಬ್ಬ ಮೊದಲಾದ ಹಬ್ಬಗಳನ್ನು ವಿವರಿಸಲಾಗಿದೆ. ಬಿಳಗಿರಿರಂಗ–ಕುಸುಮಾಲೆಯ ಕತೆಯನ್ನು ವಿವರಿಸಲಾಗಿದೆ.

ಕುಡಿಯರು – ಕುಡಿಯರು ಸೃಷ್ಟಿಯ ವಿಸ್ಮಯವನ್ನು ಬಲ್ಲವರು. ಶಿವ ಪಾರ್ವತಿಯರನ್ನು ತಮ್ಮ ಸೃಷ್ಟಿಕರ್ತರು ಎಂದು ನಂಬುವ ಕುಡಿಯರು ತಮ್ಮ ಕಷ್ಟ ಸುಖ ನೋವು ನಲಿವುಗಳಿಗೆ ಪ್ರತಿಯೊಂದಕ್ಕೂ ಧಾರ್ಮಿಕ ಲೇಪನವನ್ನು ಹಚ್ಚಿ ನೋಡುತ್ತಾರೆ. ಪ್ರಕೃತಿಯ ಆರಾಧಕರಾಗಿದ್ದ ಕುಡಿಯರು ಇಂದು ವೈದಿಕ ದೇವರುಗಳನ್ನು ಆರಾಧಿಸುತ್ತಿರುವುದನ್ನು ನಾವು ಕಾಣಬಹುದಾಗಿದೆ. ಪಾಡಿ ಇಗ್ಗುತಪ್ಪ, ಪಾಲೂರಪ್ಪ, ಮಲೆ ತಂಬಿರನ್, ಪನ್ನಂಗಾಲತಮ್ಮೆ, ಬೈತೂರಪ್ಪನನ್ನು ಕುಡಿಯರು ಮುಖ್ಯವಾಗಿ ಪೂಜಿಸುತ್ತಾರೆ. ಅಲ್ಲದೆ ಸುಬ್ರಹ್ಮಣ್ಯ ಸ್ವಾಮಿ, ಮಂಜುನಾಥನೂ ಅಲ್ಲದೆ ಕಲ್ಲೂಟಿ, ಪಾಷಾಣಮೂರ್ತಿರನ್ನು ಪೂಜಿಸುತ್ತಾರೆ. ಕೊಡಗಿನ ಮೂಲ ನಿವಾಸಿಗಳು ಎಂದು ಹೇಳುವ ಹಾಗೂ ಕೊಡವ ಭಾಷೆಯನ್ನು ಮನೆಮಾತಾಗಿ ಬಳಸುವ ಕೊಡಗಿನ ಹದಿನೆಂಟು ಉಪ ಪಂಗಡಗಳೂ ಕೂಡ ಈ ಇಗ್ಗುತಪ್ಪ ದೈವಗಳನ್ನು ಕುರಿತ ಆಚರಣೆಯ ವಿಸ್ತೃತ ಪರಿಚಯವಿದೆ.

**ಅಡಿ ಟಿಪ್ಪಣಿಗಳು**

1. ಆಶೀಶ್ ನಂದಿ, ದೇವ ದೇವಿಯರು, ಅನು: ಕೆ.ವಿ.ಅಕ್ಷರ, ನೀನಾಸಂ ಮಾತುಕತೆ(ಲೇಖನ), ಪು.22, ಸಂ.32, 1999.
2. ಬೋರಲಿಂಗಯ್ಯ ಹಿ.ಚಿ., ಬುಡಕಟ್ಟು ದೈವಾರಾಧನೆ, ಪು.14–15, 2002.
3. ಶಂಕರನಾರಾಯಣರಾವ್ ಎನ್.ಪಿ., ಪಂಜರಿಯರವರ ಸಮಾಜ ಮತ್ತು ಜಾನಪದ ಇತಿಹಾಸ ಪು.19, 2005.
4. ಅದೇ, ಪು.19, 2005.
5. ಅದೇ, ಪು.20 2005
6. ಅದೇ, ಪು.21 2005
7. ಅದೇ, ಪು.54 2005

8. ಕಿಕ್ಕೇರಿ ನಾರಾಯಣ, ಅರುಹು ಕುರುಹು, ಜೇನುಕುರುಬರ ಗೆಜ್ಜೆಯೂ ಮನೋವಿಜ್ಞಾನಿ ಯೂಂಗನು, ಏಪ್ರಿಲ್-ಜೂನ್ 2010.

9. ಕ್ಷೀರಸಾಗರ, ಜೇನು ಆಕಾಶದ ಅರಮನೆಯೋ, ಪು.79, 2008.

10. ಕಿಕ್ಕೇರಿ ನಾರಾಯಣ, ಜೇನುಕುರುಬ ಅವ್ಯಕ್ತ ಸಾಂಸ್ಕೃತಿಕ ಪರಂಪರೆ, ಪು.50, 2011.

11. ಅದೇ, ಪು.90, 2011.

12. ಕಿಕ್ಕೇರಿ ನಾರಾಯಣ, ಅರುಹು ಕುರುಹು, ಜೇನುಕುರುಬರ ಗೆಜ್ಜೆಯೂ ಮನೋವಿಜ್ಞಾನಿ ಯೂಂಗನು, ಏಪ್ರಿಲ್-ಜೂನ್, ಪು.28, 2010.

13. ಅದೇ, ಪು.31, 2010.

14. ಯೂಂಗ್: ಉದ್ಧೃತ: ಕಿಕ್ಕೇರಿ ನಾರಾಯಣ, ಅರುಹು ಕುರುಹು, ಜೇನುಕುರುಬರ ಗೆಜ್ಜೆಯೂ ಮನೋವಿಜ್ಞಾನಿ ಯೂಂಗನು, ಏಪ್ರಿಲ್-ಜೂನ್, ಪು.30-31, 2010.

15. ಕಿಕ್ಕೇರಿ ನಾರಾಯಣ, ಜೇನುಕುರುಬ ಶಮಣರು(ಗುಡ್ಡರು) ಭಾಗ-2, ಅರುಹು ಕುರುಹು ಪುಟ-89, ಜುಲೈ-ಸೆಪ್ಟೆಂಬರ್, 2009.

16. ಲಲಿತ ಎ.ಸಿ., ಕಾಡುಕುರುಬರ ಮತ್ತು ಜೇನುಕುರುಬರ ಸಂಸ್ಕೃತಿ, ಪು.110, 1993.

17. ಶಂಕರನಾರಾಯಣರಾವ್ ಎನ್.ಪಿ., ಪಂಜರಿಯರವರ ಸಮಾಜ ಮತ್ತು ಜಾನಪದ ಇತಿಹಾಸ, ಪು.25, 2005.

18. ಚಂದ್ರು ಕಾಳೇನಹಳ್ಳಿ, ಸೋಲಿಗರ ಸಂಸ್ಕೃತಿ, ಪು.215, 1993.

19. ಅದೇ, ಪು.126, 1993.

20. ಅದೇ, ಪು.235-236, 1993.

21. ರಾಮಚಂದ್ರಾಚಾರ್ ಡಿ.ಬಿ., ಕುಡಿಯರ ಸಂಸ್ಕೃತಿ, ಪು.19, 1993.

22. ರಮೇಶ್ ಕೆ.ಜಿ., ಮಲೆಕುಡಿಯ ಸಮುದಾಯದ ಕಳೆದ ಆರು ದಶಕಗಳ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ, ಪು.257, 2014.

23. ಅದೇ, ಪು.257, 2014.

24. ಶೈಲಜ ಎ.ಸಿ., ಕೊಡವರು ಮತ್ತು ಕೊಡಗಿನ ಅರೆಭಾಷೆ ಗೌಡರ ಸಂಸ್ಕೃತಿ-ತೌಲನಿಕ ಅಧ್ಯಯನ, ಪು.243, 2014.

## ಅಧ್ಯಾಯ: ಎಂಟು

# ಕೊಡಗಿನ ಬುಡಕಟ್ಟು ಕಲೆಗಳು ಮತ್ತು ಮೌಖಿಕ ಸಾಹಿತ್ಯ

ಇಂದು ನಾವು ಕರ್ನಾಟಕದಲ್ಲಿ ಗುರುತಿಸುವ ಪ್ರತಿಯೊಂದು ಬುಡಕಟ್ಟು ಸಹ ತುಂಬಾ ಭಿನ ಭಿನ್ನ ಕಲೆಗಳನ್ನು ಮೂಲ ರೂಪದಲ್ಲಲ್ಲದಿದ್ದರೂ ಮೂಲಕ್ಕೆ ಹತ್ತಿರದಲ್ಲಿರುವ(Form) ಫಾರ್ಮ್‌ನಲ್ಲಿ ಉಳಿಸಿಕೊಂಡಿವೆ. ಬುಡಕಟ್ಟುಗಳ ನೃತ್ಯ, ಹಾಡು, ಆಚರಣೆ ದಿನನಿತ್ಯದ ಬದುಕಿನ ಜಂಜಾಟದಲ್ಲಿ ತೀರಾ ಲೌಕಿಕ ಅಗತ್ಯಗಳಿಗಾಗಿ ಹುಟ್ಟಿಕೊಂಡವು. ಮನರಂಜನೆ, ಅಭಿವ್ಯಕ್ತಿಯ ತುರ್ತು ಮತ್ತು ಕೈಚಿತ್ತಾದ ಅಧ್ಯಾತ್ಮ ಸಂಬಂಧಿ ಕಲೆಗಳು ಬುಡಕಟ್ಟುಗಳಲ್ಲಿ ಕಂಡುಬರುತ್ತವೆ. ನಿಸರ್ಗ ಹುಟ್ಟಿಸುವ ದಿಗ್ಭ್ರಮೆ, ಆತಂಕ, ತವಕತಲ್ಲಣಗಳನ್ನು ಮುಖಾಮುಖಿಯಾಗುವ ಸಂದರ್ಭದಲ್ಲಿ ಆದಿವಾಸಿಗಳ ಜಟಿಲ ಮನಸ್ಥಿತಿಯ ಪ್ರತಿರೂಪದಂತೆ ಈ ಚಿತ್ರಕಲೆ ಕಾಣಬರುತ್ತದೆ. ಇದೇ ಅಭಿವ್ಯಕ್ತಿ ಮುಂದೆ ಹವ್ಯಾಸವಾಗಿ, ಪ್ರವೃತಿಯಾಗಿ, ಕಲೆಯಾಗಿ, ಅಧ್ಯಾತ್ಮವಾಗಿ ಜನಸಮುದಾಯಗಳಿಗೆ ರೂಢಿಯಾಯಿತು. ಮನುಷ್ಯನ ಒಟ್ಟು ಅಭಿವ್ಯಕ್ತಿ ಕ್ರಮಗಳ ಹುಟ್ಟು ಈ ಬಗೆಯ ತಲ್ಲಣಗಳ ಬಿಕ್ಕಟ್ಟಿನಿಂದಲೇ ಆಯಿತು. ಇಂದಿಗೂ ಉತ್ಕೃಷ್ಟ ಅಭಿವ್ಯಕ್ತಿಯು ಸಮುದಾಯದ ನೆಲೆಯಲ್ಲಿ ಚೋದಿತವಾದರೂ ಸಹ, ವ್ಯಕ್ತಿಗತ ತಲ್ಲಣಗಳ ನಿವಾರಣೆಯ ಭಾಗವಾಗಿಯೇ ಇರುತ್ತದೆ. ಹೀಗಾಗಿ ಬುಡಕಟ್ಟುಗಳ ಚಿತ್ರಕಲೆಯ ಅಧ್ಯಯನವೆಂದರೆ ಮನುಷ್ಯನ ಅಭಿವ್ಯಕ್ತಿಯ ಚಾರಿತ್ರಿಕ ಬೆಳವಣಿಗೆಯ ಅಧ್ಯಯನವೆಂದೇ ಅರ್ಥ ಮಾಡಿಕೊಳ್ಳಬೇಕು. ಇಂದು ಚಿತ್ರಕಲೆಯನ್ನು ಕುರಿತು ಚರ್ಚೆಗಳು ನಡೆದಿರುವುದು ಕೇವಲ ಅಭಿಜಾತ ಮತ್ತು ಈಚಿನ ಆಧುನಿಕ ಕಲಾಕೃತಿಗಳ ಬಗ್ಗೆ ಮಾತ್ರ. ರಾಜರು ಕಟ್ಟಿಸಿದ ದೇವಾಲಯಗಳ ವರ್ಣಚಿತ್ರಗಳು ಕುರಿತು ಅಧ್ಯಯನಗಳು ಸಾಕಷ್ಟು ನಡೆದಿವೆ. ಇವೆಲ್ಲ ಶಿಷ್ಟಜಗತ್ತಿನಲ್ಲಿ ಸಿದ್ಧಮಾದರಿಯ ವಾದಗಳ ಹಿನ್ನೆಲೆಯಲ್ಲಿ, ಶಿಷ್ಟ ವರ್ಣಚಿತ್ರಗಳ ಬಗ್ಗೆ ಮಾತ್ರ ಮಾತಾಡುತ್ತವೆ. ಆದರೆ ನಮ್ಮ ಬುಡಕಟ್ಟುಗಳ ರೇಖಾಚಿತ್ರಗಳು, ವರ್ಣಚಿತ್ರಗಳು ಮಾತ್ರ ಅವರ ಚರ್ಚೆಗಳ ಕಕ್ಷೆಯ ಆಚೆಗೇ ಉಳಿದುಕೊಂಡು ಬಿಡುತ್ತವೆ.

ಸಂಗೀತ, ಸಾಹಿತ್ಯ, ನೃತ್ಯ, ಚಿತ್ರಕಲೆಯೇ ಮೊದಲಾದ ಕಲೆಗಳು ಮನುಷ್ಯನನ್ನು ಇದ್ದ ಸ್ಥಿತಿಯಿಂದ ಉನ್ನತ ಸ್ಥಿತಿಗೇರಿಸುವ ಗುಣವನ್ನು ಹೊಂದಿವೆ. ಈ ಕಲೆಗಳಿಗೆ ತನ್ನದೇ ಆದ ಗತಿ ಹಾಗೂ ನಿಲುವುಗಳಿವೆ. ಮನುಷ್ಯನ ಆರಾಧನೆಯ ಸ್ವರೂಪವೇ ಕಲೆಯಾಗಿ ಹೊರಹೊಮ್ಮಿದೆ. ಅಥವಾ ಕಲೆಗಳೇ ಆರಾಧನೆಯ ಮಟ್ಟಕ್ಕೇರಿ ಅಸ್ತಿತ್ವದಲ್ಲಿವೆ. ಮನುಷ್ಯನು ತನ್ನ ಆಲೋಚನಾ ಶಕ್ತಿ ಬೆಳೆದಂತೆಲ್ಲ ತನ್ನ ಭಾವನೆಗಳನ್ನು ಹಲವು ರೀತಿಯಲ್ಲಿ ಅಭಿವ್ಯಕ್ತಿಸಲು ಪ್ರಾರಂಭಿಸಿದನು. ಉದಾಹರಣೆಗೆ ಸಂಜ್ಞೆಗಳು, ಸಂಕೇತಗಳು, ಆಂಗಿಕ ಅಭಿನಯ ಇತ್ಯಾದಿಗಳು. ಅವು ಮುಂದೆ ಮನುಷ್ಯನ ಸೃಜನಶೀಲತೆಯ ಮೂಸೆಯಲ್ಲಿ ಅರಳಿ ಹಾಡು, ನೃತ್ಯ, ಚಿತ್ರಕಲೆ ಇವೇ ಮೊದಲಾದ ವಿವಿಧ ರೂಪವನ್ನು ಪಡೆದುಕೊಳ್ಳುತ್ತವೆ. ಕಲೆಗಳನ್ನು ನಾವು ಹಾಡು, ಕುಣಿತ, ಅಭಿನಯ, ಕಥೆ, ವೇಷ ಭೂಷಣ ಎಂದೆಲ್ಲ ಬಗೆಗಳಲ್ಲಿ ಗುರುತಿಸಬಹುದು. ಮನರಂಜನೆ ಮತ್ತು ಧಾರ್ಮಿಕತೆಯೇ ಎಲ್ಲ ಆಚರಣೆಗಳ ಮೂಲ ಉದ್ದೇಶ. ಇವು ಸಮುದಾಯದ ಸಾಂಸ್ಕೃತಿಕ ಮೌಲ್ಯಗಳು. ಹಾಗೆಯೇ ಇವು ವಿಶಿಷ್ಟವಾದ ಕುರುಹುಗಳೂ ಹೌದು. ಬುಡಕಟ್ಟು ಕಲೆಗಳು ಸಾಮುದಾಯಿಕ ವಾದುವು. ಇವುಗಳು ಸಮುದಾಯದ ಒಳಗೆ ಪರಸ್ಪರ ನಂಬಿಕೆ, ವಿಶ್ವಾಸ, ಪ್ರೀತಿ, ಸಹಬಾಳ್ವೆ, ಭ್ರಾತೃತ್ವವನ್ನು ಉದ್ದೀಪನಗೊಳಿಸುವಲ್ಲಿ ಬಹಳ ಮಹತ್ವದ ಪಾತ್ರವನ್ನು ವಹಿಸುತ್ತವೆ. ಪ್ರದರ್ಶನ ಕಲೆಗಳು ಸಮುದಾಯದ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಬಹಳ ಪ್ರಮುಖ ಪಾತ್ರವನ್ನು ಹೊಂದಿವೆ. ಪ್ರತಿ ಸಮುದಾಯಗಳ ಬದುಕು, ರೀತಿ, ನೀತಿ, ನಿಯಮ, ನಂಬಿಕೆಗಳಿಗೆ ಅನುಗುಣವಾಗಿ ಕಲೆಯ ವಿಧಾನವೂ ಬದಲಾಗುತ್ತಿರುತ್ತದೆ. ಜನಸಾಮಾನ್ಯರ ಈ ಕಲೆಗಳು ಒಂದು ಕಾಲದಲ್ಲಿ ರಾಜರ ಆಸ್ಥಾನ ಪ್ರಿಯವಾಗಿದ್ದವು. ಕಾಲಾನಂತರ ಹಲವಾರು ಕಾರಣಗಳಿಂದ ನಿಕೃಷ್ಟತೆಗೆ ಒಳಗಾಗಿ ಮತ್ತೆ ಜನಪದರ ಸೂತ್ರದಂತೆ ಮರುಸ್ಥಾಪಿಸಲ್ಪಟ್ಟವು. ಈ ಜನಸಾಮಾನ್ಯರ ಕಲೆಗಳಿಗೆ ಸನ್ಮಾನ ಅಪಮಾನಗಳು ಒಟ್ಟಿಗೆ ಆಗುತ್ತಿರುವುದು ನಮ್ಮ ಸಮಾಜದ ದುರಂತ.

ಬುಡಕಟ್ಟು ಕಲೆಗಳ ಕುರಿತು ಜಿ.ಎನ್.ದೇವಿಯವರು ಹೀಗೆ ವಿವರಿಸುತ್ತಾರೆ, 'One of the main characteristics of the tribal arts is their distinct manner of constructing space and imagery, which might be described as 'hallucinatory'. In both oral and visual forms of representation, tribal artists seem to interpret verbal or pictorial space as demarcated by an extremely flexible 'frame'. The boundaries between art and non-art become almost invisible. A tribal epic can begin its narration from a trivial everyday event; tribal paintings merge with living space as if the two were one and the same. And within the narrative itself, or within the painted imagery,

there is no deliberate attempt to follow a sequence. The episodes retold and the images created take on the apparently chaotic shapes of dreams."[1]

ಭಾರತದ ಇತಿಹಾಸದ ಪುಟದಲ್ಲಿ ಸುಮಾರು 20ನೇ ಶತಮಾನಕ್ಕಿಂತ ಹಿಂದಿನ ಜನಸಾಮಾನ್ಯರ ಬದುಕು ಕರಾಳಪುಟಗಳಲ್ಲಿ ಸೇರಿಹೋಗಿದೆ. ಶಿಷ್ಟಪರಂಪರೆಯ ರಾಜ ಮಹಾರಾಜರ ವೈಭೋಗದ ಕತೆಗಳೆದುರು ಸಾಮಾನ್ಯ ಮನುಷ್ಯನ ಬದುಕು ಲೆಕ್ಕಕ್ಕೆ ಸಿಗಲೇ ಇಲ್ಲ. ಅತಿರಂಜಿತ ಇಲ್ಲವೇ ರೋಚಕವಾದ ರಾಜನ ಆಸ್ಥಾನ ಯುದ್ಧಗಳ ವರ್ಣನೆಗಳನ್ನುಳಿದು ಮತ್ತ್ಯಾವುದು ಪಂಡಿತರ ಸಾಹಿತ್ಯಿಕ ಮನೋನೆಲೆಗೆ ಮುಖ್ಯವಾಗಲೇ ಇಲ್ಲ.

ಪಂಡಿತರ ಮಹಾನ್ ಗ್ರಂಥಗಳ ಕಣ್ಣಿಗೆ ಬೀಳದ ಸಾಮಾನ್ಯ ಮನುಷ್ಯನ ಬದುಕಿಗೆ ಸಂಬಂಧಿಸಿದ ಮೌಖಿಕ ಸಾಹಿತ್ಯವನ್ನು ಕತೆ, ಹಾಡು, ಕಾವ್ಯ, ಗಾದೆ, ಒಗಟುಗಳಲ್ಲಿ ನಾವು ಕಾಣಬಹುದು. ಈ ಕಲೆಗಳು ಹುಟ್ಟಿದಕ್ಕೂ ಅವು ಬೆಳೆದು ಬಂದ ಇವತ್ತಿನ ಕಾಲಕ್ಕೂ ಅಪಾರವಾದ ವ್ಯತ್ಯಾಸಗಳನ್ನು ನಾವು ಕಾಣಬಹುದು. ಈ ಪ್ರದರ್ಶನ ಕಲೆಗಳು ಸಮಾಜದೊಂದಿಗೆ ನಿತ್ಯ ಸಂಪರ್ಕವನ್ನು ಇಟ್ಟುಕೊಂಡು ಪ್ರಜ್ಞಾಪೂರ್ವಕವಾಗಿ ಬದಲಾವಣೆಗೆ ಒಗ್ಗಿಕೊಂಡಾಗ ಅವು ಜೀವಂತವಾಗಿ ಉಳಿದುಕೊಳ್ಳುತ್ತವೆ. ಒಂದು ವೇಳೆ ಅವು ಜಡವಾಗಿ ಯಾವುದೇ ರೀತಿಯ ಹೊಸತನಕ್ಕೆ ತಮ್ಮನ್ನು ಒಗ್ಗಿಸಿಕೊಳ್ಳಲು ಸಾಧ್ಯವಿಲ್ಲ ಎಂದಾಗ ಅವು ನಿಧಾನವಾಗಿ ಸಾಯುತ್ತವೆ. ಈ ರೀತಿಯ ಜಡತ್ವದ ಕಾರಣದಿಂದಾಗಿ ಅದೆಷ್ಟೋ ಕಲಾಪ್ರಕಾರಗಳನ್ನು ನಾವು ಈಗಾಗಲೇ ಕಳೆದುಕೊಂಡಿದ್ದೇವೆ. ಆದರೆ ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ತಮ್ಮನ್ನು ಬದಲಾಯಿಸಿಕೊಂಡು ಹೊಸತನವನ್ನು ಅಳವಡಿಸಿಕೊಂಡ ಕಾರಣಕ್ಕೆ ರಾಜ್ಯವ್ಯಾಪಿ ದೇಶವ್ಯಾಪಿ ಮೆಚ್ಚುಗೆ ಪಡೆದ ಕಲಾಪ್ರಕಾರಕ್ಕೆ ಉತ್ತಮ ಉದಾಹರಣೆ ಸಿದ್ಧಿಯರ ಡಮಾಮಿ ಮತ್ತು ಅವರ ನೃತ್ಯ ಪ್ರಕಾರಗಳು. ಈ ನೃತ್ಯಗಳು ಮನುಷ್ಯನ ಬದುಕಿನ ಅವಿಭಾಜ್ಯ ಅಂಗದಂತಿದ್ದು ಎಷ್ಟೋ ಪ್ರಕಾರಗಳು ಇಂದು ಹಬ್ಬ ಹರಿದಿನ ಅಥವಾ ಸಮಾರಂಭದಲ್ಲಿ ಸಾಂಕೇತಿಕವಾಗಿ ವರ್ಷಕ್ಕೊಮ್ಮೆ ಪ್ರದರ್ಶನಗೊಳ್ಳುತ್ತವೆ. ಕಲೆ ಕೆಲವರಿಗೆ ವೃತ್ತಿಯಾದರೆ ಕೆಲವರಿಗೆ ಹವ್ಯಾಸ. ಆದಿವಾಸಿಗಳ ನೃತ್ಯಾದಿ ಕಲಾಪ್ರಕಾರಗಳಿಗೂ ಅವರ ಸುತ್ತಲ ಪರಿಸರಕ್ಕೂ ಪಾರಂಪರಿಕ ನಂಟಿದೆ. ತಾವು ಶತಮಾನಗಳ ಅನುಸಂಧಾನ ಮಾಡುತ್ತ ಬಂದ ನಿಸರ್ಗದ ಹಲವು ಕೌತುಕಗಳು ಆದಿವಾಸಿಗಳ ಕಲೆಗಳಲ್ಲಿ ಸಮ್ಮಿಲನಗೊಂಡಿವೆ. 'ಗುಡ್ಡಗಾಡಿನ ಕಲೆಗಳಿಗೂ ಪ್ರಕೃತಿಗೂ ಸಂಬಂಧವಿದೆಯೇ? ಇದು ನನ್ನನ್ನು ಬಹಳ ದಿನಗಳಿಂದ ಕಾಡಿರುವ ಪ್ರಶ್ನೆ. ಸೂಕ್ಷ್ಮವಾಗಿ ಅವಲೋಕಿಸಿದರೆ ಅವರ ಜೀವನಕ್ಕೂ ಕಲೆಗೂ ಪ್ರಕೃತಿಗೂ ಅಂಥ ವ್ಯತ್ಯಾಸವಿಲ್ಲ. ನಮ್ಮ ಬಯಲು ಸೀಮೆಯಲ್ಲಿರುವಂಥ ರಣವಾದ್ಯಗಳಾಗಲಿ, ಆವೇಶದ ರಂಗಗಳಾಗಲೀ ಇಲ್ಲಿ ಕಡಿಮೆ. ಒಂದು ರೀತಿಯಲ್ಲಿ ಸೌಮ್ಯ

ಕಲೆಗಳೇ ಹೆಚ್ಚು. ಇಲ್ಲಿ ಗಮನಿಸಬೇಕಾದ ಮತ್ತೊಂದು ಮುಖ್ಯ ವಿಚಾರವೆಂದರೆ; ನಾಗರಿಕ ಸಮಾಜದ ರೀತಿಯ ಲಿಂಗಭೇದವಿಲ್ಲದಿರುವುದು. ಕುಡಿಯರು, ಯರವರು, ಕುಣಬಿಯರು, ಸಿದ್ಧಿಯರು, ಕೆಂಬಟ್ಟಿಯವರು, ಹೆಂಗಸರು ಗಂಡಸರೆನ್ನದೆ ಒಟ್ಟೊಟ್ಟಾಗಿ ಕುಣಿಯುತ್ತಾರೆ. ಆದರೆ, ಬಯಲುಸೀಮೆಯ ಯಾವ ಜನಪದ ಕಲೆಗಳಲ್ಲಿಯೂ ಗಂಡಸರೊಟ್ಟಿಗೆ ಹೆಂಗಸರಿರುವುದಿಲ್ಲ. ಈಗಾಗಲೇ ಹೇಳಿದಂತೆ ಹಾಲಕ್ಕಿ ಒಕ್ಕಲಿಗರ ಸುಗ್ಗಿ ಕುಣಿತದಲ್ಲಿ ಸಮುದ್ರದ ಮೊರೆತವಿದೆ; ಏರಿಳಿತವಿದೆ. ಕಡೆಯಲ್ಲಿ ಈ ಕಲೆಯ ವೇಗ ಗಮನಿಸಿದರೆ ಸಮುದ್ರದ ಪ್ರಭಾವ ಖಂಡಿತ ಇರುವಂತಿದೆ. ಕೊಡಗಿನ ಕುಡಿಯರ ಕುಣಿತದ ಮೇಲೆ ಅಲ್ಲಿನ ಅಂಕುಡೊಂಕು ಬೆಟ್ಟಗುಡ್ಡಗಳ ಸರಮಾಲೆಯ ಪ್ರಭಾವ ಇದೆ ಅನ್ನಿಸುತ್ತದೆ. ಅವರು ಸುತ್ತುಗಟ್ಟಿ ಬಾಗಿ ಬಳುಕುತ್ತಾ ಕುಂತು ಮೇಲೇಳುವ ರೀತಿಯಲ್ಲಿ ಅವರ ಸುತ್ತಣ ಇಡೀ ಪ್ರಕೃತಿಯೇ ಎದ್ದುಬಂದಂತೆ ಭಾಸವಾಗುತ್ತದೆ. ಅಲ್ಲದೆ ಅವರು ಹಿಂದೆ ಮುಂದೆ ತಿರುಗಿತಿರುಗಿ ಸುತ್ತುವ ಕ್ರಮದಲ್ಲಿ ಪ್ರಾಣಿಗಳ ಚಲನೆಯ ಎಳೆಯನ್ನು ಗುರುತಿಸಿದಂತೆ ಅನ್ನಿಸತೊಡಗುತ್ತದೆ.'[2] ನಿಸರ್ಗ ಮತ್ತು ಸಮಾಜದ ನಿರಂತರ ಅನುಸಂಧಾನ ಮತ್ತು ಅದರಿಂದ ವಿಕಾಸಗೊಂಡ ತಿಳುವಳಿಕೆ ಮತ್ತು ಭೌತಿಕ ಜಗತ್ತಿನ ಬೆಳವಣಿಗೆಯನ್ನು ಕುರಿತ ಶಾಸ್ತ್ರಗಳೆಂದರೆ ತಪ್ಪಾಗಲಾರದು. ಜಗತ್ತು ಇಂದು ತೀವ್ರವಾಗಿ ಬದಲಾಗುತ್ತಿರುವ ಸಂದರ್ಭದಲ್ಲಿ ಆದಿವಾಸಿಗಳಲ್ಲಿನ ಜ್ಞಾನಪರಂಪರೆ, ಸಂಸ್ಕೃತಿ ಮತ್ತು ನೃತ್ಯಾದಿ ಕಲೆಗಳನ್ನು ಬೆಲೆಗಟ್ಟುವ ಮತ್ತು ಅರ್ಥೈಸುವ ಕೆಲಸ ಆಗಬೇಕಿದೆ. ಆ ಮೂಲಕ ಅವರ ಜಾನಪದ ಭಂಡಾರವನ್ನು ಪುನರ್‌ಶೋಧಿಸುವ ಮತ್ತು ಮರುವ್ಯಾಖ್ಯಾನಕ್ಕೆ ಒಳಪಡಿಸುವ ಅಗತ್ಯವಿದೆ. ಮೇಲೆ ಉಲ್ಲೇಖಿಸಿರುವ ತಜ್ಞರ ಸಂಶೋಧನೆಗಳ ಹಿನ್ನೆಯಲ್ಲಿ ಕರ್ನಾಟಕದ ಅರಣ್ಯವಾಸಿ ಬುಡಕಟ್ಟುಗಳ ಸಂಸ್ಕೃತಿ ಕಲೆ ಮತ್ತು ಜ್ಞಾನಪರಂಪರೆಯನ್ನು ಅಧ್ಯಯನ ಮಾಡಬೇಕಿದೆ. ಈ ಕಾರಣದಿಂದಾಗಿ ಪ್ರಸ್ತುತ ಅಧ್ಯಾಯದಲ್ಲಿ ಕೊಡಗಿನ ಅರಣ್ಯದಲ್ಲಿನ ಆದಿವಾಸಿಗಳ ಪಾರಂಪರಿಕ ಸಂಬಂಧ ಸಂಸ್ಕೃತಿ ಮತ್ತು ನೃತ್ಯಾದಿ ಕಲೆಗಳು ಮತ್ತು ಆ ಮೂಲಕ ಉತ್ಪನ್ನವಾದ ಜ್ಞಾನವನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ. ಕಲೆಗಳನ್ನು ಮುಖ್ಯವಾಗಿ ಈ ಕೆಳಗಿನಂತೆ ವಿವರಿಸಬಹುದಾಗಿದೆ.

1. ಹಾಡುಗಳು
2. ನೃತ್ಯಗಳು
3. ವಾದ್ಯಗಳೊಂದಿಗೆ ಮೇಳೈಸಿದ ಕಲೆಗಳು
4. ದೇವರ ಕುಣಿತ
5. ಭೂತಗಳಿಗೆ ಸಂಬಂಧಿಸಿದ ಕಲೆಗಳು

## ಎರವರ ಕಲೆಗಳು

ಕೊಡಗಿನ ಭೂಮಾಲೀಕರ ತೋಟಗಳಲ್ಲಿ ಮನೆಗಳಲ್ಲಿ ಜೀತಗಾರರಾಗಿ ದಿನವಿಡೀ ದುಡಿಯುವ ಈ ಸಮುದಾಯವರು ತಮ್ಮ ಅಸಹಾಯಕತೆ, ನೋವನ್ನು ತಮ್ಮ ಕುಣಿತಗಳಲ್ಲಿ ಹೊರಹಾಕುತ್ತಾರೆ. ಅವರ ಕುಣಿತಗಳಲ್ಲಿ ವಿಷಾದ ಮತ್ತು ಅಸಹಾಯಕತೆಗಳು ದಟ್ಟೈಸಿರುತ್ತವೆ.

**ಎರವಾಟ್ ಕುಣಿತ:** ಎರವಾಟ್ ಎಂದು ಕರೆಯುವ ಎರವರ ಈ ನೃತ್ಯವು ವಾದ್ಯಗಳೊಂದಿಗೆ ಮೇಳೈಸಿದೆ. ದಿನವಿಡೀ ದುಡಿಯುವ ಎರವರು ರಾತ್ರಿಯ ವೇಳೆ ಹಾಡಿಯಲ್ಲಿ ಒಂದೆಡೆ ಸೇರಿ ಬೆಂಕಿ ಕಾಯಿಸಿಕೊಂಡು ಅದರ ಸುತ್ತಲೂ ಹಾಡಿ ಕುಣಿಯುತ್ತಾರೆ. ಇದನ್ನು ಎರವಾಟ್ ಕುಣಿತ ಎಂದು ಕರೆಯಲಾಗುತ್ತದೆ. ಚೀನಿ ಹಾಗೂ ದುಡಿ ಎಂಬ ಎರಡು ವಿಶಿಷ್ಟ ವಾದ್ಯಗಳನ್ನು ಇವರು ಉಪಯೋಗಿಸುತ್ತಾರೆ. ಇಲ್ಲಿ ಗಂಡು ಹೆಣ್ಣು ಎಂಬ ಭೇದವಿಲ್ಲ. ಯಾವುದೇ ವಯಸ್ಸಿನ ನಿರ್ಬಂಧವಿಲ್ಲ, ಇದೊಂದು ಸಮೂಹನೃತ್ಯ. ಇದರಲ್ಲಿ ಇಷ್ಟೇ ಜನರಿರಬೇಕು ಎಂಬ ನಿಯಮವಿಲ್ಲ. ಒಬ್ಬ ವ್ಯಕ್ತಿಯಿಂದ ಆರಂಭಗೊಂಡು ಇಡೀ ಸಮುದಾಯವೇ ಇದರಲ್ಲಿ ಭಾಗವಹಿಸಬಹುದು. ಮೈ ಹಾಗೂ ಬೆನ್ನು ಬಾಗಿಸಿ ವಿಶಿಷ್ಟವಾದ ರೀತಿಯಲ್ಲಿ ಕೈಗಳನ್ನು ತಿರುಗಿಸುತ್ತಾ ನಿಧಾನವಾಗಿ ಲಯಬದ್ಧವಾಗಿ ದೇಹವನ್ನು ಬಳಕಿಸುತ್ತಾ ಕುಣಿಯುತ್ತಾರೆ. ಮಧ್ಯೆ ಮಧ್ಯೆ ಕೇಕೆ ಹಾಕುತ್ತಿರುತ್ತಾರೆ. ಆಯಾಸ ಪರಿಹಾರ, ನೋವನ್ನು ಮರೆಯುವುದು ಹಾಗೂ ಮನರಂಜನೆಯೇ ಇದರ ಮುಖ್ಯ ಉದ್ದೇಶ. ಮದುವೆ ಇನ್ನಿತರ ಶುಭ ಸಮಾರಂಭಗಳಲ್ಲಿ ಈ ರೀತಿ ಎಲ್ಲರೂ ಸೇರಿ ನರ್ತಿಸುತ್ತಾರೆ.

**ಚೀನಿದುಡಿ ಕುಣಿತ:** ಚೀನಿ ಎಂದರೆ ಮರದಿಂದ ತಯಾರಿಸಿದ ಗಾಳಿವಾದ್ಯ. ಬಾಯಿಂದ ಊದುತ್ತಾರೆ. ಇದು ಒಂದೂವರೆ ಅಡಿ ಉದ್ದವಿದ್ದು, ಅತ್ಯಂತ ಸುಶ್ರಾವ್ಯವಾದ ನಾದವನ್ನು ಹೊರಹೊಮ್ಮಿಸುತ್ತದೆ. ನೋಡಲು ತುತ್ತೂರಿಯಂತೆ ಕಾಣುತ್ತದೆ. ಈ ವಾದ್ಯವನ್ನು ಕೇವಲ ಎರವರಷ್ಟೇ ಉಪಯೋಗಿಸುತ್ತಾರೆ. 'ಯರವರು ದುಡಿತದ ದಣಿವಾರಿಸಿಕೊಳ್ಳಲು, ನೋವುಗಳನ್ನು ಮರೆಯಲು ರಾತ್ರಿ ಹೊತ್ತು ಸಾಮೂಹಿಕ ಕುಣಿತ ಮತ್ತು ಹಾಡುಗಳಿಗೆ ಪರವಶರಾಗುತ್ತಾರೆ. ಯರವರ ಕುಣಿತದ ವಿಶೇಷವೆಂದರೆ ಕುಣಿತದಲ್ಲಿ ಇಷ್ಟೇ ಜನರಿರಬೇಕೆಂದಾಗಲೀ, ಇಂಥವರೇ ಇರಬೇಕೆಂದಾಗಲೀ ಯಾವುದೇ ಕಟ್ಟುಪಾಡುಗಳಿಲ್ಲ. ಹಿನ್ನೆಲೆಗೆ ಪ್ರಧಾನವಾಗಿ ಬಳಸುವುದು 'ದುಡಿ' ಮತ್ತು 'ಚೀನಿ ವಾದ್ಯ'. ದುಡಿ ದಕ್ಷಿಣ ಕನ್ನಡ, ಉತ್ತರ ಕನ್ನಡ, ಶಿವಮೊಗ್ಗ ಹಾಗೂ ಕೊಡಗಿನ ಗಿರಿಜನರಲ್ಲಿ ಬಳಕೆಯಲ್ಲಿರುವ ಜನಪ್ರಿಯ ಚರ್ಮವಾದ್ಯ. ಆದರೆ ಎರವರ 'ಚೀನಿ ವಾದ್ಯ' ತುಂಬಾ ವಿಶೇಷವಾದ ಗಾಳಿವಾದ್ಯ. ಶ್ರುತಿ ಮೊದಲುಗೊಂಡು ಇದನ್ನು ಪೂರ್ತಾ ಮರದಿಂದಲೇ ಮಾಡಿರುತ್ತಾರೆ. ಒಂದು ರೀತಿಯ ಗುಂಗು ತುಂಬುವ ನಾದವಿಶೇಷ. ಇದನ್ನು ಎರವರೇ ತಯಾರುಮಾಡಿಕೊಳ್ಳುತ್ತಾರೆ. ದುಡಿಯ ಲಯಬದ್ಧ ಬಡಿತಕ್ಕೆ ಬಾಗಿ ಬಾಗಿ ಜೋಲಿ

ಹೊಡೆಯುತ್ತಾ ಕುಣಿಯುತ್ತಾರೆ. ಮಹಿಳೆಯರು ಮತ್ತು ಮಕ್ಕಳು, ಪುರುಷರನ್ನೊಳಗೊಂಡ ಸಾಮೂಹಿಕ ನೃತ್ಯವಿದು. ಎರವರ ಗಂಡಸರೇ ಕುಣಿಯುವ ಕೊಡವ ನೃತ್ಯದ ಮಾದರಿಯಾದ 'ಯರವಾಟ್' ನೃತ್ಯವೂ ಬಳಕೆಯಲ್ಲಿದೆ.'[3] ದುಡಿ ಒಂದು ಚರ್ಮವಾದ್ಯ. ಇದು ತಮಟೆಯಾಕಾರ ದಲ್ಲಿದ್ದು ಗಾತ್ರ ಸಣ್ಣದಾಗಿರುತ್ತದೆ. ಹಬ್ಬ ಆಚರಣೆಗಳಲ್ಲಿ, ದೈವಸಂಬಂಧಿ ಕಾರ್ಯಗಳಲ್ಲಿ ಹಾಗೂ ಮನರಂಜನೆಯ ಸಮಯದಲ್ಲಿ ಬಹಳ ಮುಖ್ಯವಾಗಿ ಇದನ್ನು ಬಳಸುತ್ತಾರೆ. ಎರವರ ತಮ್ಮಡಿ, ಕಞಲಾಡಿ ಮೊದಲಾದವರು ಇವುಗಳನ್ನು ತಮ್ಮ ಮನೆಗಳಲ್ಲಿ ಅಥವಾ ದೇವಸ್ಥಾನಗಳಲ್ಲಿ ಜೋಪಾನವಾಗಿ ಕಾಪಾಡುತ್ತಾರೆ.

ಕಾಡಿನಲ್ಲಿ ತಮ್ಮ ನೆಲೆಯನ್ನು ಕಳೆದುಕೊಂಡು ನಾಗರಿಕ ಬದುಕಿನೊಂದಿಗೆ ಹೊಂದಿಕೊಳ್ಳಲು ಸಾಧ್ಯವಾಗದೆ ಜರ್ಜರಿತರಾದ ಈ ಸಮುದಾಯಗಳು ಇಂದು ಕುಡಿತಕ್ಕೆ ಮೊರೆ ಹೋಗಿದ್ದಾರೆ. ಸಾಮಾನ್ಯವಾಗಿ 15ನೇ ವಯಸ್ಸಿನಿಂದಲೇ ಕುಡಿತಕ್ಕೆ ಮಾರು ಹೋದವರೂ ಇದ್ದಾರೆ. ಇತರೆ ಬುಡಕಟ್ಟುಗಳ ಆಕರ್ಷಕ ವೇಷಭೂಷಣ, ಹಾಡು, ವಾದ್ಯಗಳಿಗೆ ಹೋಲಿಸಿದರೆ ಎರವರದು ನೀರಸವಾದ ನೃತ್ಯ ಎಂದು ಕೆಲವರು ಭಾವಿಸುತ್ತಾರೆ. ಆದರೆ ಅವರ ಬದುಕಿನ ನೋವು ಅಸಹಾಯಕತೆ ಅವರ ನೃತ್ಯದಲ್ಲಿ ಪ್ರತಿಧ್ವನಿಸುವುದನ್ನು ನಾವು ಸೂಕ್ಷ್ಮವಾಗಿ ಗಮನಿಸಬಹುದು. ಮತ್ತು ಈ ನೃತ್ಯವನ್ನು ಕೇವಲ ಎರವರಲ್ಲದೆ ಎಲ್ಲರೂ ಮಾಡಲು ಸಾಧ್ಯವಿಲ್ಲ. ಅಂತಹ ವಿಶಿಷ್ಟವಾದ ಭಾವಭಂಗಿಯನ್ನು ಇವರು ಪ್ರದರ್ಶಿಸುತ್ತಾರೆ.

**ಜೇನುಕುರುಬರ ಕಲೆಗಳು**

ಈ ಕೋಲಾಟವನ್ನು ಜೇನುಕುರುಬರ ಗಂಡುಕಲೆ ಎಂದು ಕರೆಯಬಹುದು. ಜೇನುಕುರುಬರು ಯುಗಾದಿ ಹಬ್ಬದ ಸಮಯದಲ್ಲಿ ಪ್ರತಿ ಮನೆಮನೆಗೆ ಹೋಗಿ ಕೋಲಾಟ ಪ್ರದರ್ಶಿಸುತ್ತಾರೆ. ವರ್ಷದಿಂದ ಜೋಪಾನವಾಗಿ ತೆಗೆದಿಟ್ಟಿದ್ದ ಕೋಲುಗಳನ್ನು ತೆಗೆದು ಆ ದಿನ ತೊಳೆದು ಪೂಜಿಸಿ ಕೋಲಾಟ ಆಡುತ್ತಾರೆ. ಅಂದು ಮನೆ ಮನೆಗಳಿಗೆ ತೆರಳಿ ಕೋಲಾಟವಾಡಿ ದವಸಧಾನ್ಯಗಳನ್ನು ಪಡೆಯುತ್ತಾರೆ. ಕೋಲಿನ ತಾಡನದ ವೇಗಕ್ಕೆ ಕುಣಿತವೂ ಸೇರಿ ಉತ್ಸಾಹ ಹೆಚ್ಚಾಗುತ್ತದೆ. ಹಬ್ಬದ ದಿನದಂದು ಕಾಡಿನಲ್ಲಿ ಎಲ್ಲರೂ ಸೇರಿ ಸಂಗ್ರಹಿಸಿದ ದವಸಧಾನ್ಯಗಳಿಂದ ಆಹಾರ ತಯಾರಿಸಿ ದೇವರ ಮರದ ಬುಡದಲ್ಲಿ ಕಾಡಿನ ರಕ್ಷಕ ದೇವತೆಗಳಿಗೂ, ಹಿರಿಯರ ಆತ್ಮಗಳಿಗೂ, ಕಾಡಿನ ಎಲ್ಲೆ ಕಾಪಾಡುವ ದೇವರುಗಳಿಗೂ ಎಡೆಯಿಟ್ಟು ಅನಂತರ ತಾವೂ ಸೇವಿಸಿ ಹಾಡಿಗೆ ಮರಳುತ್ತಾರೆ.

ಬುಡಕಟ್ಟುಗಳು ನೆಲೆಸಿರುವ ಪರಿಸರ, ಜೀವನಪದ್ಧತಿ, ನಂಬಿಕೆಗೆ ಅನುಗುಣವಾಗಿ ಈ ಕಲೆಗಳು ಕೂಡ ವೈವಿಧ್ಯತೆಯನ್ನು ಪಡೆದಿವೆ. ಜನಪದರಲ್ಲಿ ಕಲೆ ಎಂದರೆ ಜೀವನದ ಆಚರಣೆ,

ಬದುಕಿನ ದಾಖಲೆ ಮತ್ತು ಆ ಮೂಲಕ ಮನುಷ್ಯ ಸಂವೇದನೆಗಳನ್ನು ವ್ಯಕ್ತಪಡಿಸುವ ಮಾದರಿ. ಈ ಜೇನುಕುರುಬರ ಕೋಲಾಟ ಆರಾಧನೆಯ ಸಂಕೇತವಾಗಿದೆ. ಧಾರ್ಮಿಕ ಆಚರಣೆಗಳಲ್ಲಿ ಇದು ಹೆಚ್ಚು ಬಳಕೆಯಲ್ಲಿದೆ. ಕೋಲಾಟಗಳಲ್ಲಿ ಹಾಡು ಮತ್ತು ನೃತ್ಯ ಸರಿಸಮನಾಗಿ ಬೆಸೆದು ಕೊಂಡಿದೆ. ಕೋಲಾಟವು ಕಾಡು ಹಾಗೂ ನಾಡು ಎರಡೂ ಕಡೆಗಳಲ್ಲಿ ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡಿದೆ.

**ಬೆಟ್ಟಕುರುಬರ ಕಲೆಗಳು**

ಇದು ಬೆಟ್ಟಕುರುಬರ ಸಾಮೂಹಿಕ ನೃತ್ಯ. ತಮ್ಮದೇ ಆದ ವಿಶಿಷ್ಟ ಬೆಟ್ಟಕುರುಬರ ಭಾಷೆಯಲ್ಲಿ ಹಾಡುತ್ತಾ ಬೆಂಕಿಯ ಸುತ್ತ ನರ್ತಿಸುವ ಒಂದು ರೀತಿಯ ಕೋಲಾಟ. ಒಂದು ಅಡಿ ಉದ್ದದ ಕೋಲನ್ನು ವಿಶಿಷ್ಟ ರೀತಿಯಲ್ಲಿ ಅತೀ ಕೌಶಲ್ಯದಿಂದ ತಿರುಗಿಸುತ್ತಾ ಆಡುತ್ತಾರೆ. ಹಾಡಿನ ಮುಖ್ಯ ವಸ್ತುವಿಷಯ ದೇವರ ವರ್ಣನೆ. ಅವರ ಬದುಕು, ಕಷ್ಟ, ನೋವು, ನಲಿವು ಇತ್ಯಾದಿಗಳೇ ಇಲ್ಲಿ ಕೋಲಾಟ ಮತ್ತು ಹಾಡಿನ ರೂಪದಲ್ಲಿ ಹೊರಹೊಮ್ಮುತ್ತದೆ.

**ಸೋಲಿಗರ ಕಲೆಗಳು**

ಸೋಲಿಗರ ನೃತ್ಯಗಳು ಮುಖ್ಯವಾಗಿ ಆಚರಣೆಗೆ ಸಂಬಂಧಿಸಿದವುಗಳಾಗಿವೆ. ಆ ಸಂದರ್ಭದಲ್ಲಿ ಹಾಡುವ ಹಾಡುಗಳು ವಿಶಿಷ್ಟವಾದ ತಾಳ, ಲಯಗಳಿಂದ ಕೂಡಿರುತ್ತವೆ. ವಿಶೇಷವಾದ ಭಾವಭಂಗಿಗಳಿಂದ ಕೂಡಿರುವ ಈ ಹಾಡು ಮತ್ತು ನೃತ್ಯಗಳು ಕಣ್ಣಿಗೆ ತಂಪು ಕಿವಿಗೆ ಇಂಪು. ಇವರು ಪಿನಾಸಿ, ತಮಟೆ, ಸಾರಂಗ ಮೊದಲಾದ ವಾದ್ಯಪರಿಕರಗಳನ್ನು ಮುಖ್ಯವಾಗಿ ಉಪಯೋಗಿಸುತ್ತಾರೆ.

ಸೋಲಿಗರ ಪ್ರಮುಖ ನೃತ್ಯಗಳು

1. ಗೋರುಖಾನ ನೃತ್ಯ
2. ಕೋಲಾಟ
3. ರಂಗ ಕುಣಿತ

**ಗೋರುಖಾನ ನೃತ್ಯ:** ಇದೊಂದು ಸಮೂಹನೃತ್ಯವಾಗಿದ್ದು. ಗಂಡುಮಕ್ಕಳಷ್ಟೇ ಇದರಲ್ಲಿ ನರ್ತಿಸುತ್ತಾರೆ. ಋತುಮತಿಯಾಗದ ಹೆಣ್ಣುಮಕ್ಕಳು ನೃತ್ಯದಲ್ಲಿ ಜೊತೆಗೂಡುತ್ತಾರೆ. ಈ ನೃತ್ಯಕ್ಕೆ ಇಂತಿಷ್ಟೇ ಜನರಿರಬೇಕೆಂಬ ನಿಯಮವಿಲ್ಲ. ರೊಟ್ಟಿಹಬ್ಬದ ಸಂದರ್ಭದಲ್ಲಿ ರಾತ್ರಿ ಯಿಡೀ ಈ ನೃತ್ಯ ನೆರವೇರುತ್ತದೆ. ಈ ನೃತ್ಯದಲ್ಲಿ ಐದಾರು ಜನ ಕಂಸಾಳೆಯನ್ನು ಬಾರಿಸುತ್ತಾ ನರ್ತಿಸುತ್ತಾರೆ. ಒಬ್ಬ

ಕೋಡಂಗಿ ಮೈಗೆ ಬಣ್ಣ ಬಳಿದುಕೊಂಡು ಸೊಪ್ಪನ್ನು ಮೈಗೆ ಕಟ್ಟಿಕೊಂಡು ಕೈಯಲ್ಲಿ ಕೋಲು ಹಿಡಿದು ನೃತ್ಯಗಾರರ ಮಧ್ಯೆ ಬಂದು ಅವನದೇ ಆದ ವಿಶಿಷ್ಟ ಹೆಜ್ಜೆಗಳನ್ನು ಹಾಕಿ ಕುಣಿಯುತ್ತಿರುತ್ತಾನೆ.

ಸೋಲಿಗ ಸಮುದಾಯವು ಜಾತ್ರೆ, ಪರಸೆ, ವೈದ್ಯ, ಅಲ್ಲಿನ ಜನರ ಜೀವನಕ್ರಮ ಬೇಟೆಯಲ್ಲಿ ಅವರಿಗಾದ ಅನುಭವ, ಆಧುನಿಕತೆಯ ಮುಖಾಮುಖಿ ಮೊದಲಾದವು ವಸ್ತು ವಿಷಯಗಳು. ಈ ವಿಷಯಗಳು ಹಾಡಿನ ರೂಪದಲ್ಲಿ ನೃತ್ಯಕ್ಕೆ ಉತ್ಸಾಹವನ್ನು ತುಂಬುತ್ತದೆ. ಮಧ್ಯದಲ್ಲಿ ಕಲಾವಿದರಿಗೆ ವಿರಾಮ ನೀಡುವ ಸಲುವಾಗಿ 'ಕಗ್ಗ' ಎಂಬ ಹಾಡಿನ ಪ್ರಕಾರವನ್ನು ಬಳಸಿ ಪ್ರೇಕ್ಷಕರಿಗೆ ರಸಾಸ್ವಾದವಾಗುವಂತೆ ಎಚ್ಚರಿಕೆ ವಹಿಸುತ್ತಾರೆ.

ಗೋರುಖಾನ ನೃತ್ಯದಲ್ಲಿ ಹಾಡುವ ಹಾಡು

ದೊಡ್ಡ ಸಂಪಿಗೆ ನನ್ನೊಡೆಯ
ಕಾತುಕಾಪಾಡಿ ಮಡುಗುನಯ್ಯ
ಗೋರು ಗೋರೂರೂ ಗೋರೂಕಾನಾ
ಕಾವಿಕಂತೆ ಹೊತ್ತೂರಯ್ಯ
ಬಂದು ನಿಂದವನೆ ರಂಗದಲ್ಲಿ
ಗೋರು ಗೋರೂರೂ ಗೋರೂಕಾನಾ
ಹೂವಿನ ಕೊಂಬು ಮುರಿಯೋಗಿಲ್ಲೆ
ಮೊಗ್ಗಿನ ಕೊಂಬು ಬಾಡಿಗಿಲ್ಲೆ
ಮೊಗ್ಗು ಮೊಗ್ಗುರೆಲ್ಲಾ ನಿನ್ನದಯ್ಯೋ
ಕಣ್ಣಿಟ್ಟು ನೋಡುನು ದೇವಾರೆ
ಹಾಗೆಯೇ ನೆನೆದು ನೋಡಿದಲೆ
ಜೀವನೆ ಬೆಂಡು ಆದದೆಲೋ
ಕಾರೆಲೆ ಹಾಗೆ ಕರಗಿದಡೆ
ಬೆಂಡೆಲೆ ಹಾಗೆ ಬೆಂದದಲಿ
ಗೋಟು ಗೋರೂರೂ ಗೋರೂಕಾನಾ
ಇನ್ನಿಂತ ವರ್ಷ ಬಾರನಯ್ಯೋ
ಕಾಪಿಟ್ಟು ಮಡುಗುನು ದೇವರಯ್ಯ
ಗೋರು ಗೋರೂರೂ ಗೋರೂಕಾನಾ

ಗೌರ್ಮೆಂಟು ಬಸ್ಸನ್ನು ಮೊದಲ ಸಲ ನೋಡಿದಾಗ ಅವರ ಆಶ್ಚರ್ಯಕ್ಕೆ ಎಣೆಯೇ ಇಲ್ಲದಾಯಿತು. ಅದು ಕೈ ಅಡ್ಡ ಹಾಕಿದಾಗ ಗಕ್ಕನೆ ನಿಲ್ಲುವ ಪರಿ, ಬಿಳಿಗಿರಿರಂಗನ ಬೆಟ್ಟ, ಮಲೆ ಮಾದೇಶ್ವರ ಬೆಟ್ಟದ ಆ ದುರ್ಗಮ ಹಾಡಿಯಲ್ಲಿ ತಿರುವಿನಲ್ಲಿ ಚಲಿಸುವ ಪರಿ ಅವರಲ್ಲಿ ಸೋಜಿಗವನ್ನು ಉಂಟುಮಾಡುತ್ತದೆ. ಅವೆಲ್ಲವನ್ನು ಆಶ್ಚರ್ಯ ಮತ್ತು ಮೆಚ್ಚುಗೆಯ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ. ಅದನ್ನು ಗೋರುಖಾನ ಹಾಡಿನ ಸಾಲಿನಲ್ಲಿ ಸೇರಿಸಿ ವಾಸ್ತವದೊಂದಿಗೆ ತಮ್ಮ ಬದುಕನ್ನು ಬೆಸೆದುಕೊಳ್ಳುವ ರೀತಿ ಅವರ ಜೀವನೋತ್ಸಾಹವನ್ನು ಪರಿಚಯಿಸುತ್ತದೆ.

ಚಾಮರಾಜ ನಗರದ ಗೌರ್ಮೆಂಟಲೊ
ಗೌರ್ಮೆಂಟು ಗಾಡಿ ಬಂದದಲ್ಲೋ
ಅಡ್ಡಾರೆ ಕಯ್ಯ ಬೀಸಂದಿಗಾ
ನಿಲ್ಸಾದದೆ ಡ್ರೈವರಯ್ಯೋ
ಆಗೂರಿ ಮರ ತಿರುವಿನಲ್ಲಿ
ನೊಡಿ ಬುಡೀಗ ಡ್ರೈವರಯ್ಯೋ
ಹನ್ನೆರಡು ಮೈಲಿ ಫಾರೆಸ್ಟಲ್ಲೋ
ಹನ್ನೆರಡಾಣಿ ತಪ್ಪದಲೋ
ಬಗ್ಗಾಲು ಹೊನ್ನೆ ತಾಳಿನಲ್ಲಿ
ಬಗ್ಗಿ ಬಾರೆಲೋ ಬಳಿಯಾರವೆ
ಬಗ್ಗೀ ಬಳುಕೀ ಬಂದಾಲುವೇ
ಸಕರೆ ಸ(ಚ)ಪಾತಿ ಕೊಡುವೆನೆಲೋ
ಕೊಳ್ಳೆಗಾಲದ ರೋಡಿನಲಿ
ಜಾನಕಿ ಬಸ್ಸು ಬಂದಾದಲ್ಲೋ
ಅಡ್ಡಾಕಿ ಕೈಯ್ಯಾ ಬೀಸಂದಿಗಾ
ದಗ್ಗಾನೆ ಬಸ್ಸು ನಿಂತಾತಲ್ಲೋ...'[4]

ಹೊರಜಗತ್ತಿನ ಸಂಪರ್ಕದಿಂದ ಅವರ ಬದುಕು ಬದಲಾದಂತೆ ಅವರ ಉಡುಗೆ ತೊಡುಗೆ ವೇಷ ಭೂಷಣವೂ ಬದಲಾಯಿತು. ಸಂಕಮ್ಮನ ಸಾಲಿನಲ್ಲಿ ನೀಲಯ್ಯ ನೀಡಿದ ಗಂಡ ನೀಡಿದ ಉಗುನಿಯ ಸೊಪ್ಪು, ಎಕ್ಕದ ಎಲೆ, ಕಬ್ಬಳಿಯಂಬನ್ನು ಮುಲಾಜಿಲ್ಲದೆ ಧರಿಸುವ ಸಂಕಮ್ಮಳು ಒಂದೆಡೆಯಾದರೆ ಆಧುನಿಕತೆಯ ಸೆಳೆತಕ್ಕೆ ಸಿಲುಕಿದ ಸೋಲಿಗರ ಹೆಣ್ಣುಮಕ್ಕಳ

ರವಿಕೆಯೂ ಬದಲಾಗುತ್ತದೆ. ಅವರ ಮಿರಿಮಿರಿ ಮಿರುಗುವ ರವಿಕೆ ಬಟ್ಟೆಯನ್ನು ಬೆಂಕಿ ಕಲ್ಲಿಗೆ ಹೋಲಿಸಿ ಬೆಂಕಿಯಂತೆ ಮಿರುಗುಟ್ಟುತ್ತಿದೆ ಎನ್ನುತ್ತಾರೆ.

ಬೆಂಕಿ ಕಲ್ಲಿಟ್ಟ ಜಾಕಿಟೆಲೋ
ಮೈಮೇಲೆ ತಾನೆ ಮೆರೆದಾದಲ್ಲೋ[5]

ಕೇವಲ ಹೆಣ್ಣುಮಕ್ಕಳು ಮಾತ್ರವಲ್ಲ, ಯುವಕರೂ ಕೂಡ ಆಧುನಿಕತೆಯ ಮೋಹಕ್ಕೆ ಒಳಗಾಗಿದ್ದಾರೆ ಎಂಬುದನ್ನು ಮುಂದಿನ ಸಾಲು ತಿಳಿಸಿಕೊಡುತ್ತದೆ

ಕೈಯಲ್ಲಿ ವಾಚ ಕಟ್ಟಿಲ್ಲಲೊ
ಕಣ್ಣಿಗೆ ಕನ್ನಡಿ ಹಾಕುರೆಲೋ
ನೀ ಕಾಲಿಗೆ ಬೂಡಿಸು ಹಾಕರೆಲೊ
ನೀ ಬಲಗೈಲಿ ರೇಡಿಯೋ ತಾಬೂರೆಲೋ
ನೀ ಬಾಳ  ಜೋಕಿನಾ ಬಂದಿಯಲ್ಲೋ[6]

ಶೋಕಿ ಇವರ ಬಾಯಲ್ಲಿ ಜೋಕಿ ಆಗಿರುವುದನ್ನು ನಾವು ಗಮನಿಸಬಹುದು.

ಕೋಲಾಟ: ಈ ಕೋಲಾಟವನ್ನು ಹುಣಸೂರಿನ ಭಾಗದಲ್ಲಿ ಮತ್ತು ಮಹದೇಶ್ವರ ಬೆಟ್ಟದ ಹಲವು ಭಾಗಗಳಲ್ಲಿ ಕಾಣಬಹುದು. ಇತರೆ ಬುಡಕಟ್ಟುಗಳ ಸಂಪರ್ಕದಿಂದ ಈ ನೃತ್ಯ ಇವರಲ್ಲಿ ರೂಡಿಗೆ ಬಂದಿರಬಹುದು.

ಕೋಲಾಟದ ವಿಧಗಳೆಂದರೆ ಸುತ್ತುಕೋಲು, ಕೊರವಂಜಿಕೋಲು, ಜಡೆಕೋಲು ಇತ್ಯಾದಿ. ಹಾಡಿನ ಭಾಷೆ ವಸ್ತುವಿಷಯಗಳನ್ನು ಗಮನಿಸಿದಾಗ ಇದು ಮೂಲತಃ ಸೋಲಿಗರದ್ದಲ್ಲ ಎಂಬುದನ್ನು ಗಮನಿಸಬಹುದು.

**ರಂಗದ ಕುಣಿತ:** ಇದು ಮಾರಿಹಬ್ಬದ ಸಂದರ್ಭದಲ್ಲಿ ನಡೆಯುವ ನೃತ್ಯ ಅಥವಾ ಪ್ರದರ್ಶನ. ಸೋಲಿಗರ ಮಾರಿಹಬ್ಬಕ್ಕೂ ಹೆಚ್.ಡಿ.ಕೋಟೆಯ ಜೇನುಕುರುಬರ ಮಾರಿ ಹಬ್ಬಕ್ಕೂ ಬಹಳಷ್ಟು ಸಾಮ್ಯತೆಯಿದೆ. ಸೋಲಿಗರಲ್ಲೂ ಕೂಡ ಮಹದೇಶ್ವರ ಬೆಟ್ಟದ ಭಾಗದಲ್ಲಿ ಮಾತ್ರ ಈ ಹಬ್ಬ ಕಂಡುಬರುತ್ತದೆ. ಮಾರಿಹಬ್ಬವು ಸುಮಾರು 11 ದಿನಗಳ ಕಾಲ ನಡೆಯುತ್ತದೆ. ಹಬ್ಬಕ್ಕೆ ಒಂದು ತಿಂಗಳ ಮೊದಲೇ ತಯಾರಿ ಪ್ರಾರಂಭವಾಗುತ್ತದೆ. ಮೊದಲ ದಿನ ರಂಗದ ಮಧ್ಯೆ ಬೆಂಕಿ ಕಂಬ ನೆಡುತ್ತಾರೆ. ಪ್ರತಿದಿನ ಸಂಜೆ ಇಲ್ಲಿ ನೃತ್ಯ ಪ್ರದರ್ಶನವಿರುತ್ತದೆ. ಮನೆಗೊಬ್ಬರಂತೆ ಕಡ್ಡಾಯವಾಗಿ ಇದರಲ್ಲಿ ಭಾಗವಹಿಸಬೇಕು ಎಂಬುದು ಅಲಿಖಿತ ನಿಯಮ. ಕಾಲಿಗೆ ಗೆಜ್ಜೆ ಕಟ್ಟಿ ಕುಣಿಯುವ ಈ ನೃತ್ಯಕ್ಕೆ ಪಿನಾಸಿ, ಮದ್ದಳೆ, ತಮಟೆಯ ಹಿಮ್ಮೇಳವಿರುತ್ತದೆ. ಹಿರಿಯರ ಮಾರ್ಗದರ್ಶನದಲ್ಲಿ

ಈ ನೃತ್ಯ ನಡೆಯುತ್ತದೆ. ವಾದ್ಯಗಳ ವರಸೆಗೆ ಅನುಗುಣವಾಗಿ ಕುಣಿತದ ಭಾವ ಭಂಗಿಗಳು ಇರುತ್ತವೆ. ವಿರಾಮದ ಮಧ್ಯೆ ಮಾದೇಶ್ವರನ ಮೇಲೆ, ಮಾರಮ್ಮನ ಮೇಲೆ ಕಗ್ಗವನ್ನು ಹಾಡುತ್ತಾರೆ. ಅಂತಿಮ ಪ್ರದರ್ಶನ ಹಬ್ಬದಂದು ಏರ್ಪಡುತ್ತದೆ.

**ಮಹಿಳೆಯ ಕುಣಿತ**

ಗುಬ್ಬಿಯಾಲೆ :

ಗುಬ್ಬಿಲೋಲಾ ಇದು ಗುಬ್ಬಿಲೋಲಾ.

ದೇವಾನು ದೇವರಿಗೆ ಗುಬ್ಬಿಲೋಲಾ ॥ಪ॥

ಮಹಿಳೆಯರು ಈ ಹಾಡಿಗೆ ತಕ್ಕಂತೆ ಸುತ್ತ ನಿಂತು ಕುಣಿಯುತ್ತಾರೆ. ಪುರುಷರ ಪಕ್ಕವಾದ್ಯವೂ ಇರಬಹುದು. ಕೆಲವೊಮ್ಮೆ ಚಪ್ಪಾಳೆಯ ಮೂಲಕ ಗತ್ತು, ಗಾಂಭೀರ್ಯದಿಂದ ಕುಣಿಯುತ್ತಾರೆ.

**ಸೋಲಿಗರ ಗೀರುಗಡ್ಡಿ ಮೇಳ:** ಗೀರುಗಡ್ಡಿ ಎಂಬ ಪಿಟೀಲು ವಾದ್ಯದೊಂದಿಗೆ ತಾಳ ದಮ್ಮಡಿಗಳನ್ನು ಬಳಸಿ 4–5 ಜನ ಸೇರಿ ಕಥೆಗಳನ್ನು ಹಾಡುತ್ತಾ ಬಿಡಿ ಹಾಡುಗಳನ್ನು ಹೇಳುತ್ತಾರೆ. ಇದನ್ನು ಗೀರುಗಡ್ಡಿ ಮೇಳ ಎಂದು ಕರೆಯುತ್ತಾರೆ.

**ಕುಡಿಯರ ಕಲೆಗಳು**

**ಕುಡಿಯರ ಉರುಟಿಕೊಟ್ ಆಟ್:** ಈ ನೃತ್ಯದಲ್ಲಿ ಗಂಡಸರು ಬಿಳಿಯ ನಿಲುವಂಗಿ, ಪಾಯಿಜಾಮ ತಲೆಗೆ ಪೇಟ ನಡುವಿಗೆ ವಸ್ತ್ರ ಕಟ್ಟಿಕೊಂಡಿರುತ್ತಾರೆ. ಮಹಿಳೆಯರು ಕೊಡವ ಹೆಂಗಸರಂತೆ ಸೀರೆ ಮತ್ತು ವೇಷ ಭೂಷಣ ಧರಿಸಿರುತ್ತಾರೆ. ಕೊಡವರಂತೆಯೇ ಗಂಡು ಹೆಣ್ಣುಗಳು ವೇಷ ಧರಿಸಿ ಕೈಗಳನ್ನು ಮೇಲಕ್ಕೆತ್ತಿ ಕಾಲುಗಳನ್ನು ಲಯಬದ್ಧವಾಗಿ ಎತ್ತಿ ಇಡುತ್ತ ದೇಹವನ್ನು ಹಿಂದೆ ಮುಂದೆ ತಿರುಗಿಸಿ ಆಡುತ್ತಾರೆ. ಈ ನೃತ್ಯದಲ್ಲಿ ದುಡಿಯನ್ನು ಬಳಸುತ್ತಾರೆ. ಈ ನೃತ್ಯವು ನಿಧಾನವಾಗಿ ಪ್ರಾರಂಭವಾಗಿ ಅನಂತರ ಉತ್ಸಾಹವನ್ನು ವೇಗವನ್ನು ಪಡೆದುಕೊಳ್ಳುತ್ತದೆ. ಮಕ್ಕಳು, ವೃದ್ಧರು ಪಾಲ್ಗೊಳ್ಳುವುದಿಲ್ಲ. ಗಂಡಸರು ಮತ್ತು ಹೆಂಗಸರು ಸೇರಿ ಇದನ್ನು ಆಡುತ್ತಾರೆ.

**ಚಿತ್ರಕಲೆ:** ಕಲೆ ಪ್ರತಿಯೊಬ್ಬರ ಬದುಕಿನಲ್ಲೂ ಹಾಸುಹೊಕ್ಕಾಗಿದೆ. ಈ ಕಲೆ ವ್ಯಕ್ತಿ ವ್ಯಕ್ತಿಗಳ ನಡುವೆ ಏಕಸ್ವರೂಪದಲ್ಲಿ ಇರಬಹುದು. ಇಲ್ಲವೇ ಭಿನ್ನ ಸ್ವರೂಪವನ್ನು ಹೊಂದಿರಬಹುದು. ಹಾಗಾಗಿ 'ಕಲೆ'ಯನ್ನು ಮಾನವನಲ್ಲಿ ಹಲವು ಬಗೆಯಲ್ಲಿ ನೋಡುತ್ತೇವೆ. ಈ ಹಲವು ಬಗೆಯ ಕಲೆಗಳು ಜನಾಂಗ ಅಥವಾ ಸಮುದಾಯಗಳ ಹಿನ್ನೆಲೆಯಲ್ಲಿ ವೈಶಿಷ್ಟ್ಯವನ್ನು, ವಿಭಿನ್ನತೆಯನ್ನು, ವಿಶೇಷತೆಯನ್ನು ಹೊಂದಿರುತ್ತವೆ. ಇವು ಆಯಾ ಸಮುದಾಯದ ಬದುಕಿಗೆ ಹೊಂದಿಕೊಂಡೇ ಇರುತ್ತವೆ. ಕಲೆಗಳನ್ನು ಬಿಟ್ಟು ಮನುಷ್ಯನ ಬದುಕಿಲ್ಲ. ಅವು ಮಾನವನ ಬದುಕಿನ ಉಸಿರು. ಕಲೆಗಳಿಲ್ಲದೆ

ಮನುಷ್ಯನ ಬದುಕಿಗೆ ಅರ್ಥವಿಲ್ಲ. ಈ ಮನುಷ್ಯನ ಹಲವು ಬಗೆಯ ಕಲೆಗಳಲ್ಲಿ ಚಿತ್ರಕಲೆಯೂ ಒಂದು. ಇದು ಮಾನವನ ಬದುಕಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿದೆ.

ಕರ್ನಾಟಕದ ಬುಡಕಟ್ಟು ಚಿತ್ರಕಲೆಯನ್ನು ಕುರಿತ ಚರ್ಚೆಗಳು ತಿರಾ ವಿರಳ. ಬುಡಕಟ್ಟಿನ ಚಿತ್ರಕಲೆಯನ್ನು ಅಧ್ಯಯನ ಮಾಡುವಾಗ ಅವರ ಸಂಪ್ರದಾಯ, ಆಚರಣೆಗಳನ್ನು ಬಿಟ್ಟು ಅಧ್ಯಯನ ಮಾಡಲು ಸಾಧ್ಯವಿಲ್ಲ. ಈ ಸಂಪ್ರದಾಯ ಆಚರಣೆಗಳ ಹಿನ್ನೆಲೆಯಲ್ಲಿ ಬುಡಕಟ್ಟುಗಳ ಚಿತ್ರಕಲೆಯನ್ನು ಅಧ್ಯಯನ ಮಾಡಬೇಕಾಗುತ್ತದೆ. ಹಾಗಾಗಿ ಇಲ್ಲಿಯ ಚಿತ್ರಗಳು ಸಂಪ್ರದಾಯ ಮತ್ತು ಆಚರಣಾಸಂಬಂಧಿ ಚಿತ್ರಗಳಾಗಿ ನಮಗೆ ಕಾಣಿಸುತ್ತವೆ. ಈ ಚಿತ್ರಗಳಲ್ಲಿ ಆಯಾ ಬುಡಕಟ್ಟಿನ ಸಂಪ್ರದಾಯ, ಆಚರಣೆ, ನಂಬಿಕೆ, ಜೀವನಪದ್ಧತಿ, ಆಚಾರ–ವಿಚಾರ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಮುಂತಾದ ಸ್ಥಿತಿಗತಿಗಳು ಮುಖ್ಯವಾಗುತ್ತವೆ. ಇವೆಲ್ಲವುಗಳ ಹಿನ್ನೆಲೆಯನ್ನು ಈ ಬುಡಕಟ್ಟು ಚಿತ್ರಗಳು ಒಳಗೊಂಡಿರುತ್ತವೆ.

ಕಲೆ ಇಂದು ಪ್ರತಿಯೊಬ್ಬ ಮನುಷ್ಯನ ಬದುಕಿನಲ್ಲಿ ಹಾಸುಹೊಕ್ಕಾಗಿದೆ. ಹಾಗೆಂದಾಕ್ಷಣ ಇದು ಏಕಸ್ವರೂಪದಲ್ಲಿ ಇದೆ ಎಂದು ಭಾವಿಸುವಂತಿಲ್ಲ. ಬಹುಶಃ ಪ್ರಪಂಚದಲ್ಲಿ ಎಷ್ಟು ಮನುಷ್ಯರು ಇರಬಹುದೋ ಅಷ್ಟೇ ಸಂಖ್ಯೆಯ ಅಭಿವ್ಯಕ್ತಿ ಸ್ವರೂಪಗಳು ನಮಗೆ ಸಿಗಬಹುದು. ಆದರೆ ಇಂದು ನಾವು ಆ ಎಲ್ಲ ಅಭಿವ್ಯಕ್ತಿ ಸ್ವರೂಪಗಳನ್ನು ಕಲೆಯೆಂದು ಕರೆಯುವುದಿಲ್ಲ. ಕಲೆಗೆ ಒಂದು ರೂಪವಿರುತ್ತದೆ, ಒಂದು ಚೌಕಟ್ಟು ಇರುತ್ತದೆ, ಉದ್ದೇಶವಿರುತ್ತದೆ. ಅಲ್ಲದೆ ಮನುಷ್ಯನ ಬದುಕಿನ ಪರಂಪರಾಗತ ಆಶಯಗಳನ್ನು ವ್ಯಕ್ತಪಡಿಸುವ ಹಂಬಲವಿರುತ್ತದೆ. ಹಾಗೆಯೇ ಒಂದು ಸ್ವರೂಪದಲ್ಲಿ ಕಾಣಿಸಿಕೊಳ್ಳುವ ಕಲಾತ್ಮಕ ಸಂಗತಿಗಳನ್ನು ನಾವು ಕಲೆಯೆಂದು ಕರೆಯುತ್ತೇವೆ. ಕಲೆಗೆ ನಾನಾ ಮುಖಗಳಿವೆ. ಬಹುಶಃ ಮನುಷ್ಯನ ಮನಸ್ಸು ಎಷ್ಟೆಲ್ಲ ರೀತಿಯಲ್ಲಿ ಆಲೋಚಿಸಬಹುದೋ ಅಷ್ಟೆಲ್ಲ ರೀತಿಯ ಕಲಾಸ್ವರೂಪಗಳು ಇರಲು ಸಾಧ್ಯ. ಸಹಸ್ರಾರು ವರ್ಷಗಳ ಜೀವನಾನುಭವದ ತಾಲೀಮಿನಲ್ಲಿ ಪಕ್ವಗೊಂಡ ಸೃಜನಾತ್ಮಕ ಸ್ವರೂಪಗಳನ್ನು ಕಲೆಯೆಂದು ಕರೆಯಲು ಆರಂಭಿಸಿದ್ದೇವೆ. ಹೀಗೆ ಯಾವುದೇ ಕಲೆಯೆಂಬದು ಅದು ಆಧುನಿಕ ಕಲೆಯಾಗಿರಲಿ ಅಥವಾ ಸಾಂಪ್ರದಾಯಿಕ ಕಲೆಯಾಗಿರಲಿ ಅದು ದಿಢೀರನೇ ಹುಟ್ಟಿಕೊಂಡಿದ್ದಲ್ಲ. ಅದಕ್ಕೆ ಸಹಸ್ರಾರು ವರ್ಷಗಳ ಇತಿಹಾಸವಿದೆ ಮತ್ತು ಪರಂಪರೆಯ ಆಸರೆಯೂ ಇದೆ. ಬುಡಕಟ್ಟು ಸಮುದಾಯದ ಒಡಲಲ್ಲಿ ಹುಟ್ಟಿ ಬೆಳೆದು ವಿಕಾಸಗೊಂಡು ಬದಲಾಗುತ್ತಿರುವ, ನಾಶ ಹೊಂದುತ್ತಿರುವ, ಆಧುನಿಕತೆಯ ಪ್ರಭಾವ ಬೀರುತ್ತಿರುವ ಸಂದರ್ಭದಲ್ಲಿ ಕರ್ನಾಟಕ ಬುಡಕಟ್ಟುಗಳ ಸ್ಥಿತಿಗತಿ, ಬದುಕು ಒಂದು ಕ್ರಮದಲ್ಲಿ ಇಲ್ಲ. ಇದು ಇಂದು ಚಿತ್ರಕಲೆಯ ಮೇಲೂ ಹಲವು ರೀತಿಯ ಪರಿಣಾಮವನ್ನು ಬೀರುತ್ತಲಿದೆ. ಬುಡಕಟ್ಟುಗಳ ಮೇಲೂ ಹಲವು ರೀತಿಯ ಪರಿಣಾಮವನ್ನು ಬೀರುತ್ತಲಿದೆ.

ಬುಡಕಟ್ಟು ಸಮುದಾಯಗಳು ತಮ್ಮ ಮನೆಗಳ ಗೋಡೆಯ ಮೇಲೆ ಬಿಡಿಸುವ ಚಿತ್ರಗಳಿಗೆ ಕಾಡಿನಲ್ಲಿರುವ ಗಿಡ, ಬಳ್ಳಿ, ಪ್ರಾಣಿ, ಪಕ್ಷಿಗಳೇ ಪ್ರೇರಕ. ಸೌಂದರ್ಯಪ್ರಿಯರಾದ ಈ ಬುಡಕಟ್ಟುಗಳು ತಮ್ಮ ಭಾವನೆಗಳನ್ನು ಈ ರೂಪದಲ್ಲಿ ಅಭಿವ್ಯಕ್ತಿಪಡಿಸುತ್ತಾರೆ. ಸುಮಾರು ಕ್ರಿ.ಪೂರ್ವ 300ಕ್ಕೂ ಹಿಂದಿನ ಆದಿಮಾನವನ ಚಿತ್ರಕಲೆಯ ಸ್ವರೂಪ ನಮಗೆ ಗುಹೆಗಳಲ್ಲಿ ಕಲ್ಲುಬಂಡೆಗಳಲ್ಲಿ, ಮರಗಳು, ಎಲೆಗಳು, ತೊಗಟೆಗಳ ಮೇಲೆ ಕಾಣಸಿಗುತ್ತವೆ. ಆದಿಮರು ಕಲ್ಲಿನಿಂದ ಅಥವಾ ಹರಿತವಾದ ಗಟ್ಟಿಯಾದ ಆಯುಧಗಳನ್ನು ಉಪಯೋಗಿಸಿ ಚಿತ್ರಗಳನ್ನು ಬಿಡಿಸುತ್ತಿದರು ಅಥವಾ ಕೆತ್ತುತ್ತಿದ್ದರು. ಅವರು ಹಣ್ಣು, ಎಲೆ, ಕಾಯಿ, ಕಲ್ಲು, ಮಣ್ಣಿನಿಂದ ವಿವಿಧ ಬಣ್ಣಗಳನ್ನು ತಯಾರಿಸುತ್ತಾರೆ. ನಂತರ ವಿವಿಧ ಎಲೆ, ಮಣ್ಣು ಇತ್ಯಾದಿಗಳಿಂದ ಬಣ್ಣಗಳನ್ನು ತಯಾರಿಸಿ ಈ ಚಿತ್ರಗಳಿಗೆ ಬಣ್ಣದ ಲೇಪನವನ್ನು ಮಾಡುತ್ತಿದ್ದರು. ಈ ಬಣ್ಣಗಳು ಎಷ್ಟೇ ಸಾವಿರ ವರ್ಷಗಳು ಕಳೆದರೂ ನಾಶವಾಗದೆ ಇಂದಿಗೂ ಪುರಾತನ ಕಲ್ಲುಬಂಡೆಗಳ ಮೇಲೆ ಹಾಗೆಯೇ ಉಳಿದುಬಂದಿರುವುದನ್ನು ನಾವು ಕಾಣಬದುದು. ನಮ್ಮ ಆದಿವಾಸಿಗಳ ನೈಸರ್ಗಿಕ ಜ್ಞಾನದ ಸಂಕೇತವಾಗಿ ಇವು ಇಂದಿಗೂ ಉಳಿದುಕೊಂಡು ಬಂದಿದೆ. ಮೊದಲು ಮನುಷ್ಯನ ಕಲೆಯ ಸ್ವರೂಪ ಚಿತ್ರಗಳಾಗಿದ್ದವು. ಇವು ಬೇಟೆ, ಯುದ್ಧ, ಮಾನವನ ಜೀವನ, ಪ್ರಾಣಿಪಕ್ಷಿಗಳನ್ನು ಸಂಕೇತಿಸುತ್ತಿದ್ದವು. ಕೆಲವೊಮ್ಮೆ ಇವು ಕುಲದೇವತೆಯ ಲಾಂಛನವೂ ಆಗಿರುತ್ತಿದ್ದವು.

ಬುಡಕಟ್ಟು ಜನರು ಮುಖ್ಯವಾಗಿ ಗೋಡೆ, ಕಲ್ಲು, ಮರದ ತೊಗಟೆ, ಹಣ್ಣು ಎಲೆ ಮೊದಲಾದವುಗಳನ್ನು ತಮ್ಮ ಭಿತ್ತಿಯಾಗಿ ಬಳಸುತ್ತಾರೆ. ಅದಕ್ಕೆ ಅವರು ಆಯ್ಕೆ ಮಾಡುವ ಬಣ್ಣ ಸಾಧನಗಳೆಲ್ಲವೂ ಪ್ರಕೃತಿಯಿಂದಲೇ ದೊರೆತವು. ಪ್ರಕೃತಿಯಿಂದ ದೊರೆತ. ಅದನ್ನು ಈ ಚಿತ್ರಗಳಿಗೆ ಬಣ್ಣಗಳಾಗಿ ಉಪಯೋಗಿಸುತ್ತಾರೆ. ಇಂದಿಗೂ ಸಾವಿರಾರು ವರ್ಷಗಳು ಕಳೆದರೂ ಈ ಚಿತ್ರಗಳು ತಮ್ಮ ಬಣ್ಣವನ್ನು, ಸೌಂದರ್ಯವನ್ನು ಕಳೆದುಕೊಳ್ಳದೆ ಇಂದಿಗೂ ಹಾಗೆ ಉಳಿಸಿಕೊಂಡಿರುವುದನ್ನು ಕಾಣಬಹುದು. ಮುಖ್ಯವಾಗಿ ಈ ಚಿತ್ರಕಲೆಗಳು ಅವರ ಸಂಪ್ರದಾಯ, ಆಚರಣೆ, ನಂಬಿಕೆ, ಕಟ್ಟುಪಾಡು, ರೀತಿ, ನೀತಿ, ವಿಧಿ, ನಿಷೇಧಗಳನ್ನು ಹೇಳುತ್ತವೆ.

ಭಾಷೆ, ಲಿಪಿಗಿಂತ ಮೊದಲು ಬಂದಿದ್ದು ಚಿತ್ರಗಳು. ನಮ್ಮ ಆದಿಮರು ಮೊದಲು ಪ್ರಾಣಿಗಳ, ಪಕ್ಷಿಗಳ, ಮರಗಳ, ಮನುಷ್ಯರ, ಬೇಟೆಯ ಚಿತ್ರವನ್ನು ಕಲ್ಲಿನಲ್ಲಿ ಬರೆಯುತ್ತಿದ್ದರು. ಸಾಮೂಹಿಕ ಬೇಟೆಯು ಪರಿಕಲ್ಪನೆಯಿಂದ ಈ ಕಲೆಗಳೂ ಸಹ ಸಾಮೂಹಿಕ ಸೃಷ್ಟಿಯಾಗಿದೆ. ಕೆಲವೊಮ್ಮೆ ಮನುಷ್ಯನ ಮತ್ತು ಪ್ರಾಣಿಯ ಸಂಘರ್ಷವೂ ಕೂಡ ಚಿತ್ರಿತವಾಗುತ್ತಿತ್ತು. ಸಮುದಾಯದ ನಡುವಿನಿಂದ ಹುಟ್ಟಿರುವ ಇವು ಸಮೂಹ ಸೃಷ್ಟಿ. ಇಂತಹ ಜನಪದ ಪ್ರದರ್ಶನ ಕಲೆಗಳು

ಅಪಾರವಾದ ಪ್ರಾಕೃತಿಕ ಜ್ಞಾನವನ್ನು ಹೊಂದಿರುತ್ತದೆ. ಚಿತ್ರಕಲೆಯನ್ನು ಕಲಿಯುವುದರಿಂದ ನಿರೀಕ್ಷಣ ಶಕ್ತಿಯೂ, ಸ್ಮರಣ ಶಕ್ತಿ ವೃದ್ಧಿಗೊಂಡು, ವಿಮರ್ಶಾತ್ಮಕ ಬುದ್ಧಿಯ ವಿಕಾಸವಾಗುತ್ತಿದೆ. ಮನುಷ್ಯನನ್ನು ಸುಸಂಸ್ಕೃತನನ್ನಾಗಿ ಮಾಡುವ ಶಕ್ತಿಯು ಕಲೆಗಿದೆ. ಕಲೆಗಳು ಸಂಸ್ಕೃತಿಯೊಂದಿಗೆ ಹೊಂದಿಕೊಂಡಿದ್ದು ನಿರ್ದಿಷ್ಟ ಸಮುದಾಯದ ಅಮೂಲ್ಯ ಆಸ್ತಿಯಾಗಿದೆ.

**ಸೋಲಿಗರ ಚಿತ್ರಗಳು:** ಬಿಳಿಗಿರಿರಂಗನ ಬೆಟ್ಟದ ಸುತ್ತಲಿನ ಸೋಲಿಗರು ಇನ್ನೂ ತಮ್ಮ ಆದಿಮ ಜೀವನ ಶೈಲಿಯನ್ನು ಬಿಟ್ಟುಕೊಟ್ಟಿಲ್ಲ. ಇವರು ಕೃಷಿಗೆ ಸಂಬಂಧಿಸಿದ ಹಲವು ಹಬ್ಬಗಳನ್ನು ಆಚರಿಸುತ್ತಾರೆ. ಅವುಗಳಲ್ಲಿ ಹೊಸರಾಗಿ ಹಬ್ಬ, ರೊಟ್ಟಿಹಬ್ಬ, ಮುನಿಮಾಡುವುದು ವಿಶೇಷವಾಗಿವೆ. ಈ ಹಬ್ಬಗಳಲ್ಲಿ ಮನೆಯನ್ನು ಸಾರಿಸಿ ಮಡಿಬಟ್ಟೆಯನ್ನು ಧರಿಸಿ ಮನೆಯ ಅಲಂಕಾರಕ್ಕೆ 'ರಂಗೋಲಿ'ಯನ್ನು ಹಾಕುತ್ತಾರೆ. ಹಾಗೆಯೇ ಇವರು ವಿಶೇಷವಾಗಿ ಸಂಕಮ್ಮನ ಹಬ್ಬವನ್ನು ಮಾಡುತ್ತಾರೆ. 'ಸಂಕಮ್ಮ ಸೋಲಿಗರ ಬುಡಕಟ್ಟಿನ 'ತಾಯಿ' ಎಂಬುದು ಪುರಾಣಗಳಿಂದ ವ್ಯಕ್ತವಾಗುತ್ತದೆ. ಒಂದು ಕಾಲದಲ್ಲಿ ಬದುಕುತ್ತಿದ್ದ ವ್ಯಕ್ತಿ ವಿಶಿಷ್ಟವಾದ ರೀತಿಯ ಬದುಕನ್ನು ರೂಢಿಸಿಕೊಂಡಿದ್ದರ ಪರಿಣಾಮವಾಗಿ ಪೌರಾಣಿಕ ವ್ಯಕ್ತಿಯನ್ನಾಗಿ ಪರಿಗಣಿಸುತ್ತಾರೆ. ಈ ಸಂಕಮ್ಮನ ಹಬ್ಬದಲ್ಲಿ ಇವರು ಗೋಡೆಗಳ ಮೇಲೆ ಶಂಕ, ಜಾಗಟೆ, ಚಿತ್ರಗಳನ್ನು ಬರೆಯುತ್ತಾರೆ. ಈ ಚಿತ್ರಗಳು ಬಿಳಿಗಿರಿರಂಗನಬೆಟ್ಟ, ಮಲೆಮಾದೇಶ್ವರ ಬೆಟ್ಟದ ಕಾಡುಗಳ ಆಸುಪಾಸಿನಲ್ಲಿ ವಾಸಿಸುವ ಸೋಲಿಗರ ಪೋಡುಗಳಲ್ಲಿ ಕಾಣಸಿಗುತ್ತವೆ.'[7] ಇದಲ್ಲದೆ ಬಿಳಿಗಿರಿರಂಗನ ಬೆಟ್ಟ ಮಲೆಮಾದೇಶ್ವರ ಬೆಟ್ಟದಲ್ಲಿ ವಾಸಿಸುವ ಸೋಲಿಗರು ತಮ್ಮ ಮನೆದೇವರನ್ನು ಮಲೆಮಾದೇಶ್ವರ ಅಂತ ಹೇಳಿಕೊಳ್ಳುತ್ತಾರೆ. ಈ ಬೆಟ್ಟಗಳಲ್ಲಿ ದಟ್ಟವಾದ ನಿತ್ಯಹರಿದ್ವರ್ಣ ಕಾಡಿದೆ. ಇಲ್ಲಿ ವನ್ಯಮೃಗಗಳೂ ಹೆಚ್ಚು. ಹಾಗಾಗಿ 'ಇವರ ಮನೆಯ ಗೋಡೆಗಳ ಮೇಲೆ ಮಲೆಮಾದೇಶ್ವರನ ವಾಹನ ಹುಲಿಯ ಚಿತ್ರವನ್ನು ಬರೆಯುತ್ತಾರೆ. ಈ ಹುಲಿಯ ಚಿತ್ರವು ಒಂದು ರೀತಿಯಲ್ಲಿ ಭಕ್ತಿಯ ನೆಲೆಯಾದರೆ ಮತ್ತೊಂದು ರೀತಿಯಲ್ಲಿ ಈ ಪ್ರಾಣಿಯು ಇವರಿಗೆ ಪ್ರಭಾವಿಸಿದೆ. ತಾವು ನೋಡುವ ಪ್ರಾಣಿಗಳಲ್ಲಿ ಹುಲಿಯು ಭಯಂಕರ ಅನ್ನಿಸಿದ್ದರಿಂದ ಹುಲಿಯ ಚಿತ್ರವನ್ನು ಬರೆಯುತ್ತಿರಬಹುದು. ಜೊತೆಗೆ ಅದಕ್ಕೆ ವಿರುದ್ಧವಾದಂಥ ಮೃದು ಸ್ವಭಾವದ ಸುಂದರವಾದ ನವಿಲು ಪಕ್ಷಿಯೂ ಸಾಕಷ್ಟು ಪ್ರಭಾವಿಸಿದೆ. ಹಾಗಾಗಿ ಇವರ ಚಿತ್ರಗಳಲ್ಲಿ ಹೆಚ್ಚಾಗಿ ನವಿಲು ಚಿತ್ರಗಳು ಕಂಡುಬರುತ್ತವೆ. ಬಿಳಿಗಿರಿರಂಗನ ಬೆಟ್ಟದಲ್ಲಿ ನವಿಲು ಹೆಚ್ಚಾಗಿ ಇರುವುದರಿಂದ ಇವರ ಮನಸ್ಸಿನ ಮೇಲೆ ಅದು ಅಭಿವ್ಯಕ್ತಗೊಳ್ಳುವ ರೀತಿಯಲ್ಲಿ ಪ್ರಭಾವಿಸಿರಬೇಕು. ನವಿಲನೃತ್ಯವನ್ನು ಇವರು ಹೆಚ್ಚು ನೋಡಿರುವುದರಿಂದ ನವಿಲು ಇವರಿಗೆ ಆಕರ್ಷಿಸಿರಬಹುದು. ಹಾಗಾಗಿ ಇವರ ಚಿತ್ರಗಳಲ್ಲಿ ನವಿಲಿನ ಚಿತ್ರಗಳು ಹೆಚ್ಚಾಗಿ ಕಾಣಿಸುತ್ತವೆ.'[8] ಜೇನುಕುರುಬ, ಬೆಟ್ಟಕುರುಬ ಮತ್ತು ಎರವರ ಮನೆಗಳು ಕಲ್ಲಿನಿಂದ ಕಟ್ಟಿದವುಗಳಲ್ಲ.

ಕಾಡಿನ ಬಿದಿರು ಮತ್ತು ಕಟ್ಟಿಗೆಗಳಿಂದ ಕಟ್ಟಲ್ಪಟ್ಟಿರುತ್ತವೆ. ಸಾಮಾನ್ಯವಾಗಿ ಇವರ ಮನೆಗೋಡೆಗಳನ್ನು ಸೆಗಣಿ ಮತ್ತು ಜೇಡಿಮಣ್ಣಿನಿಂದ ಸಾರಿಸಿ ಅದರ ಮೇಲೆ ಅಕ್ಕಿ ಹಿಟ್ಟಿನಿಂದ ಹಲವು ಚಿತ್ತಾರಗಳನ್ನು ಬಿಡಿಸುತ್ತಾರೆ. ಸಾಮಾನ್ಯವಾಗಿ ಹುಲಿ, ಕಾಡುಹಂದಿ, ಜಿಂಕೆ ಮತ್ತು ಆನೆಗಳ ಚಿತ್ತಾರಗಳು ಇದ್ದೇ ಇರುತ್ತವೆ. ಆದರೆ ಮನೆಗಳ ಪೂರ್ತಿ ಗೋಡೆಗಳನ್ನು ಆವರಿಸಿರುವುದು ಮುಗಿಲೆತ್ತರದ ಮರಗಳ ಚಿತ್ತಾರಗಳು. ಮನೆಯ ಮಾಡಿನಿಂದ ತಳಪಾಯದವರೆಗೆ ಎತ್ತರೆತ್ತರದ ಕಾಡುಮರಗಳನ್ನು ಇವರು ತಮ್ಮ ಗೋಡೆಗಳಲ್ಲಿ ಬಿಡಿಸಿರುತ್ತಾರೆ.

ಬುಡಕಟ್ಟುಗಳ ನೃತ್ಯ, ಹಾಡು, ಆಚರಣೆ ದಿನನಿತ್ಯದ ಬದುಕಿನ ಜಂಜಾಟದಲ್ಲಿ ತೀರಾ ಲೌಕಿಕ ಅಗತ್ಯಗಳಿಗಾಗಿ ಹುಟ್ಟಿಕೊಂಡವು. ಮನರಂಜನೆ, ಅಭಿವ್ಯಕ್ತಿಯ ತುರ್ತು ಮತ್ತು ಕೈಚಿತ್ತಾದ ಆಧ್ಯಾತ್ಮ ಸಂಬಂಧೀ ಕಲೆಗಳು ಬುಡಕಟ್ಟುಗಳಲ್ಲಿ ಕಂಡುಬರುತ್ತವೆ. ನಿಸರ್ಗ ಹುಟ್ಟಿಸುವ ದಿಗ್ಭ್ರಮೆ, ಆತಂಕ, ತವಕ ತಲ್ಲಣಗಳು ಮುಖಾಮುಖಿಯಾಗುವ ಸಂದರ್ಭದಲ್ಲಿ ಆದಿವಾಸಿಗಳ ಜಟಿಲ ಮನಸ್ಥಿತಿಯ ಪ್ರತಿರೂಪದಂತೆ ಈ ಚಿತ್ರಕಲೆ ಕಾಣಬರುತ್ತದೆ. ಸಂಗೀತ, ಸಾಹಿತ್ಯ, ನೃತ್ಯ, ಚಿತ್ರಕಲೆಯೇ ಮೊದಲಾದ ಕಲೆಗಳು ಮನುಷ್ಯನನ್ನು ಇದ್ದ ಸ್ಥಿತಿಯಿಂದ ಉನ್ನತ ಸ್ಥಿತಿಗೇರಿಸುವ ಗುಣವನ್ನು ಹೊಂದಿವೆ. ಈ ಕಲೆಗಳಿಗೆ ತನ್ನದೇ ಆದ ಗತಿ ಹಾಗೂ ನಿಲುವುಗಳಿವೆ. ಮನುಷ್ಯನ ಆರಾಧನೆಯ ಸ್ವರೂಪವೇ ಕಲೆಯಾಗಿ ಹೊರಹೊಮ್ಮಿದೆ. ಅಥವಾ ಕಲೆಗಳೇ ಆರಾಧನೆಯ ಮಟ್ಟಕ್ಕೇರಿ ಅಸ್ತಿತ್ವದಲ್ಲಿವೆ. ಮನುಷ್ಯನು ತನ್ನ ಆಲೋಚನಾ ಶಕ್ತಿ ಬೆಳೆದಂತೆಲ್ಲಾ ತನ್ನ ಭಾವನೆಗಳನ್ನು ಹಲವು ರೀತಿಯಲ್ಲಿ ಅಭಿವ್ಯಕ್ತಿಸಲು ಪ್ರಾರಂಭಿಸಿದನು, ಉದಾಹರಣೆಗೆ ಸಂಜ್ಞೆಗಳು, ಸಂಕೇತಗಳು, ಆಂಗಿಕ ಅಭಿನಯ ಇತ್ಯಾದಿಗಳು. ಅವು ಮುಂದೆ ಮನುಷ್ಯನ ಸೃಜನಶೀಲತೆಯ ಮೂಸೆಯಲ್ಲಿ ಅರಳಿ ಹಾಡು, ನೃತ್ಯ, ಚಿತ್ರಕಲೆ ಇವೇ ಮೊದಲಾದ ವಿವಿಧ ರೂಪವನ್ನು ಪಡೆದುಕೊಳ್ಳುತ್ತದೆ. ಕಲೆಗಳನ್ನ ನಾವು ಹಾಡು, ಕುಣಿತ, ಅಭಿನಯ, ಕಥೆ, ವೇಷ ಭೂಷಣ ಎಂದೆಲ್ಲಾ ಬಗೆಗಳಲ್ಲಿ ಗುರುತಿಸಬಹುದು. ಕಲೆಯನ್ನು

1. ಹಾಡುಗಳು
2. ನೃತ್ಯಗಳು
3. ವಾದ್ಯಗಳೊಂದಿಗೆ ಮೇಳೈಸಿದ ಕಲೆಗಳು
4. ದೇವರ ಕುಣಿತ
5. ಭೂತಗಳಿಗೆ ಸಂಬಂದಿಸಿದ ಕಲೆಗಳು ಎಂದು ವಿಭಾಗಿಸಲಾಗಿದೆ.

ಎರವರ – ಎರವಾಟ್, ಚೀನಿದುಡಿ,

**ಜೇನುಕುರುಬರ ಕೋಲಾಟ:** ಈ ಕೋಲಾಟವನ್ನು ಜೇನುಕುರುಬರ ಗಂಡುಕಲೆ ಎಂದು ಕರೆಯಬಹುದು. ಜೇನುಕುರುಬರು ಯುಗಾದಿ ಹಬ್ಬದ ಸಮಯದಲ್ಲಿ ಪ್ರತೀ ಮನೆಮನೆಗೆ ಹೋಗಿ ಕೋಲಾಟ ಪ್ರದರ್ಶಿಸುತ್ತಾರೆ. ವರ್ಷದಿಂದ ಜೋಪಾನವಾಗಿ ತೆಗೆದಿಟ್ಟಿದ್ದ ಕೋಲುಗಳನ್ನು ತೆಗೆದು ಆ ದಿನ ತೊಳೆದು ಪೂಜಿಸಿ ಕೊಲಾಟ ಆಡುತ್ತಾರೆ. ಇದು ಬೆಟ್ಟ ಕುರುಬರ ಸಾಮೂಹಿಕ ನೃತ್ಯ.

ಸೋಲಿಗರ ನೃತ್ಯಗಳು ಮುಖ್ಯವಾಗಿ ಆಚರಣೆಗೆ ಸಂಬಂಧಿಸಿದವುಗಳಾಗಿವೆ. ಆ ಸಂದರ್ಭದಲ್ಲಿ ಹಾಡುವ ಹಾಡುಗಳು ವಿಶಿಷ್ಟವಾದ ತಾಳ, ಲಯಗಳಿಂದ ಕೂಡಿರುತ್ತವೆ. ವಿಶೇಷವಾದ ಭಾವ ಭಂಗಿಗಳಿಂದ ಕೂಡಿರುವ ಈ ಹಾಡು ಮತ್ತು ನೃತ್ಯಗಳು ಕಣ್ಣಿಗೆ ತಂಪು ಕಿವಿಗೆ ಇಂಪು. ಇವರು ಪಿನಾಸಿ, ತಮಟೆ, ಸಾರಂಗ ಮೊದಲಾದ ವಾದ್ಯ ಪರಿಕರಗಳನ್ನು ಮುಖ್ಯವಾಗಿ ಉಪಯೋಗಿಸುತ್ತಾರೆ.

ಸೋಲಿಗರ ಪ್ರಮುಖ ನೃತ್ಯಗಳು

1. ಗೋರುಖಾನ ನೃತ್ಯ
2. ಕೋಲಾಟ
3. ರಂಗ ಕುಣಿತ

**ಕುಡಿಯರು:** ಕುಡಿಯರ ಉರುಟಿಕೊಟ್ ಆಟ್: ಈ ನೃತ್ಯದಲ್ಲಿ ಗಂಡಸರು ಬಿಳಿಯ ನಿಲುವಂಗಿ, ಪಾಯಿಜಾಮ ತಲೆಗೆ ಪೇಟ ನಡುವಿಗೆ ವಸ್ತ್ರ ಕಟ್ಟಿಕೊಂಡಿರುತ್ತಾರೆ. ಮಹಿಳೆಯರು ಕೊಡವ ಹೆಂಗಸರಂತೆ ಸೀರೆ ಮತ್ತು ವೇಷ ಭೂಷಣ ಧರಿಸಿರುತ್ತಾರೆ. ಕೊಡವರಂತೆಯೇ ಗಂಡು ಹೆಣ್ಣುಗಳು ವೇಷ ಧರಿಸಿ ಕೈಗಳನ್ನು ಮೇಲಕ್ಕೆತ್ತಿ ಕಾಲುಗಳನ್ನು ಲಯಬದ್ಧವಾಗಿ ಎತ್ತಿ ಇಡುತ್ತ ದೇಹವನ್ನು ಹಿಂದೆ ಮುಂದೆ ತಿರುಗಿಸಿ ಆಡುತ್ತಾರೆ. ಈ ನೃತ್ಯದಲ್ಲಿ ದುಡಿಯನ್ನು ಬಳಸುತ್ತಾರೆ

ಬುಡಕಟ್ಟುಗಳು ಸೃಜನಶೀಲರು ಮತ್ತು ಪ್ರತಿಭಾವಂತರು. ಸಮುದಾಯದಲ್ಲಿ ಒಗ್ಗಟ್ಟನ್ನು ಸ್ಥಾಪಿಸುವಲ್ಲಿ ಅವರ ಸಮೂಹ ಗಾಯನ ಮತ್ತು ನರ್ತನಗಳು ಬಹುಮುಖ್ಯ ಪಾತ್ರವನ್ನು ವಹಿಸುತ್ತವೆ. ಇವರ ಕಲೆಗೆ ಸಂಬಂದಿಸಿದಂತೆ ಸಾಮುದಾಯಿಕ ಪ್ರಜ್ಞೆಯು ಶ್ಲಾಘನೀಯವಾದದ್ದು. ಕಲೆಗಳು ಸಮುದಾಯಗಳ ಜೀವನಾದರ್ಶದ ಪ್ರತೀಕವಾಗಿ ನಮಗೆ ಕಂಡುಬರುತ್ತದೆ. ಮನರಂಜನೆಯ ಭಾಗವಾಗಿರುವ ಅವರ ನೃತ್ಯಗಳು ನೂರಾರು ವರ್ಷಗಳ ಮೌನರೋಧನೆಯನ್ನು ವ್ಯಕ್ತಪಡಿಸುವ ಶಕ್ತಿಯನ್ನು ಹೊಂದಿವೆ. ಪ್ರಕೃತಿಯನ್ನೇ ಉಸಿರಾಡುವ ಈ ಸಮುದಾಯಗಳ ತಮ್ಮ ಕಲೆಯ

ಆಕರ ಕೂಡ ಪ್ರಕೃತಿ ಮತ್ತು ಮನುಷ್ಯನ ನಡುವಿನ ಅನುಸಂಧಾನವೇ ಆಗಿದೆ. ತಮ್ಮ ಹಾಡು, ನೃತ್ಯ, ಚಿತ್ರ, ಎಲ್ಲವನ್ನು ಪ್ರಕೃತಿಗೆ ಮುಡಿಪಾಗಿಟ್ಟಿರುವ ಸಂಗತಿಗಳು ನಮಗೆ ಇಲ್ಲಿ ಗೋಚರವಾಗುತ್ತದೆ.

**ಅಡಿ ಟಿಪ್ಪಣಿಗಳು**

1. Devy G. N., Ed: Painted Words : An Anthology of Tribal Literature, P xiii, 2002.
2. ಬೋರಲಿಂಗಯ್ಯ ಹಿ.ಚಿ., ಜನಪದ ಕಲೆಗಳ ಕೋಶ, ಪು.10, 2016.
3. ಅದೇ, ಪು.194, 2016.
4. ಚಂದ್ರು ಕಾಳೇನಹಳ್ಳಿ, ಸೋಲಿಗರ ಸಂಸ್ಕೃತಿ, ಪು.218–219, 1993 .
5. ಅದೇ, ಪು.218, 1993.
6. ಅದೇ, ಪು.218–219, 1993.
7. ಗಿರೀಶ್‌ಕುಮಾರ್, ಕರ್ನಾಟಕದ ಬುಡಕಟ್ಟು ಚಿತ್ರಕಲೆ, ಪು.90, ಪಿಎಚ್‌,ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2005.
8. ಅದೇ, ಪು.94, 2005.

# ಸಮಾರೋಪ

ಭಾರತ ಬಹು ಸಂಸ್ಕೃತಿಯ, ಬಹು ಭಾಷಿಕರ, ಬಹುವಿಧದ ಜೀವನ ವಿಧಾನವನ್ನು ಹೊಂದಿರುವ ವೈವಿಧ್ಯಮಯವಾದ ದೇಶ. ಇಲ್ಲಿ ಕಾಸ್ಮೋಪಾಲಿಟನ್ ಸಿಟಿಗಳ ವರ್ಣರಂಜಿತ ಬದುಕು ಒಂದೆಡೆಯಿದ್ದರೆ, ಅದಕ್ಕೆ ವಿರುದ್ಧವಾಗಿ ಯಾವುದೇ ತಂತ್ರಜ್ಞಾನದ ಅರಿವಿರದ ಹಳ್ಳಿಗಾಡುಗಳಿವೆ. ದಿನದ ಇಪ್ಪತ್ತನಾಲ್ಕು ಗಂಟೆಗಳೂ ಕಣ್ಣು ಕೋರೈಸುವ ಜಗಮಗಿಸುವ ಐಷಾರಾಮದ ಬದುಕು ಒಂದೆಡೆಯಾದರೆ. ಒಪ್ಪೊತ್ತಿನ ಗಂಜಿಯನ್ನೂ ಕಾಣದ, ಸವೆದ ದೇಹದ ಕತ್ತಲಿನ ಬದುಕು ಕೂಡ ಇದೆ. ಇಡೀ ದೇಶದಲ್ಲಿ ಏಕರೂಪದ ವ್ಯವಸ್ಥೆಯನ್ನು ನಾವು ಕಾಣಲು ಸಾದ್ಯವಿಲ್ಲ. ಆದ್ದರಿಂದ ಭಾರತ ಎಂದರೆ ಇದೇ ಎಂದು ನಿರ್ದಿಷ್ಟವಾಗಿ ಗುರುತಿಸಿ ತೋರಿಸಲು ಸಾದ್ಯವಿಲ್ಲ. ಜಾತಿ, ಧರ್ಮ, ಭಾಷೆ ಸಂಸ್ಕೃತಿ, ಊಟೋಪಚಾರ, ಉಡುಗೆ ತೊಡುಗೆ, ಜೀವನ ಪದ್ಧತಿಗಳು ದೇಶದ ಉದ್ದಗಲಕ್ಕೂ ತನ್ನ ವೈವಿಧ್ಯತೆಯನ್ನು ಸಾರುತ್ತದೆ. ಇವೆಲ್ಲದರ ಒಟ್ಟಾರೆ ರೂಪವನ್ನು ನಾವು ಭಾರತ ಎಂದು ಕರೆಯಬಹುದು.

ಭಾರತವನ್ನು ಏಕರೂಪದ ಸೂತ್ರದಲ್ಲಿ ಹಿಡಿದಿಡಲು ಹೊರಟರೆ ಅದು ಸುಳ್ಳಿನ ಕಂತೆ ಹೆಣೆದಂತೆ. ಈ ದೇಶದ ಸಂಸ್ಕೃತಿಗೆ ಕಾಡೊಳಗೆ ಬದುಕುವ ಆದಿವಾಸಿಗಳು, ಊರೂರು ಅಲೆಯುವ ಅಲೆಮಾರಿಗಳು ಕೊಟ್ಟಿರುವ ಕೊಡುಗೆ ಅಪಾರ. ಆದರೆ ಇವುಗಳನ್ನು ಇತಿಹಾಸ ಎಲ್ಲೂ ದಾಖಲಿಸಿಲ್ಲ. ಈ ದೇಶವನ್ನು ಅರಿಯಲು ಬಂದ ವಿದೇಶಿಯರಾಗಲಿ, ಭಾರತದ ಅಕ್ಷರ ಕಲಿತ ಮೇಲ್ವರ್ಗದ ವಿದ್ವಾಂಸರಾಗಲಿ, ಈಗಾಗಲೆ ಪಾಶ್ಚಾತ್ಯ ದೇಶಗಳನ್ನು ಅಧ್ಯಯನ ನಡೆಸಲು ಸಿದ್ಧಪಡಿಸಿದ ಸಿದ್ಧರೂಪದ ಅಚ್ಚನ್ನು ಕೈಯಲ್ಲಿ ಹಿಡಿದೇ ಬಂದರು ಮತ್ತು ಅದೇ ದೃಷ್ಟಿಕೋನದಲ್ಲಿ ಅಧ್ಯಯನ ನಡೆಸಿದರು. ತಮ್ಮ ನೋಟಕ್ಕೆ ಸಿಕ್ಕಿದ ಭಾರತವನ್ನು ಅಂತಿಮ ಎಂದು ಪ್ರಚುರ ಪಡಿಸಿದರು. ಆದರೆ ವಿದ್ವಾಂಸರ ಕಡೆಗಣ್ಣಿಗೂ ನಿಲುಕದ ಬಹುಸಂಖ್ಯಾತರ ಭಾರತ ಈ ಸಿದ್ಧ ಮಾದರಿಯಿಂದ ದೂರವೇ ಉಳಿಯಿತು. ಆದರೆ ನಂತರದಲ್ಲಿ ಈ ವೈಫಲ್ಯತೆಯನ್ನು ಮನಗಂಡ ಕೆಲವರು ಇದಕ್ಕೆ ಹೊರತಾದ ಜನಸಾಮಾನ್ಯರನ್ನು, ತಳಸಮುದಾಯಗಳನ್ನು, ಅಲಕ್ಷಿತರನ್ನು

ಗುರಿಯಾಗಿಸಿಕೊಂಡು ಹೊಸದಾದ ಬೇರೆಯದೇ ದೃಷ್ಟಿಯಿಂದ ಅಧ್ಯಯನ ನಡೆಸಲು ಉತ್ಸಾಹ ತೋರಿದರು ಅದನ್ನು ಸಬಾಲ್ಟ್ರನ್ ಅಧ್ಯಯನ ಅಥವ ಅಲಕ್ಷಿತ ಸಮುದಾಯಗಳ ಅಧ್ಯಯನ ಎಂದು ಕರೆದರು. ಈ ಸಬಾಲ್ಟ್ರನ್ ಅಧ್ಯಯನಗಳು ತಳಸ್ತರದ ಸಮುದಾಯಗಳ ಜೀವನ ವೈವಿಧ್ಯದಲ್ಲಿರುವ ಅಪಾರ ತಿಳುವಳಿಕೆಯನ್ನು ಹೊರ ಜಗತ್ತಿಗೆ ತೆರೆದಿಡುತ್ತಿವೆ. ಊರೂರು ಅಲೆಯುವ ಅಲೆಮಾರಿಗಳ, ಪ್ರಕೃತಿಯ ಮಡಿಲಲ್ಲಿ ಹುಟ್ಟಿ ಅನಾದಿಕಾಲದಿಂದಲೂ ನಿಸರ್ಗದೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿರುವ ಬುಡಕಟ್ಟು ಸಮುದಾಯಗಳ ಅಂತಸ್ಥ ಜಗತ್ತಿನ ಅನಾವರಣ ಸೈದ್ಧಾಂತಿಕವಾಗಿ ನಡೆಯಲು ಈ ಸಬಾಲ್ಟ್ರನ್ ಅಧ್ಯಯನಗಳು ಸಹಕಾರಿಯಾದವು. ಕಾಡಿನಲ್ಲಿ ವಾಸಿಸುವ ಸಮುದಾಯಗಳನ್ನು ಆದಿವಾಸಿ, ಬುಡಕಟ್ಟು, ಕಾಡುಜನರು, ಗಿರಿಜನರು. ಗಿರಿವಾಸಿಗಳು ಎಂಬ ಬೇರೆ ಬೇರೆ ಹೆಸರಿನಿಂದ ಕರೆಯಲಾಗುತ್ತಿದೆ. ಈ ಬುಡಕಟ್ಟು ಎಂಬ ಪದವೂ ಕೂಡ ನಮ್ಮದಲ್ಲ ಬುಡಕಟ್ಟು ಎಂಬ ಪದ 'Tribe' ಎಂಬ ಪದಕ್ಕೆ ಸಂವಾದಿಯಾಗಿ ಹುಟ್ಟಿದೆ. 'Tribe' ಎಂಬ ಪದವು ಲ್ಯಾಟಿನ್ ಭಾಷೆಯ 'Tribuz' ಎಂಬ ಪದದಿಂದ ಹುಟ್ಟಿದೆ. 'Tribuz' ಎಂದರೆ ಮೂರು ವಿಭಾಗಗಳು ಎಂದರ್ಥ. ಬುಡಕಟ್ಟುಗಳು ವ್ಯವಸ್ಥಿತವಾದ ಗಣವ್ಯವಸ್ಥೆಯನ್ನು ಹೊಂದಿರುವುದರಿಂದ ಈ ಪದ ಹುಟ್ಟಿರಬಹುದು. ಭಾರತದ ಪ್ರಾಚೀನ ಸಾಹಿತ್ಯದಲ್ಲಿ ನಾಲ್ಕು ವರ್ಣಗಳಿಗೂ ಲಗತ್ತಾಗದ ಸಮುದಾಯಗಳನ್ನು ನಿಷಾದರು, ದಶ್ಯುಗಳು, ವ್ಯಾದರು, ದಾಸರು, ಕಿರಾತರು, ಮತ್ಸ್ಯರು ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗಿದೆ. ಅವರೇ ಈ ಬುಡಕಟ್ಟು ಸಮುದಾಯಗಳು. ಇಂಡಿಯಾದ ಸಮಾಜದ ನಾಲ್ಕು ವರ್ಣಗಳಿಗೆ ಸೇರದ ಪ್ರತ್ಯೇಕ ಗುಂಪಿನ ಸಮುದಾಯಗಳಿವು. ಇವರನ್ನು ನಾವಿಂದು ಬುಡಕಟ್ಟು ಎಂದು ಕರೆದಿದ್ದೇವೆ. ಅಂತೆಯೇ ಭಾರತದ ಜಾತಿ ಮತ್ತು ದರ್ಮ ಪ್ರಣೀತ ವ್ಯವಸ್ಥೆಗೆ ಸಿಗದ ಇವರು ತಮ್ಮ ಹುಟ್ಟು, ಮದುವೆ, ಸಾವು ಇತ್ಯಾದಿಗಳನ್ನು ಪುರೋಹಿತರ ಹೊರತಾಗಿ ಆಚರಿಸುತ್ತವೆ ಮತ್ತು ಅವು ತಮ್ಮದೇ ಆದ ಸ್ವತಂತ್ರ ಪಂಗಡಗಳ ಭದ್ರ ಬುನಾದಿಯನ್ನು ಹೊಂದಿವೆ. ಅನಂತರದಲ್ಲಿ ಹಿಂದೂ ಜಾತಿ ವ್ಯವಸ್ಥೆಯ ಒಳಗೆ ಸಮ್ಮಿಳನಗೊಂಡರೂ ತಮ್ಮ ಪಾರಂಪರಿಕ ಚಹರೆಗಳನ್ನು ಬಿಟ್ಟುಕೊಡದೆ ಉಳಿಸಿಕೊಂಡು ಬಂದಿವೆ. ಅದು ಆ ಸಮುದಾಯಕ್ಕಿರುವ ಸಾಂಸ್ಕೃತಿಕ ಅಚಲತೆಯನ್ನು ಎತ್ತಿ ತೋರಿಸುತ್ತದೆ.

ಸಹಸ್ರಾರು ವರ್ಷಗಳಿಂದ ಬೆಟ್ಟ, ಗುಡ್ಡ, ಕಾಡು, ಕಣಿವೆ, ಕಂದರ, ಹಿಮಚ್ಛಾದಿತ ಪ್ರದೇಶ, ಮರಳುಗಾಡು, ಬಯಲು, ದಟ್ಟಾರಣ್ಯ ಹೀಗೆ ವೈವಿಧ್ಯಮಯ ಪ್ರದೇಶಗಳಲ್ಲಿ ಬದುಕುತ್ತಿರುವ ಈ ಬುಡಕಟ್ಟುಗಳು ವೈವಿಧ್ಯಮಯ ಆಚಾರ–ವಿಚಾರ, ಭಾಷೆ, ಬದುಕು, ನಂಬಿಕೆ, ಕಟ್ಟುಪಾಡು,

ಆಹಾರ ಪದ್ಧತಿ, ಕುಲ, ಪಂಚಾಯಿತಿಗಳು, ವೈದ್ಯ, ಮಾಟ, ಮಂತ್ರ, ಆತ್ಮ, ದೇವರು ಈ ರೀತಿಯ ಸಂಕೀರ್ಣವಾದ ಬಹು ಶ್ರೀಮಂತವಾದ ಸಂಸ್ಕೃತಿಯನ್ನು ಇನ್ನೂ ಪಾಲಿಸಿಕೊಂಡು ಬರುತ್ತಿದ್ದಾರೆ. ಈ ಸಮುದಾಯಗಳ ಮಾತು, ಹಾಡು, ಕತೆ, ಕಾವ್ಯಗಳು ಭಾರತದ ಒಟ್ಟಾರೆ ಸಮಾಜವನ್ನು ಅರ್ಥಮಾಡಿಕೊಳ್ಳವಲ್ಲಿ ಬಹಳ ಪ್ರಧಾನವಾಗುತ್ತವೆ. ಆದರೆ ಈ ಮಾತುಗಳೂ ಬರಹದಲ್ಲಿಲ್ಲ ಎಂಬ ಕಾರಣಕ್ಕೆ ಮತ್ತು ಈ ಸಮುದಾಯಗಳು ನಗರ, ಹಳ್ಳಿಗಳಲ್ಲಿ ಬದುಕುತ್ತಿಲ್ಲ ಬದಲಿಗೆ ಕಾಡಿನಲ್ಲಿ ಅಜ್ಞಾತವಾಗಿ ಬದುಕುತ್ತಿದ್ದಾರೆ ಎಂಬ ಕಾರಣಕ್ಕೆ ಇವರನ್ನು ಅನಾಗರೀಕ ಎಂದು ಪರಿಗಣಿಸುವ ಸಮಾಜವು, ಇವರನ್ನು ತಿರಸ್ಕರಿಸಿದಂತೆಯೇ ಇವರ ಎದೆಯಾಳದ ದನಿಯನ್ನೂ ಕೂಡ ತಿರಸ್ಕರಿಸಿದೆ. ಅಕ್ಷರ ಬಲ್ಲವರನ್ನು ಮಹಾಕವಿ ಎಂದು ಕರೆದು ನಿರಕ್ಷರಿಗಳಾದವರನ್ನು ಅವರ ಅಪಾರವಾದ ಜ್ಞಾನವನ್ನೂ ಕೂಡ ಮೂಲೆಗುಂಪು ಮಾಡಿದೆ. ಪ್ರತಿಭಾವಂತೆಯಾದ ಬುರ್ರಕಥಾ ಈರಮ್ಮನಂತವರು, ಗೊಂಡರ ರಾಮಾಯಣವನ್ನು ತನ್ನ ನಾಲಿಗೆಯ ತುದಿಯಲ್ಲಿಟ್ಟುಕೊಂಡು ನೆನಪಿನಾಳದಲ್ಲಿ ಕಾಪಿಟ್ಟುಕೊಂಡಿರುವ ತಿಮ್ಮಪ್ಪ ಗೊಂಡರಂತಹ ಎಷ್ಟೆಷ್ಟೋ ಮಹಾನೀಯರು ಇಲ್ಲಿ ಮುಖ್ಯವಾಗಲಿಲ್ಲ ಎಂಬುದು ವಿಪರ್ಯಾಸ. ಅಕ್ಷರ ಸಾಹಿತ್ಯಕ್ಕಿಂತ ಭಿನ್ನವಾದ ಇವರ ಮಾತಿನ ಲಹರಿಯನ್ನು ಮೌಖಿಕ ಸಾಹಿತ್ಯ ಎಂದು ಪರಿಗಣಿಸಲಾಗಿದೆ. ಅಕ್ಷರ ಬಲ್ಲವರ ಶಿಷ್ಟ ಸಾಹಿತ್ಯಕ್ಕಿಂತ ವಿಭಿನ್ನವಾದ ಒಳನೋಟವನ್ನು ಈ ಮೌಖಿಕ ಸಾಹಿತ್ಯ ನಮಗೆ ನೀಡುತ್ತದೆ.

ಪ್ರಸ್ತುತ ಮಹಾಪ್ರಬಂಧದಲ್ಲಿ ಬುಡಕಟ್ಟುಗಳ ಮೌಖಿಕ ಸಾಹಿತ್ಯದ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಕೊಡಗನ್ನೇ ಮುಖ್ಯ ಕೇಂದ್ರವಾಗಿರಿಸಿಕೊಂಡ ಈ ಅಧ್ಯಯನಕ್ಕೆ ಕೊಡಗಿನ ಸುತ್ತಮುತ್ತಲಿ ಪ್ರದೇಶವಾದ ಹೆಗ್ಗಡದೇವನ ಕೋಟೆ, ಬಿಳಿಗಿರಿರಂಗನ ಬೆಟ್ಟ, ಮಲೆಮಾದೇಶ್ವರ ಬೆಟ್ಟ, ಕೇರಳದ ತಿರುನೆಲ್ಲಿ ಭಾಗದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಈ ಅಧ್ಯಯನವನ್ನು ಬುಡಕಟ್ಟುಗಳ ಮೌಖಿಕ ಸಾಹಿತ್ಯಕ್ಕಷ್ಟೇ ಸೀಮಿಗೊಳಿಸಲಾಗಿದೆ. ಮುಖ್ಯವಾಗಿ ಅವರ ಬುಡಕಟ್ಟು ಮೌಖಿಕ ಸಾಹಿತ್ಯದ ಸ್ವರೂಪ ಮತ್ತು ಆದಿಮ ಚಹರೆಗಳನ್ನು ಗುರುತಿಸುವುದು. ಬುಡಕಟ್ಟು ಸಮಾಜ ಮತ್ತು ಕುಟುಂಬದಲ್ಲಿ ಹೆಣ್ಣಿನ ಅನನ್ಯತೆ, ಲಿಂಗಸಂಬಂಧಿ ಅಧ್ಯಯನ, ಅವರ ಬದುಕಿನ ಭಾಗವಾದ ದುಡಿಮೆ, ಯಜಮಾನಿಕೆಯ ವಿವಿಧ ಹಂತಗಳು, ಸಮಾಜದಲ್ಲಿ ಮತ್ತು ಕುಟುಂಬಕ್ಕೆ ಸಂಬಂಧಿಸಿದಂತೆ ತೀರ್ಮಾನಗಳನ್ನು ತೆಗೆದುಕೊಳ್ಳುವಲ್ಲಿ ಮಹಿಳೆಯ ಪಾತ್ರ, ಮೌಖಿಕ ಸಾಹಿತ್ಯದಲ್ಲಿ ಹೇಳಿರುವಂತೆ ಹೆಣ್ಣಿನ ಆಡಳಿತ, ಸಮುದಾಯದ ಯಜಮಾನಿಯಾಗಿ ಅವಳ ಪಾತ್ರ, ದೈವದ ಸ್ವರೂಪ ಮತ್ತು ಪರಿಕಲ್ಪನೆ, ಸಾಮಾಜಿಕ ಸ್ಥಿತಿಗತಿ, ಕಲೆಗಳು ಅಂತರ್ಗತಗೊಂಡಿರುವ ಸ್ವರೂಪ ಇತ್ಯಾದಿ ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಇವರ ಮೌಖಿಕ ಸಾಹಿತ್ಯವನ್ನು ತಾತ್ವಿಕ ವಿವೇಚನೆಗೆ ಒಳಪಡಿಸಲಾಗಿದೆ.

## ಅಧ್ಯಯನದ ಫಲಿತಗಳು

1. ಬುಡಕಟ್ಟು ಮೌಖಿಕ ಸಾಹಿತ್ಯವನ್ನು ಶಿಷ್ಟ ಸಾಹಿತ್ಯದ ಪ್ರಕಾರಗಳಾದ ಹಾಡು, ಕತೆ, ಗಾದೆ, ಒಗಟು, ಪುರಾಣ ಮಹಾಕಾವ್ಯ ಎಂಬ ಸಿದ್ಧ ಮಾದರಿಯ ಚೌಕಟ್ಟಿನಲ್ಲಿ ನಾವು ನೋಡಲು ಪ್ರಯತ್ನಿಸುವುದೇ ತಪ್ಪು. ವಿಭಿನ್ನ ಪರಿಸರ, ಜೀವನ ಕ್ರಮವನ್ನು ಅಳವಡಿಸಿಕೊಂಡು ಬದುಕುತ್ತಿರುವ ಈ ಸಮುದಾಯಗಳ ಬದುಕಿನ ಬಹುಮುಖ್ಯ ಭಾಗವಾದ ಮೌಖಿಕ ಸಾಹಿತ್ಯವನ್ನು ಅಧ್ಯಯನ ಮಾಡಲು ನಾವು ಈಗಾಗಲೇ ಪಾಶ್ಚಾತ್ಯರಿಂದ ಪಡೆದಿರುವ ಶಿಷ್ಟ ಮಾದರಿಯನ್ನು ಯಥಾವತ್ತು ಅನುಕರಿಸುವುದು ಸರಿಯಾದ ಕ್ರಮವಲ್ಲ. ಅದಕ್ಕೆ ಬೇರೆಯದೇ ಆದ ಒಂದು ವಿಭಿನ್ನ ಒಳನೋಟದ ಅಗತ್ಯವಿದೆ.

2. ಬುಡಕಟ್ಟು ಮೌಖಿಕ ಸಾಹಿತ್ಯವು ಆಚರಣೆಗೆ ಸಂಬಂದಿಸಿದ್ದು, ಮುಖ್ಯವಾಗಿ ಅವರ ಜೀವನಾವರ್ತನದ ಆಚರಣೆಗಳಾದ ಹುಟ್ಟು, ಮದುವೆ, ಋತುಮತಿ ಶಾಸ್ತ್ರ, ಸೀಮಂತ, ಸಾವು, ತಿಥಿ ಈ ಸಂದರ್ಭಗಳಿಗೆ ಸಂಬಂದಿಸಿದ್ದು, ಉಳಿದ ಸಂದರ್ಭದಲ್ಲಿ ಇವುಗಳನ್ನು ಕಾಣಲು ಸಾದ್ಯವಿಲ್ಲ.

3. ಕಾಡಿನಲ್ಲಿ ಬದುಕುವ ಈ ಸಮುದಾಯಗಳ ಬದುಕಿನ ಭಾಗವಾದ ಕಿರುಬೇಟೆ, ಜೇನುಬೇಟೆ, ಆಹಾರೋತ್ಪನ್ನಗಳ ಸಂಗ್ರಹಣೆಗೆ ಸಂಬಂದಿಸಿದ ಹಾಡು ಕತೆಗಳನ್ನು ನಾವು ಹೇರಳವಾಗಿ ಕಾಣಬಹುದು. ಅವುಗಳು ಹಾಡಿನೊಂದಿಗೆ ಮಿಳಿತಗೊಂಡ ಅಣಕು ನೃತ್ಯಗಳು. ಮೇಲ್ನೋಟಕ್ಕೆ ಅವು ಮನರಂಜನೆಯ ಭಾಗವಾಗಿ ನಮಗೆ ಕಂಡು ಬಂದರೂ ಕೂಡ ಅದರ ಮೂಲ ಉದ್ದೇಶ ಮನರಂಜನೆಯಷ್ಟೇ ಅಲ್ಲ ಬದಲಿಗೆ ಅವರ ಪಾರಂಪರಿಕ ಕಸುಬನ್ನು ತಮ್ಮ ಮುಂದಿನ ಪೀಳಿಗೆಗೆ ತಲುಪಿಸುವುದೂ ಕೂಡ ಆಗಿರುತ್ತದೆ. ಹಾಡು ನೃತ್ಯ, ಕತೆಗಳ ಮೂಲಕ ಅವರ ನೆನಪಿನಾಳದ ಈ ಬೇಟೆಯ ನೈಪುಣ್ಯತೆ, ಪಟ್ಟುಗಳನ್ನು ತಾವು ಮರೆಯದಂತೆ ನೆನಪಿಸಿಕೊಳ್ಳುವುದು ಹಾಗು ಅದನ್ನು ಮುಂದಿನ ತಲೆಮಾರಿಗೆ ತಲುಪಿಸುವ ಜವಾಬ್ಧಾರಿಯೂ ಅದರ ಹಿಂದೆ ಅಡಕವಾಗಿರುತ್ತದೆ.

4. ಬುಡಕಟ್ಟುಗಳು ತಮ್ಮದೇ ಆದ ವಿಶಿಷ್ಟ ಭಾಷೆಯನ್ನು ಆಡುವುದರಿಂದ ಮೌಖಿಕ ಸಾಹಿತ್ಯದ ಹಿನ್ನೆಲೆಯನ್ನು ನಾವು ಅರ್ಥಮಾಡಿಕೊಳ್ಳಬೇಕಾದರೆ ಅವರ ಭಾಷೆಯನ್ನು ತಿಳಿಯವುದು ಕೂಡ ಬಹು ಮುಖ್ಯ. ಭಾಷೆಗೂ ಬದುಕಿಗೂ ಅವಿನಾಭಾವ ಸಂಬಂಧವಿರುವುದರಿಂದ ದುಭಾಷಿಯ ನೆರವನ್ನೂ ಕೂಡ ಪಡೆಯಬಹುದಾದರೂ ಅವರ ಭಾಷೆಯಲ್ಲಿ ಅಡಕವಾಗಿರುವ ಭಾವ ತಿಳಿಯುವುದು ಮುಖ್ಯ.

5. ಸೃಷ್ಟಿಪುರಾಣಗಳು ಬುಡಕಟ್ಟುಗಳ ಮೌಖಿಕ ಸಾಹಿತ್ಯದ ವಿಶಿಷ್ಟ ಕೊಡುಗೆಗಳೂ ಪ್ರತಿಯೊಂದು ಸಮುದಾಯವು ಹಲವಾರು ಸೃಷ್ಟಿಪುರಾಣಗಳನ್ನು ಹೊಂದಿದೆ. ಅವುಗಳ ಮೂಲಕ ಈ ಭೂಮಿಯ ಹಾಗೂ ಭೂಮಿಯ ಮೇಲಿನ ಎಲ್ಲದರ ಹುಟ್ಟಿಗೂ ನಾವೇ ಕಾರಣ ಮತ್ತು ಈ ಭೂಮಿಗೆ ನಾವೇ ಮೊದಲಿಗರು ಎಂಬ ವಾದವನ್ನು ಪ್ರತಿಪಾದಿಸುತ್ತಾರೆ.

6. ಬುಡಕಟ್ಟು ಮೌಖಿಕ ಸಾಹಿತ್ಯವು ಆಚರಣೆಗಳೊಂದಿಗೆ ತಳುಕು ಹಾಕಿಕೊಂಡಿರುವುದರಿಂದ ಅವರ ಆಚರಣೆಗಳು ನಡೆಯುವ ಸ್ಥಳದಲ್ಲಿ ಹಾಗು ಸಂದರ್ಭದಲ್ಲಿ ನೇರವಾಗಿ ಭಾಗವಹಿಸಿ ವಿಷಯವನ್ನು ಸಂಗ್ರಹಿಸುವುದು ಸೂಕ್ತ ಕ್ರಮ. ತಮ್ಮ ಕಾಡಿನ ಪರಿಸರದಲ್ಲಿ ಹಾಡಿಯಲ್ಲಿ ತಮ್ಮ ಸಮುದಾಯದ ಜೊತೆ ನೈಜವಾಗಿ ಹೊರಹೊಮ್ಮಬೇಕಾದ ಸಾಹಿತ್ಯವನ್ನು ಕೃತಕ ಪರಿಸರ ನಿರ್ಮಿಸಿದಾಗ ಅದರ ಪರಿಪೂರ್ಣತೆಯನ್ನು ಪಡೆಯಲು ಸಾದ್ಯವಿಲ್ಲ,

7. ಮಾತೃಮೂಲೀಯ ಬುಡಕಟ್ಟುಗಳು ಹೆಣ್ಣಿಗೆ ವಿಶೇಷ ಸ್ಥಾನಮಾನಗಳು ನೀಡಿದ್ದವು. ಆದರೆ ಕಾಡಿನಿಂದ ಹೊರಬಂದು ಇತರೆ ಸಮುದಾಯಗಳ ಜೊತೆ ಬದುಕಲು ಪ್ರಾರಂಭಿಸುತ್ತಿದ್ದಂತೆ ಹೆಣ್ಣಿಗಿದ್ದ ಸಹಜವಾದ ಪ್ರಾತಿನಿಧ್ಯತೆ ಕಡಿಮೆಯಾಗಿ ಅಲ್ಲಿ ಪುರುಷ ಪ್ರಾಧಾನ್ಯತೆ ಬಲವಾಗುತ್ತಿರುವುದನ್ನು ನಾವು ಗಮನಿಸಬಹುದಾಗಿದೆ.

8. ಸೋಲಿಗರ ಸಂಕಮ್ಮ, ಎರವರ ಪೆರುಂಗಾಲು ಪೊಲಿ ಪಾತ್ರಗಳು ನೂರಾರು ವರ್ಷಗಳ ಹಿಂದೆಯೇ ಪುರುಷಾಧಿಕಾರವನ್ನು ಪ್ರಶ್ನಿಸುವ ಹಾಗೂ ಗಂಡಿನ ಅಭಿಪ್ರಾಯಗಳ ಹೇರಿಕೆಯನ್ನು ಧಿಕ್ಕರಿಸುವ ಮೂಲಕ ಸ್ತ್ರೀ ಸಮಾನತೆಗೆ ನಾಂದಿ ಹಾಡಿದವರು. ಸಮುದಾಯದಲ್ಲಿ ಗಂಡಿನ ಪ್ರಾಭಲ್ಯ ಹಂತಹಂತವಾಗಿ ಬಲಗೊಳ್ಳುವ ಸಂದರ್ಭದಲ್ಲಿ ಅದನ್ನು ಒಪ್ಪದ ಸ್ತ್ರೀ ಸಮುದಾಯ ಅದನ್ನು ದಿಕ್ಕರಿಸುವ ಸಂಕ್ರಮಣ ಕಾಲದಲ್ಲಿ ಈ ಸಾಹಿತ್ಯ ಹುಟ್ಟಿರಬಹುದು. ಅದಕ್ಕೆ ವಿರುದ್ಧವಾಗಿ ಕಡಲ ಚೀತೆ ಮತ್ತು ಪನ್ನಂಗಾಲ ತಮ್ಮೆಯ ಪಾತ್ರಗಳು ಮೂಡಿಬಂದಿವೆ. ಗಂಡಿನ ತುಳಿತಕ್ಕೆ, ಶೋಷಣೆಗೆ ಒಳಗಾದ ಹೆಣ್ಣುಗಳಾಗಿದ್ದಾರೆ. ಇವು ಸಂಪೂರ್ಣವಾಗಿ ಸಮಾಜ ಪರುಷಧಿಕಾರದ ಅಂಕೆಯಲ್ಲಿ ಸಿಕ್ಕ ಸಂಧರ್ಭದಲ್ಲಿ ಸೇರ್ಪಡೆಗೊಂಡಿರಬಹುದು.

9. ಹಿಂದೆ ಎರವರ ಹೆಣ್ಣು ಮಕ್ಕಳು ಆಡಳಿತವನ್ನು ನಡೆಸುತ್ತಿದ್ದವರು ಎಂಬುದಕ್ಕೆ ನಮಗೆ 'ಕೊಟ್ಟತ್ತೇರಿ ಅಕ್ಕವ್ವೆ' ಮತ್ತು 'ಕುಂಡಾಬೆತೇರಿಬಾವು ಪೆಂಗವ್ವೆ' ಪಾತ್ರಗಳು ತಿಳಿಸಿಕೊಡುತ್ತವೆ. ಹಾಗೆಯೇ ಆರ್ಯೇ ಬಾಣ್ಯೆಯರ ತಾಯಂದಿರಾದ ಕಾರು ಮಚುಣಿ ಮತ್ತು ಬೆಳ್ಳಿ ಮಚುಣಿ ಎಂಬ ಸಹೋದರಿಯರೂ ಕೂಡ ಕೋಟೆ ಕಟ್ಟಿ ಆಳಿದವರು ಎಂಬ ಮಾಹಿತಿಯನ್ನು ನೀಡುತ್ತವೆ.

10. ಅಕ್ಷರ ಸಾಹಿತ್ಯಕ್ಕಿಂತ ಭಿನ್ನವಾದದ್ದು ಮೌಖಿಕ ಸಾಹಿತ್ಯ. ಮೌಖಿಕವು ಚಲನಶೀಲವಾದದ್ದು. ಸಾಹಿತ್ಯವು ಕಾಲದಿಂದ ಕಾಲಕ್ಕೆ ವ್ಯಕ್ತಿಯ ಪ್ರತಿಭೆಗೆ ಅನುಸಾರವಾಗಿ ಹೊಸದನ್ನು ಸೇರಿಸಿಕೊಳ್ಳುತ್ತಾ ಬೇಡವಾದುದನ್ನು ಕೈಬಿಡುತ್ತಾ ಸಾಗುತ್ತದೆ. ಅದು ಅದರ ಜೀವಂತಿಕೆಯ ಸಂಕೇತ, ಆದರೆ ಸಾಹಿತ್ಯವು ಬರಹಕ್ಕೆ ಇಳಿದ ಕೂಡಲೆ ಅದು ಯಾವುದೋ ಒಬ್ಬ ವ್ಯಕ್ತಿಯ ಸ್ವತ್ತು ಎಂದು ಎನಿಸಿಕೊಳ್ಳುತ್ತದೆ. ಅದು ತನ್ನ ನಿರಂತರ ಚಲನಶೀಲತೆಯನ್ನು ಕಳೆದುಕೊಂಡು ಒಂದು ನಿರ್ದಿಷ್ಟತೆಯನ್ನು ಪಡೆದುಕೊಳ್ಳುತ್ತದೆ. ಅದೇ ಅಂತಿಮ ಎಂಬ ನಿಲುವನ್ನು ಪಡೆದುಕೊಳ್ಳುತ್ತದೆ. ಇದು ಬರಹಕ್ಕಿರುವ ಮಿತಿ.

11. ಬುಡಕಟ್ಟು ಮೌಖಿಕ ಸಾಹಿತ್ಯದಲ್ಲಿ ಹೆಚ್ಚಿನವು ಕಥನ ರೂಪದ ಕಾವ್ಯಗಳು ಇವನ್ನು ಹಾಡಿನ ರೂಪದಲ್ಲೂ ಕಥೆಯ ರೂಪದಲ್ಲೂ ಎರಡೂ ರೀತಿಯಲ್ಲೂ ಕಾಣಬಹುದು.

12. ಹಿಂದೆ ಯಾವುದೋ ಕಾಲದಲ್ಲಿ ಮಳಯಾಳಿಗಳು ಸ್ಥಳೀಯ ಬುಡಕಟ್ಟುಗಳ ನೆರವಿನಿಂದ ಎರವರ ಮೇಲೆ ಆಕ್ರಮಣ ಮಾಡಿ ಅವರ ಭೂಮಿಯನ್ನು ಕಸಿಯುತ್ತಾರೆ ಎಂಬ ವಿದ್ವಾಂಸರ ಮಾತಿನಿಂದ ಎರವರು ಹಿಂದೆ ಜೇನುಕುರುಬ ಮತ್ತು ಬೆಟ್ಟಕುರುಬರಿಗಿಂತ ಮೊದಲೇ ವ್ಯವಸಾಯಗಾರರಾಗಿ ಸ್ವತಂತ್ರವಾಗಿ ಬದುಕುತ್ತಿದ್ದವರಾಗಿರಬಹುದು ಎಂದು ತಿಳಿಯಬಹುದು. ಸ್ಥಳೀಯ ಬುಡಕಟ್ಟು ಅಂದರೆ ಬೆಟ್ಟಕುರುಬರೇ ಇರಬಹುದು ಎಂಬ ಶಂಕೆಯನ್ನು ವಿದ್ವಾಂಸರು ಇಲ್ಲಿ ವ್ಯಕ್ತಪಡಿಸುತ್ತಾರೆ. ಈ ಬಗ್ಗೆ ಹೆಚ್ಚಿನ ಅಧ್ಯಯನ ನಡೆಯಬೇಕಿದೆ.

13. ತೀ.ನಂ. ಶಂಕರನಾರಾಯಣರಾವ್‌ರವರ ಪ್ರಕಾರ ಸುಮಾರು 7ನೇ ಶತಮಾನದಲ್ಲಿ ದಕ್ಷಿಣ ಭಾರತದ ಪ್ರಭಲ ಮನೆತನದವರಾದ ಪಲ್ಲವರು ಇತರೆ ರಾಜರುಗಳ ಆಕ್ರಮಣದಿಂದ ಸೋತು ಕಾಡು ಸೇರುತ್ತಾರೆ. ಯುದ್ಧದ ನೈಪುಣ್ಯತೆಯನ್ನು ಅರಿತಂತ ಈ ಸಮುದಾಯವು ಸ್ಥಳೀಯ ಬುಡಕಟ್ಟುಗಳಾದ ಎರವರ ಮೇಲೆ ಆಕ್ರಮಣ ಮಾಡುತ್ತಾರೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಈ ಮಾತನ್ನು ನಾವು ಗಮನಿಸಿದಾಗ ಬೆಟ್ಟಕುರುಬರು ಪಲ್ಲವ ವಂಶಸ್ತರಿರಬಹುದು ಎಂಬ ಊಹೆ ಮೂಡುತ್ತದೆ, ಆದರೆ ಬೆಟ್ಟಕುರುಬರು ತಾವು ಪಲ್ಲವರ ವಂಶಸ್ಥರು ಎಂಬ ಮಾತನ್ನು ಸಂಪೂರ್ಣವಾಗಿ ಅಲ್ಲಗೆಳೆಯುತ್ತಾರೆ. ಈ ಬಗ್ಗೆ ಸಾಕಷ್ಟು ಅಧ್ಯಯನ ನಡೆಯಬೇಕಿದೆ.

14. ಎರವರು ಇತರೆ ಬುಡಕಟ್ಟು ಸಮುದಾಯಗಳಿಗಿಂತ ಮೊದಲೇ ಹೊರಪ್ರಪಂಚಕ್ಕೆ ತಮ್ಮನ್ನು ತಾವು ತೆರೆದುಕೊಂಡ ಕಾರಣದಿಂದಾಗಿ ಇತರೆ ಸಮುದಾಏಗಳ ಅನುಕರಣೆಯಂತೆ ವೈದಿಕದ ಆಚರಣೆಗಳು ಇವರಲ್ಲಿ ಹೆಚ್ಚಾಗಿ ಕಂಡು ಬರುತ್ತವೆ ಉದಾಹರಣೆಗೆ ಅವರೇ ಹೇಳುವಂತೆ

ತಮ್ಮನ್ನ ತಾವು ರಾವಣನ ವಂಶಸ್ಥರೆಂದು ಕರೆದುಕೊಳ್ಳುತಾರೆ. ಹಾಗೆಯೇ ಅವರ ಹಲವು ಆಚರಣೆಗಳಲ್ಲಿ ಬ್ರಾಹಣರಂತೆ ಜನಿವಾರ ಧರಿಸುವ ಪದ್ಧತಿಯಿದೆ, ಮತ್ತೊಂದು ಕಡೆಯಲ್ಲಿ ತಮ್ಮ ಆಚರಣೆಗಳಲ್ಲಿ ಬ್ರಾಹ್ಮಣ್ಯದ ಹೇರಿಕೆಯನ್ನು ವಿರೋದಿಸುತ್ತಾರೆ. ಅದಕ್ಕಾಗಿ ಇವರ ಕೆಲವು ಆಚರಣೆಗಳಲ್ಲಿ ಬ್ರಾಹ್ಮಣ್ಯವನ್ನು ಗೇಲಿ ಮಾಡುವ ಅಣಕು ಪ್ರದರ್ಶನಗಳೂ ಕೂಡ ನಡೆಯುತ್ತವೆ.

15. ಸೋಲಿಗರು ಮೂಲತಃ ತಮಿಳುನಾಡು ಭಾಗದ ಸಹ್ಯಾದ್ರಿಯ ಸಾಲಿನವರು ಆದ್ದರಿಂದಲೇ ಅವರ ಮೂಲಕ್ಕೆ ಸಂಬಧಿಸಿದಂತಹ ಹೆಚ್ಚಿನ ವಿಚಾರಗಳು ತಮಿಳುನಾಡಿಗೆ ಸಂಬಂಧಿಸಿದೆ.

16. ಸೋಲಿಗರಲ್ಲಿ ಪಲಾಯನ ಮದುವೆ ಪ್ರಚಲಿತ. ರೊಟ್ಟಿ ಹಬ್ಬದ ಸಂದರ್ಭದಲ್ಲಿ ಗಂಡು ಹೆಣ್ಣು ಪರಸ್ಪರ ಇಷ್ಟ ಪಟ್ಟು ಕಾಡಿಗೆ ಓಡಿಹೋಗುತ್ತಾರೆ. ಆದರೆ ಇಂದು ರೊಟ್ಟಿ ಹಬ್ಬವು ಹಿಂದಿನಂತೆ ಗಂಡು ಹೆಣ್ಣಿನ ಸ್ವಯಂವರದ ವೇದಿಕೆಯಾಗಿಲ್ಲ ಕಾರಣವೇನೆಂದರೆ ಇಂದು ಸರಕಾರದ ಕಡ್ಡಾಯ ಶಿಕ್ಷಣ ಕಾಯಿದೆಯ ಅಡಿ ಶಿಕ್ಷಣ ಪಡೆದ ಯುವತಿಯರಲ್ಲಿ ಹೆಚ್ಚಿನವರು ಕನಿಷ್ಟ 10–12 ರವರೆಗೆ ಶಿಕ್ಷಣವನ್ನು ಪಡೆದಿದ್ದಾರೆ ಪೇಟೆಯನ್ನು ಕಂಡಿದ್ದಾರೆ, ಕಾಡಿನಲ್ಲಿ ಹುಟ್ಟಿ ಬೆಳೆದ ಈ ಸಮುದಾಯ ಇಂದು ಕಾಡಿನ ಬದುಕಿನಿಂದ ಬೇಸತ್ತು ಹೊರಬರಲು ತವಕಿಸುತ್ತಿದ್ದಾರೆ. ರೊಟ್ಟಿ ಹಬ್ಬದ ಸಂದರ್ಭದಲ್ಲಿ ಸೋಲಿಗರ ಯುವಕರು ಈ ಯುವತಿಯರನ್ನು ಆಕರ್ಷಿಸಲು ಪ್ರಯತ್ನಿಸಿದರೂ ಕೂಡ ಯುವತಿಯರು ಅವರು ನಿರ್ಲಕ್ಷಿಸುತ್ತಾರೆ. ನಾವು ಕಾಡಲ್ಲಿ ಇರುವವರನ್ನು ಮದುವೆಯಾದರೆ ನಾವು ಕಾಡಲ್ಲೇ ಇರಬೇಕಾಗುತ್ತದೆ. ಮತ್ತೆ ಕಾಡಲ್ಲೇ ಬದುಕಲು ನಾವು ಬಯಸುವುದಿಲ್ಲ ಎಂಬ ಕಾರಣವನ್ನು ನೀಡುತ್ತಾರೆ.

17. ಬೆಟ್ಟಕುರುಬರಲ್ಲಿ ಅಂಬಾಲ ದೇವಾಲಯವಿದ್ದಂತೆ, ನ್ಯಾಯಸ್ಥಾನವಿದ್ದಂತೆ. ಅತ್ಯಂತ ವ್ಯವಸ್ಥಿತವಾದ ಆಡಳಿತ ವ್ಯವಸ್ಥೆ, ಜೀವನ ವಿಧಾನವನ್ನು ಇವರು ಅಳವಡಿಸಿಕೊಂಡಿದ್ದಾರೆ. ಅಂಬಾಲ ಶಿಕ್ಷೆ ನೀಡುವ ಜಾಗವಲ್ಲ ಬದಲಿಗೆ ಪ್ರಾಯಶ್ಚಿತ ಸಿದ್ಧಿಸುವ ಜಾಗ. ಒಬ್ಬ ವ್ಯಕ್ತಿ ತಪ್ಪು ಮಾಡಿದಾಗ ಆತನ ಮನೆಯವರನ್ನು, ಕುಲದ ಹಿರಿಯರನ್ನು, ಸತ್ತವರ ಆತ್ಮಗಳನ್ನು ಕರೆಯಿಸಿ ನಿಮ್ಮ ಮಗ/ಳು ಈ ರೀತಿ ತಪ್ಪು ಮಾಡಲು ನೀವು ಯಾಕೆ ಅವಕಾಶ ಮಾಡಿಕೊಟ್ಟಿರಿ ಎಂದು ಪ್ರಶ್ನಿಸುತ್ತಾರೆ. ಶಿಕ್ಷೆ ನೀಡದೆ ಆತನ ತಪ್ಪನ್ನು ತಿದ್ದಿಕೊಳ್ಳಲು ಅವಕಾಶ ಮಾಡಿಕೊಡಲಾಗುತ್ತದೆ. ಇದು ಬಹಳ ವಿಭಿನ್ನ ಮತ್ತು ಆದರ್ಶಮಯವಾದುದು.

18. ಬೆಟ್ಟಕುರುಬರಲ್ಲಿ ಹೆಣ್ಣಿಗೆ ವಿಶೇಷ ಪ್ರಾತಿನಿದ್ಯತೆಯಿದೆ. ಯಜಮಾನನ ಹೆಂಡತಿ ಸಮುದಾಯದ ಯಜಮಾನತಿಯಾಗುತ್ತಾಳೆ. ಆತನಿಗೆ ಇರುವಷ್ಟೇ ಪ್ರಾಶಸ್ತ್ಯ ಆಕೆಗೂ ಇದೆ. ನ್ಯಾಯ

ಪಂಚಾಯ್ತಿ ನಡೆಯುವಾಗ ಹೆಂಗಸರೂ ಕೂಡ ಕಡ್ಡಾಯವಾಗಿ ಭಾಗವಹಿಸುತ್ತಾರೆ ಮತ್ತು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ ಅವರ ಮಾತಿಗೂ ವಿಶೇಷ ಮನ್ನಣೆಯಿದೆ.

19. ಅತ್ಯಂತ ವ್ಯವಸ್ಥಿತವಾದ ಜಮ್ಮದ ಕಲ್ಪನೆ ಬುಡಕಟ್ಟುಗಳದ್ದು, ಕಾಡಿನಲ್ಲಿ ತಾವು ವಾಸಿಸುವ ನಿರ್ದಿಷ್ಟ ಎಲ್ಲೆಯನ್ನು ಗುರುತಿಸಲು ಜಮ್ಮದ ಗಡಿಯನ್ನು ನಿರ್ಧರಿಸುತ್ತಾರೆ. ಆ ಜಮ್ಮದ ಗಡಿಯ ಒಳಗಡೆ ಬೇರೆ ಬೇರೆ ಬುಡಕಟ್ಟುಗಳು, ಹಾಡಿಗಳು ಇದ್ದರೂ ಕೂಡ ಎಲ್ಲರೂ ಅನ್ಯೋನ್ಯವಾಗಿ ಬದುಕುತ್ತಾರೆ. ಒಂದು ಜಮ್ಮದ ವ್ಯಾಪ್ತಿಯೊಳಗೆ ಬೇರೆ ಜಮ್ಮದವರು ಅತಿಕ್ರಮಣ ಮಾಡುವಂತಿಲ್ಲ ಮತ್ತು ಆಹಾರವನ್ನು ಸಂಗ್ರಹಿಸುವಂತಿಲ್ಲ ಹೊಳೆ, ಮರ, ಕಲ್ಲು, ಬಂಡೆ ಜಮ್ಮದ ಗಡಿ ನಿರ್ದರಿಸುವ ಕುರುಹುಗಳಾಗಿರುತ್ತವೆ.

20. ಕುಲವನ್ನು ಮಗೆ ಎಂದು ಕರೆಯುವ ಬೆಟ್ಟಕುರುಬರಲ್ಲಿ ಸುಮಾರೂ ಇನ್ನೂರಕ್ಕೂ ಹೆಚ್ಚು ಮಗೆಗಳಿವೆ ಆದರೆ ಇಂದು ಆ ಮಗೆಗಳು ಹೆಚ್ಚಿನವು ನಾಶವಾಗಿ 109 ಮಗೆಗಳನ್ನು ಸಂಗ್ರಹಿಸಲಾಗಿದೆ. ಕೆಲವೊಂದು ಮಗೆಯ ಕೊನೆಯ ಕೊಂಡಿ ಕಳಚಿದರೆ ಆ ವ್ಯಕ್ತಿಯೊಂದಿಗೆ ಆ ಮಗೆಯೂ ಕೂಡ ನಾಶವಾಗುತ್ತವೆ.

21. ಬುಡಕಟ್ಟುಗಳು ಕೆತ್ಲು ಬೇಸಾಯವನ್ನು ಅನುಸರಿಸಿಕೊಂಡು ವ್ಯವಸಾಯ ಮಡುತ್ತಿದ್ದವರು ಅರಣ್ಯ ನೀತಿಗಳು ಇವರ ಭೂಮಿಯನ್ನು ಕಿತ್ತುಕೊಂಡು ಕಾಡಿನಿಂದ ಹೊರದಬ್ಬಿದ ನಂತರ ಅನಿವಾರ್ಯ ಕಾರಣಗಳಿಂದ ಕಾಡಿನಿಂದ ಹೊರಬಂದು ಬದುಕಿನ ನಿರ್ವಹಣೆಗಾಗಿ ಕೂಲಿ ಮಾಡಲು ಪ್ರಾರಂಭಿಸಿದರು. ಈ ರೀತಿ ಎರಡು ತಲೆಮಾರುಗಳು ಕಳೆಯುತ್ತಿದ್ದಂತೆ ಈ ಸಮುದಾಯಗಳನ್ನು ಇವರು ಕೂಲಿಮಾಡಲಷ್ಟೇ ಉಪಯುಕ್ತರು ಇವರು ಎಂದಿಗೂ ಭೂಮಿಯ ಒಡೆಯರಾದವರಲ್ಲ ಇವರಿಗೆ ಭೂಮಿ ನೀಡುವುದು ವ್ಯರ್ಥ ಎಂಬ ಮಾತುಗಳನ್ನು ಆಡುವುದರ ಮೂಲಕ ಅವರಿಗೆ ಭೂಮಿ ಸಿಗದಂತೆ ಮಾಡುವ ಹುನ್ನರಗಳು ನಡೆಯುತ್ತಿವೆ.

22. ಪ್ರತಿರೋಧ ಇವರ ಮೌಖಿಕ ಸಾಹಿತ್ಯದಲ್ಲಿ ಪ್ರಭಲವಾಗಿ ಉಲ್ಲೇಖವಾಗಿವೆ, ಕಾಲಚಾತ ಬಲಾಮಗನ ಪಾತ್ರ ಭೂಮಿಯಿಂದ ವಂಚಿತನಾದ ಕಾರಣ ಭೂಮಿ ಪಡೆಯಲು ನಡೆಸುವ ಹೋರಾಟವಾಗಿದೆ. ಅಂತೆಯೇ ಅಕ್ಷರದಿಂದ ವಂಚಿತರಾದ ಕಾರಣಕ್ಕೆ ಜ್ಞಾನವನ್ನು ತಮ್ಮ ನಾಲಿಗೆಲ್ಲಿ ಪಡೆಯುವುದು ಸಾಂಕೇತಿಕವಾಗಿದೆ. ಆ ಕಾರಣದಿಂದ ಅಪಾರ ಜ್ಞಾನವನ್ನು ತಮ್ಮ ಬುದ್ದಿಶಕ್ತಿಯಿಂದ ನಾಲಿಗೆಯ ಮೂಲಕ ಉಳಿಸಿಕೊಂಡು ಬಂದಿದ್ದೇವೆ ಎನ್ನುತ್ತಾರೆ.

23. ಕುಂಡೆ ಹಬ್ಬ ಅಥವಾ ಬೇಡುಹಬ್ಬ ಭೂಮಾಲಿಕರ ದಬ್ಬಾಳಿಕೆಗೆ, ಶೋಷಣೆಗೆ ವಿರುದ್ಧವಾಗಿ ಆಚರಿಸಿಕೊಂಡು ಬಂದ ಮಾತಿನ ಪ್ರತಿರೋಧ ಅಂದು ತಮ್ಮ ದೈವಗಳನ್ನು ಮುಂದಿಟ್ಟುಕೊಂಡು

ತಮ್ಮನ್ನು ಶೋಷಣೆಗೆ ಗುರಿ ಮಾಡಿದರನ್ನು ಬಯ್ಯುವ ಮೂಲಕ ಆತ್ಮ ತೃಪ್ತಿಯನ್ನು ಹೊಂದುವ ವಿಶಿಷ್ಟ ಆಚರಣೆಯಾಗಿದೆ.

24. ಸಂಕಮ್ಮ ಕೂಡ ಹೆಣ್ಣಿನ ಶೋಷಣೆಯ ವಿರುದ್ಧ ಪ್ರತಿರೋಧದ ಧನಿ ಎತ್ತುವ ದಿಟ್ಟ ಮಹಿಳೆಯಾಗಿ ನಮಗೆ ಕಂಡು ಬರುತ್ತಾಳೆ.

25. ಜೇನುಕುರುಬರಲ್ಲಿ ಬುಂಡೆ ಕರೆಯುವುದು ಮತ್ತು ಬೆಟ್ಟಕುರುಬರಲ್ಲಿ ಬಿಂಜೆ ಪಾಡುಗ ಆಚರಣೆಗಳು ವಿಶಿಷ್ಟವಾಗಿದೆ. ಈ ಆಚರಣೆಗಳು ಲೌಕಿಕ ಮತ್ತು ಅಲೌಕಿಕದ ನಡುವೆ ತಂತಿಯನ್ನು ಬೆಸೆಯುತ್ತವೆ, ಇಲ್ಲಿ ತಮ್ಮಡಿ ಅಥವ ಶಮನ್ ತನ್ನ ಕ್ರಿಯೆಯ ಮೂಲಕ ಇಡೀ ಸಮುದಾಯವನ್ನು ನಿಯಂತ್ರಿಸುತ್ತಾನೆ. ಆತ ವೈದ್ಯನಾಗಿ, ಆಪ್ತಸಮಾಲೋಚಕನಾಗಿ, ದೈವವಾಗಿ, ಗುರುವಾಗಿ, ನಾಯಕನಾಗಿ, ಮಾಂತ್ರಿಕನಾಗಿ ಏಕಕಾಲಕ್ಕೆ ಹಲವು ಪಾತ್ರಗಳನ್ನು ನಿಭಾಯಿಸುವ ಮೂಲಕ ಸಮುದಾಯದ ಚೈತನ್ಯ ಶಕ್ತಿಯಾಗಿ ಕಂಡುಬರುತ್ತಾನೆ.

26. ಕಾಡು ಬಿಟ್ಟು ನಾಡು ಸೇರಿದ ನಂತರ ಹೊಸ ಪರಿಸರದಲ್ಲಿ ಹೊಸ ವ್ಯಕ್ತಿಗಳೊಂದಿಗೆ ಬದುಕಲು ಪ್ರಾರಂಭಿಸಿದ ಈ ಬುಡಕಟ್ಟು ಸಮುದಾಯಗಳು ಹೊಸ ಪರಿಸರಕ್ಕೆ ಹೊಂದಿಕೊಳ್ಳಲಾಗದೆ ತಲ್ಲಣಿಸಿ ಹೋದವು ಕಾಡಿನಲ್ಲಿ ಸ್ವಚ್ಛಂದವಾಗಿ ಬದುಕುತ್ತಿದ್ದ ಈ ಸಮುದಾಯಗಳು ಅತ್ತ ಮರಳಿ ಕಾಡಿಗೆ ಹೋಗಲಾರದೆ, ಇತ್ತ ನಾಡಿನಲ್ಲಿ ಬದುಕಲಾರದೆ ಅತಂತ್ರ ಸ್ಥಿತಿಯನ್ನು ಅನುಭವಿಸಿದವು ಆ ಸಂಧರ್ಭದಲ್ಲಿ ಇಡೀ ಸಮುದಾಯವನ್ನು ಏಕಸೂತ್ರದಲ್ಲಿ ಹಿಡಿದು ತಮ್ಮ ಅಜ್ಜಯ್ಯನ ನೆರಳಿನಲ್ಲಿ ನಿರಾಳತೆಯನ್ನು ತಂದವನು, ಸಮುದಾಯಕ್ಕೆ ಧೈರ್ಯ ಕೊಟ್ಟವನು ಶಮನ್. ಆತನ ಮೂಲಕ ತಮ್ಮ ಹಿರಿಯರಿಗೆ ತಮ್ಮ ಕಷ್ಟಗಳನ್ನು ರವಾನಿಸುವ ಮೂಲಕ ತಮ್ಮನ್ನು ಈ ಕಷ್ಟದ ದಿನಗಳಿಗೆ ನೂಕಿದ ತಮ್ಮ ಹಿರಿಯರ ಆತ್ಮಗಳನ್ನು ಬೈಯ್ಯುವ ಮೂಲಕ ತಮ್ಮ ಸಂಕಟವನ್ನು ಹೊರಹಾಕುತ್ತಾರೆ. ಶಮನ್‌ನ ಮೂಲಕ ತಮ್ಮ ಹಿರಿಯರಿಂದ ಭರವಸೆಯನ್ನು ಪಡೆದು ನೋವನ್ನು ಮರೆಯುತ್ತಾರೆ.

27. ಬುಡಕಟ್ಟುಗಳು ಅಂದಂದಿನ ಬದುಕನ್ನು ಅಂದಂದೇ ಬದುಕಿದವರು. ಇವರು ನಾಳೆಗಾಗಿ ಕೂಡಿಟ್ಟವರಲ್ಲ, ಕಾಡಿನಿಂದ ಹೊರಹಾಕಿದ ನಂತರ ತಮ್ಮ ಮೂಲ ನೆಲೆ ದೈವಗಳನ್ನು ಕಳೆದುಕೊಂಡ ಇವರಲ್ಲಿ ಹೆಚ್ಚಿನವರು ಮಾದಕ ವ್ಯಸನಕ್ಕೆ ದಾಸರದರು, ಕುಡಿತ ಗಂಡು, ಹೆಣ್ಣು, ಚಿಕ್ಕವರು ದೊಡ್ಡವರೆನ್ನದೆ ಎಲ್ಲರ ನೋವನ್ನು ಮರೆಸುವ ಸಾಧನವಾಯಿತು. ಇನ್ನು ಕೆಲವರು ಮಾನಸಿಕ ಸ್ಥಿಮಿತತೆ ಕಳೆದುಕೊಂಡು ಹುಚ್ಚರಂತಾದರು. ಇಂದಿಗೂ ಹಾಡಿಗಳಲ್ಲಿ ನಾವು ಮತಿವಿಕಲ್ಪಕ್ಕೆ ಒಳಗಾದವರನ್ನು ನಾವು ಕಾಣಬಹುದು. ಬುಡಕಟ್ಟುಗಳ ಮನಸ್ಥಿತಿಯನ್ನು ಅರಿಯಲು ಕೇರಳದಲ್ಲಿ ಇತ್ತಿಚೆಗೆ ನಡೆದ ಒಂದು ಹೃದಯವಿದ್ರಾವಕ

ಘಟನೆಯನ್ನು ನಾವು ಇಲ್ಲಿ ನೆನೆಯಬಹುದು. ಫಣಿ ಎರವರ ಮಧು ಎಂಬಾತ ಕಾಡಿನಿಂದ ಹೊರಹಾಕಲ್ಪಟ್ಟ ನಂತರ ಮಾನಸಿಕ ಅಸ್ವಸ್ಥತೆಯನ್ನು ಅನುಭವಿಸುತ್ತಿದ್ದವನಿ. ಕಾಡು ಬಿಟ್ಟ ನಂತರ ಊರಿನಲ್ಲಿ ಇರಲಾರದೆ ಮತ್ತೆ ಕಾಡಿನಲ್ಲೆ ಒಂಟಿಯಾಗಿ ಬದುಕಲು ಪ್ರಾರಂಭಿಸುತ್ತಾನೆ, ಒಮ್ಮೆ ಹಸಿವಾದಾಗ ಅಡುಗೆ ಮಾಡಲು ಅಂಗಡಿಯಿಂದ ಆಹಾರ ಪದಾರ್ಥಗಳನ್ನು ಕದಿಯುವಾಗ ಸಿಕ್ಕಿಬಿದ್ದು ಜನಗಳಿಂದ ಏಟು ತಿಂದು ಸಾಯುತ್ತಾನೆ. ಈ ಘಟನೆಯನ್ನು ನಾವು ಸೂಕ್ಷ್ಮವಾಗಿ ಗಮನಿಸಿದರೆ ಬುಡಕಟ್ಟುಗಳ ಮಾನಸಿಕ ಸ್ಥಿತಿಯನ್ನು, ನಾಗರೀಕ ಪ್ರಪಂಚ ಅವರನ್ನು ಅರ್ಥ ಮಾಡಿಕೊಳ್ಳುವಲ್ಲಿ ಸಂಪೂರ್ಣವಾಗಿ ಸೋತಿರುವುದನ್ನು ಕಾಣಬಹುದು.

28. ಹಾಗೆಯೇ ರಾಜೇಶ್ ಎಂಬ ಹೆಗ್ಗಡದೇವನಕೋಟೆಯ ಜೇನುಕುರುಬರ ಹುಡುಗನನ್ನು ರಿಯಾಲಿಟಿ ಷೋನಲ್ಲಿ ಕಾಡಿನಿಂದ ಹಿಡಿದು ತಂದ ಪ್ರಾಣಿಯಂತೆ ತೋರಿಸಿ ಟಿ.ಆರ್.ಪಿ ಹೆಚ್ಚಿಸಿಕೊಂಡ ಟಿ.ವಿ ಚಾನೆಲ್ ಗಳು ನಗರದ ಬಣ್ಣದ ಬದುಕಿನ ಪರಿಚಯ ಮಾಡಿಸಿ ಒಂದಷ್ಟು ಹಣ ಕೊಟ್ಟು ಕೈತೊಳೆದುಕೊಂಡವು. ಷೋ ಮುಗಿದ ನಂತರ ನಗರದ ಜೀವನ ಶೈಲಿಗೆ ಆಕರ್ಷಿತನಾಗಿ ಅತ್ತ ಕಾಡಿಗೂ ಹೋಗಲಾರದೆ ಇತ್ತ ನಗರದ ಕೃತಕ ಬದುಕಿಗೆ ಹೊಂದಿಕೊಳ್ಳಲಾರದೆ ಮಾನಸಿಕ ಸ್ಥೀಮಿತತೆ ಕಳೆದುಕೊಂಡ ರಾಜೇಶ್ ತನ್ನ ಬದುಕನ್ನೇ ಕೊನೆಗಾಣಿಸಿಕೊಂಡ. ಈ ರೀತಿಯ ಅಸಂಖ್ಯಾತ ಉದಾಹರಣೆಗಳು ನಮಗೆ ನಮ್ಮ ಸುತ್ತಮುತ್ತ ದೊರೆಯುತ್ತವೆ. ಅದನ್ನು ನೋಡುವ ಆರ್ದ್ರ ಹೃದಯ ನಮಗಿರಬೇಕಷ್ಟೆ.

29. ಬೆಟ್ಟಕುರುಬರು ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರ ಸಾಮಾಜಿಕ ಕ್ರಾಂತಿಯ ಪ್ರಭಾವಕ್ಕೆ ಒಳಪಟ್ಟು ತಾವೂ ಕೂಡ ಮಠಗಳನ್ನು ಸ್ಥಾಪಿಸಿಕೊಂಡವರು ಮತ್ತು ಗುರುಪರಂಪರೆಯನ್ನು ಪಾಲಿಸಿದವರು ಎಂಬುದಕ್ಕೆ ಪುರಾವೆಗಳು ನಮಗೆ ಇವರ ಮೌಖಿಕ ಸಾಹಿತ್ಯದಲ್ಲಿ ದೊರೆಯುತ್ತವೆ ಈ ಬಗ್ಗೆ ಹೆಚ್ಚಿನ ಅಧ್ಯಯನಗಳು ನಡೆಯಬೇಕಿವೆ.

ಬುಡಕಟ್ಟು ಮೌಖಿಕ ಸಾಹಿತ್ಯ ಮಾಹಿತಿಯ ಆಗರ, ಅವರ ಬದುಕು ಬವಣೆಯನ್ನು ಅರ್ಥ ಮಾಡಿಕೊಳ್ಳಲು ಸಹಕಾರಿಯಾಗಿದೆ. ಮನುಷ್ಯ ಸಂಬಂಧವನ್ನು ಗಟ್ಟಿಗೊಳಿಸುವುದರೊಂದಿಗೆ ಪ್ರಕೃತಿ ಮತ್ತು ಮನುಷ್ಯನ ಅನುಸಂಧಾನ ಇವರ ಮೌಖಿಕ ಸಾಹಿತ್ಯದಲ್ಲಿ ದೊರೆಯುತ್ತದೆ.

**ಪ್ರಸ್ತುತ ಸಂದರ್ಭದಲ್ಲಿ ಆದಿವಾಸಿಗಳು ಎದುರಿಸುತ್ತಿರುವ ಸಮಸ್ಯೆಗಳು**

1. ಅರಣ್ಯ ಸಂರಕ್ಷಣಾ ಕಾನೂನು, ಅರಣ್ಯನೀತಿಗಳು ಮತ್ತು ಇತರೆ ಬಲಿಷ್ಠ ಸಮುದಾಯಗಳ ಆಕ್ರಮಣದಿಂದಾಗಿ ಭೂಮಿ ಕಳೆದುಕೊಂಡ ಈ ಬುಡಕಟ್ಟು ಸಮುದಾಯಗಳು ತಮ್ಮದೇ

ಭೂಮಿಯಲ್ಲಿ ಕೂಲಿಕಾರ್ಮಿಕರಾಗಿ, ಜೀತದಾಳುಗಳಾಗಿ ಬದುಕುವ ಪರಿಸ್ಥಿತಿ ನಿರ್ಮಾಣವಾಗಿದೆ. ಸರಕಾರವು ಇದಕ್ಕಾಗಿ ಹಲವು ಆದಿವಾಸಿ ಕಲ್ಯಾಣ ಕಾರ್ಯಕ್ರಮಗಳನ್ನು ಜಾರಿಗೆ ತಂದಿದ್ದರೂ ಭೂಮಿ ಇವರಿಗಿನ್ನೂ ದೊರೆತಿಲ್ಲ. ಬುಡಕಟ್ಟುಗಳಿಗೆ ಸ್ವಂತ ಭೂಮಿಯನ್ನು ಒದಗಿಸಿಕೊಡಬೇಕಿದೆ. ಆ ಮೂಲಕ ಸ್ವಾವಲಂಬನೆಯಿಂದ ಬದುಕಲು ಪ್ರೇರಣೆಯನ್ನು ನೀಡಬೇಕಿದೆ.

2. ಕಾಡಿನಿಂದ ಹೊರಹಾಕಲ್ಪಟ್ಟ ಈ ಸಮುದಾಯಗಳು ತಮ್ಮ ಜೀವನ ನಿರ್ವಹಣೆಗಾಗಿ ಕಿರು ಬೇಸಾಯದೊಂದಿಗೆ ಕಾಡಿನ ಉತ್ಪನ್ನಗಳನ್ನು ಅವಲಂಬಿಸಿಕೊಂಡು ಬದುಕುತ್ತಿದ್ದವರು. ಕಾಡಿನಿಂದ ಹೊರಹಾಕಿದ ನಂತರ ಬದುಕಿಗಾಗಿ ಕೂಲಿಕಾರ್ಮಿಕರಾಗಿ ಕೆಲಸಕ್ಕೆ ಸೇರಿಕೊಂಡಿದ್ದಾರೆ. ಆದರೆ ಕಾಫಿ ತೋಟದ ರಬ್ಬರ್ ತೋಟಗಳಲ್ಲಿ ಕೆಲಸ ಮಾಡಬೇಕಾದ ಕೌಶಲ್ಯದ ಕೊರತೆಯಿಲ್ಲದೆ ಮಾಲೀಕರ ದೂಷಣೆಗೆ ಒಳಗಾಗುತ್ತಿದ್ದಾರೆ.

3. ಸರಕಾರದ ಅಭಿವೃದ್ಧಿ ಯೋಜನೆಗಳಾದ ಅಣೆಕಟ್ಟುಗಳು, ಸೇತುವೆಗಳು, ರೈಲ್ವೇ ಹಳಿ, ವಿದ್ಯುಚ್ಛಕ್ತಿ ಮೊದಲಾದ ಯೋಜನೆಗಳಿಂದ ಕಾಡಿನಿಂದ ಹೊರಹಾಕಲ್ಪಟ್ಟವರಿಗೆ ಅರಣ್ಯ ಹಕ್ಕು ಕಾಯಿದೆಯ ಪ್ರಕಾರ ಇನ್ನೂ ಕೂಡ ಪರ್ಯಾಯ ವ್ಯವಸ್ಥೆ ಆಗಿಲ್ಲ.

4. ಕಾಡಿನಿಂದ ಹೊರಬಂದ ನಂತರ ತಮ್ಮ ನೆಲ, ಪರಿಸರ, ಬಂಧು ಬಳಗ ಪ್ರತಿಯೊಂದನ್ನು ಕಳೆದುಕೊಂಡು ಮಾನಸಿಕ ತೊಳಲಾಟಕ್ಕೆ ಗುರಿಯಾದ ಈ ಸಮುದಾಯದ ಹೆಚ್ಚಿನ ಪಾಲು ಕುಡಿತದ ಮೂಲಕ ತಮ್ಮ ನೋವನ್ನು ಕಳೆಯಲು ಪ್ರಾರಂಭಿಸಿದರು. ಮಾಲೀಕರು ಬೆಳ್ಳಂಬೆಳಗೆ ಕೂಲಿಗಾಗಿ ಬರುವವನಿಗೆ ಹೆಂಡವನ್ನು ಕುಡಿಸುವುದರಿಂದ ಅಮಲಿನಲ್ಲಿ ಒಬ್ಬ ವ್ಯಕ್ತಿಯಿಂಸ ಅವನ ಸಾಮರ್ಥ್ಯಕ್ಕೆ ಮೀರಿದ ದುಡಿಮೆಯನ್ನು ದುಡಿಸಿಕೊಂಡು ಸರಿಯಾಗಿ ಕೂಲಿ ಕೊಡದೆ ಅಮಾನವೀಯವಾಗಿ ನಡೆಸಿಕೊಳ್ಳುವ ಸ್ಥಿತಿಯೂ ಜಾರಿಯಲ್ಲಿದೆ.

5. ಅಪೌಷ್ಟಿಕತೆಂದಾಗಿ ತಾಯಿ ಮಗುವಿನ ಮರಣ, ಸಕಾಲದಲ್ಲಿ ಸಿಗದ ವೈದ್ಯಕೀಯ ನೆರವು, ಸರಕಾರದ ಕುಟುಂಬ ಯೋಜನೆ ಮೊದಲಾದ ಕಾರಣಗಳಿಂದ ಈ ಬುಡಕಟ್ಟುಗಳ ಜನಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತಿದೆ.

6. ಗುಣಮಟ್ಟದ ಮತ್ತು ಉನ್ನತ ಮಟ್ಟದ ಶಿಕ್ಷಣವು ಇವರಿಗಿನ್ನೂ ಸರಿಯಾದ ಪ್ರಮಾಣದಲ್ಲಿ ದೊರೆತಿಲ್ಲ.

7. ಕಾಫಿ ತೋಟಗಳಲ್ಲಿ ತಲೆಮಾರುಗಳ ಕಾಲ ಜೀತದಾಳುಗಳಾಗಿ ಬದುಕುತ್ತಿರುವ ಇವರನ್ನು ತುರ್ತಾಗಿ ಸರಕಾರ ಗುರುತಿಸಿ ಜೀತಮುಕ್ತರಾಗಿಸಬೇಕಿದೆ.

8. ಈ ಬುಡಕಟ್ಟುಗಳು ತಮ್ಮ ಭಾಷೆಯ ಮೇಲಿನ ಕೀಳರಿಮೆಯಿಂದಾಗಿ ಶಾಲೆ ಸೇರಿದ ನಂತರ ಕನ್ನಡ ಭಾಷೆಯನ್ನೇ ತಮ್ಮ ಮನೆಮಾತಾಗಿ ಬಳಸುತ್ತಿದ್ದಾರೆ. ಶಾಲೆ ಕಾಲೇಜುಗಳನ್ನು ಸೇರಿದವರು ತಮ್ಮ ಜಾತಿಯ ಬಗ್ಗೆ ಹೇಳಿಕೊಳ್ಳುವುದು ಹಾಗೂ ಮಾತೃಭಾಷೆ ಮಾತನಾಡುವುದೇ ನಮ್ಮ ದೌರ್ಬಲ್ಯ ಎಂದು ತಿಳಿದಿದ್ದಾರೆ. ಇದರಿಂದಾಗಿ ಕ್ರಮೇಣ ಈ ಭಾಷೆಗಳು ಸಮುದಾಯದಿಂದ ದೂರ ಸರಿಯುತ್ತಿದೆ. ಇದೇ ರೀತಿ ಮುಂದುವರಿದರೆ ಈ ಭಾಷೆಗಳು ನಶಿಸಿ ಹೋಗುವುದರೊಂದಿಗೆ ಆ ಭಾಷೆಯೊಂದಿಗೆ ಅವರ ಮೌಖಿಕ ಸಾಹಿತ್ಯವು ಹಾಗೂ ಅದರೊಂದಿಗೆ ಬೆರೆತಿರುವ ಆಚರಣೆಗಳು ಕೂಡ ಕಳೆದುಹೋಗುತ್ತದೆ. ಇದರೊಂದಿಗೆ ಒಂದು ಸಮುದಾಯದ ಅಸ್ಮಿತೆಯೇ ನಾಶ ಹೊಂದುವ ಸಾಧ್ಯತೆಯಿದೆ.

9. ಕಾಡಿನಿಂದ ಹೊರಹಾಕಲ್ಪಟ್ಟ ಈ ಸಮುದಾಯಗಳು ಇತರೆ ಸಮುದಾಯಗಳೊಂದಿಗೆ ಸಂಪರ್ಕವನ್ನು ಹೊಂದುವುದರಿಂದ ತಮ್ಮ ಆಚರಣೆಗಳನ್ನು ಕೈಬಿಡುತ್ತಾ ಹೊಸದನ್ನು ಸ್ವೀಕರಿಸುವುದರೊಂದಿಗೆ ಅವರ ವಿಶಿಷ್ಟ ಸಂಪ್ರದಾಯ, ಆಚರಣೆಗಳು ಕ್ರಮೇಣ ಇಲ್ಲವಾಗುತ್ತವೆ. ಹಾಡಿಯಲ್ಲಿ ಸಮುದಾಯಗಳು ಒಟ್ಟಾಗಿ ಬದುಕುತ್ತಿದ್ದ ಕಾಲದಲ್ಲಿ ಸಮುದಾಯಗಳ ನಡುವೆ ಅನ್ಯೋನ್ಯ ಸಂಬಂಧವಿರುತ್ತಿತ್ತು. ಹಾಡಿಯೊಂದಿಗೆ ಮೇಳೈಸಿದ್ದ ವಿಶಿಷ್ಟ ನಂಬಿಕೆಗಳು, ಪದ್ಧತಿಗಳು, ಹಾಡಿಯ ಕಲ್ಪನೆ ಬದಲಾದಂತೆ ಅವೂ ಕೂಡ ನಾಶ ಹೊಂದುತ್ತಾ ಸಾಗುತ್ತಿವೆ.

10. ಬುಡಕಟ್ಟುಗಳ ಹೆಸರಿನಲ್ಲಿ ಇರುವ ಹಲವಾರು ಯೋಜನೆಗಳು ಇಂದು ಬಲಿಷ್ಠರ ಪಾಲಾಗುತ್ತಿದೆ. ಇದರಿಂದ ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಔದ್ಯೋಗಿಕವಾಗಿ ಮೀಸಲಾತಿಯಿಂದ ವಂಚಿತಾಗುತ್ತಿದಾರೆ. ಆದ್ದರಿಂದ ಈ ಬುಡಕಟ್ಟುಗಳಿಗೆ ಮೀಸಲಾತಿಯಲ್ಲಿ ವಿಶೇಷವಾದ ಅವಕಾಶ ನೀಡಬೇಕು.

11. ಕೃಷಿ ತೋಟಗಾರಿಕೆ ಇತ್ಯಾದಿ ಇಲಾಖೆಗಳ ಮೂಲಕ ಬುಡಕಟ್ಟು ಕೃಷಿಕರಿಗೆ ಸಾಂಪ್ರದಾಯಿಕ ಕೃಷಿಪದ್ಧತಿಯಲ್ಲಿಯೇ ಅಧಿಕ ಇಳುವರಿ ಕೊಡುವ ತಂತ್ರಜ್ಞಾನವನ್ನು ತಿಳಿಸಿಕೊಡಬೇಕು.

12. ಸಾಲದ ಸುಳಿಯಲ್ಲಿ ಸಿಲುಕಿ ಬಡ್ಡಿ, ಚಕ್ರಬಡ್ಡಿಗಳಿಂದ ನಲುಗಿ ಹೋಗಿರುವ ಈ ಸಮುದಾಯಗಳನ್ನು ಸಾಲದಿಂದ ಮುಕ್ತಿ ದೊರಕಿಸಿ ಸ್ವಾವಲಂಬಿಗಳಾಗಿ ಬದುಕಲು ಕಾರ್ಯಕ್ರಮಗಳನ್ನು ರೂಪಿಸಿ ಅದನ್ನು ಜಾರಿಗೆ ತರಬೇಕು.

13. ಜಾಮೀನುರಹಿತ ಸಾಲವನ್ನು ಬ್ಯಾಂಕುಗಳಿಂದ ದೊರಕಿಸಿಕೊಡಬೇಕು. ಅವರ ಸಾಲಕ್ಕೆ ಸರಕಾರವೇ ಹೊಣೆಗಾರಿಕೆಯನ್ನು ತೆಗೆದುಕೊಳ್ಳಬೇಕು.

14. ನಿರುದ್ಯೋಗಿ ಯುವಕ ಯುವತಿಯರ ಕೌಶಲ್ಯ ವೃದ್ಧಿಗೊಳಿಸಿ ಉದ್ಯೋಗಾವಕಾಶ ದೊರಕಿಸಿ ಕೊಡಬೇಕು. ಸ್ವ ಉದ್ಯೋಗಕ್ಕೆ ಪ್ರೋತ್ಸಾಹ ನೀಡಬೇಕು.

15. ಕಾಡಿನ ಆಳವನ್ನು ಅರಿತಿರುವ ಈ ಕಾಡಿನ ಮಕ್ಕಳಿಗೆ ಅರಣ್ಯ ಇಲಾಖೆಯಲ್ಲಿ ವಿವಿಧ ಉದ್ಯೋಗಗಳನ್ನು ಸೃಷ್ಟಿಸುವುದರ ಮೂಲಕ ಉದ್ಯೋಗ ದೊರಕಿಸಿಕೊಡಬೇಕು.

16. ಪ್ರಸ್ತುತ ಇರುವ ಶಿಕ್ಷಣಕ್ಕಿಂತ ಭಿನ್ನವಾಗಿ ಸಾಂಪ್ರದಾಯಿಕ ಶಿಕ್ಷಣವನ್ನು ಪರಿಚಯಿಸಬೇಕು. ಅದಕ್ಕಾಗಿ ಆ ಸಮುದಾಯದಿಂದಲೇ ನಿರುದ್ಯೋಗಿಗಳನ್ನು ಶಿಕ್ಷಕರಾಗಿ ನೇಮಕ ಮಾಡಿಕೊಳ್ಳಬೇಕು ಆ ಮೂಲಕ ಅವರಿಗೆ ಉದ್ಯೋಗಾವಕಾಶಗಳನ್ನು ಒದಗಿಸಬೇಕು.

17. ಕಾಡನ್ನು ರಕ್ಷಿಸುವ ನೆಪದಲ್ಲಿ ಕಾಡಿನಿಂದ ಹೊರದಬ್ಬಲ್ಪಟ್ಟಿರುವ ಈ ಸಮುದಾಯದವರು ಕಾಡನ್ನು ಪ್ರೀತಿಸುವವರು. ಆದ್ದರಿಂದ ಕಾಡಿನಲ್ಲಿ ಇವರಿಗೆ ಮುಕ್ತ ಅವಕಾಶ ನೀಡುವ ಮೂಲಕ ಕಾಡನ್ನು ಯಥಾಸ್ಥಿತಿಯಲ್ಲಿ ಕಾಪಾಡಲು ಇವರ ಅನುಕೂಲ ಪಡೆಯಬೇಕು. ಆ ಮೂಲಕ ಅವರಿಗೆ ತಾವು ನಿಸರ್ಗದ ಮಡಿಲಲ್ಲಿ ಇದ್ದಂತಾಗುತ್ತದೆ. ಜೊತೆಗೆ ಕಾಡಿನಲ್ಲಿ ಜೇನು, ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸಲು ಅನುವು ಮಾಡಿಕೊಡಬೇಕು. ಕಾಡಿನಲ್ಲಿ ಯಾವ ಯಾವ ಸಮಯದಲ್ಲಿ ಏನೇನು ಚಟುವಟಿಕೆಗಳು ನಡೆಯಬೇಕೆಂಬ ಜ್ಞಾನವಿರುವುದರಿಂದ ಕಾಡಿಗೆ ಪೂರಕವಾಗಿ ಇವರು ಬದುಕುತ್ತಾರೆ. ಉದಾಹರಣೆಗೆ ಕೆಲವೊಂದು ಹಣ್ಣಿನ ಮರಗಳು ಎಷ್ಟೇ ದೊಡ್ಡದಾದರೂ ಹಣ್ಣನ್ನು ಬಿಡದಿದ್ದಾಗ ಆ ಮರಕ್ಕೆ ಯಾವುದೇ ಹಾನಿಯಾಗದಂತೆ ಆ ಮರಕ್ಕೆ ಏಟನ್ನು ಹಾಕುತ್ತಾರೆ. ನಂತರ ಆ ಮರ ಹಣ್ಣನ್ನು ಬಿಡುತ್ತದೆ. ಈ ರೀತಿಯ ವಿಶಿಷ್ಟ ಜ್ಞಾನವನ್ನು ಹೊಂದಿರುವ ಬುಡಕಟ್ಟು ಜನರು ಪ್ರಕೃತಿಗೆ ಪೂರಕವಾಗಿರುತ್ತಾರೆಯೇ ಹೊರತು ಮಾರಕವಾಗಲಾರರು.

18. ಸೋಲಿಗರ ಹೆರಿಗೆ ಪದ್ಧತಿ ಅತ್ಯಂತ ವೈಜ್ಞಾನಿಕವಾಗಿದ್ದು ಪಾಶ್ಚಿಮಾತ್ಯ ದೇಶಗಳಲ್ಲಿ ಈ ಪದ್ಧತಿಯು ಪ್ರಸಿದ್ಧಿ ಪಡೆಯುತ್ತಿರುವ ಸಂದರ್ಭದಲ್ಲಿ ಅಂತಹ ಪದ್ಧತಿಗಳನ್ನು ಅಳವಡಿಸಿಕೊಳ್ಳಲು ಸರಕಾರ ಮುಂದಾಗಬೇಕು.

19. ಕಣ್ಮರೆಯಾಗುತ್ತಿರುವ ಅವರ ಅಪಾರ ಮೌಖಿಕ ಸಾಹಿತ್ಯವನ್ನು ಸಂಗ್ರಹಿಸಿ ಆಧುನಿಕ ತಂತ್ರಜ್ಞಾನದ ಮೂಲಕ ರಕ್ಷಿಸಿಡಬೇಕಾಗುತ್ತದೆ.

# ಪರಾಮರ್ಶನ ಗ್ರಂಥಗಳು


## ಕನ್ನಡ ಪುಸ್ತಕಗಳು

1. ಅಂಬಳಿಕೆ ಹಿರಿಯಣ್ಣ, ಜನಪದ ಮಹಾಕಾವ್ಯ ಸ್ವರೂಪ, ಸಂ: ಡಾ. ತೀ.ನಂ. ಶಂಕರನಾರಾಯಣ, ಡಾ. ಎಂ.ಎನ್.ವೆಂಕಟೇಶ್, ಜನಪದ ಸಾಹಿತ್ಯ ಪ್ರಕಾರಗಳು, ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು 2004.
2. ಅಂಬೇಡ್ಕರ್, ಡಾ. ಅಂಬೇಡ್ಕರ್ ಬರೆಹಗಳು ಮತ್ತು ಭಾಷಣಗಳು, ಸಂ.1, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, 1990.
3. ಆಶೀಶ್ ನಂದಿ, ದೇವ ದೇವಿಯರು, ಅನು: ಕೆ.ವಿ.ಅಕ್ಷರ, ನೀನಾಸಂ ಮಾತುಕತೆ(ಲೇಖನ), ಸಂ.32, ಅಕ್ಷರ ಪ್ರಕಾಶನ, ಹೆಗ್ಗೋಡು, 1999.
4. ಕಾಳೇಗೌಡ ನಾಗವಾರ, ಅಂಬಳಿಕೆ ಹಿರಿಯಣ್ಣ, ಜೀ.ಶಂ.ಪ. ಅವರ ಜಾನಪದ ಬರಹಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, 2000.
5. ಕಿಕ್ಕೇರಿ ನಾರಾಯಣ, ಬುಡಕಟ್ಟು ಸಂಸ್ಕೃತಿ, ಅರುಹು ಕುರುಹು, ವಿಸ್ಮಯ ಪ್ರಕಾಶನ, ಮೈಸೂರು, 2011.
6. ಕಿಕ್ಕೇರಿ ನಾರಾಯಣ, ಜೇನುಕುರುಬ ಬುಡಕಟ್ಟು ಜನಾಂಗದ ಅವ್ಯಕ್ತ ಸಾಂಸ್ಕೃತಿಕ ಪರಂಪರೆ, ಫೋಕ್‌ಲೋರ್ ಸಪೋರ್ಟ್ ಸೆಂಟರ್, ಚೆನ್ನೈ, 2011.
7. ಕುರುವ ಬಸವರಾಜು, ಜನಪದ ಮಹಾಕಾವ್ಯಗಳ ನಿರ್ಮಾಣದ ಪ್ರತಿಭೆಯ ನೆಲೆಗಳು, ಗೀತಾಂಜಲಿ ಪಬ್ಲಿಕೇಶನ್ಸ್, ಮೈಸೂರು, 2011.
8. ಕೃಷ್ಣಮೂರ್ತಿ, "ಪರಿವರ್ತನೆಯ ಹಾದಿಯಲ್ಲಿ ನಾಗರಹೊಳೆ ಮತ್ತು ಬಂಡೀಪುರ ಅಭಯಾರಣ್ಯ ಪ್ರದೇಶಗಳ ಬುಡಕಟ್ಟು ಸಮುದಾಯಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯ ಒಂದು ಮಾನವಶಾಸ್ತ್ರೀಯ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2016.

9. ಕೇಶವನ್ ಪ್ರಸಾದ್ ಕೆ, ಮಲೆಮಾದೇಶ್ವರ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1997.

10. ಗೌಡ ಹೆಚ್.ಎಂ.ಆರ್., ಇತಿಹಾಸ ಪುಟಗಳಲ್ಲಿ ಕುರುಬರು, ಉದಯರವಿ ಪ್ರಕಾಶನ, ಮೈಸೂರು, 1994

11. ಚಂದ್ರ ಕಾಳೇನಹಳ್ಳಿ, ಸೋಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

12. ಚಂದ್ರಪ್ಪ ಅಜ್ಜಂಪುರ ಎಚ್., ಕುರುಬರ ಕುರುಹುಗಳು, ವಿದ್ಯಾನಿಧಿ ಪ್ರಕಾಶನ, 2011.

13. ಚಕ್ಕೆರೆ ಶಿವಶಂಕರ್, ಜಾನಪದ ಕಲಾಪ್ರವೇಶ, ಸಾಗರ ಪ್ರಕಾಶನ, ಬೆಂಗಳೂರು, 2012.

14. ಪರಮಶಿವಯ್ಯ, ಜೀ.ಶಂ., ಕನ್ನಡ ಜಾನಪದ ಕಥೆಗಳು, ಚೇತನ ಬುಕ್ ಹೌಸ್, ಮೈಸೂರು, 1988.

15. ಪ್ರಭಾಕರ ಎ.ಎಸ್., ಬುಡಕಟ್ಟು ಅಭಿವೃದ್ಧಿ ಮೀಮಾಂಸೆ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2004.

16. ಪ್ರಭಾಕರ ಎ.ಎಸ್., ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, 2002.

17. ಪ್ರಭಾಕರ ಎ.ಎಸ್., ಕರ್ನಾಟಕದ ಡೊಂಬರು: ಒಂದು ಅಲೆಮಾರಿ ಸಮುದಾಯದ ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2006

18. ಪ್ರಭಾಕರ ಎ.ಎಸ್.(ಸಂ), ಆದಿವಾಸಿ ಆಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, 2006.

19. ಪಾರ್ವತಮ್ಮ ಸಿ., ಆದಿವಾಸಿ ಬದುಕು ಬವಣೆ ಗ್ರಾಮೀಣ ಮತ್ತು ಆದಿವಾಸಿ ಅಭಿವೃದ್ಧಿ ಸಂಶೋಧನಾ ಕೇಂದ್ರ, ಮೈಸೂರು, 2007.

20. ಪಾರ್ವತಮ್ಮ ಸಿ., ಆದಿವಾಸಿ ಸಮುದಾಯಗಳ ಅಭಿವೃದ್ಧಿ, ನಿರ್ದೇಶಕರು, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2007.

21. ಭಾನುಮತಿ ವೈ.ಸಿ., ಜನಪದ ಆಂತರ್ಯ, ಎಂ.ಎಸ್. ತಳಗವಾದಿ ಪ್ರಕಾಶನ, 2003.

22. ಭಾಮಿನಿ ರಾಘವಯ್ಯ, ಕೊಡಗಿನ ಬುಡಕಟ್ಟುಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2007.

23. ಬೋರಲಿಂಗಯ್ಯ ಹಿ.ಚಿ., ದೇಶಿ ಕನ್ನಡ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2016.

24. ಬೋರಲಿಂಗಯ್ಯ ಹಿ.ಚಿ., ಬುಡಕಟ್ಟು ದೈವಾರಾಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

25. ಬೋರಲಿಂಗಯ್ಯ ಹಿ.ಚಿ., ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2016.

26. ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್., ಕರ್ನಾಟಕ ಬುಡಕಟ್ಟು ಸಚಿತ್ರಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2015.

27. ಬೋರಲಿಂಗಯ್ಯ, ಹಿ.ಚಿ. ಡಾ.ಎ.ಎಸ್.ಪ್ರಭಾಕರ್ (ಸಂ), ಬುಡಕಟ್ಟು ಅಧ್ಯಯನ, ಸಂಪುಟ 3, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2005.

28. ಮಧು ಗುಂಡ್ಲುಪೇಟೆ, ಬುಡಕಟ್ಟು ಜನಾಂಗಗಳ ಒಂದು ಅವಲೋಕನ, ಚಾಮತರ ಪ್ರಕಾಶನ, 2011.

29. ಮರಿಸ್ವಾಮಿ ಆರ್., ಸೋಲಿಗ ಸಮಾಜೋಭಾಷಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2014.

30. ಮುತ್ತಯ್ಯ ಎಸ್.ಎಂ., ಕನ್ನಡ ಜನಪದ ಮಹಾಕಾವ್ಯ ಮತ್ತು ಪ್ರತಿಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2008.

31. ಮೊಗಳ್ಳಿ ಗಣೇಶ್, ಮೌಖಿಕ ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2006.

32. ಮೊಗಳ್ಳಿ ಗಣೇಶ್, ಅವ್ಯಕ್ತ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2009.

33. ನಡಿಕೇರಿಯಂಡ ಚಿಣ್ಣಪ್ಪ, ಪಟ್ಟೋಲೆ ಪಳಮೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1975.

34. ನಾಗೇಶ ಕೆ.ಟಿ., ಕರ್ನಾಟಕದಲ್ಲಿ ವಿಕೇಂದ್ರಿತ ಆಡಳಿತ ಮತ್ತು ಬುಡಕಟ್ಟುಗಳ ಅಭಿವೃದ್ಧಿ; ಮೈಸೂರು ಜಿಲ್ಲಾ ಪಂಚಾಯಿತಿ ಪಾತ್ರ(2000–2010) ಒಂದು ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2015.

35. ನಾಗೇಗೌಡ ಎಚ್.ಎಲ್., ವೆರಿಯರ್ ಎಲ್ವಿನ್ನರ ಗಿರಿಜನ ಪ್ರಪಂಚ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1967.

36. ನಾಯಕ ಡಿ.ಬಿ., ದೇಸಿ ಸಂಸ್ಕೃತಿ, ಬಂಜಾರಾ ಪ್ರಕಾಶನ, ಗುಲ್ಬರ್ಗಾ, 2007.

37. ನಾವಡ ಎ.ವಿ., ಕರಾವಳಿ ಜಾನಪದ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಂಗಳೂರು 2007.

38. ನಿಂಗಪ್ಪ ಮುದೇನೂರು, ಕರ್ನಾಟಕ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು, ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು, 2004.

39. ನೌಮ್ ಇಯೊರಿಷ್, ಜೇನು ಮತ್ತು ಮಾನವ, ಅನು: ಶ್ರೀಮತಿ ಎಚ್.ಎಸ್., ನವಕರ್ನಾಟಕ ಪ್ರಕಾಶನ, 1985.

40. ರಮೇಶ ಕೆ.ಜಿ., ಮಲೆಕುಡಿಯ ಬುಡಕಟ್ಟು ಸಮುದಾಯದ ಕಳೆದ ಆರು ದಶಕಗಳ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2014.

41. ರಾಜಶೇಖರ್ ಪಿ.ಕೆ., ಪಿರಿಯಾಪಟ್ಟಣ ಕಾಳಗ, ಸಂವಹನ, ಮೈಸೂರು, 2001.

42. ರಾಜಶೇಖರ್ ಪಿ.ಕೆ., ಜಾನಪದ ನುಡಿ ಸಂಭ್ರಮ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2003.

43. ರಮೇಶ್ ಕೆ.ಜಿ., ಮಲೆಕುಡಿಯ ಬುಡಕಟ್ಟು ಸಮುದಾಯದ ಕಳೆದ ಆರು ದಶಕಗಳ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2014

44. ರಾಮಚಂದ್ರಾಚಾರ್, ಡಿ.ಬಿ., ಕುಡಿಯರ ಸಂಸ್ಕೃತಿ, ಉಪಸಂಸ್ಕೃತಿ ಅಧ್ಯಯನ ಮಾಲೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, 1993.

45. ರಾಮಚಂದ್ರೇಗೌಡ ಹಿ.ಶಿ., ಜಾನಪದ ಪ್ರಕಾರಗಳು, ತನುಮನು ಪ್ರಕಾಶನ, ಮೈಸೂರು, 2012.

46. ರೂತ್ ಬೆನೆಡಿಕ್ಟ್, ಸಂಸ್ಕೃತಿಯ ರೂಪಿಕೆಗಳು, ಉದ್ಧೃತ; ಹರೀಶ್ ಪಿ.ಎನ್., ಎರವರ ಸಂಸ್ಕೃತಿ, 1993.

47. ಲಲಿತ ಎ.ಸಿ., ಕಾಡುಕುರುಬರ ಮತ್ತು ಜೇನುಕುರುಬರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

48. ವಸು ಮಳಲಿ, ಮೌಖಿಕ ಇತಿಹಾಸ, ಅಂಕಿತ ಪುಸ್ತಕ, ಬೆಂಗಳೂರು, 2004.

49. ವಿಜಯ್ ಪೂಣಚ್ಚ ತಂಬಂಡ, ಪಳಮೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2005.

50. ಶಂಕರನಾರಾಯಣ ರಾವ್. ಎನ್.ಪಿ, ಪಂಜರಿ ಎರವರ ಸಮಾಜ ಮತ್ತು ಜಾನಪದ ಇತಿಹಾಸ, ಅಭಿನವ ಪ್ರಕಾಶನ, ಬೆಂಗಳೂರು, 2005.

51. ಶಂಕರನಾರಾಯಣ ತೀ.ನಂ., ಕರ್ನಾಟಕ ಜನಪದ ಮಹಾಕಾವ್ಯಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, 1998.

52. ಸುನಂದಮ್ಮ, ಮೈಸೂರು ಮತ್ತು ಚಾಮರಾಜನಗರಗಳಲ್ಲಿ ಸೋಲಿಗ ಬುಡಕಟ್ಟು ಜನಾಂಗದ ಅಭಿವೃದ್ಧಿಗೆ ಕರ್ನಾಟಕ ಸರಕಾರದ ಕಾರ್ಯಕ್ರಮಗಳು(ಒಂದು ವಿಮರ್ಶಾತ್ಮಕ ಅಧ್ಯಯನ) ಅಭಿರುಚಿ ಪ್ರಕಾಶನ, ಮೈಸೂರು, 2011.

53. ಸೋಮಸುಂದರಂ ಎಚ್.ಎನ್., ಸೋಲಿಗ ಸಿರಿ, ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ, ಬಿಳಿಗಿರಿರಂಗನಬೆಟ್ಟ, 2009.

54. ಹರೀಶ್ ಪಿ.ಎನ್., ಎರವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

55. ಕ್ಷೀರಸಾಗರ, ಜೇನು ಆಕಾಶದ ಅರಮನೆಯೋ, ನವಕರ್ನಾಟಕ ಪ್ರಕಾಶನ, ಬೆಂಗಳೂರು, 2008.

**ಪಿಎಚ್.ಡಿ. ಮಹಾಪ್ರಬಂಧಗಳು**

56. ರಾಜು ಕೆ.ಕೆ., ಕರ್ನಾಟಕದ ಎರವರು: ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, 2013

57. ಮರಿಸ್ವಾಮಿ ಆರ್., ಸೋಲಿಗ ಸಮಾಜೋಭಾಷಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2014.

58. ಗಿರೀಶ್ ಕುಮಾರ್, ಕರ್ನಾಟಕದ ಬುಡಕಟ್ಟು ಚಿತ್ರಕಲೆ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2005.

59. ಶೈಲಜ ಎ.ಸಿ., ಕೊಡವರು ಮತ್ತು ಕೊಡಗಿನ ಅರೆಭಾಷೆ ಗೌಡರ ಸಂಸ್ಕೃತಿ–ತೌಲನಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಹಂಪಿ, 2014.

60. ರಾಜು ಕೆ.ಕೆ., ಕರ್ನಾಟಕದ ಎರವರು: ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2013.

61. ಸರಸ್ವತಿ ಟಿ.ಎನ್., ಜೇನುಕುರುಬ: ಸಮಾಜೋಭಾಷಿಕ ಅಧ್ಯಯನ(ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕನ್ನು ಅನುಲಕ್ಷಿಸಿ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು 2014.

ಇಂಗ್ಲೀಷ್ ಪುಸ್ತಕಗಳು

62. Ghurye G. S., Scheduled Tribes of India, South Asia Books, 1980.

63. Nirmal Kumar Bose, Tribal Life in india, National book trust, New delhi, 1971.

64. Sylvian levy, In the Introduction to the Mysore Tribes and castes Ed: Nanjundaiah. H V and Ananthakrishna Iyer, Mysore University Press, 1961.

65. Verrior Elvin, Preface: Jawaharlal Nehru The Philosophy of NEFA, Shillong, 1959 (Seceond Revised Edition).

66. Luiz A.A.D. Tribes of Mysore, S.Viswa & co, Bangalore,1963.

67. Iyar L.K, The Mysore Tribes and Castes, Vol-1, 2, 3, 4. Mittal Publication, Delhi, 1998.

68. Morab S.G., The Soliga of Bilgiri Rangana Hills, Anthropological Survey of India, Calcutta, 1977.

69. Thrustan Edgar, Vision of Uralis and Sholagas and More marriage customs in southern India, Hook swinging, Paliyans, Bulletin of the Madras Government Museum. Vol 5, No 1, Printed By the Superintendent of Government press, Madras, 1903.

70. Thrustan Edgar, Badagas and Irulas of Niligiri: Paniyans of Malabar: A Chenis Tamil Cross, A Cheruman Scull. Kuruba or Kurumbas, Summary of Results. Bulletin of the Madras Government Museum. Vol II No 1, Printed By the Superintendent of Government press, Madras, 1897.

71. Thurston and Rangachar.K (Ed), Caste and Tribes of Southern India (Seven volume), Asian Education Services, New Delhi, 1909.

72. Abbe J.A. Dubois, 2002, Hindu manners, Customs and Ceremoies, Rupa. Co.7/16, Ansari Road, Daryaganj, NewDelhi.

73. Devy G. N. Ed: Painted Words : An Anthology of Tribal Literature, Penguin Books India, 2002.

74. Singh K.S. & others, People of India - Kerala - (3-Volums) Vol-XXVIII, G Anthrpological Survey of India - N. Delhi 2002.

75. Sheering Rev M.A, Hindu Tribes and Castes, Trubner & Co London, 1872.

76. H.V. Nanjundiah, Ananth krishnna Iyer, *The Mysore Tribes and Castes,* Mittal Publications, New Delhi, 1922.

77. Irfan Habib, The Agrarian System of Mughal India 1556-1707, Oxford University Press, 1999.

78. Stephen Fuchs, At the Bottom of Indian Society, Munshiram Manoharlal publishers pvt Ltd, 1981.

79. Nirmal Kumar Bose, Tribal Life in india, National book trust, New delhi, 1971.

80. Sylvian levy, In the Introduction to the Mysore Tribes and castes Ed: Nanjundaiah H V and Ananthakrishna Iyer, Mysore University Press, 1961.

81. Verrior Elvin, Preface: Jawaharlal Nehru The Philosophy of NEFA, P 15, Shillong, 1959 (Seceond Revised Edition).

82. G.N. Devy, Ed : Budhan, No. 3, June, 1998, The DNT Rights Action Groop News letter.

83. G.N. Devy, Ed : Budhan, No.4, Aug-Sept, 1998, The DNT Rights Action Groop News letter.

84. G.N. Devy, Ed : Budhan, No.9-10, Jan, 1999, The DNT Rights Action Groop News letter.

85. G.N. Devy, Nomad Called Thief, Reflection On Adivasi Silence,Orient Longman, 2006.

86. Irfan Habib, Essays on Indian History, Tulika, 1995.

87. Saki, Making History, Karnataka's people and their past, Vol-1, Vimukthi prakashana, Bangalore, 1998.

88. M.N. Srinivas, *Caste in Modern India*, Media promoters & Publishers PVT LTD, Bombay, 1992.

89. M.N. Srinivas, *Collected Essays,* Oxord University Press, New Delhi, 2002.

90. Woldaana Weissleder, Ed: *The Nomadic alternative,* Moutan Publisher, Chicago – 1977.

91. Milton Siger and Bernard S. Cohn , Ed: *Structure And Change In Indian Society*, Rawat Publications, Jaipur and New Delhi, 1994.

92. Ramendranath Nandi, State Formation Agrarian Growth and Social Change in Feudal South India A D 600-1200, Manohar, 2000.

93. Sumit Sarkar, Writing Social History, Oxford University Press, New Delhi,1997.

94. Veena Dass, Critical Events, Oxford University Press, 1995.

95. Veena Dass, Socialogy And Social Anthropologgy, Vol 1, Oxford University Press, 2003.

96. Government of India, Census 2011. http://www.censusindia.gov.in/2011census

97. Source: Report of the Expert Group to Review the Methodology for Estimation of Poverty (2009) Planning Commission; Poverty Estimates 2009-10 and Poverty Estimates 2011-12, Planning Commission.

## ತಿಳುವಳಿಕೆದಾರರು

1. ಶಾರದಾ, 55 ತೋರಾ, ವಿರಾಜಪೇಟೆ ತಾಲೂಕು, ಕೊಡಗು
2. ದೇವಕಿ, 60 ತೋರಾ, ವಿರಾಜಪೇಟೆ ತಾಲೂಕು, ಕೊಡಗು
3. ಕುಡಿಯರ ಮುತ್ತಪ್ಪ, 65, ಕಕ್ಕಬ್ಬೆ, ಕೊಡಗು
4. ಜೇನುಕುರುಬರ ಸೋಮಣ್ಣ, 61, ಮತ್ತಾ ಹಾಡಿ, ಹೆಚ್ ಡಿ ಕೋಟೆ ತಾಲೂಕು
5. ರಾಜಣ್ಣ, 68, ಮಾರನಹಾಡಿ, ಹೆಚ್ ಡಿ ಕೋಟೆ ತಾಲೂಕು
6. ಅಮ್ಮಣಮ್ಮ, 88, ಮಾರನಹಾಡಿ, ಹೆಚ್ ಡಿ ಕೋಟೆ ತಾಲೂಕು
7. ಭೀಮನಹಳ್ಳಿ ಮಾದೇವ್, 56, ಹೆಚ್ ಡಿ ಕೋಟೆ ತಾಲೂಕು
   ಕ್ಷೀರಸಾಗರ್, ಕಬಿನಿ ಕಾಲೋನಿ, ಹೆಚ್ ಡಿ ಕೋಟೆ ತಾಲೂಕು
8. ಜೆ ಕೆ ರಾಮು, 52, ಚೊಟ್ಟೆಪಾರೆ ಹಾಡಿ, ವಿರಾಜಪೇಟೆ ತಾಲೂಕು, ಕೊಡಗು
9. ಜೆ ಕೆ ಇಂದಿರಾ, 38, ಮಾಲ್ದಾರೆ ಗೇಟ್ ಹಾಡಿ, ವಿರಾಜಪೇಟೆ ತಾಲೂಕು, ಕೊಡಗು
10. ತಮ್ಮಯ್ಯ, 43, ಚಿಕ್ಕರೇಷ್ಮೆ, ವಿರಾಜಪೇಟೆ ತಾಲೂಕು, ಕೊಡಗು
11. ಕಾಳಾ, 50, ರೇಷ್ಮೆ ಹಡ್ಲು, ವಿರಾಜಪೇಟೆ ತಾಲೂಕು, ಕೊಡಗು
12. ಸುಬ್ರು, 60, ಜಂಗಲ್ ಹಾಡಿ ವಿರಾಜಪೇಟೆ ತಾಲೂಕು, ಕೊಡಗು
13. ಸೋಲಿಗರ ಬಸವರಾಜು, 55, ಬಿ ಆರ್ ಹಿಲ್ಸ್, ಚಾಮರಾಜ ನಗರ ಜಿಲ್ಲೆ.
14. ದೇವಯ್ಯ, 85, ಮಾರನ ಹಾಡಿ, ಹೆಚ್.ಡಿ ಕೋಟೆ. ಮೈಸೂರು ಜಿಲ್ಲೆ.
15. ದೇವಮ್ಮ, ಕಾರಾಪುರ ಹಾಡಿ, ಹೆಚ್.ಡಿ ಕೋಟೆ. ಮೈಸೂರು ಜಿಲ್ಲೆ.
16. ಕುಳ್ಳಮ್ಮ, ದೇಸಿಪುರ ಕಾಲೋನಿ, ಬಂಡಿಪುರ. ಮೈಸುರು ಜಿಲ್ಲೆ.
17. ಮಾದೇವಮ್ಮ, ದೇಸಿಪುರ ಕಾಲೋನಿ, ಬಂಡಿಪುರ. ಮೈಸುರು ಜಿಲ್ಲೆ.
18. ದೇವಮ್ಮ, ಚೆನ್ನಗುಂಡಿ, ಬಂಡಿಪುರ, ಮೈಸೂರು ಜಿಲ್ಲೆ.
19. ಕೃಷ್ಣ, ಚೆನ್ನಗುಂಡಿ, ಬಂಡಿಪುರ, ಮೈಸೂರು ಜಿಲ್ಲೆ.
20. ವಿಠಲ್ ನಾಣ್ಜೆ, ಹೆಚ್.ಡಿ ಕೋಟೆ, ಮೈಸೂರು ಜಿಲ್ಲೆ.



ಬೆಟ್ಟಕುರುಬರ ಮನೆಯ ಚಿತ್ರ



ಕುಂಡೆಹಬ್ಬ ದೇವರಪುರ



ಬೆಟ್ಟಕುರುಬ ಮಹಿಳೆಯರು



ಬೆಟ್ಟಕುರುಬರ ಸಾಂಪ್ರದಾಯಿಕ ನೃತ್ಯ



ಎರವರ ಕುಟುಂಬ



ಎರವರ ಮನೆಯ ಚಿತ್ರ



ಎರವರ ವಾದ್ಯದವರು



ಜೇನುಕುರುಬರ ಬುಂಡೆಕರೆಯುವ ಆಚರಣೆ



ಜೇನುಕುರುಬ ಯುವಕರು



ಬುಂಡೆಕರೆಯುವ ಆಚರಣೆಯಲ್ಲಿ ಮಹಿಳೆ



ಜೇನುಕುರುಬರ ಕಾಲೋನಿ



ಜೇನುಕುರುಬರ ಹಾಡಿಯ ಚಿತ್ರ



ಕುಡಿಯರ ಮನೆಯ ಸುತ್ತಲಿನ ಚಿತ್ರಣ



ಸೋಲಿಗರ ಕಾಲೋನಿ



ಸೋಲಿಗರ ಗೋರುಖಾನ ನೃತ್ಯ

